ಯೋಗೀಂದುದೇವ ವಿರಚಿತ

# ಪರಮಾತ್ಮಪ್ರಕಾಶ



ಸಂಪಾದಕರು:

ಪಂ। ಎಸ್. ಚಂದ್ರರಾಜೇಂದ್ರ ಶಾಸ್ತ್ರಿ, ಸಾಹಿತ್ಯಾಲಂಕಾರ,

ಮೂಡಬಿದ್ರಿ.

ಪ್ರಕಾಶಕರು:

ಡಿ. ಮಂಜಯ್ಯ ಹೆಗ್ಗಡೆಯವರು,

ಧರ್ಮಸ್ಥಳ, ದ. ಕ.

1952

ಶ್ರೀ ಯೋಗೀಂದುದೇವ ವಿರಚಿತ

# ಪರಮಾತ್ಮಪ್ರಕಾಶ

(ಪರಮಪ್ಪಪಯಾಸು)

ಅನ್ವಯಾರ್ಥಭಾವಾರ್ಥದೀಪಿಕಾ-ಕರ್ಣಾಟಕವ್ಯಾಖ್ಯಾ ಸಹಿತ



ಕರ್ಣಾಟಕವ್ಯಾಖ್ಯಾಕಾರ ಮತ್ತು ಸಂಪಾದಕ

ಸಾಹಿತ್ಯಾಲಂಕಾರ

**ಪಂ। ಎಸ್. ಚಂದ್ರರಾಜೇಂದ್ರ ಶಾಸ್ತ್ರಿ,**

ಮೂಡಬಿದಿರೆ

ಪ್ರಕಾಶಕರು.

**ಡಿ. ಮಂಜಯ್ಯ ಹೆಗ್ಗಡೆಯವರು,**

ಧರ್ಮಸ್ಥಳ, (ದ. ಕ)

# ಪ್ರಸ್ತಾವನೆ.

"ಓಂ ನಮಃ ಪರಮಾತ್ಮನೇ ವೀತರಾಗಾಯ"

ಅನಾದಿಕಾಲದಿಂದ ಈ ಆತ್ಮನು ಕರ್ಮಪರವಶನಾಗಿ ಈ ಸಂಸಾರದಲ್ಲಿ ಭ್ರಮಣೆಯನ್ನು ಮಾಡುತ್ತಿದ್ದಾನೆ. ಶರೀರದಿಂದ ಯುಕ್ತನಾದಂಥ ಸಂಸಾರೀಜೀವನು ರಾಗದ್ವೇಷಾದಿವಿಕಾರಗಳಿಂದ ತನ್ನ ಪೂರ್ವಸಂಚಿತಮೋಹನೀಯಾದಿಕರ್ಮಗಳ ನಿಮಿತ್ತದಿಂದ ಪ್ರಾಪ್ತವಾದ ಶರೀರದ ಮೇಲೆ ಪ್ರೀತಿ, ಮಮತೆಗಳನ್ನು ಮಾಡಿ ಮುಂದಿನ ಶರೀರದ ಪ್ರಾಪ್ತಿಗೆ ಅನುಕೂಲತೆಗಳನ್ನು ಕಲ್ಪಿಸಿಕೊಳ್ಳುತ್ತಾನೆ. ಆ ಮುಂದಿನ ಶರೀರದ ಪ್ರಾಪ್ತಿಯಾಗಲು ಪುನಶ್ಚ ರಾಗದ್ವೇಷಾದಿಗಳನ್ನು ಮಾಡುತ್ತಾನೆ. ಹೀಗೆ ರಾಗದ್ವೇಷದಿಂದ ಶರೀರಸಂಬಂಧ, ಶರೀರಸಂಬಂಧದಿಂದ ರಾಗದ್ವೇಷ, ಇವುಗಳ ಪರಂಪರೆಯು ಬೀಜವೃಕ್ಷಗಳ ಸಂತಾನದಂತೆ ಬಂದಿರುತ್ತದೆ. ಇದಕ್ಕೆ ಆದಿ ಇಲ್ಲ. ಆದಿ ಇಲ್ಲದಿದ್ದರೆ ಅಂತ್ಯವೂ ಇಲ್ಲ ಎಂದು ಅರ್ಥವಲ್ಲ. ಎಷ್ಟರ ವರೆಗೆ ಈ ಆತ್ಮನು ಜ್ಞಾನಾವರಣ, ದರ್ಶನಾವರಣ, ವೇದನೀಯ, ಮೋಹನೀಯ, ಆಯು, ನಾಮ, ಗೋತ್ರ, ಮತ್ತು ಅಂತರಾಯಗಳೆಂಬ ಎಂಟು ಕರ್ಮಗಳ ಬಂಧನದಲ್ಲಿ ಬದ್ಧನಾಗಿರುತ್ತಾನೆಯೋ ಅಷ್ಟರ ವರೆಗೆ ಸಂಸಾರಿ ಎಂದು ಹೇಳಲ್ಪಡುತ್ತಾನೆ ಅವನಿಗೆ ಸಂಸಾರದಲ್ಲಿ ಇರಬೇಕಾಗುತ್ತದೆ. ಯೋಗವು (ಮನವಚನಕಾಯ) ಸಂಸಾರಕ್ಕೆ ಕಾರಣವಾಗಿದೆ. ಹದಿಮೂರನೆಯ ಗುಣಸ್ಥಾನವರ್ತಿ ಸಯೋಗಕೇವಲಿಯೂ ಯೋಗಸಹಿತನಾಗಿರುವುದರಿಂದ ಸಂಸಾರಿಯೇ, ಮುಕ್ತನಲ್ಲ. ಅಯೋಗಕೇವಲಿಯೇ ಯೋಗರಹಿತನಾಗಿರುವುದರಿಂದ ಮುಕ್ತನಾಗಲುದ್ಯುಕ್ತನಾಗುತ್ತಾನೆ ಅಥವಾ ಮುಕ್ತನಾಗುತ್ತಾನೆ. ಆದುದರಿಂದ ಮೊತ್ತಮೊದಲು ಯೋಗವಿಭಾಗವನ್ನು ಮಾಡಲುಜ್ಜುಗಿಸಬೇಕು. ಯೋಗವಿಭಾಗವನ್ನು ಮಾಡಬೇಕಾದರೆ ಶರೀರ ಮತ್ತು ಆತ್ಮನ ವಿಭಿನ್ನಸ್ವರೂಪವನ್ನು ಪರಿಭಾವಿಸಬೇಕು, ಅನುಭವಿಸಬೇಕು. ರತ್ನಾಕರನು ಹೇಳಿದಂತೆ—

"ಮಿಗೆ ಷಡ್ದ್ರವ್ಯಮನಸ್ತಿಕಾಯಮೆನಿಪೈದಂ ತತ್ವಮೇಳಂ ಮನಂ-
ಬುಗಲೊಂಬತ್ತು ಪದಾರ್ಥಮಂ ತಿಳಿದೊಡಂ ತನ್ನಾತ್ಮನೀ ಮೈಯುದಂ,
ದುಗದಿಂ ಬೇರೊಡಲೇನ ಚೇತನಮೆ ಜೀವಂ ಚೇತನಂ ಜ್ಞಾನರೂಪಿ-
ಗಡಾಎಂದರಿದಿರ್ದನೇ ಸುಖಿಯಲಾ"

ಅಂದರೆ—

ಆರು ದ್ರವ್ಯಗಳು, ಪಂಚ ಅಸ್ತಿಕಾಯಗಳು, ಸಪ್ತ ತತ್ತ್ವಗಳು, ಮತ್ತು ನವ ಪದಾರ್ಥಗಳು, ಇವುಗಳ ಪರಿಜ್ಞಾನವು ತನ್ನ ಆತ್ಮ ಮತ್ತು ದೇಹದ ನಿಜವಾದ ಜ್ಞಾನವನ್ನು ಮಾಡಿಕೊಳ್ಳಲಿಕ್ಕೆ ಸಾಧನವಾಗಿದೆ. ಈ ವಿವೇಕದಿಂದ ತನ್ನ ಆತ್ಮನು ಉಪಾದೇಯನೂ ಮತ್ತು ಶರೀರಾದಿಗಳು ಹೇಯವೂ ಎಂದು ನಿಶ್ಚಯಾತ್ಮಕವಾಗಿ ತಿಳಿದರೆ ಕರ್ಮಬಂಧನವು

ತನ್ನಷ್ಟಕ್ಕೇನೆಯೇ ಶಿಥಿಲವಾಗುತ್ತದೆ. ಕರ್ಮಬಂಧನವು ಅಜ್ಞಾನೀಜೀವನಿಗಾಗುತ್ತ ದಲ್ಲದೆ ಜ್ಞಾನಿಗೆ ಕರ್ಮನಿರ್ಜರೆಯಾಗುತ್ತದೆ. ಎಷ್ಟೆಷ್ಟು ಕರ್ಮನಿರ್ಜರೆಯು ಅಧಿ ಕಾಧಿಕವಾಗಿ ಆಗುತ್ತದೆಯೋ ಅಷ್ಟಷ್ಟು ಆತ್ಮನ ಸ್ವರೂಪವು ವಿಶದವಾಗಿ ಗೋಚರ ವಾಗುತ್ತದೆ ಸಂಪೂರ್ಣ ಕರ್ಮಾಂಶದಿಂದ ರಹಿತನಾಗಿ ತನ್ನ ನಿಜ ಪರಿಣತಿಯಲ್ಲಿ ಮಗ್ನ ನಾಗುವುದಕ್ಕೇನೆಯೇ ಮೋಕ್ಷವೆಂದು ಹೆಸರು. ಪರಭಾವದಿಂದ ಮುಕ್ತನಾಗುವ ಅವಸ್ಥೆಯೇ ಮುಕ್ತಿ. ಸ್ವಭಾವದಲ್ಲಿ ಮಗ್ನನಾಗುವುದೇ ಅದಕ್ಕೆ ಯುಕ್ತಿ. ತನ್ನ ಸ್ವರೂಪವನ್ನು ಈ ಪದಾರ್ಥಗಳಿಂದ ಭಿನ್ನವಾಗಿ ಭಾವಿಸುವುದೇ ಭೇದವಿಜ್ಞಾನವು. ಭೇದ ವಿಜ್ಞಾನವಾಗಬೇಕಾದರೆ ತಾನು ಮರೆತ ತನ್ನ ಸ್ವರೂಪವನ್ನು ಅರಿಯಬೇಕು ಅದಕ್ಕ ಆತ್ಮಸ್ವರೂಪವನ್ನು ಪ್ರತಿಪಾದಿಸುವ ಗ್ರಂಥಗಳ ಅಧ್ಯಯನ, ಮನನ, ಮತ್ತು ಚಿಂತನೆಗಳು ಅಗತ್ಯ ಮೋಹಾಂಧಕಾರವೆಂಬ ಕತ್ತಲೆಯಲ್ಲಿ ಜೀವನು ಆ ಪರಮಾತ್ಮ ಸ್ವರೂಪನಾದ ತನ್ನ ನಿಜರೂಪವನ್ನು ಕಾಣಲರಿಯನು. ಅದಕ್ಕ ಪರಮ ಪರಂಜ್ಯೋತಿ ಯಾದ ಪರಮಾತ್ಮಪ್ರಕಾಶವು ಪ್ರಧಾನ ಸಾಧನವಾಗಿದೆ, ಪ್ರಕೃತ ಗ್ರಂಥವು ಭವ್ಯರಿಗೆ ಆ ಪ್ರಕಾಶವನ್ನು ಒದಗಿಸಿಕೊಡುತ್ತಿದೆ

**ಗ್ರಂಥ ಪರಿಚಯ:**— ಇದು ಪರಮಾತ್ಮಪ್ರಕಾಶವೆಂಬ ಗ್ರಂಥ. ಈ ಗ್ರಂಥ ವನ್ನು ಶ್ರೀ ಯೋಗೀಂದು ಸ್ವಾಮಿಗಳು ಪ್ರಭಾಕರ ಭಟ್ಟನೆಂಬ ತನ್ನ ಶಿಷ್ಯನಿಗೆ ಪರ ಮಾತ್ಮನ ಸ್ವರೂಪವನ್ನು ಪ್ರತಿಪಾದಿಸುವ ಉದ್ದೇಶದಿಂದ ನಿರೂಪಿಸಿದರು. ಪ್ರಾರಂಭ ದಲ್ಲಿಯೇ ಪ್ರಭಾಕರ ಭಟ್ಟನು 'ಎಲೇ ಸ್ವಾಮಿಯೇ, ಸಂಸಾರದಲ್ಲಿ ವಾಸಮಾಡುತ್ತಿರುವ ನಮಗೆ ಅನಂತಕಾಲವೂ ಕಳೆದುಹೋದರೂ ದಾರುಣದುಃಖವಲ್ಲದೆ ಸುಖದ ಪ್ರಾಪ್ತಿಯು ಆಗಲಿಲ್ಲ ಆದುದರಿಂದ ಚತುರ್ಗತಿಗಳಲ್ಲುಂಟಾದ ದುಃಖಗಳಿಂದ ಸಂತಪ್ತರಾದ ಪ್ರಾಣಿಗಳ ದುಃಖವನ್ನು ದೂರಮಾಡುವ ಪರಮಾತ್ಮನ ಸ್ವರೂಪವನ್ನು ದಯವಿಟ್ಟು ನಿರೂಪಿಸಿರಿ, ಎಂದು ಪ್ರಾರ್ಥಿಸಲು ಆತನ ನಿವೇದನೆಯನ್ನು ಮನ್ನಿಸಿ ಆಚಾರ್ಯ ಯೋಗೀಂದುಗಳು ಪರಮಾತ್ಮನ ಸ್ವರೂಪವನ್ನು ಪ್ರತಿಪಾದಿಸುವುದಕ್ಕೆ ಈ ಗ್ರಂಥವನ್ನು ಪ್ರಾರಂಭಿಸಿದರೆಂಬ ವಿಷಯವು ಸ್ಪಷ್ಟವಾಗಿದೆ. ಮಂಗಳಾಚರಣೆಯಲ್ಲಿ ಪಂಚಪರಮೇಷ್ಠಿಗಳನ್ನು ವಂದಿಸಿ ಪ್ರಥಮ ಮಹಾಧಿಕಾರದಲ್ಲಿ ಬಹಿರಾತ್ಮಾ, ಅಂತ ರಾತ್ಮಾ ಮತ್ತು ಪರಮಾತ್ಮಾ ಈ ಪ್ರಕಾರ ಆತ್ಮನ ತ್ರಿಭೇದವನ್ನು ವರ್ಣಿಸಲಾಗಿದೆ. ಅದರ ನಂತರ ವಿಕಲ ಮತ್ತು ಸಕಲ ಪರಮಾತ್ಮನ ವರ್ಣನೆಯಿದೆ. ಅನಂತರ ಸ್ವಶರೀರಪ್ರಮಾಣ, ದ್ರವ್ಯ, ಗುಣ, ಪರ್ಯಾಯ, ಕರ್ಮ, ನಿಶ್ಚಯಸಮ್ಯಗ್ದೃಷ್ಟಿ, ಮಿಥ್ಯಾದೃಷ್ಟಿ ಮೊದಲಾದ ವಿಷಯಗಳ ವಿವೇಚನೆಯಿದೆ. ಈ ಮಹಾಧಿಕಾರದಲ್ಲಿ ಪರಮಾತ್ಮನ ಯಥಾರ್ಥಸ್ವರೂಪದ ವಿವೇಚನೆಯನ್ನು ಮಾಡುತ್ತ ಗ್ರಂಥಕಾರರು ಮುಕ್ತಿಗತ ವ್ಯಕ್ತಪರಮಾತ್ಮಾ, ದೇಹಗತ ಶಕ್ತಪರಮಾತ್ಮಾ, ಸ್ವಮತ-ಪರಮತ ವಿಚಾರ, ಸಮ್ಯಗ್ದೃಷ್ಟಿಭಾವನೆ, ಮಿಥ್ಯಾದೃಷ್ಟಿಭಾವನೆ ಮೊದಲಾದ ವಿಷಯಗಳನ್ನು ಸುಂದರ ರೀತಿಯಿಂದ ಚರ್ಚಿಸಿದ್ದಾರೆ. ಎರಡನೆಯ ಮಹಾಧಿಕಾರದಲ್ಲಿ ಮೋಕ್ಷ,

ಮೋಕ್ಷಫಲ, ನಿಶ್ಚಯ ಮತ್ತು ವ್ಯವಹಾರ ಮೋಕ್ಷಮಾರ್ಗ, ಅಭೇದ ರತ್ನತ್ರಯ, ಸಮಭಾವ, ಪುಣ್ಯಪಾಪಸಮಾನತೆ, ಶುದ್ಧೋಪಯೋಗ, ವೀತರಾಗಸ್ವಸಂವೇದನ ಜ್ಞಾನ, ನಿರ್ವಿಕಲ್ಪಕಸಮಾಧಿ, ಅರ್ಹತ್ಸಿದ್ಧಪದ, ಮತ್ತು ಪರಮಾತ್ಮಪ್ರಕಾಶದ ಆರಾಧಕರ ಫಲ ಮೊದಲಾದ ವಿಷಯಗಳನ್ನು ವಿಸ್ತಾರವಾಗಿ ವರ್ಣಿಸಿದ್ದಾರೆ. ಮಧ್ಯ ಮಧ್ಯದಲ್ಲಿ ಪ್ರಭಾಕರ ಭಟ್ಟನು ವೈಶೇಷಿಕ, ನೈಯಾಯಿಕ, ಮೀಮಾಂಸಕ, ಬೌದ್ಧ ಮೊದಲಾದ ಅನ್ಯದರ್ಶನಗಳ ಪರವಾಗಿ ಪ್ರಸ್ತಾಪಿಸಿದ ಶಂಕಾ ಮತ್ತು ಉಪಶಂಕೆಗಳನ್ನನುಸರಿಸಿ ಶ್ರೀ ಯೋಗೀಂದುಗಳು ವ್ಯವಹಾರ—ನಿಶ್ಚಯನಯಗಳ ವಿಕಲ್ಪಗಳಿಂದ ಚೆನ್ನಾಗಿ ವಸ್ತುವಿವೇಚನೆಯನ್ನು ಮಾಡಿದ್ದಾರೆ. ಹೀಗೆ 345 ಗಾಥೆಗಳಿಂದ ಕೂಡಿದ ಈ ಮಹಾಗ್ರಂಥವು ಪರಮಾತ್ಮನ ಸ್ವರೂಪವನ್ನರಿಯಲಿಕ್ಕೆ ಪ್ರಕಾಶದಂತೆ ಸಾಧನವಾಗಿದೆ ಸರ್ವಾಂಗಸುಂದರವಾಗಿದೆ. ಇದು ಅಧ್ಯಾತ್ಮಿಕಪ್ರಧಾನವಿಷಯಕವಾದ ಗ್ರಂಥವಾದರೂ ಯಥಾಪ್ರಸಂಗ ವ್ಯವಹಾರನೀತಿ, ದಿನಚರ್ಯೆ, ಶುಭಾಚಾರ ಮೊದಲಾದವುಗಳ ಸಂಕೇತವೂ ಇದರಲ್ಲಿ ದೊರೆಯುತ್ತದೆ. ಆದುದರಿಂದ ಅಧ್ಯಾತ್ಮವನ್ನು ಓದುವವರು ವ್ಯವಹಾರವನ್ನು ಸರ್ವಥಾ ಬಿಡಬಾರದೆಂಬ ಅಭಿಪ್ರಾಯವೂ ಆಗಮಕಾರರಿಗೆ ಸಮ್ಮತವಾಗಿದೆ ಎಂದು ಪ್ರಕೃತ ಗ್ರಂಥದಿಂದ ತಿಳಿಯುತ್ತದೆ.

**ಗ್ರಂಥಕಾರರ ಪರಿಚಯಃ**—ಮೂಲಗ್ರಂಥವು ಶ್ರೀ ಯೋಗೀಂದುದೇವರಿಂದ ರಚಿತವಾಗಿದೆ ಎಂದು ಮೇಲೆ ಹೇಳಲಾಗಿದೆ. ಈ ಯೋಗೀಂದುಗಳು ಎಲ್ಲಿ, ಯಾವಾಗ, ಆಗಿಹೋದರೆಂಬ ವಿಷಯವನ್ನು ಮತ್ತವರ ವಿಷಯದ ಅನ್ಯ ಪರಿಚಯವನ್ನು ತಿಳಿಯಲಪೇಕ್ಷಿಸುವುದು ಸ್ವಾಭಾವಿಕ ಆದರೆ ಯೋಗೀಂದು ಆಚಾರ್ಯರ ಸರಿಯಾದ ಪರಿಚಯ, ಕಾಲವಿಚಾರಗಳನ್ನು ಉಲ್ಲೇಖಿಸಲರ್ಹವಾದ ಪ್ರಬಲ ಪ್ರಮಾಣಗಳು ಇಲ್ಲ. ಶ್ರುತಸಾಗರರು ಇವರಿಗೆ ಭಟ್ಟಾರಕರೆಂದು ಬರೆಯುತ್ತಾರೆ ಭಟ್ಟಾರಕರೆಂಬ ಪದವು ಹಿಂದೆ ಭಟ್ಟಾಕಲಂಕ ಮೊದಲಾದ ಪದಗಳಂತೆ ಆಚಾರ್ಯರಿಗ ಆದರಸೂಚಕವಾಗಿ ಪ್ರಯೋಗಿಸಲ್ಪಡುತ್ತಿರಬೇಕು. ಪ್ರಕೃತ ಗ್ರಂಥದಲ್ಲಿ ವರ್ಣಿಸಿದ ವಿಷಯಗಳನ್ನು ಪರಿಶೀಲಿಸಿದರೆ ಮಹರ್ಷಿ ಕುಂದಕುಂದಾಚಾರ್ಯರಿಂದ ವಿರಚಿತವಾದ ಸಮಯಸಾರ, ಪ್ರವಚನಸಾರ, ಪಂಚಾಸ್ತಿಕಾಯ, ನಿಯಮಸಾರ ಮೊದಲಾದ ಗ್ರಂಥಗಳಲ್ಲಿ ವರ್ಣಿಸಿದ ವಿಷಯವಿವೇಚನೆಯಲ್ಲಿ ಸಮಾನತೆಯೂ, ಮಹರ್ಷಿಪೂಜ್ಯಪಾದರಿಂದ ವಿರಚಿತವಾದ ಇಷ್ಟೋಪದೇಶ, ಸಮಾಧಿಶತಕಗಳಲ್ಲಿ ವರ್ಣಿತ ವಿಷಯಗಳೊಡನ ಸಾಮ್ಯವೂ ಯತ್ರತತ್ರ ಕಂಡುಬರುವುದು. ಆದುದರಿಂದ ಕುಂದಕುಂದ ಮತ್ತು ಪೂಜ್ಯಪಾದರ ಗ್ರಂಥಗಳು ಯೋಗೀಂದುಗಳ ಮುಂದಿದ್ದವೆಂಬ ವಿಷಯವು ಸ್ಪಷ್ಟವಾಯಿತು. ಪೂಜ್ಯಪಾದರ ಸಮಯವು ಕ್ರಿ. ಶ. ಐದನೇ ಶತಮಾನದ ಅಂತಿಮ ಕಾಲವಿರಬೇಕೆಂದು ಊಹಿಸಲಾಗಿದೆ. ಆದುದರಿಂದ ಜೋಯಿಂದು ಅಥವಾ ಯೋಗೀಂದು ದೇವರ ಸಮಯವು ಐದನೇ ಶತಮಾನದ ನಂತರ ಅಂದರೆ ಆರನೇ ಶತಮಾನವಾಗಿರಬೇಕೆಂದು ಅನುಮಾನಿಸಬಹುದು. ಈ ವಿಷಯದಲ್ಲಿ ಪ್ರಸಿದ್ಧ ಸಂಶೋಧಕ

ವಿದ್ವಾಂಸರಾದ ನಮ್ಮ ಮಿತ್ರ ಡಾ। ಎ. ಎನ್. ಉಪಾಧ್ಯೆಯವರು ಈ ಕೆಳಗಿನ ಆಧಾರಗಳ ಸಾಧನಗಳಿಂದ ವಿಚಾರಮಾಡಿದ್ದಾರೆ.

ಜೋಇಂದುಗಳು ರಚಿಸಿದ ಪರಮಾತ್ಮಪ್ರಕಾಶ ಮತ್ತು ಯೋಗಸಾರ ಗ್ರಂಥಗಳಿಂದ ಅವರ ಸಮಯದ ವಿಷಯದಲ್ಲಿ ಏನೂ ನಿರ್ಣಯವಾಗುವುದಿಲ್ಲ. ಆದರೆ ಜೋಇಂದುಗಳ ಗ್ರಂಥಗಳಿಂದ ಉದ್ಧರಣೆಗಳನ್ನು ಕೊಡುವ ಗ್ರಂಥಕಾರರ ವಿಷಯದಲ್ಲಿ ವಿಚಾರ ಮಾಡಿದರೆ ಜೋಇಂದುಗಳ ಸಮಯದ ವಿಷಯದಲ್ಲಿ ಸಾಧಾರಣ ಅನುಮಾನವಾಗಬಹುದು.

(1) ಶ್ರುತಸಾಗರರು ಕ್ರಿ. ಶ. ೧೬ನೆಯ ಶತಮಾನದ ಪ್ರಾರಂಭದಲ್ಲಿ ಆಗಿದ್ದಾರೆ. ಅವರು ತನ್ನ ಷಟ್‌ಪ್ರಾಭೃತದ ಟೀಕೆಯಲ್ಲಿ ಪರಮಾತ್ಮಪ್ರಕಾಶದಿಂದ ಆರು ಪದ್ಯಗಳನ್ನು ಉದ್ಧರಿಸಿದ್ದಾರೆ.

(2) ಪರಮಾತ್ಮಪ್ರಕಾಶದ ಮೇಲೆ ಮಲಧಾರಿ ಬಾಲಚಂದ್ರರು ಕನ್ನಡದಲ್ಲಿಯೂ, ಬ್ರಹ್ಮದೇವರೆಂಬವರು ಸಂಸ್ಕೃತದಲ್ಲಿಯೂ ಟೀಕೆಯನ್ನು ಬರೆದಿದ್ದಾರೆ ಈ ಟೀಕಾಕಾರರ ಸಮಯವು ಕ್ರಮಶ ಸುಮಾರು 14ನೇ ಮತ್ತು 13ನೇ ಶತಮಾನವೆಂದು ಅನುಮಾನಿಸಲಾಗಿದೆ.

(3) ಆಚಾರ್ಯ ಕುಂದಕುಂದ ಸ್ವಾಮಿಗಳ ಪಂಚಾಸ್ತಿಕಾಯ ಸಮಯಸಾರ ಮತ್ತು ಪ್ರವಚನಸಾರದ ಮೇಲೆ ಸಂಸ್ಕೃತ ಟೀಕೆಯನ್ನು ಬರೆದ ಜಯಸೇನರೆಂಬವರು ಜೋಇಂದು ಮತ್ತು ಅವರ ಎರಡು ಗ್ರಂಥಗಳಿಂದಲೂ ಸುಪರಿಚಿತರಾಗಿದ್ದರು ಸಮಯಸಾರದ ಟೀಕೆಯಲ್ಲಿ ಅವರು ಪರಮಾತ್ಮಪ್ರಕಾಶದ ಉಲ್ಲೇಖವನ್ನು ಮಾಡುತ್ತಿದ್ದಾರೆ, ಅಲ್ಲದೆ ಅದರಿಂದ ಒಂದು ಪದ್ಯವನ್ನು ಉದ್ಧರಿಸಿದ್ದಾರೆ. ಪಂಚಾಸ್ತಿಕಾಯದ ಟೀಕೆಯಲ್ಲಿಯೂ ಅವರು ಯೋಗಸಾರದ 56ನೆಯ ಪದ್ಯವನ್ನು ಉದ್ಧರಿಸಿದ್ದಾರೆ.

(4) ಪ್ರಾಕೃತ ವ್ಯಾಕರಣದ ರಚಯಿತರಾದ ಹೇಮಚಂದ್ರಾಚಾರ್ಯರೂ ಪರಮಾತ್ಮಪ್ರಕಾಶದಿಂದ ಪರಿಚಿತರಾಗಿದ್ದರು. ಯಾಕಂದರೆ ಅವರು ತನ್ನ ಅಪಭ್ರಂಶವ್ಯಾಕರಣದ ಸೂತ್ರಗಳ ಉದಾಹರಣೆಗಳಲ್ಲಿ ಸ್ವಲ್ಪ ಹೆಚ್ಚುಕಡಿಮೆ ಪರಮಾತ್ಮಪ್ರಕಾಶದ ಪದ್ಯಗಳನ್ನು ಆರಿಸಿಕೊಂಡಿದ್ದಾರೆ. ಹೇಮಚಂದ್ರರು ಸನ್ 1089ನೆಯ ಇಸ್ವಿಯಲ್ಲಿ ಜನ್ಮವೆತ್ತರು ಮತ್ತು ಸನ್ 1173ರಲ್ಲಿ ಸ್ವರ್ಗಸ್ಥರಾದರು. ಆದುದರಿಂದ ಹೇಮಚಂದ್ರರಿಂದ ಜೋಇಂದುಗಳು ಒಂದೆರಡು ಶತಮಾನ ಪೂರ್ವದವರಾಗಿರಬೇಕು.

(5) ಹೇಮಚಂದ್ರರು ರಾಮಸಿಂಹನ ದೋಹಾಪಾಹುಡದಿಂದಲೂ ಕೆಲವು ಪದ್ಯಗಳನ್ನು ಆರಿಸಿಕೊಂಡಿದ್ದಾರೆ. ರಾಮಸಿಂಹನು ಜೋಇಂದುಗಳ ಪರಮಾತ್ಮಪ್ರಕಾಶ ಮತ್ತು ಯೋಗಸಾರದಿಂದಲೂ ಕೆಲವು ಪದ್ಯಗಳನ್ನು ಆರಿಸಿಕೊಂಡಿದ್ದಾನೆ.

ಆದುದರಿಂದ ಯೋಗೀಂದುಗಳು ಹೇಮಚಂದ್ರರಿಂದಲೇ ಅಲ್ಲ ರಾಮಸಿಂಹನಿಂದಲೂ ಪೂರ್ವವರ್ತಿಗಳು

(6) ದೇವಸೇನ ವಿರಚಿತ ತತ್ವಸಾರದ ಕೆಲವು ಪದ್ಯಗಳು ಪರಮಾತ್ಮಪ್ರಕಾಶದ ಪದ್ಯಗಳನ್ನು ಸರಿಹೋಲುತ್ತವೆ ಉಭಯಗ್ರಂಥಗಳ ರಚಯಿತರೂ ಒಂದೇ ಕಡೆ ಯಿಂದ ಆ ಪದ್ಯಗಳನ್ನು ಆರಿಸಿಕೊಂಡಿರುವ ಸಂಭವವಿದೆ. ಆದರೆ ಪದ್ಯಗಳ ಸ್ಥಿತಿ ಮತ್ತು ಕೆಲವು ಕಾರಣಗಳಿಂದ ದೇವಸೇನನು ಯೋಗೀಂದುಗಳ ಅನುಸರಣೆಯನ್ನು ಮಾಡಿರಬೇಕೆಂದು ನನ್ನ ಅಭಿಪ್ರಾಯ. ತನ್ನ ಗ್ರಂಥಗಳಲ್ಲಿ ದೇವಸೇನನು ಪೂರ್ವ ವರ್ತಿ ಗ್ರಂಥಗಳ ಉಪಯೋಗವನ್ನು ಪ್ರಾಯಃ ಮಾಡಿಕೊಂಡಿದ್ದಾನೆ ದೇವಸೇನನು ತನ್ನ ದರ್ಶನಸಾರ ಗ್ರಂಥವನ್ನು ಇಸ್ವಿ ಸನ್ 933ರಲ್ಲಿ ಪೂರ್ಣಗೊಳಿಸಿದನು

(7) ಯೋಗಸಾರದ 65ನೆಯ ಪದ್ಯ ಮತ್ತು ಕಾರ್ತಿಕೇಯಾನುಪ್ರೇಕ್ಷೆಯ 279ನೆಯ ಗಾಥೆಯಲ್ಲಿ ಸಾಮ್ಯವಿದೆ. ಉಭಯ ಪದ್ಯಗಳ ಆಶಯವೂ ಸಮಾನ ವಾಗಿದೆ. ಕೇವಲ ಪದ್ಯವನ್ನು (ದೋಹಾ) ಗಾಥೆಯ ರೂಪದಲ್ಲಿ ಪರಿವರ್ತಿಸ ಲಾಗಿದೆ. ಕಾರ್ತಿಕೇಯಕುಮಾರನ ಸಮಯವು ಇನ್ನೂ ನಿಶ್ಚಯವಿಲ್ಲ. ಆದರೂ ಮೌಖಿಕಪರಂಪರೆಯ ಆಧಾರದಿಂದ ವಿಕ್ರಮ ಸಂವತ್ಸರದಿಂದ 2-3 ಶತಮಾನಗಳ ಹಿಂದೆ ಕಾರ್ತಿಕೇಯಕುಮಾರನಾಗಿರಬೇಕೆಂದು ಹೇಳಲಾಗುತ್ತಿದೆ. ಕಾರ್ತಿಕೇ ಯಾನುಪ್ರೇಕ್ಷೆಯ ಟೀಕೆಯನ್ನು ಶುಭಚಂದ್ರರು ಇಸ್ವಿ 1556ರಲ್ಲಿ ರಚಿಸಿದ್ದಾರೆ. ಇದಲ್ಲದೆ ಯಾವ ಪ್ರಾಚೀನ ಟೀಕೆಯಲ್ಲಿಯೂ ಕಾರ್ತಿಕೇಯಕುಮಾರನ ಉಲ್ಲೇ ಖವು ಕಾಣುವುದಿಲ್ಲ. ಕಾರ್ತಿಕೇಯಕುಮಾರನು ದ್ವಾದಶಾನುಪ್ರೇಕ್ಷೆಗಳ ಕ್ರಮ ವನ್ನು ತತ್ವಾರ್ಥಸೂತ್ರದ ಅನುಸಾರವಾಗಿ ಪರಿಗಣಿಸಿದ್ದಾನೆ. ಅದು ವಟ್ಟಕೇರ, ಶಿವಾರ್ಯ, ಮತ್ತು ಕುಂದಕುಂದರ ಕ್ರಮದಿಂದ ಸ್ವಲ್ಪ ಭಿನ್ನವಾಗಿದೆ. ಈ ಎಲ್ಲಾ ವಿಷಯಗಳನ್ನು ವಿಚಾರಮಾಡಿದರೆ ಕಾರ್ತಿಕೇಯಕುಮಾರನ ಪರಂಪರಾಗತ ಪ್ರಾಚೀ ನತೆಯ ಕಿಂವದಂತಿಯನ್ನು ಸಮರ್ಥಿಸಲಾಗುವುದಿಲ್ಲ. ಇನ್ನೂ ಕೆಲವು ತರ್ಕಗಳಿಂದ ಕುಮಾರನಿಂದ ಯೋಗೀಂದುದೇವರು ಪ್ರಾಚೀನರೆಂದು ನನ್ನ ಅಭಿಪ್ರಾಯವಿದೆ,

(8) ಪ್ರಾಕೃತಲಕ್ಷಣದ ರಚಯಿತನಾದ ಚಂಡನು ತನ್ನ 'ಯಥಾತಥಾ ಅನಯೋಃ ಸ್ಥಾನೇ' ಈ ಸೂತ್ರದ ಉದಾಹರಣೆಯಲ್ಲಿ ಪರಮಾತ್ಮಪ್ರಕಾಶದ 85ನೆಯ ಪದ್ಯವನ್ನು ಉದ್ಧರಿಸಿದ್ದಾನೆ. ಕೆಲವು ಪ್ರಮಾಣಗಳಿಂದ ವ್ಯಾಕರಣಕಾರ ಚಂಡನ ವ್ಯವಸ್ಥಿತಸಮಯವನ್ನು ಸುಮಾರು ಕ್ರಿ. ಶ. ಏಳನೆಯ ಶತಮಾನವೆಂದು ಅನು ಮಾನಿಸಬಹುದು. ಆದುದರಿಂದ ಪರಮಾತ್ಮಪ್ರಕಾಶವನ್ನು ಪ್ರಾಕೃತಲಕ್ಷಣದಿಂದ ಪ್ರಾಚೀನವೆಂದು ಹೇಳಬಹುದು.

**ಯೋಗೀಂದುದೇವರ ಸಮಯಃ**— ಮೇಲಿನ ಪ್ರಮಾಣಗಳಿಂದ ಪರಮಾತ್ಮ ಪ್ರಕಾಶವನ್ನು ರಚಿಸಿದ ಜೋಯಿಂದು ಅಥವಾ ಯೋಗೀಂದು ದೇವರ ಸಮಯವು ಪೂಜ್ಯಪಾದರ ಅನಂತರ, ಪ್ರಾಕೃತಲಕ್ಷಣಕಾರರ ಮೊದಲು ಅಂದರೆ ಕ್ರಿ. ಶ.

ಆರನೆಯ ಶತಮಾನದಲ್ಲಿರಬಹುದೆಂದು ನಿಷ್ಕರ್ಷೆಮಾಡಬಹುದು. ಇದರಿಂದ ಹೆಚ್ಚಾಗಿ ಜೋಯಿಂದುಗಳ ಜನ್ಮಸ್ಥಾನ, ದೀಕ್ಷಾಗುರು, ದೀಕ್ಷಾಸ್ಥಾನ, ಕಾರ್ಯಕಾಲ, ಕಾರ್ಯಕ್ಷೇತ್ರಾದಿಗಳಿಂದ ಸಂಬಂಧದಲ್ಲಿ ಪರಿಚಯವು ಲಭಿಸಲಿಲ್ಲ.

**ಟೀಕಾ ಮತ್ತು ಟೀಕಾಕಾರರ ಪರಿಚಯ:**— ಪರಮಾತ್ಮ ಪ್ರಕಾಶದ ಮೇಲೆ ಅನೇಕ ಟೀಕೆಗಳಿವೆ ಒಂದು ಸಂಸ್ಕೃತ ಟೀಕೆ, ಎರಡು ಕನ್ನಡ ಟೀಕೆಗಳು, ಒಂದು ಹಿಂದೀ ಟೀಕೆ, ಹೀಗೆ ನಾಲ್ಕು ಟೀಕೆಗಳಿವೆ. ಪ್ರಕೃತ ಗ್ರಂಥವು ಶ್ರೀ ಪಂ. ಚಂದ್ರ ರಾಜೇಂದ್ರ ಶಾಸ್ತ್ರಿಗಳ ಅನ್ವಯಾರ್ಥ ಭಾವಾರ್ಥ— ಟೀಕೆಯಿಂದ ಯುಕ್ತವಾಗಿದೆ. ಹೀಗೆ ಇದು ಐದನೆಯ ಟೀಕ ಎಂದು ಹೇಳಬಹುದು.

**ಬ್ರಹ್ಮದೇವನ ಸಂಸ್ಕೃತ ಟೀಕೆ:**- ಬೃಹದ್ದ್ರವ್ಯಸಂಗ್ರಹ ಟೀಕಾಕಾರನಾದ ಬ್ರಹ್ಮ ದೇವನು ಸುಮಾರು ಹದಿಮೂರನೆಯ ಶತಮಾನದಲ್ಲಿ ಪರಮಾತ್ಮಪ್ರಕಾಶಕ್ಕೆ ಸಂಸ್ಕೃತ ಟೀಕೆಯನ್ನು ಬರೆದಿದ್ದಾನೆ. ಈ ಟೀಕೆಯಲ್ಲಿ ಅವನ ಹೆಸರು ಉಲ್ಲಿಖಿತವಾಗಿರದಿ ದ್ದರೂ ಇತರ ಟೀಕಾಕಾರರು ಮಾಡಿದ ಉಲ್ಲೇಖಗಳಿಂದ ಮತ್ತು ಅವನ ಇತರ ಕೃತಿಗಳ ಸಾಮ್ಯದಿಂದ ಈ ಟೀಕೆಯು ಅವನಿಂದಲೇ ವಿರಚಿತವಾಗಿದೆಯೆಂದು ಊಹಿ ಸಲು ಸಾಕಷ್ಟು ಆಧಾರಗಳಿವೆ. ಈ ಟೀಕೆಯಲ್ಲಿ ಪರಮಾತ್ಮಪ್ರಕಾಶದ ದೋಹೆಗಳ ಶಬ್ದಾರ್ಥ ಮತ್ತು ವಿಶದಾರ್ಥವನ್ನು ಕೊಡಲಾಗಿದೆ. ವಿಶೇಷವಾಗಿ ನಿಶ್ಚಯನಯದ ಆಧಾರದಿಂದ ವರ್ಣನೆಯನ್ನು ಮಾಡಿರುವುದಾದರೂ ಬ್ರಹ್ಮದೇವನ ಈ ವಿವೇಚನೆ ಯಲ್ಲಿ ನೀರಸತೆ ಇಲ್ಲವೆಂದು ಹೇಳಬಹುದು.

**ಮಲಧಾರಿ ಬಾಲಚಂದ್ರನ ಟೀಕೆ:** — ಬ್ರಹ್ಮದೇವನ ನಂತರ ಬಾಲಚಂದ್ರನೆಂಬ ವಿದ್ವಾಂಸನು ಈ ಪರಮಾತ್ಮಪ್ರಕಾಶದ ಮೇಲೆ ಕನ್ನಡ ಟೀಕೆಯೊಂದನ್ನು ರಚಿಸಿರು ತ್ತಾನೆ. ಬ್ರಹ್ಮದೇವನ ಟೀಕೆಯಲ್ಲಿ ಉಳಿದ ಅಪೂರ್ಣತೆಯನ್ನು ದೂರಮಾಡುವುದ ಕ್ಕೋಸ್ಕರವಾಗಿಯೇ ಬಾಲಚಂದ್ರನು ಪ್ರಯತ್ನಿಸಿದ್ದೆಂದು ಕಾಣುತ್ತದೆ. ಪದ್ಯದ ಪ್ರತಿ ಪದದ ಅರ್ಥಗಳನ್ನು ಕೊಟ್ಟು ಗ್ರಂಥದ ಆಶಯವನ್ನು ಸ್ಪಷ್ಟೀಕರಿಸುವುದೇ ಬಾಲ ಚಂದ್ರನ ಟೀಕೆಯ ಉದ್ದೇಶ. ಆದುದರಿಂದ ಬ್ರಹ್ಮದೇವನ ಟೀಕೆಯಷ್ಟು ಭಾವಾರ್ಥ ಪರಿಪೂರಿತವಾಗಿರದಿದ್ದರೂ ಗ್ರಂಥವನ್ನು ತಿಳಿಯಲಿಕ್ಕೆ ಇದು ಸಹಾಯಕವಾಗಿದೆ. ಬಾಲ ಚಂದ್ರನು ಕ್ರಿ. ಶ ೧೪ನೆಯ ಶತಮಾನದಲ್ಲಿ ಆಗಿರಬಹುದೆಂದು ಊಹಿಸಲಾಗುತ್ತಿದೆ.

**ಇನ್ನೊಂದು ಕನ್ನಡ ಟೀಕೆ:**— ಬಾಲಚಂದ್ರನ ಟೀಕೆಯಲ್ಲದೆ ಪರಮಾತ್ಮಪ್ರಕಾ ಶದ ಮೇಲೆ ಇನ್ನೊಂದು ಕನ್ನಡ ಟೀಕೆ ಇದೆ. ಅದು ಯಾರಿಂದ ವಿರಚಿತವಾಗಿದೆ ಎಂಬಿತ್ಯಾದಿ ಪರಿಚಯಗಳು ಉಪಲಬ್ಧವಾಗದಿದ್ದರೂ, ಮುನಿಭದ್ರ ಸ್ವಾಮಿಗಳ ಶಿಷ್ಯ ನಿಂದ ವಿರಚಿತವಾಗಿದೆ ಎಂದು ಅಂತಿಮ ವಾಕ್ಯದಿಂದ ತಿಳಿದುಬರುತ್ತದೆ. ಈ ಟೀಕೆ ಯಲ್ಲಿ ಶಬ್ದಾರ್ಥವನ್ನು ಕೊಡಲಾಗಿದೆ.

**ಪಂ. ದೌಲತರಾಮಜಿಯವರ ಹಿಂದೀ ಟೀಕೆ:**— ಮೇಲಿನ ಟೀಕೆಗಳಂತೆ ಈ ಪರಮಾತ್ಮಪ್ರಕಾಶದ ಮೇಲೆ ಉತ್ತರ ದೇಶೀಯ ಬಸವಾನಿವಾಸಿ ಪಂ. ದೌಲತರಾಮಜಿ

ಯವರು (ಸಂವತ್ 1795) ಹಿಂದೀ ಭಾಷೆಯಲ್ಲಿ ಒಂದು ಟೀಕೆಯನ್ನು ಬರೆದಿದ್ದಾರೆ ಅವರು ಜಯಪುರ ರಾಜ್ಯದ ಕರ್ಮಚಾರಿಗಳಾಗಿದ್ದರಿಂದ ಆಗಿನ ಜಯಪುರೀಯ ಭಾಷೆ ಯಲ್ಲಿಯೇ ಇದನ್ನು ಬರೆದಿದ್ದಾರೆ ಇದು ಬ್ರಹ್ಮದೇವನ ಟೀಕೆಯ ಅನುವಾದ ಇವರ ಜಯಪುರೀಯ ಭಾಷೆಯು ಗ್ರಾಮೀಣಭಾಷೆಯಂತಿರುವುದರಿಂದ, ಮತ್ತು ಸುಲಭವೇದ್ಯವಾಗದಿರುವುದರಿಂದ ಅದನ್ನು ಪಂ ಮನೋಹರಲಾಲಜೀಯವರು, ಆಧುನಿಕ ಸುಲಭವೇದ್ಯ ಹಿಂದಿಯಲ್ಲಿ ಪರಿವರ್ತಿಸಿರುತ್ತಾರೆ.

ಹೀಗೆ ಈ ಗ್ರಂಥದ ಮೇಲೆ ಇಷ್ಟೆಲ್ಲಾ ವಿಭಿನ್ನ ವಿದ್ವಾಂಸರ ಟೀಕೆಗಳಿರುವುದ ರಿಂದಲೇ ಇದರ ಮಹತ್ವವು ಆತ್ಮಾಧ್ಯವಸಾಯಿ ಜನಗಳಲ್ಲಿ ಬಹಳವಾಗಿದ್ದಿತೆಂಬ ವಿಷಯವು ಸ್ಪಷ್ಟವಾಗುತ್ತಿದೆ.

**ಪ್ರಕೃತ ಕನ್ನಡ ಟೀಕೆ:**—ಪರಮಾತ್ಮಪ್ರಕಾಶವು ಕನ್ನಡ ಅನ್ವಯಾರ್ಥ ಮತ್ತು ಭಾವಾರ್ಥದೊಡನೆ ಕರ್ನಾಟಕದ ಸ್ವಾಧ್ಯಾಯಪ್ರೇಮಿಗಳಿಗೆ ಮೊದಲನೆಯ ಸಾರಿ ಲಭಿಸುತ್ತಿದೆ. ಇದರಲ್ಲಿ ಪರಮಾತ್ಮಪ್ರಕಾಶದ ಪ್ರತಿ ಪದ್ಯಗಳಿಗೂ ಸಂಸ್ಕೃತ ಛಾಯೆ, ಅನ್ವಯಾರ್ಥಗಳನ್ನು ಕೊಟ್ಟು ಟೀಕಾಕಾರರು ಗ್ರಂಥದ ವಿಶದ ಆಶಯವನ್ನು ತನ್ನ "ಭಾವಾರ್ಥದೀಪಿಕೆ"ಯಲ್ಲಿ ವ್ಯಕ್ತಪಡಿಸಿದ್ದಾರೆ ಇದರ ಲೇಖಕರು ನಮ್ಮ ಮಿತ್ರರಾದ ಚಂದ್ರರಾಜೇಂದ್ರ ಶಾಸ್ತ್ರಿಗಳು. ಶ್ರೀ ಶಾಸ್ತ್ರಿಗಳು ಸಂಸ್ಕೃತದಲ್ಲಿ ಕ್ರಮಬದ್ಧವಾದ ಅಧ್ಯಯನವನ್ನು ಮಾಡಿ, ಅನೇಕ ಸಾಹಿತ್ಯಕ ಪರೀಕ್ಷೆಗಳನ್ನು ಕೊಟ್ಟು ನೈಪುಣ್ಯವನ್ನು ಹೊಂದಿದವರೇ ಮಾತ್ರವಲ್ಲ, ಸಾಹಿತ್ಯ, ಸಿದ್ಧಾಂತ, ವೈದಿಕ ಮೊದಲಾದ ವಿಷಯ ಗಳಲ್ಲಿ ಬಹು ವ್ಯುತ್ಪನ್ನವಾದ ವಿದ್ವಾಂಸರು ಇವರು ಆತ್ಮಾನುಶಾಸನ, ಸಾಗಾರ ಧರ್ಮಾಮೃತ ಮೊದಲಾದ ಗ್ರಂಥಗಳಿಗೂ ಕನ್ನಡ ಅರ್ಥವನ್ನು ಸುಗಮವಾಗಿ ಬರೆ ದಿರುತ್ತಾರೆ. ಅದೇ ಪ್ರಕಾರವಾಗಿ ಈ ಪ್ರಕೃತ ಗ್ರಂಥಕ್ಕೂ ಸರಸವಾದ ಟೀಕೆಯನ್ನು ಬರೆದಿದ್ದಾರೆ. ಭಾಷೆಯು ಲಲಿತವಾಗಿದೆ. ವಿಷಯವರ್ಣನೆಯು ಹೃದಯಗ್ರಾಹಿ ಯಾಗಿದೆ. ದೋಹೆಗಳ ಅರ್ಥವು ಲೇಖನ ಶೈಲಿಯಿಂದ ಸ್ಪಷ್ಟೀಕೃತವಾಗಿದೆ. ಇಂತಹ ಮಹತ್ವಪೂರ್ಣವಾದ ಗ್ರಂಥದ ಮೇಲೆ ಈ ಸುಂದರವಾದ ಟೀಕೆಯನ್ನು ಬರೆದು ಸಾಹಿತ್ಯ ಸೇವೆಯನ್ನು ಸಲ್ಲಿಸಿದ್ದಕ್ಕಾಗಿ ನಮ್ಮಂತೆಯೇ ಸಮಾಜ ಬಾಂಧವರು ಚಿರ ಋಣಿಗಳಾಗುವರು. ಶ್ರೀ ಶಾಸ್ತ್ರಿಗಳಿಗೆ ಸಾಹಿತ್ಯ ಸೇವೆಗೋಸುಗ ದೀರ್ಘಾಯುರಾ ರೋಗ್ಯಗಳು ಲಭಿಸಲೆಂದು ಶ್ರೀ ಪರಮಾತ್ಮನಲ್ಲಿ ಪ್ರಾರ್ಥನೆ.

**ಪ್ರಕಾಶಕರ ಪರಿಚಯ:**—ಧರ್ಮಸ್ಥಳದ ಧರ್ಮಾತ್ಮರಾದ ಶ್ರೀ ಮಂಜಯ್ಯ ಹಗ್ಗಡೆಯವರನ್ನರಿಯದವರಾರು? ಶ್ರೀ ಹೆಗ್ಗಡೆಯವರು ಆಗರ್ಭ ಶ್ರೀಮಂತರು, ನಿಸರ್ಗಧರ್ಮಪ್ರಿಯರು, ಸಾಹಿತ್ಯಪ್ರೇಮಿಗಳು, ಕಲೋಪಾಸಕರು, ಗುಣಾನುರಾಗಿ ಗಳು, ಶ್ರುತಭಕ್ತರು, ಸಮಾಜ ಮತ್ತು ಧರ್ಮೋನ್ನತಿಯ ವಿಷಯದಲ್ಲಿ ಅಹರ್ನಿಶಿ ಸಚಿಂತರು, ಆತ್ಮಹಿತನಿರತರು, ಪರಹಿತಪ್ರವೀಣರು. ಅವರು ಮಾಡಿರುವ ಮಾಡು ತ್ತಿರುವ ಲೋಕಹಿತದ ಕಾರ್ಯಗಳು ಸುಪರಿಚಿತಗಳಾಗಿವೆ. ಆಧ್ಯಾತ್ಮಿಕ ಹೃದಯದಲ್ಲಿ

ಬೇಕಾಗಿರುವ ಪರಧರ್ಮಸಹಿಷ್ಣುತೆಯು ಅವರ ಆತ್ಮನಲ್ಲಿ ಗಭೀರವಾಗಿ ನೆಲೆಸಿರುತ್ತದೆ. ಅನೇಕವರ್ಷಗಳಿಂದ ಅವರು ಏರ್ಪಡಿಸುತ್ತಿರುವ ಸರ್ವಧರ್ಮಸಮ್ಮೇಲನವೇ ಇದಕ್ಕೆ ಸರಿಯಾದ ಸಾಕ್ಷಿ. ಶ್ರೀ ಹೆಗ್ಗಡೆಯವರ ಸರಲ ಪರಿಣಾಮ, ಭದ್ರಪರಿಣತಿ, ಗುಣಾನುಮೋದತೆ, ಸದಾಚಾರತತ್ಪರತೆ, ದೈವಭಕ್ತಿ ಮೊದಲಾದ ಅನರ್ಘ್ಯಗುಣಗಳನ್ನು ಪರಿಶೀಲಿಸಿದರೆ ಅವರನ್ನು ರಾಜರ್ಷಿಗಳೆಂದು ಸಂಬೋಧಿಸಿದರೆ ಅತಿಶಯೋಕ್ತಿಯಾಗಲಾರದು ಅವರು ಈ ಗ್ರಂಥವನ್ನು ತನ್ನ ಮತ್ತು ಇತರ ಆತ್ಮರಲ್ಲಿ ಪರಮಾತ್ಮನ ಪ್ರಕಾಶವಾಗಲೆಂಬ ಶುಭಭಾವನೆಯಿಂದ ಪ್ರಕಟಿಸಿರುತ್ತಾರೆ. ಪರಮಾತ್ಮ ಪದವನ್ನು ಗುರಿಯಾಗಿಟ್ಟುಕೊಂಡು ತತ್ಪಥಗಾಮಿಯಾಗಿರುವ ಶ್ರೀ ನಿರ್ಗ್ರಂಥಾಚಾರ್ಯ ಪಾಯಸಾಗರ ಸ್ವಾಮಿಗಳಿಗೆ ಆಹಾರದಾನವನ್ನು ಕೊಟ್ಟ ಸಂತೋಷದ ಫಲಸ್ವರೂಪವಾಗಿ ಈ ಪರಮಾತ್ಮಪ್ರಕಾಶವು ಪ್ರಕಾಶಕ್ಕೆ ಬಂದಿದೆ. ಆಹಾರದಾನದ ಅತಿಶಯದಿಂದ ಪಂಚಾಶ್ಚರ್ಯವೃಷ್ಟಿಯಾಗುತ್ತದೆಂದು ನಾವು ಪುರಾಣಗಳಲ್ಲಿ ಓದಿ ಕೇಳಿದ್ದರೂ ಈ ಅಹಾರದಾನದಲ್ಲಿ ಶ್ರೀ ಹೆಗ್ಗಡೆಯವರಂಥಹ ದಾತೃವಿಶೇಷ, ಶ್ರೀ ಆಚಾರ್ಯರಂಥಹ ಪಾತ್ರವಿಶೇಷದ ಅತಿಶಯದಿಂದ ಸಮಸ್ತ ಸಂಸಾರಕ್ಕೇನೆಯೇ ಅಭಯದಾನವನ್ನು ಕೊಡುವ ಈ ಪರಮಾತ್ಮಪ್ರಕಾಶವು ಪ್ರಕಾಶಿತವಾಯ್ತೆಂಬ ವಿಷಯದಿಂದ ಸಮಸ್ತ ಆತ್ಮ ಹಿತೈಷಿಗಳು ಆನಂದತುಂದಿಲರಾಗದಿರಲಾರರು. ಶ್ರೀ ಪರಮಾತ್ಮನು ಪ್ರಕಾಶಕರಿಗೆ ದೀರ್ಘಾಯುರಾರೋಗ್ಯಗಳನ್ನು ದಯೆಪಾಲಿಸಿ ಆತ್ಮಸ್ವಾಸ್ಥ್ಯವನ್ನು ನೀಡಲೆಂದು ಹಾರ್ದಿಕಕಾಮನೆ.

**ಉಪಸಂಹಾರ:**— ಪ್ರಸ್ತುತ ಪ್ರಸ್ತಾವನೆಯನ್ನುಪಸಂಹರಿಸುತ್ತಾ ಧರ್ಮಬಂಧುಗಳಲ್ಲಿ ಎರಡು ವಿಷಯಗಳನ್ನು ಹೇಳಬೇಕಾಗಿದೆ. ಇವತ್ತು ಭೌತಿಕ ಚಾಕಚಕ್ಯದಲ್ಲಿ ಮಗ್ನವಾದ ಈ ಲೋಕಕ್ಕೆ ಮುಕ್ತಿ, ಪರಮಾತ್ಮ ಸ್ವರೂಪಾದಿಗಳು ಅತಿ ಪರೋಕ್ಷವಾಗಿ ಕಂಡರೂ ಆತ್ಮಹಿತಸಾಧಕನಿಗೆ ಅವುಗಳ ಪ್ರಾಪ್ತಿಯು ಅಸಂಭವವಲ್ಲ. ಪರಮಾತ್ಮನನ್ನು ಹುಡುಕಲು ಅನ್ಯತ್ರ ಹೋಗುವುದಗತ್ಯವಿಲ್ಲ. ತನ್ನ ಶರೀರದಲ್ಲಿರುವ ಆತ್ಮನನ್ನೇ ರಾಗದ್ವೇಷ, ಕ್ರೋಧಮಾನ ಮೊದಲಾದ ವಿಭಾವಭಾವಗಳಿಂದ ವಿರಹಿತನನ್ನಾಗಿ ಮಾಡಿ ಶುದ್ಧಸ್ವರೂಪನನ್ನಾಗಿ ಮಾಡುವುದೇ ಪರಮಾತ್ಮಪದದ ಪ್ರಾಪ್ತಿಯು. ಅದೇ ಮುಕ್ತಿ. ಅದೇ ಮೋಕ್ಷ. ಆ ಸ್ವಸ್ವರೂಪವನ್ನು ಪಡೆಯಲು ಈ ಪ್ರಕಾಶದ ಉಪಯೋಗವನ್ನು ಮಾಡಿಕೊಂಡರೆ ಲೇಖಕರ, ಗ್ರಂಥಕರ್ತರ, ಮತ್ತು ಪ್ರಕಾಶಕರ ಶ್ರಮವು ಸಾರ್ಥಕವಾಗಬಹುದು.

ವಿದುಷಾಮನುಚರಃ

**(ಪಂ.) ವರ್ಧಮಾನ ಪಾರ್ಶ್ವನಾಥ ಶಾಸ್ತ್ರಿ,**
(ವಿದ್ಯಾವಾಚಸ್ಪತಿ, ನ್ಯಾಯಕಾವ್ಯತೀರ್ಥ)
ಸಂಪಾದಕ,-ವಿಶ್ವಬಂಧು, ಪ್ರಧಾನ ಮಂತ್ರಿ, ಬೊಂಬಾಯಿ ಪರೀಕ್ಷಾಲಯ, ಆಚಾರ್ಯ ಕುಂಥುಸಾಗರ ಗ್ರಂಥಮಾಲಾ ಆದಿ.

ಕಲ್ಯಾಣ ಭವನ
ಸೊಲ್ಲಾಪುರ
೧೫—೯—೧೯೫೨

# ನಿವೇದನೆ

ಸುಪ್ರಸಿದ್ಧ ಶ್ರೀಕ್ಷೇತ್ರ ಧರ್ಮಸ್ಥಳದ ಧರ್ಮಾತ್ಮರಾದ ಶ್ರೀಮಾನ್ ಮಂಜಯ್ಯ ಹೆಗ್ಗಡೆಯವರ ಕೃಪೆಯಿಂದ ಈ 'ಪರಮಾತ್ಮಪ್ರಕಾಶ' ಗ್ರಂಥಕ್ಕೆ ಕನ್ನಡ ಅನ್ವಯಾರ್ಥ ಭಾವಾರ್ಥಗಳನ್ನು ಬರೆಯುವ ಸುಯೋಗವು ಲಭಿಸಿತು. ಸಮಾಜಪ್ರಸಿದ್ಧರೂ ಹಿರಿಯ ವಿದ್ವನ್ಮಣಿಗಳೂ ಆದ 'ಪಂಡಿತರತ್ನ' ಶ್ರೀ. ಎ. ಶಾಂತಿರಾಜ ಶಾಸ್ತ್ರಿಗಳವರ ಹಾಗೂ ಪೂಜ್ಯ ಗುರುವರ್ಯರಾದ 'ಸರಸ್ವತೀಭೂಷಣ' ಶ್ರೀ. ಪಿ ಲೋಕನಾಥ ಶಾಸ್ತ್ರಿಗಳವರ ಶುಭಾಶೀರ್ವಾದವು ನನಗೀ ಕಾರ್ಯದಲ್ಲಿ ಧೈರ್ಯೋತ್ಸಾಹಗಳನ್ನಿತ್ತಿತು. ಇಂದು ಕಣ್ಮರೆಯಾಗಿರುವ ಆ ವಿದ್ವನ್ಮಣಿಗಳಿಬ್ಬರಿಗೂ ಪರೋಕ್ಷದಲ್ಲಾದರೂ ಕೃತಜ್ಞತಾಪೂರ್ವಕ ಶ್ರದ್ಧಾಂಜಲಿಯನ್ನರ್ಪಿಸುವುದು ನನ್ನ ಆದ್ಯಕರ್ತವ್ಯವಾಗಿದೆ.

ಶ್ರೀ ಯೋಗಿಂದುದೇವರಿಂದ ರಚಿತವಾದ ಈ ಪರಮಾತ್ಮಪ್ರಕಾಶಕ್ಕೆ ಶ್ರೀ. ಬ್ರಹ್ಮದೇವರು ಬರೆದಿರುವ ಸಂಸ್ಕೃತವೃತ್ತಿಯನ್ನೂ ಸ್ವ ಪಂ. ದೌಲತ್‌ರಾಮಜೀಯವರು ಬರೆದಿರುವ ಹಿಂದೀ ಟೀಕೆಯನ್ನೂ ಮುಂದಿಟ್ಟುಕೊಂಡು, ಅನ್ವಯಾರ್ಥಭಾವಾರ್ಥಗಳನ್ನು ಬರೆಯಲಾಗಿದೆ. ಅಲ್ಲಲ್ಲಿ ಗ್ರಂಥಾಂತರಗಳ ಪ್ರಮಾಣಗಳನ್ನುದ್ಧರಿಸಿ ಪ್ರಕೃತಾರ್ಥವನ್ನು ಸ್ಪಷ್ಟೀಕರಿಸಲು ಯತ್ನಿಸಲಾಗಿದೆ. ಮೂಲಗ್ರಂಥವು ಅಪಭ್ರಂಶ ಭಾಷಯಲ್ಲಿ ರಚಿತವಾಗಿದ ಪಾಠಕರ ಸೌಕರ್ಯಕ್ಕಾಗಿ ಪ್ರತಿಪದ್ಯಗಳ ಕಳಗ ಸಂಸ್ಕೃತ ಛಾಯಯನ್ನು ಕೊಡಲಾಗಿದೆ. ಮೂಲವು ಕಲವೆಡ ಸೂತ್ರದಂತಿರುವುದರಿಂದ ಅನ್ವಯಾರ್ಥದಲ್ಲಿ ಕೆಲವು ಪದಗಳ ಅರ್ಥವನ್ನು ಅಧ್ಯಾಹಾರಮಾಡಿಕೊಳ್ಳಬೇಕಾಯಿತು. ಹಾಗೂ ಅರ್ಥಸ್ಪಷ್ಟತೆಗಾಗಿ ಕೆಲವು ವಿಭಕ್ತಿಗಳ ಅರ್ಥವನ್ನು ಪರಿವರ್ತನಗೊಳಿಸಬೇಕಾಯಿತು. ಮೂಲದಲ್ಲಿರುವಂತೆ ಅಲ್ಲಲ್ಲಿ ಪುನರುಕ್ತಿಗಳು ಅನುವಾದದಲ್ಲಿಯೂ ಅನಿವಾರ್ಯವಾಗಿ ಬಂದಿರುತ್ತವೆ. ಆದರೆ ಶಿಷ್ಯಪ್ರಬೋಧನಯ ಪ್ರಾಮುಖ್ಯತೆಯಿಂದ ಒಂದೇ ವಿಷಯವನ್ನು ಪುನಃ ಪುನಃ ಹೇಳಬೇಕಾದುದರಿಂದ ವಿದ್ವಾಂಸರು ಇದರಲ್ಲಿರುವ ಪುನರುಕ್ತ್ಯಾದಿ ದೋಷಗಳನ್ನು ಗ್ರಹಿಸಬಾರದೆಂದು ಗ್ರಂಥಕರ್ತರೇ ಹೇಳಿರುವರು.

ಪ್ರಕಾಶಕರ ಅಪೇಕ್ಷೆಯ ಮೇರೆಗೆ ನನ್ನ ಬಿನ್ನಹವನ್ನು ಮನ್ನಿಸಿ ಈ ಗ್ರಂಥಕ್ಕೆ ಮಹತ್ತ್ವಪೂರ್ಣವಾದ ಪ್ರಸ್ತಾವನೆಯನ್ನು ನನ್ನ ಮಿತ್ರರಾದ 'ವಿದ್ಯಾವಾಚಸ್ಪತಿ' ಶ್ರೀ ಪಂ. ವರ್ಧಮಾನಪಾರ್ಶ್ವನಾಥ ಶಾಸ್ತ್ರಿಗಳವರು ಬರೆದುಕೊಟ್ಟುದಕ್ಕಾಗಿ ಅವರಿಗೆ ನಾನು ಆಭಾರಿಯಾಗಿದ್ದೇನೆ.

ವಸ್ತುತಃ ಗ್ರಂಥವು ಮಹತ್ತ್ವಪೂರ್ಣವಾಗಿದ್ದು ಗಹನವಿಷಯಗರ್ಭಿತವಾಗಿದೆ. ಅಂತೆಯೇ ಇದರ ಅರ್ಥ ವಿವರಣೆಯ ಕಾರ್ಯವೂ ದೊಡ್ಡದು. ಅಂತೂ ಇದಕ್ಕೆ ಯಥಾಮತಿ ಕನ್ನಡ ಅನ್ವಯಾರ್ಥಭಾವಾರ್ಥಗಳನ್ನು ಬರೆದಿರುತ್ತೇನೆ. ಇದರಲ್ಲಿರಬಹುದಾದ ನ್ಯೂನತೆಗಳನ್ನು ತಿಳಿಸುವ ವಿದ್ವಾಂಸರಿಗೆ ಕೃತಜ್ಞನಾಗಿರುವೆ.

ಕೊನೆಯದಾಗಿ ಎಂದಿನಂತೆ ಲೇಖನವ್ಯವಸಾಯದಲ್ಲಿ ಸರ್ವವಿಧದಿಂದ ನನ್ನನ್ನು ಪ್ರೋತ್ಸಾಹಿಸುತ್ತಿರುವ ಹಾಗೂ ಪ್ರಕೃತ ಕಾರ್ಯದಲ್ಲಿಯೂ ಯೋಗ್ಯಸಲಹೆಗಳನ್ನಿತ್ತು ಸಹಕರಿಸಿರುವ ಶ್ರೀಮಾನ್ ಡಿ. ಪುಟ್ಟಸ್ವಾಮಿ, ಬಿ. ಎ., ಬಿ. ಎಲ್. 'ಅಡ್ವೊಕೇಟ್' ಅವರ ಹಾಗೂ ಪ್ರೂಫ್-ಪರಿಶೋಧನೆಯ ಕಾರ್ಯದಲ್ಲಿ ಸಹಕರಿಸಿದ ಶ್ರೀ. ಟಿ. ರಘು ಚಂದ್ರ ಶೆಟ್ಟಿ, 'ವಿದ್ವಾನ್' ಅವರ ಉಪಕಾರವನ್ನು ಸ್ಮರಿಸುತ್ತ ಪ್ರಕಾಶಕರಾದ ಶ್ರೀಮಾನ್ ಹೆಗ್ಗಡೆಯವರಿಗೆ ಪರಮಾರಾಧ್ಯ ಶ್ರೀ ಮಹಾವೀರಸ್ವಾಮಿಯು ದೀರ್ಘಾಯುರಾರೋಗ್ಯಗಳನ್ನೀಯಲೆಂದು ಪ್ರಾರ್ಥಿಸುತ್ತೇನೆ.

ಶ್ರೀ ಮಹಾವೀರ ಜಿನಾಲಯ,<br>(ಶೆಟ್ರ ಬಸದಿ)<br>ಮೂಡಬಿದಿರೆ,<br>೨೦ —೯—೧೯೫೨.

ಇತಿ,<br>ವಿದ್ವಜ್ಜನಾನುಚರ,<br>**ಎಸ್. ಚಂದ್ರರಾಜೇಂದ್ರ.**



# ವಿಷಯಾನುಕ್ರಮ

# ಶೋಧನ ಪತ್ರ.

| ಪುಟ | ಪಙ್ಕ್ತಿ | ಅಶುದ್ಧಿ | ಶೋಧನ |
|---|---|---|---|
| 8 | 7 | ಉಪದೇವಿತ್ತರು | ಉಪದೇಶವಿತ್ತರು |
| 17 | 17 | ನೀರಡಿಗೆ | ನೀರಡಿಕೆ |
| 21 | 15 | ಸ್ತ್ರೋತ್ರ | ಸ್ತೋತ್ರ |
| 25 | 2 | ತ್ರುಟ್ಯತಿ | ತ್ರುಟ್ಯತಿ |
| 29 | 12 | ಲಬ್ಧ್ವಾಕ | ಲಬ್ಧ್ವಾಪ |
| 30 | 26 | ವಿನಾಂ | ವಿನಾ |
| 31 | 19 | ಆರಾದಿನ | ಆರಾಧಿನ |
| 33 | 11 | ವೃತಿರಿಕ್ತ | ವ್ಯತಿರಿಕ್ತ |
| 38 | 18 | ಇಂದ್ರಿಯಜ್ಞಾನಿ | ಇಂದ್ರಿಯಜ್ಞಾನ |
| 42 | 18 | **ಪಜ್ಜವು** | **ವಜ್ಜಉ** |
| 42 | 19 | **ಉತ್ತು** | **ವುತ್ತು** |
| 42 | 19 | ಹೆಳಲ್ಪಟ್ಟಿವೆ | ಹೇಳಲ್ಪಟ್ಟಿವೆ. |
| 57 | 16 | **ಪರಾಯುವು ಭಾವು** | **ವರಾಯುಉ ಭಾಉ** |
| 58 | 15 | ದೃವ್ಯ | ದ್ರವ್ಯ |
| 62 | 17 | ಸಪುಂನಕ | ನಪುಂನಕ |
| 123 | 23 | ವಟಾದಿಗಳೂ | ವಟಾದಿಗಳಿಗೂ |
| 164 | 21 | ಅಳ್ಹಾಡಿಸು | ಅಲ್ಹಾಡಿಸು |
| 177 | 24 | ಮುನಿಯ | ಮುನಿಯು |
| 198 | 19 | **ಪಿಕ್ಕು** | **ಪಿಕ್ಪು** |
| 204 | 20 | ಪರಮಾಗಮನ | ಪರಮಾಗಮ |
| 204 | 28 | ಆತ್ಮೀಯತ್ನೆ | ಆತ್ಮೀಯತೆ |
| 206 | 28 | ಏಕಹಾ | ವಿಕಹಾ |
| 288 | 9 | ಮೇನೆನೆದು | ಮೇಲೆನೆದು |
| 215 | 6 | ತಿನ್ನಲ್ಪಟ್ತು | ತಿನ್ನಲ್ಪಟ್ಟು |
| 219 | 9 | 'ಯಜ್' | 'ಯುಜ್' |
| 219 | 28 | **ಅವಾತ** | **ಆಪಾತ** |
| 219 | 29 | **ನ್ರೂಣಾಂ** | **ನೃಣಾಂ** |
| 220 | 19 | ಟ್ಟ) ವನು | ಟ್ಟವ) ನು |
| 231 | 30 | ಉಚ್ಚ್ರಯೇ | ಉಚ್ಛ್ರಯೇ |
| 233 | 17 | **ಸಂತುಷ್ಟ್ರೋ** | **ಸಂತುಟ್ಟೋ** |



ಪಂಚಪರಮೇಷ್ಠಿಗಳು

ಣಮೋ ಅರಹಂತಾಣಂ । ಣಮೋ ಸಿದ್ಧಾಣಂ ।
ಣಮೋ ಆಇರಿಯಾಣಂ । ಣಮೋ ಉವಜ್ಝಾಯಾಣಂ ।
ಣಮೋ ಲೋಏ ಸವ್ವಸಾಹೂಣಂ ।



ಧರ್ಮೋಪದೇಶನಚತುರರೂ ಚಾರಿತ್ರಚಕ್ರವರ್ತಿಗಳೂ ಕಠಿನತಪಸ್ವಿಗಳೂ ಆದ

**ಆಚಾರ್ಯ ಶ್ರೀ ಪಾಯಸಾಗರ ಮಹಾಮುನಿಗಳವರು**

# ಸಮರ್ಪಣೆ

ಈ ಗ್ರಂಥವು

ಅಧ್ಯಾತ್ಮರಸಿಕರೂ ಧರ್ಮೋಪದೇಶನಚತುರರೂ

ಚಾರಿತ್ರಚಕ್ರವರ್ತಿಗಳೂ ಕಠಿನತಪಸ್ವಿಗಳೂ ಆದ

**ಆಚಾರ್ಯ ಶ್ರೀ ಪಾಯಸಾಗರ ಮಹಾಮುನಿಗಳವರ**

ಪುನೀತ ಕರಕಮಲಗಳಲ್ಲಿ

ಗುರುಭಕ್ತಿಯ ಕಾಣಿಕೆಯಾಗಿ

**ಸಮರ್ಪಿಸಲ್ಪಟ್ಟಿದೆ.**

—ಪ್ರಕಾಶಕರು.



ಶ್ರೀ ಪರಮಾತ್ಮನೇ ನಮಃ

ಶ್ರೀಮದ್ಯೋಗೀಂದುದೇವ—ವಿರಚಿತ

# ಪರಮಾತ್ಮಪ್ರಕಾಶ

**ಜೇ ಜಾಯಾ ಝಾಣಗ್ಗಿಯಏ, ಕಮ್ಮಕಲಂಕ ಡಹೇವಿ ।**
**ಣಿಚ್ಚಣಿರಂಜಣಣಾಣಮಯ, ತೇ ಪರಮಪ್ಪ ಣವೇವಿ ॥ ೧ ॥**

"ಯೇ ಜಾತಾ ಧ್ಯಾನಾಗ್ನಿನಾ ಕರ್ಮಕಲಙ್ಕಾನಿ ದಗ್ಧ್ವಾ ।
ನಿತ್ಯನಿರಞ್ಜನಜ್ಞಾನಮಯಾನ್ತಾನ್ ಪರಮಾತ್ಮನಃ ನತ್ವಾ ॥ ೧ ॥"

**ಅನ್ವಯಾರ್ಥ:—ಜೇ—** ಯಾವ ಮಹಾತ್ಮರು. **ಝಾಣಗ್ಗಿಯಏ—** ಧ್ಯಾನ ರೂಪವಾದ ಅಗ್ನಿಯಿಂದ. **ಕಮ್ಮಕಲಂಕ—** ಕರ್ಮರೂಪವಾದ ಕಲ್ಮಶಗಳನ್ನು **ಡಹೇವಿ—** ಸುಟ್ಟು. **ಣಿಚ್ಚಣಿರಂಜಣಣಾಣಮಯ—** ನಿತ್ಯರೂ, ನಿರಂಜನ (ಕರ್ಮ ಮಲರಹಿತ)ರೂ, ಜ್ಞಾನಮಯರೂ, **ಜಾಯಾ—** ಆದರೋ. **ತೇ ಪರಮಪ್ಪ—** ಆ ಪರಮಾತ್ಮ(ಸಿದ್ಧಾತ್ಮ)ರನ್ನು. **ಣವೇವಿ—** ನಮಸ್ಕರಿಸಿ ನಾನು 'ಪರಮಾತ್ಮಪ್ರಕಾಶ'ವನ್ನು ವಿವರಿಸುವೆನು.

**ವಿಶೇಷಾರ್ಥ:—** ಸೂರ್ಯಬಿಂಬವನ್ನು ಮುಚ್ಚಿಕೊಂಡಿರುವ ಮೇಘಸಮೂಹವು ಸರಿಯುತ್ತಿರಲು ಸೂರ್ಯಕಿರಣಗಳು ಪ್ರಕಾಶಮಾನವಾಗಿ ಗೋಚರಿಸುವಂತೆ ಆತ್ಮರನ್ನಾವರಿಸಿರುವ ಪುದ್ಗಲಪಿಂಡರೂಪವಾದ ಜ್ಞಾನಾವರಣ ಮೊದಲಾದೆಂಟು ದ್ರವ್ಯಕರ್ಮಗಳೂ ರಾಗಾದಿಸಂಕಲ್ಪವಿಕಲ್ಪರೂಪವಾದ ಭಾವಕರ್ಮಗಳೂ ಆತ್ಮಪ್ರದೇಶದಿಂದ ದೂರವಾಗುತ್ತಿರಲು ಅಂತಹ ಶುದ್ಧಾತ್ಮರು ಲೋಕಾಲೋಕಗಳನ್ನು ಪ್ರಕಾಶಪಡಿಸಲು ಸಮರ್ಥವೂ ಅತ್ಯಂತ ನಿರ್ಮಲವೂ ಆದ ಕೇವಲಜ್ಞಾನ ಮೊದಲಾದ ಅನಂತಚತುಷ್ಟಯ

(ಅನಂತಜ್ಞಾನ, ಅನಂತದರ್ಶನ, ಅನಂತವೀರ್ಯ, ಅನಂತಸುಖ) ಸ್ವರೂಪವುಳ್ಳ ಪರಮಾತ್ಮರಾಗುವರು ಅಂದರೆ ಕರ್ಮಗಳ ಬಿಡುಗಡೆಯಾದೊಡನೆ ಆತ್ಮರಲ್ಲಿ ಅನಂತಚತುಷ್ಟಯಗಳು ಪ್ರಕಟವಾಗುವುವು ಧಾತುಪಾಷಾಣ (ಬಂಗಾರದ ಕಲ್ಲು)ದಲ್ಲಿ ಮಿಶ್ರವಾಗಿದ್ದ ಅನ್ಯಧಾತುಗಳು ಅದರಿಂದ ಬೇರೆಯಾದೊಡನೆ ಅದು ಶುದ್ಧ ಸುವರ್ಣವಾಗಿ ಉಳಿಯುವಂತೆ ಪರ್ಯಾಯಾರ್ಥಿಕನಯದಿಂದ ಕರ್ಮಕಲಂಕದಿಂದ ಮುಕ್ತರಾದ ಆತ್ಮರು ಸಿದ್ಧಪರ್ಯಾಯವನ್ನು ಹೊಂದುವರು. ಇದನ್ನೇ ಪಂಚಾಸ್ತಿಕಾಯಗ್ರಂಥದಲ್ಲಿ **"ಅಭೂದ ಪುವ್ವೋ ಹವದಿ ಸಿದ್ಧೋ"** ಅಂದರೆ, ಜೀವನು ಮೊದಲಿಂದೂ ಪಡೆಯದ ಸಿದ್ಧ ಪರ್ಯಾಯವನ್ನು ಕರ್ಮಕಲಂಕದ ವಿನಾಶದಿಂದ ಪಡೆಯುತ್ತಾನೆ ಎಂದು ಹೇಳಿರುತ್ತಾರೆ "ದ್ರವ್ಯಸಂಗ್ರಹ"ದಲ್ಲಿ **"ಸವ್ವೇ ಸುದ್ಧಾ ಹು ಸುದ್ಧಣಯಾ"** ಎಂದು ಹೇಳಿರುವಂತೆ ಶುದ್ಧ ದ್ರವ್ಯಾರ್ಥಿಕನಯದಿಂದ ಎಲ್ಲ ಜೀವರು ಯಾವಾಗಲೂ ಶುದ್ಧ ಬುದ್ಧ (ಜ್ಞಾನ) ಸ್ವಭಾವವುಳ್ಳವರಾಗಿರುವರು ಧಾತುಪಾಷಾಣದಲ್ಲಿ ಅನ್ಯಧಾತುಗಳು ಮಿಶ್ರವಾಗಿದ್ದರೂ ಅದರಲ್ಲಿ ಸುವರ್ಣವು ಶಕ್ತಿರೂಪದಲ್ಲಿ ನಿತ್ಯವಾಗಿರುತ್ತದೆ ಮತ್ತು ಅದು ಇತರ ಧಾತುಗಳ ಸಂಯೋಗ ದೂರವಾಗುವುದರಿಂದ ವ್ಯಕ್ತ (ಪ್ರಕಟ)ವಾಗುತ್ತದೆ. ಅದರಂತೆ ಜೀವನಲ್ಲಿ ಶುದ್ಧಜ್ಞಾನಸ್ವಭಾವವು ನಿತ್ಯವಾಗಿರುತ್ತದೆ ಮತ್ತು ಕರ್ಮಮಲವು ದೂರವಾಗುವುದರಿಂದ ಆ ನಿಜಸ್ವಭಾವವು ವ್ಯಕ್ತವಾಗುತ್ತದೆಂದಭಿಪ್ರಾಯವು ಹಿಂದೆ ಹೇಳಿದ ದ್ರವ್ಯ-ಭಾವ ಕರ್ಮಗಳು ವೀತರಾಗನಿರ್ವಿಕಲ್ಪಶುಕ್ಲಧ್ಯಾನದಿಂದ ಅಥವಾ ವೀತರಾಗನಿರ್ವಿಕಲ್ಪರೂಪಾತೀತ ಧ್ಯಾನದಿಂದ ನಾಶವಾಗುತ್ತವೆ. ಹೀಗೆ ಕರ್ಮಕಲಂಕದಿಂದ ಬಿಡಲ್ಪಟ್ಟ ಮುಕ್ತಾತ್ಮರು (ಸಿದ್ಧಪರಮೇಷ್ಠಿಗಳು) ನಿತ್ಯರೂ, ನಿರಂಜನರೂ, ಜ್ಞಾನಮಯರೂ ಆಗಿರುವರು

ಏಕಾಂತವಾದಿಗಳಾದ ಬೌದ್ಧಮತೀಯರು ಆತ್ಮನು ನಿತ್ಯನಲ್ಲವೆಂದೂ ಕ್ಷಣಿಕನೆಂದೂ ಹೇಳುವರು. ಅವರಿಗೆ ಬೋಧಿಸುವುದಕ್ಕಾಗಿ ಇಲ್ಲಿ ಆತ್ಮದ್ರವ್ಯವು ನಿತ್ಯ-ಅವಿನಾಶಿಯೆಂದು ಹೇಳಿದುದಾಗಿದೆ. ನೈಯಾಯಿಕಮತೀಯರು "ನೂರು ಕಲ್ಪಕಾಲಗಳು ಕಳೆದ ನಂತರ ಲೋಕವು ಶೂನ್ಯವಾಗುತ್ತದೆ. ಆಗ ಸದಾಶಿವನಿಗೆ ಲೋಕವನ್ನು ಸೃಷ್ಟಿಸುವ ಚಿಂತೆಯುಂಟಾಗುತ್ತದೆ ಅನಂತರ ಅವನು ಮುಕ್ತರಾದ ಸರ್ವ ಆತ್ಮರಿಗೂ ಕರ್ಮರೂಪವಾದ ಅಂಜನದ ಸಂಯೋಗವನ್ನುಂಟುಮಾಡಿ ಅವರನ್ನು ಪುನಃ ಸಂಸಾರದಲ್ಲಿ ಬೀಳಿಸುತ್ತಾನೆ" ಎಂದು ಹೇಳುವುದರಿಂದ ಆ ಮತವನ್ನು ನಂಬುವ ಶಿಷ್ಯನನ್ನು ಬೋಧಿಸುವುದಕ್ಕಾಗಿ ಭಾವಕರ್ಮದ್ರವ್ಯಕರ್ಮನೋಕರ್ಮರೂಪವಾದ ಅಂಜನದ ಸಂಸರ್ಗವು ಮುಕ್ತಾತ್ಮರಿಗೆ ಎಂದಿಗೂ ಉಂಟಾಗದಿರುವುದರಿಂದ ಅವರು 'ನಿರಂಜನ'ರೆಂದು ಹೇಳಿದುದಾಗಿದೆ. ಇನ್ನು ಸಾಂಖ್ಯಮತೀಯರು 'ನಿದ್ರಾವಸ್ಥೆಯಲ್ಲಿರುವ ಮನುಷ್ಯನಿಗೆ ಬಾಹ್ಯಪದಾರ್ಥಗಳ ಜ್ಞಾನವಿಲ್ಲದಿರುವಂತೆ ಸಿದ್ಧಾವಸ್ಥೆಯಲ್ಲಿ ಜ್ಞಾನವಿರುವುದಿಲ್ಲ'ವೆಂದು ಹೇಳುವರು. ಆ ಮತವನ್ನನುಸರಿಸುವ ಶಿಷ್ಯನ ಪ್ರತಿಬೋಧನೆಗಾಗಿ ಸಿದ್ಧಪರಮೇಷ್ಠಿಗಳಿಗೆ 'ಜ್ಞಾನಮಯರು' ಎಂಬ ವಿಶೇಷಣವನ್ನು ಕೊಟ್ಟಿದುದಾಗಿದೆ. ಇಂತಹ ಸಿದ್ಧಪರಮೇಷ್ಠಿಗಳನ್ನು ನಮಸ್ಕರಿಸಿ 'ಪರಮಾತ್ಮಪ್ರಕಾಶ'ವೆಂಬೀ ಗ್ರಂಥವನ್ನು

ರಚಿಸುವೆನೆಂದು ಮುಖ್ಯಾಭಿಪ್ರಾಯ ಇಲ್ಲಿ ನಿರಂಜನವೂ ಜ್ಞಾನಮಯವೂ ಆದ ಪರಮಾತ್ಮ-ದ್ರವ್ಯವು ಗ್ರಾಹ್ಯವಾಗಿರುತ್ತದೆಂದು ಭಾವವು.

**ತೇ ವಂದಉಂ ಸಿರಿಸಿದ್ಧಗಣ, ಹೋಸಹಿಂ ಜೇವಿ ಅಣಂತ ।**
**ಸಿವಮಯಣಿರುವಮಣಾಣಮಯು, ಪರಮಸಮಾಹಿ ಭಜಂತ ॥ ೨ ॥**

"ತಾನ್ ವಂದೇ ಶ್ರೀಸಿದ್ಧಗಣಾನ್ ಭವಿಷ್ಯಂತಿ ಯೇಽಪಿ ಅನನ್ತಾಃ ।
ಶಿವಮಯನಿರುಪಮಜ್ಞಾನಮಯಾಃ ಪರಮಸಮಾಧಿಂ ಭಜನ್ತಃ ॥ ೨ ॥"

**ಅನ್ವಯಾರ್ಥ:**— **ಜೇವಿ**— ಯಾವ ಸಿದ್ಧಾತ್ಮರು. **ಪರಮಸಮಾಹಿ**— ರಾಗಾದಿ ವಿಕಲ್ಪರಹಿತವಾದ— ನಿರ್ವಿಕಲ್ಪಸಮಾಧಿಯನ್ನು **ಭಜಂತ**— ಸೇವಿಸುವವರಾಗಿ. **ಸಿವಮಯಣಿರುವಮಣಾಣಮಯು**— ಪರಮಕಲ್ಯಾಣಮಯರೂ, ಅನುಪಮರೂ, ಜ್ಞಾನಮಯರೂ ಆಗಿ **ಹೋಸಹಿಂ**— ಭವಿಷ್ಯದಲ್ಲಿ ಆಗುವರೋ. **ತೇ ಅಣಂತ**— ಅಂತಹ ಅನಂತರಾವ **ಸಿರಿಸಿದ್ಧಗಣ**— ಸಂಪದ್ಯುಕ್ತರಾದ ಸಿದ್ಧಪರಮೇಷ್ಠಿಗಳ ಸಮೂಹಗಳನ್ನು. **ವಂದಉಂ**— ನಮಸ್ಕರಿಸುತ್ತೇನೆ

**ವಿಶೇಷಾರ್ಥ:**— ಭವಿಷ್ಯತ್ಕಾಲದಲ್ಲಿ ಶ್ರೇಣಿಕ ಮೊದಲಾದ ಭವ್ಯಾತ್ಮರು ಶ್ರೀವೀತರಾಗಸರ್ವಜ್ಞದೇವಪ್ರಣೀತವಾದ ಮಾರ್ಗದಿಂದ ವಿಶುದ್ಧಜ್ಞಾನದರ್ಶನಸ್ವಭಾವವುಳ್ಳ ಶುದ್ಧಾತ್ಮತತ್ತ್ವದ ಸಮ್ಯಕ್‌ಶ್ರದ್ಧಾನ, ಜ್ಞಾನ ಮತ್ತು ಆಚರಣರೂಪವಾದ ನಿಶ್ಚಯ ರತ್ನತ್ರಯದಿಂದ ಕೂಡಿರುವುದೂ ಮಿಥ್ಯಾತ್ವವಿಷಯಕಷಾಯಾದಿ— ವಿಭಾವಪರಿಣಾಮಗಳಿಂದ ರಹಿತವೂ ಶುದ್ಧಾತ್ಮಭಾವನೆಯಿಂದುಂಟಾದ ಸಹಜಾನಂದಸುಖವೆಂಬ ಅಮೃತಕ್ಕೆ ವಿಪರೀತವಾದ ನರಕಾದಿದುಃಖರೂಪವಾದ ಕ್ಷಾರಜಲ (ಉಪ್ಪುನೀರು)ವುಳ್ಳ ಸಂಸಾರಸಮುದ್ರವನ್ನು ದಾಟಲು ಸಮರ್ಥವೂ ಆದ ಸಮಾಧಿಯೆಂಬ ನೌಕೆಯನ್ನು ಆಶ್ರಯಿಸುವವರಾಗಿ ಸ್ವಶುದ್ಧಾತ್ಮಭಾವನೆಯಿಂದುಂಟಾದ ವೀತರಾಗಪರಮಾನಂದಸುಖಮಯರೂ, ಉಪಮಾರಹಿತರೂ, ವಿಶುದ್ಧ (ಕೇವಲ) ಜ್ಞಾನಮಯರೂ ಆಗುವರು. ಅಂತಹ ಕೇವಲಜ್ಞಾನಾದಿ ಮೋಕ್ಷಸಂಪತ್ತಿನಿಂದ ಕೂಡಿದವರೂ ಸಮ್ಯಕ್ತ್ವ ಮೊದಲಾದ ಎಂಟು ಗುಣಗಳಿಂದ ಯುಕ್ತರೂ ಆದ ಅನಂತ ಸಿದ್ಧಪರಮೇಷ್ಠಿಗಳನ್ನು ಸಮಸ್ಕರಿಸುತ್ತೇನೆ ಇಲ್ಲಿ ಕಲ್ಯಾಣಮಯವೂ, ಉಪಮಾರಹಿತವೂ, ಜ್ಞಾನಮಯವೂ ಆದ ಶುದ್ಧಾತ್ಮಸ್ವರೂಪವು ಉಪಾದೇಯವಾಗಿರುತ್ತದೆಂದು ಭಾವವು.

**ತೇ ಹಉಂ ವಂದಉಂ ಸಿದ್ಧಗಣ, ಅಚ್ಛಹಿಂ ಜೇ ವಿ ಹವಂತ ।**
**ಪರಮಸಮಾಹಿಮಹಗ್ಗಿಯಏ, ಕಮ್ಮಿಂಧಣಇಂ ಹುಣಂತ ॥ ೩ ॥**

"ತಾನ್ ಅಹಂ ವಂದೇ ಸಿದ್ಧಗಣಾನ್ ತಿಷ್ಠನ್ತಿ ಯೇಽಪಿ ಭವಂತಃ ।
ಪರಮಸಮಾಧಿಮಹಾಗ್ನಿನಾ ಕರ್ಮೇಂಧನಾನಿ ಜುಹ್ವನ್ತಃ ॥ ೩ ॥"

**ಅನ್ವಯಾರ್ಥ:**— **ಜೇವಿ**—ಯಾರು. **ಪರಮಸಮಾಹಿಮಹಗ್ಗಿಯಏ**—ಪರಮ (ನಿರ್ವಿಕಲ್ಪ) ಸಮಾಧಿಯೆಂಬ ಮಹಾಗ್ನಿಯಿಂದ. **ಕಮ್ಮಿಂಧಣಇಂ**-ಕರ್ಮರೂಪ

ವಾದ ಕಾಷ್ಟ-(ಕಟ್ಟಿಗೆ)ಗಳನ್ನು. **ಹುಣಂತ**— ಸುಡುವವರಾಗಿ. **ಅಚ್ಛಹಿಂ ಹವಂತ** ವರ್ತಮಾನ ಕಾಲದಲ್ಲಿ ಇರುವರೋ. **ತೇ ಸಿದ್ಧಗಣ**-ಆ ಸಿದ್ಧರ ಸಮೂಹಗಳನ್ನು **ಹಉಂ ವಂದಉಂ**-ನಾನು ವಂದಿಸುತ್ತೇನೆ.

**ವಿಶೇಷಾರ್ಥ:**— ವರ್ತಮಾನಕಾಲದಲ್ಲಿ ಪಂಚಮಹಾವಿದೇಹಕ್ಷೇತ್ರಗಳಲ್ಲಿರುವ ಶ್ರೀಮಂಧರಸ್ವಾಮಿ ಮೊದಲಾದವರು ವೀತರಾಗಪರಮಸಾಮಾಯಿಕಭಾವನೆಯಿಂದುಂಟಾದುದೂ ನಿರ್ದೋಷಪರಮಾತ್ಮತತ್ತ್ವದಲ್ಲಿ ಸಮ್ಯಕ್-ಶ್ರದ್ಧಾನಜ್ಞಾನಾಚರಣರೂಪವಾದ ಅಭೇದರತ್ನತ್ರಯಸ್ವರೂಪವುಳ್ಳುದೂ ಆದ ನಿರ್ವಿಕಲ್ಪಸಮಾಧಿಯೆಂಬ ಬೆಂಕಿಯಲ್ಲಿ ಜ್ಞಾನಾವರಣಾದಿ ಕರ್ಮರೂಪವಾದ ಕಟ್ಟಿಗೆಗಳನ್ನು ಸುಡುತ್ತಿರುವರು ಅಂದರೆ ಪರಮಧ್ಯಾನದ ಬಲದಿಂದ ಕರ್ಮಗಳನ್ನು ನಾಶಮಾಡುತ್ತಿರುವರು ಅಂತಹ ಸಿದ್ಧಪರಮೇಷ್ಠಿಗಳ ಸಮೂಹಗಳನ್ನು ನಾನು ರಾಗಾದಿಭಾವಗಳಿಂದ ದೂರವಾದುದೂ ನಿರ್ವಿಕಲ್ಪಸ್ವಸಂವೇದನ–ಲಕ್ಷಣವುಳ್ಳುದೂ ಆದ ಪಾರಮಾರ್ಥಿಕ ಸಿದ್ಧಭಕ್ತಿಯಿಂದ ವಂದಿಸುತ್ತೇನೆ. ಇಲ್ಲಿ ಶುದ್ಧಾತ್ಮದ್ರವ್ಯದ ಪ್ರಾಪ್ತಿಗೆ ಉಪಾಯಭೂತವಾದ ನಿರ್ವಿಕಲ್ಪ ಸಮಾಧಿಯು ಉಪಾದೇಯವಾಗಿರುತ್ತದೆಂದು ಭಾವವು

**ತೇ ಪುಣು ವಂದಉಂ ಸಿದ್ಧಗಣ, ಜೇ ಣಿವ್ವಾಣಿ ವಸಂತಿ ।**<br>
**ಣಾಣಿಂ ತಿಹುಯಣಿ ಗರುಯಾ ವಿ, ಭವಸಾಯರಿ ಣ ಪಡಂತಿ ॥ ೪ ॥**

"ತಾನ್ ಪುನಃ ವಂದೇ ಸಿದ್ಧಗಣಾನ್ ಯೇ ನಿರ್ವಾಣೇ ವಸಂತಿ ।<br>
ಜ್ಞಾನೇನ ತ್ರಿಭುವನೇ ಗುರುಕಾ ಅಪಿ ಭವಸಾಗರೇ ನ ಪತಂತಿ ॥ ೪ ॥"

**ಅನ್ವಯಾರ್ಥ:**— **ಜೇ**— ಯಾವ ಸಿದ್ಧಾತ್ಮರು. **ಣಿವ್ವಾಣಿ**— ಮೋಕ್ಷದಲ್ಲಿ. **ವಸಂತಿ**— ವಾಸಮಾಡುತ್ತಾರೆಯೋ. **ಪುಣು**— ಮತ್ತು. **ಣಾಣಿಂ**— ಜ್ಞಾನದಿಂದ. **ತಿಹುಯಣಿ ಗರುಯಾ ವಿ**— ಮೂರು ಲೋಕದಲ್ಲಿ ಗುರು (ಭಾರ)ಗಳಾಗಿದ್ದರೂ. **ಭವಸಾಯರಿ**— ಸಂಸಾರ-ಸಾಗರದಲ್ಲಿ **ಣ ಪಡಂತಿ**— ಬೀಳುವುದಿಲ್ಲವೋ. **ತೇ ಸಿದ್ಧಗಣ**— ಆ ಮುಕ್ತಾತ್ಮರ ಸಮೂಹಗಳನ್ನು. **ವಂದಉಂ**— ನಮಸ್ಕರಿಸುತ್ತೇನೆ.

**ವಿಶೇಷಾರ್ಥ:**— ಪೂರ್ವಕಾಲದಲ್ಲಿ ಭವ್ಯಾತ್ಮರಾಗಿದ್ದ ತೀರ್ಥಂಕರಪರಮದೇವರುಗಳೂ ಭರತ, ಸಗರ, ರಾಘವ ಮತ್ತು ಪಾಂಡವರೇ ಮೊದಲಾದವರೂ ವೀತರಾಗನಿರ್ವಿಕಲ್ಪಸ್ವಸಂವೇದನಜ್ಞಾನದ ಬಲದಿಂದ ನಿಜಶುದ್ಧಾತ್ಮರೂಪವನ್ನು ಪಡೆದು ಸಮಸ್ತ ಕರ್ಮಗಳನ್ನು ನಾಶಮಾಡಿ ನಿರ್ವಾಣಪದ (ಮೋಕ್ಷಸ್ಥಾನ)ದಲ್ಲಿ ವಿರಾಜಿಸುತ್ತಿರುವರು. ಅಂತಹ ಸಿದ್ಧಾತ್ಮರು ಲೋಕಾಲೋಕಗಳಲ್ಲಿರುವ ಸಮಸ್ತ ದ್ರವ್ಯ-ಪರ್ಯಾಯಗಳನ್ನು ಏಕಕಾಲದಲ್ಲಿ ತಿಳಿಯಲು ಸಮರ್ಥವಾದ ಕೇವಲ ಜ್ಞಾನದಿಂದ ಮೂರು ಲೋಕಗಳಲ್ಲಿ ಗುರು(ಶ್ರೇಷ್ಠ)ಗಳಾಗಿದ್ದು ಪುನಃ ಸಂಸಾರಬಂಧನಕ್ಕೆ ಒಳಗಾಗುವುದಿಲ್ಲ. (ಇಲ್ಲಿ ಗುರು ಶಬ್ದಕ್ಕೆ ಭಾರವೆಂದು ಅರ್ಥವನ್ನು ಕಲ್ಪಿಸಿದರೆ, ಭಾರವಾದ ವಸ್ತುವು ನೀರಿನಲ್ಲಿ ಮುಳುಗುವುದು ಸಹಜವಾಗಿದ್ದರೂ ಭಾರವುಳ್ಳ ಸಿದ್ಧಾ

ತ್ಮರೂ [ಸಂಸಾರವೆಂಬ] ಸಮುದ್ರದಲ್ಲಿ ಮುಳುಗುವುದಿಲ್ಲವೆಂದು ಆಲಂಕಾರಿಕ ವರ್ಣನೆಯಾಗುತ್ತದೆ). ಅಂತಹ ಸಿದ್ಧರ ಸಮೂಹಗಳನ್ನು ನಾನು ವಂದಿಸುತ್ತೇನೆಂದು ಭಾವವು. ಈ ನಿರ್ವಾಣಪದವು ಉಪಾದೇಯ (ಸ್ವೀಕರಿಸಲು ಯೋಗ್ಯ)ವಾಗಿರುತ್ತ ದೆಂಬುದು ಈ ವ್ಯಾಖ್ಯೆಯ ತಾತ್ಪರ್ಯಾರ್ಥವಾಗಿದೆ.

**ತೇ ಪುಣು ವಂದಉಂ ಸಿದ್ಧಗಣ, ಜೇ ಅಪ್ಪಾಣಿ ವಸಂತ ।**
**ಲೋಯಾಲೋಉ ವಿ ಸಯಲು ಇಹು, ಅಚ್ಛಹಿಂ**
**ವಿಮಲು ಣಿಯಂತ ॥ ೫ ॥**

"ತಾನ್ ಪುನರ್ವಂದೇ ಸಿದ್ಧಗಣಾನ್ ಯೇ ಆತ್ಮನಿ ವಸಂತಃ ।
ಲೋಕಾಲೋಕಮಪಿ ಸಕಲಂ ಇಹ ತಿಷ್ಠನ್ತಿ ವಿಮಲಂ ಪಶ್ಯನ್ತಃ ॥ ೫ ॥"

**ಅನ್ವಯಾರ್ಥ:—ಪುಣು**—ಮತ್ತು **ಜೇ**—ಯಾರು. **ಅಪ್ಪಾಣಿ ವಸಂತ**—ಆತ್ಮಸ್ವರೂಪದಲ್ಲಿರುವವರಾಗಿ, **ಸಯಲು ಲೋಯಾಲೋಉ ವಿ**-ಸಮಸ್ತ ಲೋಕಾಲೋಕಗಳನ್ನು **ವಿಮಲು ಣಿಯಂತ**—ಸಂದೇಹಾದಿಗಳಿಲ್ಲದೆ (ನಿಶ್ಚಯವಾಗಿ) ನೋಡುವವರಾಗಿ. **ಅಚ್ಛಹಿಂ**-ಇರುತ್ತಾರೆಯೋ. **ತೇ ಸಿದ್ಧಗಣ**—ಆ ಸಿದ್ಧಸಮೂಹಗಳನ್ನು **ಇಹು**—ಇಲ್ಲಿ **ವಂದಉಂ**—ವಂದಿಸುತ್ತೇನೆ.

**ವಿಶೇಷಾರ್ಥ:**—ಮುಕ್ತಾತ್ಮರು ನಿಶ್ಚಯನಯದಿಂದ ತನ್ನ (ಆತ್ಮ) ಸ್ವರೂಪದಲ್ಲಿಯೇ ತನ್ಮಯರಾಗಿರುತ್ತಾರೆ ವ್ಯವಹಾರನಯದಿಂದ ಕೇವಲಜ್ಞಾನದ ಮೂಲಕ ಲೋಕಾಲೋಕದಲ್ಲಿರುವ ಸ್ಥೂಲಸೂಕ್ಷ್ಮರೂಪವಾದ ಸಮಸ್ತ ದ್ರವ್ಯ-ಪರ್ಯಾಯಗಳನ್ನು ತಿಳಿಯುತ್ತಾರೆ. ವಿಶ್ವದ ಪದಾರ್ಥಗಳು ಕೇವಲಜ್ಞಾನಕ್ಕೆ ಗೋಚರವಾಗುತ್ತವೆ ಮಾತ್ರವಲ್ಲದೆ ಸಿದ್ಧಾತ್ಮರು ಆ ಪದಾರ್ಥಗಳಲ್ಲಿ ತನ್ಮಯರಾಗಿರುವುದಿಲ್ಲ. ಹಾಗೆ ಪರ ಪದಾರ್ಥಗಳಲ್ಲಿ ತನ್ಮಯರಾದುದಾದರೆ ಅವರಲ್ಲಿ ಪರಕೀಯ-ಸುಖದುಃಖ, ರಾಗ ದ್ವೇಷ ಮೊದಲಾದ ವಿಭಾವಪರಿಣಾಮಗಳ ಸಂಸರ್ಗದ ದೋಷವುಂಟಾಗಬಹುದು. ಆದುದರಿಂದ ಅವರು ಕೇವಲ ನಿಜಾತ್ಮನಲ್ಲೇ ತಲ್ಲೀನರಾಗಿರುತ್ತಾರೆಂದು ಭಾವವು. ಅಂತಹ ಸಿದ್ಧಸಮೂಹಗಳನ್ನು ನಾನು ಕರ್ಮಕ್ಷಯನಿಮಿತ್ತವಾಗಿ ವಂದಿಸುತ್ತೇನೆ. ಈ ವ್ಯಾಖ್ಯೆಯಲ್ಲಿ ಆತ್ಮಸ್ವರೂಪದ ಆರಾಧನೆಯು ಗ್ರಾಹ್ಯವಾಗಿರುತ್ತದೆಂಬ ಭಾವಾರ್ಥವು ವ್ಯಕ್ತವಾಗುತ್ತದೆ.

**ಕೇವಲದಂಸಣಣಾಣಮಯ, ಕೇವಲಸುಕ್ಖಸಹಾವ ।**
**ಜಿಣವರ ವಂದಉಂ ಭತ್ತಿಯಏ, ಜೇಹಿಂ ಪಯಾಸಿಯ ಭಾವ ॥ ೬ ॥**

"ಕೇವಲದರ್ಶನಜ್ಞಾನಮಯಾನ್ ಕೇವಲಸುಖಸ್ವಭಾವಾನ್ ।
ಜಿನವರಾನ್ ವಂದೇ ಭಕ್ತ್ಯಾ ಯೈಃ ಪ್ರಕಾಶಿತಾ ಭಾವಾಃ ॥ ೬ ॥"

**ಅನ್ವಯಾರ್ಥ:—ಜೇಹಿಂ**—ಯಾವ ಜಿನರುಗಳಿಂದ. **ಭಾವ**—ಜೀವಾದಿ ಸಕಲ ಪದಾರ್ಥಗಳು. **ಪಯಾಸಿಯ**—ಪ್ರಕಾಶ (ಪ್ರಕಟ)ಗೊಳಿಸಲ್ಪಟ್ಟಿವೆಯೋ. ಅಂತಹ

**ಕೇವಲದಂಸಣಣಾಣಮಯಾ**— ಕೇವಲದರ್ಶನ ಮತ್ತು ಕೇವಲಜ್ಞಾನಮಯರೂ. **ಕೇವಲಸುಕ್ಖಸಹಾವ**— ಕೇವಲಸುಖಸ್ವಭಾವವುಳ್ಳವರೂ ಆದ. **ಜಿಣವರ**— ಅರ್ಹತ್ಪರಮೇಷ್ಠಿಗಳನ್ನು. **ಭತ್ತಿಯಏ**— ಭಕ್ತಿಯಿಂದ. **ವಂದಉಂ**— ವಂದಿಸುತ್ತೇನೆ.

**ವಿಶೇಷಾರ್ಥ:**— ಕೇವಲಜ್ಞಾನಾದಿ ಅನಂತಚತುಷ್ಟಯರೂಪವಾದ ಪರಮಾತ್ಮ ತತ್ತ್ವದ ಯಥಾರ್ಥಶ್ರದ್ಧಾನ, ಜ್ಞಾನ ಮತ್ತು ಅನುಭವರೂಪವಾದ ಅಭೇದರತ್ನತ್ರಯ ಸ್ವರೂಪವುಳ್ಳುದೂ ಸುಖ-ದುಃಖ, ಜೀವಿತ-ಮರಣ, ಲಾಭ-ಅಲಾಭ, ಶತ್ರು-ಮಿತ್ರ ಮೊದಲಾದುವುಗಳಲ್ಲಿ ಸಮತಾಭಾವದಿಂದುಂಟಾದ ವೀತರಾಗನಿರ್ವಿಕಲ್ಪಸಮಾಧಿ ಪೂರ್ವಕವಾದುದೂ ಆದ ಜಿನೋಪದೇಶವನ್ನು ಪಡೆದು ಅದರಿಂದ ಅನಂತಚತುಷ್ಟಯ ಸ್ವರೂಪವುಳ್ಳವರಾದ ಅರ್ಹತ್ಪರಮೇಷ್ಠಿಗಳಿಂದ ಜೀವಾದಿ ಸಕಲ-ಪದಾರ್ಥಗಳ ಯಥಾರ್ಥಸ್ವರೂಪವೂ ಕರ್ಮಾಭಾವದಿಂದುಂಟಾದ ಕೇವಲಜ್ಞಾನಾದಿ ಅನಂತಗುಣ ರೂಪವಾದ ಮೋಕ್ಷ ಹಾಗೂ ಮೋಕ್ಷಮಾರ್ಗವೂ ಉಪದೇಶಿಸಲ್ಪಟ್ಟಿದೆ ಅಂತಹ ಅರ್ಹತ್ಪರಮೇಷ್ಠಿಗಳನ್ನು ನಾನು ಭಕ್ತಿಯಿಂದ ವಂದಿಸುತ್ತೇನೆ ಅರ್ಹತ್ಪರಮೇಷ್ಠಿಗಳ ಕೇವಲಜ್ಞಾನಾದಿಗುಣರೂಪವಾದ ಶುದ್ಧಾತ್ಮಸ್ವರೂಪವು ಆರಾಧಿಸಲು ಯೋಗ್ಯವಾಗಿದೆ ಎಂಬುದು ಈ ವ್ಯಾಖ್ಯಾನದ ಭಾವಾರ್ಥವಾಗಿದೆ

**ಜೇ ಪರಮಪ್ಪು ಣಿಯಂತಿ ಮುಣಿ, ಪರಮಸಮಾಹಿ ಧರೇವಿ ।**
**ಪರಮಾಣಂದಹ ಕಾರಣಿಣ, ತಿಣ್ಣಿವಿ ತೇವಿ ಣವೇವಿ ॥ ೭ ॥**

"ಯೋ ಪರಮಾತ್ಮಾನಂ ಪಶ್ಯನ್ತಿ ಮುನಯಃ ಪರಮಸಮಾಧಿಂ ಧೃತ್ವಾ ।
ಪರಮಾನಂದಸ್ಯ ಕಾರಣೇನ ತ್ರೀನಪಿ ತಾನಪಿ ನತ್ವಾ ॥ ೭ ॥"

**ಅನ್ವಯಾರ್ಥ:**— **ಜೇ ಮುಣಿ**— ಯಾವ ಮುನಿಗಳು **ಪರಮಾಣಂದಹ ಕಾರಣಿಣ**— ಪರಮ ಸುಖದ ಅನುಭವಕ್ಕಾಗಿ. **ಪರಮಸಮಾಹಿ ಧರೇವಿ**— ಪರಮ ಸಮಾಧಿಯನ್ನು ಧರಿಸಿ. **ಪರಮಪ್ಪು ಣಿಯಂತಿ**— ಪರಮಾತ್ಮನನ್ನು ನೋಡುತ್ತಾರೆಯೋ. **ತಿಣ್ಣಿವಿ ತೇವಿ**— ಆ ಮೂವರನ್ನೂ-ಆಚಾರ್ಯ, ಉಪಾಧ್ಯಾಯ ಮತ್ತು ಸಾಧು ಗಳನ್ನು **ಣವೇವಿ**— ನಮಸ್ಕರಿಸಿ. [ಪರಮಾತ್ಮಪ್ರಕಾಶದ ವ್ಯಾಖ್ಯಾನವನ್ನು ಮಾಡು ವೆನು.]

**ವಿಶೇಷಾರ್ಥ**:— ಅನುಪಚರಿತಾಸದ್ಭೂತವ್ಯವಹಾರಸಂಬಂಧವುಳ್ಳ ದ್ರವ್ಯಕರ್ಮ ನೋಕರ್ಮಗಳಿಂದ ಬಿಡಲ್ಪಟ್ಟುದೂ ಅಶುದ್ಧನಿಶ್ಚಯನಯಸಂಬಂಧವುಳ್ಳ ರಾಗಾದಿ ಗಳ ಮತ್ತು ಮತಿಜ್ಞಾನಾದಿ ವಿಭಾವಗುಣಗಳ ಸಂಬಂಧದಿಂದ ದೂರವಾದುದೂ ನರನಾರಕಾದಿ ಚತುರ್ಗತಿರೂಪವಾದ ವಿಭಾವಪರ್ಯಾಯಗಳಿಲ್ಲದುದೂ ಚಿದಾನಂದೈಕ ಸ್ವಭಾವವುಳ್ಳುದೂ ಆದ ಶುದ್ಧಾತ್ಮತತ್ತ್ವವೊಂದೇ ಸತ್ಯವಾದುದು. ಅದೇ "ಸಮಯ ಸಾರ"ವೆನಿಸುವುದು. ಪರಮಾರ್ಥವಾದ ಆ ಶುದ್ಧಾತ್ಮತತ್ತ್ವವೇ ಸರ್ವವಿಧದಿಂದಲೂ ಗ್ರಾಹ್ಯವಾಗಿರುವುದಲ್ಲದೆ ಅದಕ್ಕಿಂತ ಭಿನ್ನವಾದ ಪರವಸ್ತುಗಳೆಲ್ಲವೂ ತ್ಯಾಜ್ಯವಾದವು

ಗಳೆಂಬ ನಿಶ್ಚಲ-ಶ್ರದ್ಧೆಗೆ ಸಮ್ಯಕ್ತ್ವವೆಂದು ಹೇಳುತ್ತಾರೆ ಆ ಸಮ್ಯಕ್ತ್ವದ ಆಚರಣೆ ಅಂದರೆ ತದ್ರೂಪವಾಗಿ ಪರಿಣಮಿಸುವಿಕೆಯು "ದರ್ಶನಾಚಾರ"ವಾಗಿದೆ. ಆ ನಿಜ ಸ್ವರೂಪದಲ್ಲಿ ಸಂಶಯ, ವಿಮೋಹ ಮತ್ತು ವಿಭ್ರಮರಹಿತವಾದ ಸ್ವಸಂವೇದನರೂಪ ಗ್ರಾಹಕಬುದ್ಧಿಗೆ "ಸಮ್ಯಗ್ಜ್ಞಾನ"ವೆಂದೂ ತದ್ರೂಪ-ಪರಿಣಮನಕ್ಕೆ 'ಜ್ಞಾನಾಚಾರ" ವೆಂದೂ ಹೆಸರು. ಅದೇ ಶುದ್ಧಸ್ವರೂಪದಲ್ಲಿ ಶುಭ-ಅಶುಭ-ಸಂಕಲ್ಪ-ವಿಕಲ್ಪರಹಿತವೂ ನಿತ್ಯಾನಂದಮಯವೂ ಆದ ಸುಖರಸಾಸ್ವಾದನೆಯ ನಿಶ್ಚಲ ಅನುಭವವು "ಸಮ್ಯಕ್ಚಾರಿತ್ರ" ವಾಗಿದೆ ತದ್ರೂಪಪರಿಣಮನ (ಅದೇ ರೂಪವಾಗಿ ಪರಿಣಮಿಸುವಿಕೆ)ವು "ಚಾರಿತ್ರಾ ಚಾರ"ವು ಆ ಪರಮಾನಂದ-ಸ್ವರೂಪದಲ್ಲಿ ಪರದ್ರವ್ಯಗಳ ಇಚ್ಛೆಯನ್ನು ತಡೆದು ಸಹಜಾನಂದೈಕರೂಪವಾದ ತಪಶ್ಚರಣರೂಪವಾಗಿ ಪರಿಣಮಿಸುವಿಕೆಯು "ತಪಶ್ಚರ ಣಾಚಾರ"ವು ಪೂರ್ವೋಕ್ತ ಶುದ್ಧಾತ್ಮಸ್ವರೂಪದಲ್ಲಿಯೇ ತನ್ನ ಶಕ್ತಿಯನ್ನು ಪ್ರಕಟ ಗೊಳಿಸಿ ತದ್ರೂಪವಾಗಿ ಪರಿಣಮಿಸುವುದು "ವೀರ್ಯಾಚಾರ"ವು ಇವು ನಿಶ್ಚಯ ಪಂಚಾ ಚಾರಗಳು ನಿಶ್ಶಂಕಿತ ಮೊದಲಾದ ಅಷ್ಟ ಅಂಗ (ಗುಣ) ರೂಪವಾದ ಬಾಹ್ಯದರ್ಶನಾ ಚಾರವೂ, ಕಾಲಶುದ್ಧಿ, ವಿನಯಶುದ್ಧಿ ಮೊದಲಾದೆಂಟು ಭೇದಗಳುಳ್ಳ ಬಾಹ್ಯಜ್ಞಾನಾ ಚಾರವೂ, ಪಂಚಮಹಾವ್ರತ, ಪಂಚಸಮಿತಿ, ತ್ರಿಗುಪ್ತಿ ಮತ್ತು ನಿರ್ಗ್ರಂಥರೂಪವಾದ ಬಾಹ್ಯಚಾರಿತ್ರಾಚಾರವೂ ಅನಶನ, ಅವಮೋದರ್ಯ ಮೊದಲಾದ ಹನ್ನೆರಡು ವಿಧ ವುಳ್ಳ ಬಾಹ್ಯತಪಶ್ಚರಣಾಚಾರವೂ, ತನ್ನ ಶಕ್ತಿಯನ್ನು ಮರೆಮಾಡದೆ (ಪ್ರಕಟಗೊಳಿಸಿ) ಮುನಿವ್ರತಾಚರಣರೂಪವಾದ ಬಾಹ್ಯ ವೀರ್ಯಾಚಾರವೂ ಇವು ವ್ಯವಹಾರ ಪಂಚಾಚಾರ ಗಳಾಗಿವೆ ಮತ್ತು ಇವುಗಳು ಪರಂಪರೆಯಿಂದ ಮೋಕ್ಷಕ್ಕೆ ಕಾರಣಗಳಾಗಿರುತ್ತವೆ ನಿರ್ಮಲಜ್ಞಾನದರ್ಶನಸ್ವಭಾವವುಳ್ಳ ಶುದ್ಧಾತ್ಮತತ್ತ್ವದ ಯಥಾರ್ಥಶ್ರದ್ಧಾನ, ಜ್ಞಾನ, ಆಚರಣ, ಪರದ್ರವ್ಯೇಚ್ಛೆಯ ನಿರೋಧ ಮತ್ತು ನಿಜಶಕ್ತಿಪ್ರಕಟನರೂಪವಾದ ನಿಶ್ಚಯ ಪಂಚಾಚಾರಗಳು ಮೋಕ್ಷಕ್ಕೆ ಸಾಕ್ಷಾತ್ ಕಾರಣಗಳಾಗಿವೆ. ಹೀಗೆ ನಿಶ್ಚಯವ್ಯವ ಹಾರರೂಪವಾದ ಪಂಚಾಚಾರಗಳನ್ನು ತಾವು ಆಚರಿಸುವವರೂ ಇನ್ನೊಬ್ಬರಿಗೆ (ಶಿಷ್ಯ ರಿಗೆ) ಆಚರಿಸುವಂತೆ ಉಪದೇಶಿಸುವವರೂ ಆದ ಆಚಾರ್ಯಪರಮೇಷ್ಠಿಗಳನ್ನು ನಾನು ವಂದಿಸುತ್ತೇನೆ ಪಂಚಾಸ್ತಿಕಾಯ, ಷಡ್ದ್ರವ್ಯ, ಸಪ್ತತತ್ತ್ವ, ನವಪದಾರ್ಥ ಇವುಗಳಲ್ಲಿ ಶುದ್ಧ ಜೀವಾಸ್ತಿಕಾಯ, ಶುದ್ಧಜೀವದ್ರವ್ಯ, ಶುದ್ಧ ಜೀವತತ್ತ್ವ, ಶುದ್ಧ ಜೀವಪದಾರ್ಥವೆಂಬ ಸಂಜ್ಞೆಯುಳ್ಳ ನಿಜಶುದ್ಧಾತ್ಮಭಾವವೊಂದೇ ಉಪಾದೇಯವಾಗಿ ರುತ್ತದಲ್ಲದೆ ಉಳಿದೆಲ್ಲವೂ ತ್ಯಾಜ್ಯಗಳೆಂದು ಉಪದೇಶಿಸುವವರೂ ಹಾಗೆಯೇ ಶುದ್ಧಾತ್ಮ ಸ್ವಭಾವದ ಸಮ್ಯಕ್ಶ್ರದ್ಧಾನ-ಜ್ಞಾನಾನುಚರಣರೂಪವಾದ ನಿಶ್ಚಯಮೋಕ್ಷಮಾರ್ಗ (ಅಭೇದ-ರತ್ನತ್ರಯ)ವನ್ನು ಶಿಷ್ಯರಿಗೆ ಉಪದೇಶಿಸುವವರೂ ಆದ ಉಪಾಧ್ಯಾಯ ಪರ ಮೇಷ್ಠಿಗಳನ್ನು ನಾನು ನಮಸ್ಕರಿಸುತ್ತೇನೆ ಶುದ್ಧಜ್ಞಾನೈಕಸ್ವಭಾವವುಳ್ಳ ಶುದ್ಧಾತ್ಮ ತತ್ತ್ವದ ಸಮ್ಯಕ್ಶ್ರದ್ಧಾನ-ಜ್ಞಾನಾಚರಣತಪಶ್ಚರಣಭೇದವುಳ್ಳ ಚತುರ್ವಿಧನಿಶ್ಚಯಾ ರಾಧನಾರೂಪವಾದ ನಿರ್ವಿಕಲ್ಪಸಮಾಧಿಯನ್ನು ಸಾಧಿಸುವ ಸಾಧುಪರಮೇಷ್ಠಿಗಳನ್ನು

ನಾನು ವಂದಿಸುತ್ತೇನೆ ಈ ಪರಮೇಷ್ಠಿಗಳು ನಿರ್ವಿಕಲ್ಪಸಮಾಧಿಯನ್ನು ಆಚರಿಸುತ್ತಾರೆ, ಉಪದೇಶಿಸುತ್ತಾರೆ ಮತ್ತು ಸಾಧಿಸುತ್ತಾರೆ. ನಿಜಶುದ್ಧಾತ್ಮತತ್ತ್ವವನ್ನು ಸಾಧಿಸುವ ಆ ನಿರ್ವಿಕಲ್ಪ-ಸಮಾಧಿಯೇ ಉಪಾದೇಯವಾಗಿರುತ್ತದೆಂಬುದು ಈ ವ್ಯಾಖ್ಯಾನದ ಭಾವಾರ್ಥವಾಗಿದೆ

ಹೀಗೆ ಪಂಚಪರಮೇಷ್ಠಿಗಳನ್ನು ನಮಸ್ಕರಿಸುವ ಮುಖ್ಯತೆಯಿಂದ ಶ್ರೀಯೋಗೀಂದುದೇವರು ಪರಮಾತ್ಮಪ್ರಕಾಶದ ಪ್ರಥಮ ಮಹಾಧಿಕಾರದಲ್ಲಿ ಏಳು "ದೋಹಕೆ"ಗಳಿಂದ ಪ್ರಭಾಕರ ಭಟ್ಟನೆಂಬ ತಮ್ಮ ಶಿಷ್ಯನಿಗೆ ಪಂಚಪರಮೇಷ್ಠಿಗಳ ಭಕ್ತಿಯು ಉಪದೇಶಿತ್ತರು.

ಇದು ಪೀಠಿಕೆಯು.

**ಭಾವಿಂ ಪಣವಿವಿ ಪಂಚಗುರು, ಸಿರಿ-ಜೋಇಂದುಜಿಣಾಉ ।**
**ಭಟ್ಟಪಹಾಯರಿ ವಿಣ್ಣವಿವು, ವಿಮಲು ಕರೇವಿಣು ಭಾಉ ॥ ೮ ॥**

"ಭಾವೇನ ಪ್ರಣಮ್ಯ ಪಂಚಗುರೂನ್ ಶ್ರೀಯೋಗೀಂದುಜಿನಃ ।
ಭಟ್ಟಪ್ರಭಾಕರೇಣ ವಿಜ್ಞಾಪಿತಃ ವಿಮಲಂ ಕೃತ್ವಾ ಭಾವಮ್ ॥ ೮ ॥"

**ಅನ್ವಯಾರ್ಥ:—ಭಾವಿಂ**—ಭಾವಶುದ್ಧಿಯಿಂದ. **ಪಂಚಗುರು**—ಪಂಚಪರಮೇಷ್ಠಿಗಳನ್ನು **ಪಣವಿವಿ**—ನಮಸ್ಕರಿಸಿ. **ಭಟ್ಟಪಹಾಯರಿ**—ಭಟ್ಟಪ್ರಭಾಕರ (ಪ್ರಭಾಕರ ಭಟ್ಟ)ನಿಂದ. **ವಿಮಲು ಕರೇವಿಣು ಭಾಉ**—ಪರಿಣಾಮವನ್ನು ನಿರ್ಮಲಗೊಳಿಸಿ **ಸಿರಿಜೋಇಂದುಜಿಣಾಉ**—ಶ್ರೀ ಯೋಗೀಂದುದೇವರು. **ವಿಣ್ಣವಿಉ**—ವಿಜ್ಞಾಪಿಸಲ್ಪಟ್ಟರು.

ಶಿಷ್ಯನಾದ ಪ್ರಭಾಕರ ಭಟ್ಟನು ಪೂರ್ವೋಕ್ತಪ್ರಕಾರ ಭಾವಶುದ್ಧಿಯಿಂದ ಪಂಚಪರಮೇಷ್ಠಿಗಳನ್ನು ವಂದಿಸಿ ಶುದ್ಧಾತ್ಮತತ್ತ್ವವನ್ನು ತಿಳಿಯುವುದಕ್ಕಾಗಿ ಗುರುಗಳಾದ ಶ್ರೀ ಯೋಗೀಂದು ದೇವರನ್ನು ಕುರಿತು ಭಕ್ತಿಯಿಂದ ವಿಜ್ಞಾಪಿಸಿದನು.

**ಗಉ ಸಂಸಾರಿ ವಸಂತಾಹಂ, ಸಾಮಿಯ ಕಾಲು ಅಣಂತು ।**
**ಪರ ಮಇಂ ಕಿಂ ಪಿ ಣ ಪತ್ತು, ಸುಹು ದುಕ್ಖು ಜಿ ಪತ್ತು ಮಹಂತು ॥ ೯ ॥**

"ಗತಃ ಸಂಸಾರೇ ವಸತಾಂ ಸ್ವಾಮಿನ್‌ಕಾಲಃ ಅನಂತಃ ।
ವರಂ ಮಯಾ ಕಿಮಪಿ ನ ಪ್ರಾಪ್ತಂ ಸುಖಂ ದುಃಖಮೇವ ಪ್ರಾಪ್ತಂ
ಮಹತ್ ॥ ೯ ॥"

**ಅನ್ವಯಾರ್ಥ:—ಸಾಮಿಯ**—ಎಲೇ ಸ್ವಾಮಿಯೇ. **ಸಂಸಾರಿ ವಸಂತಾಹಂ**—ಸಂಸಾರದಲ್ಲಿ ವಾಸಮಾಡುತ್ತಿರುವ ನಮಗೆ. **ಅಣಂತು ಕಾಲು ಗಉ**—ಅನಂತ ಕಾಲವು ಕಳೆದು ಹೋಯಿತು. **ಪರ**—ಆದರೆ. **ಮಇಂ ಕಿಂ ಪಿ ಸುಹು**—ನನ್ನಿಂದ ಯಾವ ಸುಖವೂ. **ಣ ಪತ್ತು**—ಪಡೆಯಲ್ಪಡಲಿಲ್ಲ. **ದುಕ್ಖು ಜಿ ಪತ್ತು ಮಹಂತು**—ಹೆಚ್ಚು ದುಃಖವೇ ಪಡೆಯಲ್ಪಟ್ಟಿತು.

**ವಿಶೇಷಾರ್ಥ:**— ಪ್ರಭಾಕರ ಭಟ್ಟನು ಹೀಗೆ ವಿಜ್ಞಾಪಿಸುತ್ತಾನೆ:— ಸ್ವಾಮಿಯೇ, ನಿಜಶುದ್ಧಾತ್ಮಭಾವನೆಯಿಂದುಂಟಾದುದೂ ವೀತರಾಗಪರಮಾನಂದಮಯವಾದ ಸಮರಸೀಭಾವರೂಪವಾದುದೂ ಆದ ಸುಖಾಮೃತಕ್ಕೆ ವಿಪರೀತವಾದ ನಾರಕಾದಿದುಃಖಗಳೆಂಬ ಕ್ಷಾರ (ಉಪ್ಪು) ಜಲದಿಂದ ತುಂಬಿರುವುದೂ, ಅಜರ ಮತ್ತು ಅಮರಪದವಿಗೆ ವಿಪರೀತವಾದ ಜರಾ (ಮುಪ್ಪು) ಮರಣಗಳೆಂಬ ಜಲಚರಪ್ರಾಣಿಗಳಿಂದ ವ್ಯಾಪ್ತವಾಗಿರುವುದೂ, ಅನಾಕುಲತಾಸ್ವರೂಪವಾದ ನಿಶ್ಚಯಸುಖಕ್ಕೆ ವಿಪರೀತವಾಗಿ ನಾನಾವಿಧವಾದ ಮಾನಸಿಕ ದೈಹಿಕ ಮೊದಲಾದ ದುಃಖಗಳೆಂಬ ವಡವಾನಲ (ಸಮುದ್ರದೊಳಗಿರುವ ಬೆಂಕಿ) ಜ್ವಾಲೆಗಳಿಂದ ಭಯಂಕರವಾಗಿರುವುದೂ, ವೀತರಾಗನಿರ್ವಿಕಲ್ಪ-ಸಮಾಧಿಯಿಂದ ರಹಿತವಾದ ಅನೇಕ ವಿಧದ ಸಂಕಲ್ಪವಿಕಲ್ಪಗಳೆಂಬ ಕಲ್ಲೋಲ (ತೆರೆ)ಮಾಲೆಗಳಿಂದ ನಿಬಿಡವಾಗಿರುವುದೂ ಆದ ಈ ಸಂಸಾರವೆಂಬ ಸಮುದ್ರದಲ್ಲಿ ಬಿದ್ದಿರುವ ನಮಗೆ ಅನಂತಕಾಲವು ಕಳೆದುಹೋಯಿತು ಈ ಸಂಸಾರದಲ್ಲಿ ಏಕೇಂದ್ರಿಯದಿಂದ ವಿಕಲತ್ರಯ (ದ್ವೀಂದ್ರಿಯ, ತ್ರೀಂದ್ರಿಯ, ಚತುರಿಂದ್ರಿಯ)ವೂ ವಿಕಲತ್ರಯದಿಂದ ಪಂಚೇಂದ್ರಿಯತ್ವವೂ ಪಂಚೇಂದ್ರಿಯದಲ್ಲಿಯೂ ಸಂಜ್ಞಿತ್ವವೂ ದೊರೆಯುವುದು ಉತ್ತರೋತ್ತರ ದುರ್ಲಭವಾಗಿದೆ ಹೀಗೆಯೇ, ಆರು ಪರ್ಯಾಪ್ತಿಗಳ ಪೂರ್ಣತೆ, ಮನುಷ್ಯಪರ್ಯಾಯ, ಆರ್ಯಕ್ಷೇತ್ರದಲ್ಲಿ ಜನ್ಮ, ಉತ್ತಮ ಕುಲ, ಸುಂದರ ರೂಪ, ಪಂಚೇಂದ್ರಿಯಗಳ ಪಟುತ್ವ, ದೀರ್ಘಾಯು, ಆರೋಗ್ಯವುಳ್ಳ ಮತ್ತು ಬಲವುಳ್ಳ ಶರೀರ, ಉತ್ತಮ ಬುದ್ಧಿ, ಉತ್ತಮ ಧರ್ಮದ ಉಪದೇಶವನ್ನು ಕೇಳುವಿಕೆ, ಅದನ್ನು ತಿಳಿದುಕೊಳ್ಳುವಿಕೆ, ಆಚರಿಸುವಿಕೆ, ಸಮ್ಯಕ್ತ್ವ, ವ್ರತಾಚರಣೆ, ವಿಷಯಸುಖಗಳಲ್ಲಿ ವಿರಕ್ತಿ ಮತ್ತು ಕ್ರೋಧಾದಿಕಷಾಯಗಳನ್ನು ಜಯಿಸುವಿಕೆ, ಇವೇ ಮೊದಲಾದುವುಗಳ ಪ್ರಾಪ್ತಿಯು ಉತ್ತರೋತ್ತರ (ಒಂದಕ್ಕಿಂತ ಇನ್ನೊಂದು) ದುರ್ಲಭವಾಗಿದೆ ಅದರಲ್ಲಿಯೂ ಶುದ್ಧಾತ್ಮಭಾವನಾರೂಪವಾದ "ನಿರ್ವಿಕಲ್ಪಸಮಾಧಿ"ಯ ಪ್ರಾಪ್ತಿಯು ಅತ್ಯಂತ ಕಠಿನವು ಏಕೆಂದರೆ,— ಸಂಸಾರದಲ್ಲಿ ಈ ಸಮಾಧಿಗೆ ಶತ್ರುಸ್ವರೂಪಗಳಾದ ಮಿಥ್ಯಾತ್ವ, ವಿಷಯ, ಕಷಾಯ ಮೊದಲಾದ ವಿಭಾವಪರಿಣಾಮಗಳ ಪ್ರಾಬಲ್ಯವಿರುತ್ತದೆ. ಆದಕಾರಣ ಸಮ್ಯಗ್ದರ್ಶನ-ಜ್ಞಾನ-ಚಾರಿತ್ರಗಳ ಪ್ರಾಪ್ತಿಯು ಉಂಟಾಗುವುದಿಲ್ಲ. ಅವುಗಳ ಪ್ರಾಪ್ತಿಯೇ "ಬೋಧಿ"ಯು. ಬೋಧಿಯನ್ನು ನಿರ್ವಿಘ್ನವಾಗಿ, ನಿಶ್ಚಲವಾಗಿ ಧರಿಸುವುದೇ "ಸಮಾಧಿ"ಯೆನಿಸುವುದು. ಇದು ಬೋಧಿ-ಸಮಾಧಿಗಳ ಲಕ್ಷಣವು ಗ್ರಂಥಾಂತರದಲ್ಲಿ ಹೀಗೆ ಹೇಳಲ್ಪಟ್ಟಿದೆ —"ಇತ್ಯತಿದುರ್ಲಭರೂಪಾಂ ಬೋಧಿಂ ಲಬ್ಧ್ವಾಯದಿ ಪ್ರಮಾದೀ ಸ್ಯಾತ್ । ಸಂಸೃತಿಭೀಮಾರಣ್ಯೇ ಭ್ರಮತಿ ವರಾಕೋ ನರಃ ಸುಚಿರಮ್ ॥" ಇದರ ಅಭಿಪ್ರಾಯವೇನಂದರೆ,—"ಅತ್ಯಂತ ದುರ್ಲಭವಾದ ಬೋಧಿ (ಜೈನಾಗಮ)ಯನ್ನು ಪಡೆದೂ ಯಾವ ಜೀವನು ಪ್ರಮಾದವನ್ನು ಹೊಂದುತ್ತಾನೋ ಅಂತಹ ಅಲ್ಪ ಹಾಗೂ ಮೂರ್ಖನಾದ ಮನುಷ್ಯನು ಬಹುಕಾಲದ ವರೆಗೆ ಸಂಸಾರವೆಂಬ ಭಯಂಕರವಾದ ಅಡವಿಯಲ್ಲಿ ಭ್ರಮಿಸುವನು" ಅಂದರೆ, ವೀತರಾಗಪರಮಾನಂದ-ಸುಖದ ಪ್ರಾಪ್ತಿಯಾಗದಿರುವುದರಿಂದ ಜೀವನು ಸಂಸಾರವೆಂಬ

ಅರಣ್ಯದಲ್ಲಿ ಭ್ರಮಿಸುತ್ತಿರುತ್ತಾನೆ ಆದಕಾರಣ ವೀತರಾಗಪರಮಾನಂದ ಸುಖವೇ ಆದರಣೀಯವಾಗಿರುತ್ತದೆಂದು ಸಾರಾಂಶವು.

**ಚಉಗಇದುಕ್ಖಹಂ ತತ್ತಾಹಂ, ಜೋ ಪರಮಪ್ಪಉ ಕೋಇ ।**
**ಚಉಗಇದುಕ್ಖ-ವಿಣಾಸಯರು, ಕಹಹು ಪಸಾಏಂ ಸೋ ವಿ ॥ ೧೦ ॥**

"ಚತುರ್ಗತಿದುಃಖೈಃ ತಪ್ತಾನಾಂ ಯಃ ಪರಮಾತ್ಮಾ ಕಶ್ಚಿತ್ ।
ಚತುರ್ಗತಿದುಃಖವಿನಾಶಕರಃ ಕಥಯ ಪ್ರಸಾದೇನ ತಮಪಿ ॥ ೧೦ ॥"

**ಅನ್ವಯಾರ್ಥ:— ಚಉಗಇದುಕ್ಖಹಂ**— ಚತುರ್ಗತಿ (ದೇವಗತಿ, ಮನುಷ್ಯ ಗತಿ, ನರಕಗತಿ ಮತ್ತು ತಿರ್ಯಂಚಗತಿ)ಗಳಲ್ಲುಂಟಾದ ದುಃಖಗಳಿಂದ. **ತತ್ತಾಹಂ**— ಸಂತಪ್ತ (ದುಃಖಿತ)ರಾದ ಜೀವಿಗಳ **ಚಉಗಇದುಕ್ಖವಿಣಾಸಯರು**— ಚತುರ್ಗತಿ ಜನ್ಯದುಃಖಗಳನ್ನು ನಾಶಮಾಡುವ **ಜೋಕೋಇ**— ಯಾವನೊಬ್ಬ. **ಪರಮಪ್ಪಉ**— ಪರಮಾತ್ಮನಿರುವನೋ **ಸೋವಿ**— ಆ ಪರಮಾತ್ಮನ ಸ್ವರೂಪವನ್ನು. **ಪಸಾಏಂ**— ಕೃಪೆಯಿಂದ **ಕಹಹು**— ಹೇಳು. (ನೀವು ಹೇಳಿರಿ)

**ಭಾವಾರ್ಥ:**— ಚಿದಾನಂದ ಶುದ್ಧಸ್ವಭಾವವುಳ್ಳ ಪರಮಾತ್ಮನು, ಆಹಾರ, ಭಯ, ಮೈಥುನ ಮತ್ತು ಪರಿಗ್ರಹಗಳೆಂಬ ಸಂಜ್ಞೆಗಳು ಮೊದಲಾದ ಸಮಸ್ತ ವಿಭಾವ ಗಳಿಂದ ರಹಿತರೂ, ವೀತರಾಗನಿರ್ವಿಕಲ್ಪಸಮಾಧಿಯ ಬಲದಿಂದ ನಿಜಾತ್ಮನಲ್ಲುಂಟಾದ ಸಹಜಾನಂದಸುಖವೆಂಬ ಅಮೃತದಿಂದ ಸಂತೃಪ್ತಹೃದಯರೂ ಆದ ಸಂಸಾರಿಜೀವರು ಗಳ ಚತುರ್ಗತಿಭ್ರಮಣವನ್ನು ದೂರಮಾಡುವವನೂ, ಜನ್ಮಮರಣದುಃಖಗಳನ್ನು ನಾಶಮಾಡುವವನೂ, ಪರಮಸಮಾಧಿಮಗ್ನರಾದ ಮಹಾಮುನಿಗಳಿಗೆ ಮುಕ್ತಿಯ ನ್ನುಂಟುಮಾಡುವವನೂ ಆಗಿರುವನು. ಆ ಪರಮಾತ್ಮನು ಸರ್ವವಿಧದಿಂದಲೂ ಧ್ಯಾನಿಸಲು ಯೋಗ್ಯನಾಗಿರುವನು. ಆದಕಾರಣ ಮಹಾಸ್ವಾಮಿಯೇ, ಅಂತಹ ಪರ ಮಾತ್ಮನ ಸ್ವರೂಪವನ್ನು ನಾನು ತಮ್ಮಿಂದ (ತಮ್ಮ ಕೃಪೆಯಿಂದ) ತಿಳಿಯಲಪೇಕ್ಷಿಸು ತ್ತೇನೆ ತಾವು ದಯೆಯಿಂದ ತಿಳಿಸಿರಿ, ಹೀಗೆಂದು ಪ್ರಭಾಕರಭಟ್ಟನು ಶ್ರೀ ಯೋಗೀಂದು ದೇವರಲ್ಲಿ ವಿಜ್ಞಾಪಿಸಿದನೆಂದು ಭಾವವು

**ಪುಣುಪುಣು ಪಣವಿವಿ ಪಂಚಗುರು, ಭಾವೇಂ ಚಿತ್ತಿ ಧರೇವಿ ।**
**ಭಟ್ಟಪಹಾಯರ ಣಿಸುಣಿ ತುಹುಂ, ಅಪ್ಪಾ ತಿವಿಹು ಕಹೇವಿ ॥ ೧೧ ॥**

"ಪುನಃಪುನಃ ಪ್ರಣಮ್ಯ ಪಂಚಗುರೂನ್ ಭಾವೇನ ಚಿತ್ತೇ ಧೃತ್ವಾ ।
ಭಟ್ಟಪ್ರಭಾಕರ ನಿಶೃಣು ತ್ವಂ ಆತ್ಮಾನಂ ತ್ರಿವಿಧಂ ಕಥಯಾಮಿ ॥ ೧೧ ॥"

**ಅನ್ವಯಾರ್ಥ:— ಪುಣುಪುಣು**— ಬಾರಿಬಾರಿಗೂ. **ಪಂಚಗುರು**— ಪಂಚಪರ ಮೇಷ್ಠಿಗಳನ್ನು. **ಪಣವಿವಿ**— ನಮಸ್ಕರಿಸಿ. **ಭಾವೇಂ**— ಭಕ್ತಿಭಾವದಿಂದ. **ಚಿತ್ತಿ ಧರೇವಿ**— ಮನಸ್ಸಿನಲ್ಲಿ ಧರಿಸಿ. **ತಿವಿಹು ಅಪ್ಪಾ**— ಮೂರು ವಿಧವುಳ್ಳ ಆತ್ಮನನ್ನು.

**ಕಹೇವಿ**— ಹೇಳುತ್ತೇನೆ **ಭಟ್ಟಪಹಾಯರ**— ಪ್ರಭಾಕರ ಭಟ್ಟನೇ! **ತುಹುಂ ಣಿಸುಣಿ**— ನೀನು ನಿಶ್ಚಯದಿಂದ ಕೇಳು.

**ಭಾವಾರ್ಥ:**— ಆತ್ಮರುಗಳಲ್ಲಿ ಬಹಿರಾತ್ಮರೆಂದೂ, ಅಂತರಾತ್ಮರೆಂದೂ, ಪರಮಾತ್ಮರೆಂದೂ ಮೂರು ಭೇದಗಳಿರುತ್ತವೆ ಎಲೈ ಪ್ರಭಾಕರ ಭಟ್ಟನೇ, ಪರಮಾತ್ಮಸ್ವರೂಪವನ್ನು ಅರಿತುಕೊಳ್ಳಲಿಚ್ಛಿಸಿ ನೀನು ಪ್ರಶ್ನೆಮಾಡಿದಂತೆಯೇ ಮೊದಲು, ಭೇದಾಭೇದ (ವ್ಯವಹಾರ-ನಿಶ್ಚಯ) ರತ್ನತ್ರಯಭಾವನಾಪ್ರಿಯರೂ, ಪರಮಾತ್ಮಭಾವನೆಯಿಂದುಂಟಾಗುವ ಪರಮಾನಂದವೆಂಬ ಅಮೃತರಸವನ್ನು ಪಾನಮಾಡಲಿಚ್ಛಿಸುವವರೂ, ವೀತರಾಗನಿರ್ವಿಕಲ್ಪಸಮಾಧಿಯಿಂದುಂಟಾಗುವ ಸುಖಕ್ಕೆ ವಿಪರೀತವಾದ ನರಕಾದಿ ದುಃಖಗಳಿಂದ ಭೀತರಾಗಿರುವವರೂ, ಭವ್ಯೋತ್ತಮರೂ ಆದ ಭರತ, ಸಗರ, ರಾಮಚಂದ್ರ, ಪಾಂಡವರು ಮತ್ತು ಶ್ರೇಣಿಕ ಮೊದಲಾದವರು ಪರಿವಾರಸಮೇತರಾಗಿ ವೀತರಾಗ-ಸರ್ವಜ್ಞತೀರ್ಥಂಕರರ ಸಮವಸರಣದಲ್ಲಿ ಭಕ್ತಿಯ ಭಾರದಿಂದ ಬಗ್ಗಿದ ಮಸ್ತಕವುಳ್ಳವರಾಗಿ ಬಹು ವಿನಯದಿಂದ ಭಗವಂತರೊಡನೆ ಸರ್ವಆಗಮಗಳ ಪ್ರಶ್ನಾನಂತರದಲ್ಲಿ ಸರ್ವಪ್ರಕಾರದಿಂದಲೂ ಉಪಾದೇಯವೂ ಧ್ಯಾನಿಸುವುದಕ್ಕೆ ಯೋಗ್ಯವೂ ಆದ ಪರಮಾತ್ಮತತ್ತ್ವದ ಸ್ವರೂಪವನ್ನು ಕೇಳಿದ್ದರು ಭರತಚಕ್ರವರ್ತಿಯು ಶ್ರೀ ಋಷಭನಾಥರೊಡನೆಯೂ, ಸಗರಚಕ್ರಿಯು ಶ್ರೀ ಅಜಿತನಾಥರೊಡನೆಯೂ, ಬಲಭದ್ರ-ರಾಮಚಂದ್ರನು ದೇಶಭೂಷಣ, ಕುಲಭೂಷಣಕೇವಲಿಗಳೊಡನಯೂ ಮತ್ತು ಸಕಲಭೂಷಣಕೇವಲಿಗಳೊದನೆಯೂ, ಪಾಂಡವರು, ಶ್ರೀ ನೇಮಿನಾಥರೊಡನೆಯೂ, ಮತ್ತು ಶ್ರೇಣಿಕರಾಜ ಮೊದಲಾದವರು ಶ್ರೀ ಮಹಾವೀರ ಸ್ವಾಮಿಯೊಡನೆಯೂ ಪರಮಾತ್ಮಸ್ವರೂಪವನ್ನು ಕೇಳಿ ಅರಿತಿದ್ದರು ಹೀಗೆ ಭವ್ಯೋತ್ತಮರ ಪ್ರಶ್ನಾನುಸಾರವಾಗಿ ಭಗವಂತರು ಉಪದೇಶಿಸಿದ ಮೂರು ವಿಧದ ಆತ್ಮರುಗಳ ಸ್ವರೂಪವನ್ನು ಆಗಮಾನುಸಾರವಾಗಿ ನಿನಗೆ ತಿಳಿಸುವೆನು. ಮೂರು ವಿಧದ ಆತ್ಮಸ್ವರೂಪಗಳಲ್ಲಿ ಶುದ್ಧಾತ್ಮಸ್ವರೂಪವೇ ಉಪಾದೇಯವಾಗಿರುತ್ತದೆಂದು ಈ ವ್ಯಾಖ್ಯಾನದ ಭಾವಾರ್ಥವು.

**ಅಪ್ಪಾ ತಿವಿಹು ಮುಣೇವಿ ಲಹು, ಮೂಢಉ ಮೆಲ್ಲಹಿ ಭಾಉ ।**
**ಮುಣಿ ಸಣ್ಣಾಣೇಂ ಣಾಣಮಉ, ಜೋ ಪರಮಪ್ಪ-ಸಹಾಉ ॥ ೧೨ ॥**

"ಆತ್ಮಾನಂ ತ್ರಿವಿಧಂ ಮತ್ವಾ ಲಘು ಮೂಢಂ ಮುಞ್ಚ ಭಾವಮ್ ।
ಮನ್ಯಸ್ವ ಸ್ವಜ್ಞಾನೇನ ಜ್ಞಾನಮಯಂ ಯಃ ಪರಮಾತ್ಮಸ್ವಭಾವಃ ॥ ೧೨ ॥"

**ಅನ್ವಯಾರ್ಥ:**—(ಎಲೇ ಪ್ರಭಾಕರ ಭಟ್ಟನೇ!) **ಅಪ್ಪಾ ತಿವಿಹು ಮುಣೇವಿ**— ಮೂರು ವಿಧವುಳ್ಳ ಆತ್ಮನನ್ನು ತಿಳಿದು. **ಮೂಢಉ ಭಾಉ**— ಬಹಿರಾತ್ಮಸ್ವರೂಪವುಳ್ಳ ಭಾವ (ಪರಿಣಾಮ)ವನ್ನು **ಲಹು ಮೆಲ್ಲಹಿ**— ಬೇಗನೆ ಬಿಡು **ಜೋ**— ಯಾವ. **ಪರಮಪ್ಪ-ಸಹಾಉ**— ಪರಮಾತ್ಮಸ್ವಭಾವವಿದೆಯೋ. **ಣಾಣಮಉ**— ಕೇವಲಜ್ಞಾನದಿಂದ ಪರಿಪೂರ್ಣವಾದ ಅದನ್ನು (ಪರಮಾತ್ಮಸ್ವಭಾವವನ್ನು) **ಸಣ್ಣಾಣೇಂ**— ಸ್ವಸಂವೇದನ (ತನ್ನನ್ನು ತಾನು ತಿಳಿದುಕೊಳ್ಳುವ) ಜ್ಞಾನದಿಂದ. **ಮುಣಿ**— ತಿಳಿ

**ವಿಶೇಷಾರ್ಥ:**— ಪ್ರಭಾಕರ ಭಟ್ಟನೇ, ನೀನು ಬಹಿರಾತ್ಮ, ಅಂತರಾತ್ಮ, ಮತ್ತು ಪರಮಾತ್ಮರೆಂಬ ಮೂರು ಪ್ರಕಾರವಾದ ಆತ್ಮರುಗಳ ಸ್ವರೂಪವನ್ನು ತಿಳಿದು ಬಹಿರಾತ್ಮಸ್ವಭಾವವನ್ನು ಬಿಟ್ಟು ಅಂತರಾತ್ಮಲಕ್ಷಣವುಳ್ಳ ವೀತರಾಗ-ನಿರ್ವಿಕಲ್ಪಸ್ವಸಂವೇದನಜ್ಞಾನದಿಂದ ಶುದ್ಧಕೇವಲಜ್ಞಾನಮಯವಾದ ಪರಮಾತ್ಮ-ಸ್ವರೂಪವನ್ನು ತಿಳಿದು ಗ್ರಹಣೆಮಾಡು ಅಂದರೆ ಸ್ವಸಂವೇದನಜ್ಞಾನದಿಂದ ತಿಳಿಯಲ್ಪಟ್ಟ ಪರಮಾತ್ಮ-ಸ್ವರೂಪವೇ ಗ್ರಾಹ್ಯವಾಗಿರುತ್ತದೆಂದು ಭಾವವು ವಿಷಯಾನುಭವರೂಪವಾದ ಸ್ವಸಂವೇದನಜ್ಞಾನವು ಸರಾಗ (ರಾಗಸಹಿತ)ವಾಗಿಯೂ ಇರುವುದರಿಂದ ಅದನ್ನು ನಿಷೇಧಿಸುವುದಕ್ಕಾಗಿ ಇಲ್ಲಿ ಸ್ವಸಂವೇದನಜ್ಞಾನಕ್ಕೆ 'ವೀತರಾಗ' ಎಂಬ ವಿಶೇಷಣವನ್ನು ಕೊಟ್ಟುದಾಗಿದೆ.

**ಮೂಢು ವಿಯಕ್ಖಣು ಬಂಭು ಪರು, ಅಪ್ಪಾ ತಿವಿಹು ಹವೇಇ ।**
**ದೇಹು ಜಿ ಅಪ್ಪಾ ಜೋ ಮುಣಇ, ಸೋ ಜಣು ಮೂಢು**
**ಹವೇಇ ॥ ೧೩ ॥**

"ಮೂಢೋ ವಿಚಕ್ಷಣೋ ಬ್ರಹ್ಮಾಪರಃ ಆತ್ಮಾ ತ್ರಿವಿಧೋ ಭವತಿ ।
ದೇಹಮೇವ ಆತ್ಮಾನಂ ಯೋ ಮನುತೇ ಸ ಜನೋ ಮೂಢೋ ಭವತಿ ॥ ೧೩ ॥"

**ಅನ್ವಯಾರ್ಥ.— ಮೂಢು**— ಮೂಢ (ಬಹಿರಾತ್ಮ)ನೆಂದೂ **ವಿಯಕ್ಖಣು**— ವಿಚಕ್ಷಣ (ಅಂತರಾತ್ಮ)ನೆಂದೂ. **ಬಂಭುಪರು**— ಪರಬ್ರಹ್ಮ (ಪರಮಾತ್ಮ)ನೆಂದೂ, **ಅಪ್ಪಾ**— ಆತ್ಮನು. **ತಿವಿಹು ಹವೇಇ**— ಮೂರು ವಿಧವುಳ್ಳವನಾಗಿರುತ್ತಾನೆ **ಜೋ** —ಆವನು. **ದೇಹು ಜಿ**— ದೇಹವನ್ನೇ **ಅಪ್ಪಾ ಮುಣಇ**— ಆತ್ಮನೆಂದು ತಿಳಿಯುತ್ತಾನೆಯೋ. **ಸೋ ಜಣು**— ಆ ಮನುಷ್ಯನು. **ಮೂಢು ಹವೇಇ**— ಮೂಢ (ಬಹಿರಾತ್ಮ)ನಾಗಿರುತ್ತಾನೆ.

**ಭಾವಾರ್ಥ:**— ಮಿಥ್ಯಾತ್ವರಾಗಾದಿಗಳ ರೂಪವಾಗಿ ಪರಿಣತನಾದ ಆತ್ಮನಿಗೆ ಬಹಿರಾತ್ಮನೆಂದೂ, ವೀತರಾಗ ನಿರ್ವಿಕಲ್ಪ-ಸ್ವಸಂವೇದನ–ಜ್ಞಾನರೂಪವಾಗಿ ಪರಿಣಮನವನ್ನು ಹೊಂದಿರುವ ಆತ್ಮನಿಗೆ ಅಂತರಾತ್ಮನೆಂದೂ ಶುದ್ಧಬುದ್ಧಸ್ವಭಾವವುಳ್ಳ ಅಂದರೆ ರಾಗಾದಿ ವಿಭಾವಗಳಿಂದ ರಹಿತನೂ, ಅನಂತ ಜ್ಞಾನಾದಿಗಳಿಂದ ಕೂಡಿರುವವನೂ, ಭಾವಕರ್ಮ, ದ್ರವ್ಯಕರ್ಮ ಹಾಗೂ ನೋಕರ್ಮರಹಿತನೂ ಆದ ಆತ್ಮನಿಗೆ ಪರಮಾತ್ಮನೆಂದೂ ಹೆಸರು. ಹೀಗೆ ಆತ್ಮರಲ್ಲಿ ಮೂರು ಭೇದಗಳಿರುತ್ತವೆ. ಮೂಢನಾದ ಬಹಿರಾತ್ಮನು ವೀತರಾಗನಿರ್ವಿಕಲ್ಪಸಮಾಧಿಯಿಂದುಂಟಾಗುವ ಪರಮಾನಂದ-ಸುಖವೆಂಬ ಅಮೃತವನ್ನು ಪಡೆಯದವನಾಗಿ ತನ್ನ ದೇಹವನ್ನೇ ಆತ್ಮನೆಂದು ತಿಳಿಯುತ್ತಾನೆ. ಅಂತಹ ಬಹಿರಾತ್ಮತ್ವವು ಸರ್ವಥಾ ಹೇಯ (ತ್ಯಾಜ್ಯ)ವಾಗಿರುತ್ತದೆ. ಈ ಅಪೇಕ್ಷೆಯಿಂದ ಅಂತರಾತ್ಮತ್ವವು ಉಪಾದೇಯವಾಗಿದ್ದರೂ ಪರಮಾತ್ಮಾಪೇಕ್ಷೆಯಿಂದ ಅದೂ ತ್ಯಾಜ್ಯವಾಗಿದೆ, ಅಂತೂ ಕೇವಲ ಪರಮಾತ್ಮತ್ವವೇ ಉಪಾದೇಯವೂ ಧ್ಯಾನಯೋಗ್ಯವೂ ಆಗಿರುತ್ತದೆಂದು ಭಾವವು.

**ದೇಹ-ವಿಭಿಣ್ಣಉ ಣಾಣಮಉ, ಜೋ ಪರಮಪ್ಪು ಣಿಏಇ ।**
**ಪರಮ-ಸಮಾಹಿ-ಪರಿಠ್ಠಿಯಉ, ಪಂಡಿಉ ಸೋ ಜಿ ಹವೇಇ ॥ ೧೪ ॥**

"ದೇಹವಿಭಿನ್ನಂ ಜ್ಞಾನಮಯಂ ಯಃ ಪರಮಾತ್ಮಾನಂ ಪಶ್ಯತಿ ।
ಪರಮಸಮಾಧಿಪರಿಸ್ಥಿತಃ ಪಂಡಿತಃ ಸ ಏವ ಭವತಿ ॥ ೧೪ ॥"

**ಅನ್ವಯಾರ್ಥ:—ಜೋ—**ಯಾವನು **ದೇಹವಿಭಿಣ್ಣಉ**—ಶರೀರದಿಂದ ಭಿನ್ನ (ಬೇರೆ)ನೂ **ಣಾಣಮಉ**—ಜ್ಞಾನಮಯನೂ ಆದ **ಪರಮಪ್ಪು ಣಿಏಇ**—ಪರ ಮಾತ್ಮನನ್ನು ಕಾಣು (ತಿಳಿಯು)ತ್ತಾನೆಯೋ. **ಪರಮ ಸಮಾಹಿಪರಿಟ್ಠಿಯಉ—** ಪರಮ-ಸಮಾಧಿ (ಧ್ಯಾನ)ಯಲ್ಲಿ ನಿರತನಾದ. **ಸೋ ಜಿ**—ಅವನೇ- **ಪಂಡಿಉ ಹವೇಇ**—ಪಂಡಿತ (ವಿವೇಕಿಯಾದ ಅಂತರಾತ್ಮ)ನಾಗಿರುತ್ತಾನೆ.

**ಭಾವಾರ್ಥ:**—ಅನುಪಚರಿತಾಸದ್ಭೂತವ್ಯವಹಾರ-ನಯದಿಂದ, ಅಂದರೆ, ಜೀವ ನೊಡನೆ ಅನಾದಿಕಾಲದಿಂದ ಪರವಸ್ತು [ದೇಹಾದಿ]ಗಳ ಸಂಬಂಧವಿರುವುದರಿಂದ, ವ್ಯವ ಹಾರ ನಯದಿಂದ ಜೀವನು ದೇಹಮಯನಾಗಿರುವನು ಆದರೆ ನಿಶ್ಚಯನಯದಿಂದ ಅವನು ದೇಹಾದಿ ಪರವಸ್ತುಗಳಿಂದ ಸರ್ವಥಾ ಭಿನ್ನನಾದವನೂ, ಕೇವಲಜ್ಞಾನ ಮಯನೂ ಆಗಿರುವನು. ಅಂತಹ ನಿಜಶುದ್ಧಾತ್ಮನನ್ನು ವೀತರಾಗ-ನಿರ್ವಿಕಲ್ಪ-ಸಹ ಜಾನಂದಮಯ-ಶುದ್ಧಾತ್ಮಾನುಭವರೂಪವಾದ ಸಮಾಧಿಯಿಂದ ತಿಳಿಯುವ ವಿವೇಕಿ ಯಾದ ಪುರುಷನಿಗೆ ಅಂತರಾತ್ಮನೆಂದು ಹೆಸರು. ಇಲ್ಲಿ, ಅಂತಹ ಶುದ್ಧಾತ್ಮ (ಪರ ಮಾತ್ಮ)ನೇ ಆರಾಧ್ಯನಾಗಿರುವನೆಂದು ಭಾವವು

**ಅಪ್ಪಾ ಲದ್ಧಉ ಣಾಣಮಉ, ಕಮ್ಮವಿಮುಕ್ಕೇಂ ಜೇಣ ।**
**ಮೆಲ್ಲಿವಿ ಸಯಲು ವಿ ದವ್ವು ಪರು, ಸೋ ಪರು ಮುಣಹಿ ಮಣೇಣ ॥೧೫॥**

"ಆತ್ಮಾ ಲಬ್ಧೋ ಜ್ಞಾನಮಯಃ ಕರ್ಮವಿಮುಕ್ತೇನ ಯೇನ ।
ಮುಕ್ತ್ವಾ ಸಕಲಮಪಿ ದ್ರವ್ಯಂ ಪರಂ ತಂ ಪರಂ ಮನ್ಯಸ್ವ ಮನಸಾ ॥ ೧೫ ॥"

**ಅನ್ವಯಾರ್ಥ:—ಕಮ್ಮವಿಮುಕ್ಕೇಂ**—ಜ್ಞಾನಾವರಣಾದಿ ಕರ್ಮಗಳಿಂದ ಬಿಡ ಲ್ಪಟ್ಟ. **ಜೇಣ**—ಯಾವನಿಂದ. **ಸಯಲು ವಿ ದವ್ವು ಪರು**—ದೇಹಾದಿ ಸಮಸ್ತ ಪರ ದ್ರವ್ಯವನ್ನು. **ಮೆಲ್ಲಿವಿ**—ಬಿಟ್ಟು. **ಣಾಣಮಉ ಅಪ್ಪಾ**—ಕೇವಲಜ್ಞಾನಮಯನಾದ ಆತ್ಮನು. **ಲದ್ಧಉ**—ಪಡೆಯಲ್ಪಟ್ಟನೋ. **ಸೋ**—ಅವನನ್ನು **ಪರು ಮುಣಹಿ ಮಣೇಣ**—ಶುದ್ಧಮನಸ್ಸಿನಿಂದ ಪರಮಾತ್ಮನನ್ನಾಗಿ ತಿಳಿ.

**ಭಾವಾರ್ಥ:—**ಪ್ರಭಾಕರಭಟ್ಟನೇ! ಯಾವನು ದೇಹ ಮೊದಲಾದ ಸಮಸ್ತ ಪರ ದ್ರವ್ಯಗಳನ್ನು ಬಿಟ್ಟು ದ್ರವ್ಯಕರ್ಮ ಮತ್ತು ಭಾವಕರ್ಮ ರಹಿತನಾಗಿ ಕೇವಲಜ್ಞಾನ ಮಯನಾದ ತನ್ನ ಆತ್ಮನನ್ನು ಪಡೆದನೋ ಅಂತಹ ಶುದ್ಧಾತ್ಮನನ್ನು ನೀನು ಮಾಯಾ ಶಲ್ಯ, ಮಿಥ್ಯಾಶಲ್ಯ ಮತ್ತು ನಿದಾನಶಲ್ಯ ಮೊದಲಾದ ವಿಭಾವ (ವಿಕಾರ) ಪರಿಣಾಮ ಗಳಿಂದ ರಹಿತವಾದ ನಿರ್ಮಲ ಮನಸ್ಸಿನಿಂದ ಪರಮಾತ್ಮನೆಂದು ತಿಳಿ. ಪೂರ್ವೋಕ್ತ

ಕೇವಲಜ್ಞಾನಾದಿಗುಣಗಳಿಂದ ಕೂಡಿದ ಪರಮಾತ್ಮನು ಧ್ಯಾನಿಸಲು ಯೋಗ್ಯನೆಂದೂ ಜ್ಞಾನಾವರಣಾದಿ ಸಮಸ್ತ ಪರವಸ್ತುಗಳು ತ್ಯಾಜ್ಯಗಳಾಗಿರುತ್ತವೆಂದೂ ಭಾವವು.

ಹೀಗೆ ತ್ರಿವಿಧಾತ್ಮಸ್ವರೂಪವನ್ನು ಪ್ರತಿಪಾದಿಸುವ ಪ್ರಥಮ ಮಹಾಧಿಕಾರದಲ್ಲಿ ಸಂಕ್ಷೇಪದಿಂದ ಮುಖ್ಯವಾಗಿ ತ್ರಿವಿಧ ಆತ್ಮರನ್ನು ಸೂಚಿಸುವ ಐದು ಸೂತ್ರಗಳು ಮುಗಿದುವು. ಮುಂದೆ ಮುಕ್ತಿಗತರೂ ಕೇವಲಜ್ಞಾನಾದಿ ಗುಣಗಳ ವ್ಯಕ್ತಿ (ಪ್ರಕಟ) ಸ್ವರೂಪರೂ ಆದ ಸಿದ್ಧಜೀವರುಗಳನ್ನು ವರ್ಣಿಸುವ ಹತ್ತು ದೋಹಕಸೂತ್ರಗಳು ಪ್ರಾರಂಭಿಸಲ್ಪಡುತ್ತವೆ.

**ತಿಹುಯಣವಂದಿಉ ಸಿದ್ಧಿಗಉ, ಹರಿಹರ ಝಾಯಹಿಂ ಜೋಜಿ ।**
**ಲಕ್ಖು ಅಲಕ್ಖೇಂ ಧರಿವಿ ಥಿರು, ಮುಣಿ ಪರಮಪ್ಪಉ ಸೋ ಜಿ ॥ ೧೬ ॥**

"ತ್ರಿಭುವನವಂದಿತಂ ಸಿದ್ಧಿಗತಂ ಹರಿಹರಾ ಧ್ಯಾಯಂತಿ ಯಮೇವ ।
ಲಕ್ಷ್ಯಮಲಕ್ಷ್ಯೇಣ ಧೃತ್ವಾ ಸ್ಥಿರಂ ಮನ್ಯಸ್ವ ಪರಮಾತ್ಮಾನಂ ತಮೇವ ॥ ೧೬ ॥"

**ಅನ್ವಯಾರ್ಥ:—ತಿಹುಯಣವಂದಿಉ**—ಮೂರುಲೋಕಗಳಿಂದ ವಂದಿಸಲ್ಪಟ್ಟವನೂ, **ಸಿದ್ಧಿಗಉ**—ಕೇವಲಜ್ಞಾನಾದಿಗಳ ವ್ಯಕ್ತಿರೂಪವಾದ ಸಿದ್ಧಿಯನ್ನು ಹೊಂದಿದವನೂ ಆದ **ಜೋ ಜಿ**—ಯಾವ ಪರಮಾತ್ಮನನ್ನೇ **ಹರಿಹರ ಝಾಯಹಿಂ**—ಹರಿಹರ ಹಿರಣ್ಯಗರ್ಭ(ಬ್ರಹ್ಮ)ದಿಗಳು ಧ್ಯಾನಿಸುತ್ತಾರೋ. **ಸೋ ಜಿ ಪರಮಪ್ಪಉ**—ಅಂತಹ ಪರಮಾತ್ಮನನ್ನೇ. **ಲಕ್ಖು ಅಲಕ್ಖೇಂ**—ಮನಸ್ಸನ್ನು ವೀತರಾಗನಿರ್ವಿಕಲ್ಪ-ನಿತ್ಯಾನಂದೈಕಸ್ವಭಾವವುಳ್ಳ ಪರಮಾತ್ಮರೂಪದಿಂದ(ದಲ್ಲಿ) **ಧರಿವಿ ಥಿರು**—ಸ್ಥಿರವಾಗಿರಿಸಿ. **ಮುಣಿ**—ತಿಳಿ. ಅರ್ಥಾತ್ ಧ್ಯಾನಿಸು

**ಭಾವಾರ್ಥ:**—ಕೇವಲಜ್ಞಾನಾದಿಗುಣಗಳ ವ್ಯಕ್ತಿ (ಪ್ರಕಟ)ರೂಪವಾದ ಮುಕ್ತಿಯನ್ನು ಪಡೆದ ಪರಮಾತ್ಮರಿಗೆ ಸಮಾನನೂ, ರಾಗಾದಿ ಸಂಕಲ್ಪವಿಕಲ್ಪಗಳಿಂದ ರಹಿತನೂ ಆದ ನಿಜ (ತನ್ನ) ಶುದ್ಧಾತ್ಮನೇ ಸಾಕ್ಷಾತ್ ಉಪಾದೇಯನಾಗಿರುವನೆಂದೂ, ಇತರ ಸಂಕಲ್ಪ-ವಿಕಲ್ಪಗಳು ಹೇಯವಾಗಿರುತ್ತವೆಂದೂ ಭಾವವು. ಬಾಹ್ಯವಸ್ತುಗಳಾದ ಪತ್ನೀ, ಪುತ್ರ, ಬಂಧು-ಬಾಂಧವರುಮೊದಲಾದ ಸಚೇತನಪದಾರ್ಥಗಳಲ್ಲಿಯೂ, ಬೆಳ್ಳಿ, ಬಂಗಾರ, ರತ್ನಾಭೂಷಣ ಮೊದಲಾದ ಅಚೇತನಪದಾರ್ಥಗಳಲ್ಲಿಯೂ "ಇವು ನನ್ನವು" ಎಂಬ ಮಮತ್ವಪರಿಣಾಮಕ್ಕೆ "ಸಂಕಲ್ಪ"ವೆಂದು ಹೆಸರು ನಾನು ಸುಖಿಯು ನಾನು ದುಃಖಿಯು ಎಂಬೀ ಮೊದಲಾದ ಹರ್ಷ-ವಿಷಾದರೂಪ ಪರಿಣಾಮವು "ವಿಕಲ್ಪ"ವೆನಿಸುವುದು ಹೀಗೆ ಸಂಕಲ್ಪ-ವಿಕಲ್ಪಗಳ ಲಕ್ಷಣವನ್ನು ಸರ್ವತ್ರ ತಿಳಿಯಬೇಕು.

**ಣಿಚ್ಚು ಣಿರಂಜಣು ಣಾಣಮಉ, ಪರಮಾಣಂದಸಹಾಉ ।**
**ಜೋ ಏಹಉ ಸೋ ಸಂತು ಸಿಉ, ತಾಸು ಮುಣಿಜ್ಜಹಿ ಭಾಉ ॥ ೧೭ ॥**

"ನಿತ್ಯೋ ನಿರಂಜನೋ ಜ್ಞಾನಮಯಃ ಪರಮಾನಂದಸ್ವಭಾವಃ ।
ಯ ಈದೃಶಃ ಸ ಶಾಂತಃ ಶಿವಃ ತಸ್ಯ ಮನ್ಯಸ್ವ ಭಾವಮ್ ॥ ೧೭ ॥"

**ಅನ್ವಯಾರ್ಥ:—ಣಿಚ್ಚು**—ಅವಿನಾಶಿಯು **ಣಿರಂಜಣು**—ಕರ್ಮಮಲರಹಿತನು **ಣಾಣಮಉ**—ಜ್ಞಾನಮಯನು **ಪರಮಾಣಂದಸಹಾಉ**—ಪರಮಾನಂದ ಸ್ವಭಾವವುಳ್ಳವನು. **ಜೋ ಏಹಉ**—ಯಾವನು ಈ ರೀತಿಯಾಗಿರುವನೋ. **ಸೋ ಸಂತು ಸಿಉ**—ಆತನು ಶಾಂತಸ್ವರೂಪನೂ ಶಿವಸ್ವರೂಪನೂ ಆಗಿರುವನು **ತಾಸು**—ಆ ಪರಮಾತ್ಮನ **ಮುಣಿಜ್ಜಹಿ ಭಾಉ**—ಸ್ವಭಾವವನ್ನು ತಿಳಿ ಮತ್ತು ಧ್ಯಾನಿಸು.

**ಭಾವಾರ್ಥ:**—ಪ್ರಭಾಕರ ಭಟ್ಟನೇ, ಪರಮಾತ್ಮನು ದ್ರವ್ಯಾರ್ಥಿಕನಯದಿಂದ ಅವಿನಾಶಿ (ನಿತ್ಯ)ಯೂ, ರಾಗಾದಿ ಉಪಾಧಿಗಳಿಂದಲೂ ಕರ್ಮಮಲರೂಪವಾದ ಅಂಜನದಿಂದಲೂ ಬಿಡಲ್ಪಟ್ಟವನೂ, ಕೇವಲಜ್ಞಾನದಿಂದ ಪರಿಪೂರ್ಣನಾದವನೂ ಶುದ್ಧಾತ್ಮಭಾವನೆಯಿಂದುಂಟಾದ ವೀತರಾಗಪರಮಾನಂದಸ್ವಭಾವವುಳ್ಳವನೂ ಆಗಿರುವನು ವೀತರಾಗನಾಗಿರುವುದರಿಂದ ಶಾಂತಸ್ವರೂಪನೂ ಪರಮಾನಂದ-ಸುಖಮಯನಾಗಿರುವುದರಿಂದ ಶಿವಸ್ವರೂಪನೂ ಆದ ಆ ಪರಮಾತ್ಮನ ಶುದ್ಧಬುದ್ಧಸ್ವಭಾವವನ್ನು ನೀನು ಚೆನ್ನಾಗಿ ತಿಳಿದು ಧ್ಯಾನಿಸು. ಪರಮಾತ್ಮನ ಶುದ್ಧಬುದ್ಧ (ಜ್ಞಾನ) ಸ್ವಭಾವವು ಧ್ಯೇಯವಾಗಿರುತ್ತದೆಂದಭಿಪ್ರಾಯವು

**ಜೋ ಣಿಯ ಭಾಉ ಣ ಪರಿಹರಇ, ಜೋ ಪರಭಾಉ ಣ ಲೇಇ ।**
**ಜಾಣಇ ಸಯಲು ವಿ ಣಿಚ್ಚು ಪರ, ಸೋ ಸಿಉ ಸಂತು ಹವೇಇ ॥ ೧೮ ॥**

"ಯೋ ನಿಜಭಾವಂ ನ ಪರಿಹರತಿ ಯಃ ಪರಭಾವಂ ನ ಲಾತಿ ।
ಜಾನಾತಿ ಸಕಲಮಪಿ ನಿತ್ಯಂ ಪರಂ ಸ ಶಿವಃ ಶಾಂತೋ ಭವತಿ ॥ ೧೮ ॥"

**ಅನ್ವಯಾರ್ಥ:—ಜೋ**—ಆವನು. **ಣಿಯಭಾಉ ಣ ಪರಿಹರಇ**—ಅನಂತಜ್ಞಾನಾದಿರೂಪಗಳಾದ ತನ್ನ ಭಾವಗಳನ್ನು ಎಂದಿಗೂ ಬಿಡುವುದಿಲ್ಲವೋ. **ಜೋ**—ಆವನು **ಪರಭಾಉ ಣ ಲೇಇ**—ಕಾಮಕ್ರೋಧಾದಿರೂಪಗಳಾದ ಪರಭಾವಗಳನ್ನು ಎಂದೂ ಗ್ರಹಣೆಮಾಡು (ಹೊಂದು)ವುದಿಲ್ಲವೋ. **ಸಯಲು ವಿ**—ಮೂರು ಲೋಕ ಮತ್ತು ಮೂರು ಕಾಲಗಳಲ್ಲಿರುವ ಸಮಸ್ತ-ವಸ್ತುಗಳ ಸ್ವಭಾವವನ್ನು. **ಜಾಣಇ ಣಿಚ್ಚು ಪರ**—ನಿಯಮದಿಂದ ನಿತ್ಯವೂ ತಿಳಿಯುತ್ತಾನೆಯೋ **ಸೋ**—ಅವನು. **ಸಿಉ ಸಂತು ಹವೇಇ**—ಶಿವಸ್ವರೂಪನೂ ಶಾಂತಸ್ವರೂಪನೂ ಆಗಿರುತ್ತಾನೆ

**ಭಾವಾರ್ಥ:**—ಸಂಸಾರಾವಸ್ಥೆಯಲ್ಲಿ ಶುದ್ಧದ್ರವ್ಯಾರ್ಥಿಕನಯದಿಂದ ಎಲ್ಲಾ ಜೀವರು ಶಕ್ತಿರೂಪದಿಂದ ಪರಮಾತ್ಮರಾಗಿರುತ್ತಾರೆ, ವ್ಯಕ್ತಿ (ಪ್ರಕಟ) ರೂಪದಿಂದ ಪರಮಾತ್ಮರಲ್ಲ. ಮುಕ್ತಾವಸ್ಥೆಯಲ್ಲಿ ಅವರು ವ್ಯಕ್ತಿರೂಪದಿಂದ ಪರಮಾತ್ಮರಾಗಿರುತ್ತಾರೆ, ಮತ್ತು ಅವರಿಗೆ 'ಶಿವರು' ಎಂಬ ಸಂಜ್ಞೆಯಿರುತ್ತದೆ (ಶಿವರೆಂದು ಹೇಳಲ್ಪಡುತ್ತಾರೆ) ಇದನ್ನೇ ಗ್ರಂಥಾಂತರದಲ್ಲಿ—"ಪರಮಾರ್ಥನಯಾಯ ಸದಾಶಿವಾಯ ನಮೋಽಸ್ತು" ಎಂದೂ ಹಾಗೆಯೇ "ಶಿವಂ ಪರಮಕಲ್ಯಾಣಂ ನಿರ್ವಾಣಂ ಶಾಂತಮಕ್ಷಯಂ । ಪ್ರಾಪ್ತಂ ಮುಕ್ತಿಪದಂ ಯೇನ ಸ ಶಿವಃ ಪರಿಕೀರ್ತಿತಃ ॥" ಅಂದರೆ, ಯಾವನಿಂದ ಪರಮ

ಕಲ್ಯಾಣಮಯವೂ, ನಿರ್ವಾಣರೂಪವೂ, ಶಾಂತಸ್ವರೂಪವೂ ಮತ್ತು ಅವಿನಶ್ವರವೂ ಆದ ಮುಕ್ತಿಪದವು ಹೊಂದಲ್ಪಟ್ಟಿದೆಯೋ ಅವನು 'ಶಿವ'ನೆಂದು ಹೇಳಲ್ಪಟ್ಟಿರುತ್ತಾನೆ. ನೈಯಾಯಿಕಮತೀಯರು ಮತ್ತು ವೈಶೇಷಿಕಮತೀಯರೇ ಮೊದಲಾದವರು ಹೇಳುವ ಯಾವನೊಬ್ಬ ಜಗತ್ಕರ್ತನೂ, ಸರ್ವವ್ಯಾಪಿಯೂ, ಸದಾಮುಕ್ತನೂ, ಶಾಂತನೂ ಆದ ಶಿವನು ಇರುವುದಿಲ್ಲವೆಂದೂ ಪೂರ್ವೋಕ್ತ ಶುದ್ಧಾತ್ಮನೇ ಶಾಂತನೂ, ಶಿವನೂ ಮತ್ತು ಉಪಾದೇಯನೂ ಆಗಿರುವನೆಂದೂ ಭಾವವು

**ಜಾಸು ಣ ವಣ್ಣು ಣ ಗಂಧು ರಸು, ಜಾಸು ಣ ಸದ್ದು ಣ ಫಾಸು ।**
**ಜಾಸು ಣ ಜಮ್ಮಣು ಮರಣು ಣ ವಿ ಣಾಉ ಣಿರಂಜಣು ತಾಸು ॥೧೯॥**
**ಜಾಸು ಣ ಕೋಹು ಣ ಮೋಹು ಮಉ, ಜಾಸು ಣ ಮಾಯ ಣ ಮಾಣು ।**
**ಜಾಸು ಣ ಠಾಣು ಣ ಝಾಣು ಜಿಯ ಸೋ ಜಿ ಣಿರಂಜಣು ಜಾಣು ॥೨೦॥**
**ಅತ್ಥಿ ಣ ಪುಣ್ಣು ಣ ಪಾಉ ಜಸು, ಅತ್ಥಿ ಣ ಹರಿಸು ವಿಸಾಉ ।**
**ಅತ್ಥಿ ಣ ಎಕ್ಕು ವಿ ದೋಸು ಜಸು, ಸೋ ಜಿ ಣಿರಂಜಣು ಭಾಉ ॥ ೨೧ ॥**

—ತಿಯಲಂ ॥

"ಯಸ್ಯ ನ ವರ್ಣೋ ನ ಗಂಧೋ ಯಸ್ಯ ನ ಶಬ್ದೋ ನ ಸ್ಪರ್ಶಃ
ಯಸ್ಯ ನ ಜನ್ಮ ಮರಣಂ ನಾಪಿ ನಾಮ ನಿರಂಜನಸ್ತಸ್ಯ ॥ ೧೯ ॥
ಯಸ್ಯ ನ ಕ್ರೋಧೋ ನ ಮೋಹೋ ಮದಃ ಯಸ್ಯ ನ ಮಾಯಾ ನ ಮಾನಃ ।
ಯಸ್ಯ ನ ಸ್ಥಾನಂ ನ ಧ್ಯಾನಂ ಜೀವ ತಮೇವ ನಿರಂಜನಂ ಜಾನೀಹಿ ॥ ೨೦ ॥
ಅಸ್ತಿ ನ ಪುಣ್ಯಂ ನ ಪಾಪಂ ಯಸ್ಯ ಅಸ್ತಿ ನ ಹರ್ಷೋ ವಿಷಾದಃ ।
ಅಸ್ತಿ ನ ಏಕೋಽಪಿ ದೋಷೋ ಯಸ್ಯ ಸ ಏವ ನಿರಂಜನೋ ಭಾವಃ ॥ ೨೧ ॥"

—ತ್ರಿಕಲಪಮ್ ॥

**ಅನ್ವಯಾರ್ಥ:—ಜಾಸು ಣ ವಣ್ಣು ಣ ಗಂಧು**—ಯಾವ ಮುಕ್ತಾತ್ಮನಿಗೆ ಬಿಳುಪು, ಕಪ್ಪು, ಕೆಂಪು, ಹಳದಿ ಮತ್ತು ನೀಲಗಳೆಂಬ ಐದು ವಿಧದ ವರ್ಣ (ಬಣ್ಣ) ಗಳಿರುವುದಿಲ್ಲವೋ, ಸುಗಂಧ ದುರ್ಗಂಧರೂಪವಾದ ಎರಡು ಗಂಧಗಳಿರುವುದಿಲ್ಲವೋ **ರಸು ಜಾಸು ಣ ಸದ್ದು ಣ ಫಾಸು**—ಯಾವನಿಗೆ ಸಿಹಿ, ಹುಳಿ, ಕಹಿ, ಖಾರ ಮತ್ತು ಒಗರುಗಳೆಂಬೈದು ರಸಗಳಿಲ್ಲವೋ, ಭಾಷಾತ್ಮಕ ಅಭಾಷಾತ್ಮಕ ಮೊದಲಾದ ಭೇದಗಳುಳ್ಳ ಶಬ್ದವಿರುವುದಿಲ್ಲವೋ ಅಥವಾ ಸಚಿತ್ತ, ಅಚಿತ್ತ ಮತ್ತು ಮಿಶ್ರರೂಪ ವಾದ ಯಾವುದೊಂದು ಶಬ್ದವೂ ಸಪ್ತಸ್ವರಗಳೂ ಇರುವುದಿಲ್ಲವೋ ಶೀತ, ಉಷ್ಣ, ಸ್ನಿಗ್ಧ, ರೂಕ್ಷ, ಗುರು, ಲಘು, ಮೃದು ಮತ್ತು ಕಠಿನಗಳೆಂಬ ಎಂಟು ಭೇದಗಳುಳ್ಳ ಸ್ಪರ್ಶವಿರುವುದಿಲ್ಲವೋ **ಜಾಸು ಣ ಜಮ್ಮಣು ಮರಣು ಣವಿ**—ಮತ್ತು ಯಾವ ನಿಗೆ ಜನ್ಮವೂ ಮರಣವೂ ಇರುವುದಿಲ್ಲವೋ **ಣಾಉ ಣಿರಂಜಣು ತಾಸು**—ಅಂತಹ **ಚಿದಾನಂದೈಕ** ಸ್ವಭಾವವುಳ್ಳ ಪರಮಾತ್ಮನಿಗೆ 'ನಿರಂಜನ'ನೆಂದು ಹೆಸರು.

**ಜಾಸು ಣ ಕೋಹುಣ ಮೋಹು**— ಯಾವ ಸಿದ್ಧಾತ್ಮನಿಗೆ ಕ್ರೋಧವಿಲ್ಲವೋ ಮೋಹವಿಲ್ಲವೋ; **ಮಉ ಜಾಸು ಣ ಮಾಯು ಣ ಮಾಣು**— ಯಾವನಿಗೆ ಕುಲ ಮದ ಜಾತಿಮದ ಮೊದಲಾದೆಂಟು ವಿಧದ ಮದಗಳಿಲ್ಲವೋ, ಮಾಯಾಕಷಾಯವೂ ಮಾನಕಷಾಯವೂ ಇರುವುದಿಲ್ಲವೋ; **ಜಾಸು ಣ ಠಾಣು ಣ ಝಾಣು**— ಯಾವ ನಿಗೆ ಧ್ಯಾನದ ಸ್ಥಾನಗಳಾದ ನಾಭಿ, ಹೃದಯ, ಮತ್ತು ಲಲಾಟ (ಹಣೆ) ಮೊದ ಲಾದ ಸ್ಥಾನಗಳಿಲ್ಲವೋ, ಮತ್ತು ಚಿತ್ತನಿರೋಧರೂಪವಾದ ಧ್ಯಾನವಿರುವುದಿಲ್ಲವೋ. [ಮನಸ್ಸೇ ಇಲ್ಲದಿರುವಾಗ ಮನೋನಿರೋಧ (ಮನಸ್ಸನ್ನು ತಡೆಯುವಿಕೆ)ಯೆಲ್ಲಿ?] **ಜಿಯ ಸೋ ಜಿಣಿ ರಂಜಣು ಜಾಣು**— ಜೀವನೇ! ಆ ಸ್ವಶುದ್ಧಾತ್ಮನೇ ನಿರಂಜನನೆಂದು ತಿಳಿ. ತನ್ನ ಖ್ಯಾತಿಪೂಜಾಲಾಭ, ಲೋಕಪ್ರಸಿದ್ಧಿ, ಪೂಜ್ಯತೆ, ಅಪೂರ್ವವಸ್ತುಗಳ ಪ್ರಾಪ್ತಿ ಮತ್ತು ತಾನು ನೋಡಿದ, ಕೇಳಿದ ಹಾಗೂ ಅನುಭವಿಸಿದ ಭೋಗವಸ್ತುಗಳ ಅಭಿಲಾಷಾರೂಪವಾದ ಸಮಸ್ತ ವಿಭಾವಪರಿಣಾಮಗಳನ್ನು ಬಿಟ್ಟು ತನ್ನ ಶುದ್ಧಾ ತ್ಮಾನುಭವರೂಪವಾದ ನಿರ್ವಿಕಲ್ಪ ಸಮಾಧಿಯಲ್ಲಿ ಸ್ಥಿರನಾಗಿ ಆ ಶುದ್ಧಾತ್ಮಾನುಭವ ವನ್ನು ಪಡೆಯಬೇಕೆಂದು ಭಾವವು

**ಅತ್ಥಿ ಣ ಪುಣ್ಣು ಣ ಪಾಉ ಜಸು**— ಯಾವ ಪರಮಾತ್ಮನಿಗೆ ದ್ರವ್ಯ-ಭಾವರೂಪ ವಾದ ಪುಣ್ಯವೂ, ಪಾಪವೂ ಇರುವುದಿಲ್ಲವೋ **ಅತ್ಥಿ ಣ ಹರಿಸು ವಿಸಾಉ**— ರಾಗ ರೂಪವಾದ ಹರ್ಷವೂ ದ್ವೇಷರೂಪವಾದ ವಿಷಾದವೂ ಇರುವುದಿಲ್ಲವೋ **ಅತ್ಥಿ ಣ ಎಕ್ಕು ವಿ ದೋಸು ಜಸು**— ಯಾವಾತನಿಗೆ ಹಸಿವು ನೀರಡಿಗೆ ಮೊದಲಾದ ಹದಿನೆಂಟು ದೋಷಗಳಲ್ಲಿ ಒಂದು ದೋಷವೂ ಇರುವುದಿಲ್ಲವೋ **ಸೋ ಜಿ ಣಿರಂಜಣು ಭಾಉ**— ಆ ಶುದ್ಧಾತ್ಮನೇ ನಿರಂಜನನೆಂದು ತಿಳಿ ವೀತರಾಗ-ನಿರ್ವಿಕಲ್ಪ-ಸಮಾಧಿಯಲ್ಲಿರುವವ ನಾಗಿ ನಿರ್ದೋಷಪರಮಾತ್ಮನನ್ನು ಭಾವಿಸು ಎಂದಭಿಪ್ರಾಯವು. ಈ ಮೂರು ದೋಹಾ ಸೂತ್ರಗಳಿಂದ ಹೇಳಲ್ಪಟ್ಟ ಲಕ್ಷಣವುಳ್ಳವನೇ ನಿರಂಜನನಲ್ಲದೆ ಬೇರೊಬ್ಬ ಪರಕಲ್ಪಿತ ನಿರಂಜನನಿರುವುದಿಲ್ಲ. ಆದಕಾರಣ ಮೇಲಿನ ಮೂರು ಸೂತ್ರಗಳಿಂದ ವರ್ಣಿಸಲ್ಪಟ್ಟ ಲಕ್ಷಣವುಳ್ಳ ವಿಶುದ್ಧಜ್ಞಾನ-ದರ್ಶನಸ್ವರೂಪನಾದ 'ನಿರಂಜನ'ನೇ ಉಪಾದೇಯನಾಗಿರು ತ್ತಾನೆಂದು ಭಾವವು.

**ಜಾಸು ಣ ಧಾರಣು ಧೇಉ ಣ ವಿ, ಜಾಸು ಣ ಜಂತು ಣ ಮಂತು ।**
**ಜಾಸು ಣ ಮಂಡಲು ಮುದ್ದ ಣ ವಿ, ಸೋ ಮುಣಿ**
**ದೇಉಂ ಅಣಂತು ॥ ೨೨ ॥**

"ಯಸ್ಯ ನ ಧಾರಣಾ ಧ್ಯೇಯಂ ನಾಪಿ ಯಸ್ಯ ನ ಯಂತ್ರಂ ನ ಮಂತ್ರಃ ।
ಯಸ್ಯ ನ ಮಂಡಲಂ ಮುದ್ರಾ ನಾಪಿ ತಂ ಮನ್ಯಸ್ವ ದೇವಮನಂತಮ್ ॥ ೨೨ ॥"

**ಅನ್ವಯಾರ್ಥ:— ಜಾಸು ಣ ಧಾರಣು ಧೇಉ ಣ ವಿ**— ಯಾವ ಪರಮಾತ್ಮ ನಿಗೆ ಕುಂಭಕ, ಪೂರಕ ಮತ್ತು ರೇಚಕರೂಪವಾದ ವಾಯುಧಾರಣೆಯಿರುವುದಿಲ್ಲವೋ, ಧ್ಯಾನಿಸುವುದಕ್ಕೆ ಯೋಗ್ಯಗಳಾದ ಪ್ರತಿಮೆ ಮೊದಲಾದ ವಸ್ತುಗಳಿರುವುದಿಲ್ಲವೋ

**ಜಾಸು ಣ ಜಂತು ಣ ಮಂತು**—ಯಾವನಿಗೆ ಅಕ್ಷರರಚನಾ-ವಿನ್ಯಾಸರೂಪವಾದುದೂ ಸ್ತಂಭನ ಮೋಹನ ವಶೀಕರಣ ಮೊದಲಾದ ಷಟ್ಕರ್ಮಗಳ ಸಾಧಕವೂ ಆದ ಯಂತ್ರ ಸ್ವರೂಪವೂ, ವಿವಿಧಾಕ್ಷರಗಳ ಉಚ್ಚಾರಣಾರೂಪವಾದ ಮಂತ್ರಸ್ವರೂಪವೂ ಇರುವುದಿಲ್ಲವೋ. **ಜಾಸು ಣ ಮಂಡಲು ಮುದ್ದ ಣ ವಿ**—ಯಾವನಿಗೆ ಜಲಮಂಡಲ, ವಾಯು ಮಂಡಲ, ಅಗ್ನಿಮಂಡಲ ಮತ್ತು ಪೃಥ್ವೀಮಂಡಲ ಮೊದಲಾದ ಪವನ (ವಾಯು) ಭೇದಗಳೂ, ಗರುಡಮುದ್ರೆ, ಜ್ಞಾನಮುದ್ರೆ ಮೊದಲಾದ ಸಾಧನ-ಮುದ್ರೆಗಳೂ ಇರುವುದಿಲ್ಲವೋ **ಸೋ ಮುಣಿ ದೇಉಂ ಅಣಂತು**— ಅವನನ್ನು ದ್ರವ್ಯಾರ್ಥಿಕನಯದಿಂದ ಅಂತವಿಲ್ಲದವನೂ ಅವಿನಾಶಿಯೂ ಅನಂತಜ್ಞಾನಾದಿಗುಣಸ್ವರೂಪನೂ ಆದ ಪರಮಾತ್ಮ ದೇವನನ್ನಾಗಿ ತಿಳಿ

**ಭಾವಾರ್ಥ:**—ಗ್ರಂಥಾಂತರದಲ್ಲಿ **"ಅಕ್ಖಾಣ ರಸಣೀಂ ಕಮ್ಮಾಣ ಮೋಹಣೀಂ ತಹ ವಯಾಣ ಬಂಭಂ ಚ । ಗುತ್ತೀಸು ಯ ಮಣಗುತ್ತೀ ಚಉರೋ ದುಕ್ಖೇಹಿಂ ಸಿಜ್ಝಂತಿ ॥"** ಅರ್ಥಾತ್, "ಸ್ಪರ್ಶನಾದಿ ಐದು ಇಂದ್ರಿಯಗಳಲ್ಲಿ ರಸನೇಂದ್ರಿಯ (ನಾಲಗೆ)ವೂ, ಜ್ಞಾನಾವರಣಾದಿ ಎಂಟು ಕರ್ಮಗಳಲ್ಲಿ ಮೋಹಕರ್ಮವೂ ಪ್ರಬಲವಾಗಿದೆ. ಅಹಿಂಸಾದಿ ಪಂಚಮಹಾವ್ರತಗಳಲ್ಲಿ ಬ್ರಹ್ಮಚರ್ಯವ್ರತವೂ ಹಾಗೆಯೇ ತ್ರಿಗುಪ್ತಿಗಳಲ್ಲಿ ಮನೋಗುಪ್ತಿಯೂ ಪಾಲಿಸಲು ಕಠಿನವಾಗಿದೆ ಇವುಗಳು ಬಹುಕಷ್ಟದಿಂದ ಸಿದ್ಧಿಸುತ್ತವೆ" ಎಂದು ಹೇಳಿರುವಂತೆ ಎಲೈ ಪ್ರಭಾಕರಭಟ್ಟನೇ! ನೀನು ಅತೀಂದ್ರಿಯವಾದ ಆತ್ಮಿಕಸುಖಾಸ್ವಾದನೆಗೆ ವಿಪರೀತವಾದ ಜಿಹ್ವೇಂದ್ರಿಯವಿಷಯ(ರಸ)ವನ್ನೂ, ಮೋಹರತವಾದ ಶುದ್ಧಾತ್ಮಸ್ವಭಾವಕ್ಕೆ ಪ್ರತಿಕೂಲವಾದ ಮೋಹವನ್ನೂ, ವೀತರಾಗ ಸಹಜಾನಂದ ಪರಮಸಮರಸೀಭಾವರೂಪವಾದ ಸುಖಾನುಭವಕ್ಕೆ ಪ್ರತಿಪಕ್ಷ (ಶತ್ರು)ವಾದ ಎಂಟು ವಿಧವುಳ್ಳ ಅಬ್ರಹ್ಮ (ಕುಶೀಲ)ವನ್ನೂ, ವೀತರಾಗನಿರ್ವಿಕಲ್ಪಸಮಾಧಿಯನ್ನು ಕೆಡಿಸುವ ಮನಸ್ಸಿನ ಸಂಕಲ್ಪ-ವಿಕಲ್ಪಗಳನ್ನೂ ಜಯಿಸಿ ಶುದ್ಧಾತ್ಮಾನುಭವವನ್ನು ಮಾಡಿಕೊಳ್ಳೆಂದು ಭಾವವು.

**ವೇಯಹಿಂ ಸತ್ಥಹಿಂ ಇಂದಿಯಹಿಂ, ಜೋ ಜಿಯ ಮುಣಹು ಣ ಜಾಇ ।**
**ಣಿಮ್ಮಲ-ಝಾಣಹಂ ಜೋ ವಿಸಉ, ಸೋ ಪರಮಪ್ಪು ಅಣಾಇ ॥ ೨೩ ॥**

"ವೇದೈಃ ಶಾಸ್ತ್ರೈರಿಂದ್ರಿಯೈಃ ಯೋ ಜೀವ ಮಂತುಂ ನ ಯಾತಿ ।
ನಿರ್ಮಲಧ್ಯಾನಸ್ಯ ಯೋ ವಿಷಯಃ ಸ ಪರಮಾತ್ಮಾ ಅನಾದಿಃ ॥ ೨೩ ॥"

**ಅನ್ವಯಾರ್ಥ:**—**ಜೋ**—ಯಾವ ಶುದ್ಧಾತ್ಮನು **ವೇಯಹಿಂ ಸತ್ಥಹಿಂ ಇಂದಿಯಹಿಂ**—ಕೇವಲಿಗಳ ದಿವ್ಯವಾಣೀರೂಪವಾದ ವೇದಗಳಿಂದಲೂ, ಮಹಾಮುನಿಗಳ ವಚನರೂಪವಾದ ಶಾಸ್ತ್ರಗಳಿಂದಲೂ, ಇಂದ್ರಿಯಗಳಿಂದಲೂ **ಮುಣಹು ಣ ಜಾಇ**—ತಿಳಿಯಲು ಬರುವುದಿಲ್ಲವೋ **ಜೋ**—ಯಾವ ಆತ್ಮನು **ಣಿಮ್ಮಲ-ಝಾಣಹಂ**—ನಿರ್ಮಲವಾದ ಧ್ಯಾನಕ್ಕೆ **ವಿಸಉ**—ವಿಷಯ (ಗಮ್ಯ)ನಾಗಿರುವನೋ **ಜಿಯ ಸೋ**

**ಪರಮಪ್ಪ ಅಣಾಇ**— ಜೀವನೇ! ಆ ಪರಮಾತ್ಮನು ಅನಾದಿ (ಆದ್ಯಂತರಹಿತ)ಯಾಗಿರುವನು ಎಂದು ತಿಳಿ

**ವಿಶೇಷಾರ್ಥ:**–ವೇದ, ಶಾಸ್ತ್ರ ಇವೆರಡು ಶಬ್ದಾರ್ಥಸ್ವರೂಪವುಳ್ಳವುಗಳು. ಆತ್ಮನು ಶಬ್ದಾತೀತನಾಗಿರುವನು ಇಂದ್ರಿಯ-ಮನಸ್ಸುಗಳು ವಿಕಲ್ಪರೂಪಗಳಾಗಿದ್ದು ಮೂರ್ತ (ಸ್ಪರ್ಶರಸಗಂಧವರ್ಣಗಳುಳ್ಳವು)ಗಳಾಗಿವೆ ಮತ್ತು ಮೂರ್ತಪದಾರ್ಥಗಳನ್ನು ತಿಳಿಯುತ್ತವೆ ಆದರೆ ಆತ್ಮನು ನಿರ್ವಿಕಲ್ಪನೂ ಅಮೂರ್ತನೂ ಆಗಿರುವನು. ಆದಕಾರಣ ಈ ಮೂರು ಸಾಧನಗಳಿಂದಲೂ ಆತ್ಮನನ್ನು ತಿಳಿಯಲು ಸಾಧ್ಯವಾಗದು. ಆತನು ಕೇವಲ ಧ್ಯಾನಗಮ್ಯನಾಗಿರುವುದರಿಂದ ಮಿಥ್ಯಾತ್ವ, ಅವಿರತಿ, ಪ್ರಮಾದ, ಕಷಾಯ ಮತ್ತು ಯೋಗಗಳೆಂಬ ಐದು ಪ್ರತ್ಯಯ (ಬಂಧಕಾರಣ)ಗಳಿಂದ ರಹಿತವೂ ನಿರ್ಮಲವೂ, ಸ್ವಶುದ್ಧಾತ್ಮ-ಸಂವಿತ್ತಿ (ಜ್ಞಾನ)ಯಿಂದುಂಟಾದ ನಿತ್ಯಾನಂದೈಕಸುಖಾಮೃತಾಸ್ವಾದನರೂಪವಾಗಿ ಪರಿಣಮಿಸುವುದೂ ಆದ ಧ್ಯಾನದಿಂದ ಮಾತ್ರ ತಿಳಿಯಲ್ಪಡುವನು. ಈ ವಿಷಯವನ್ನು ಬೇರೊಂದು ಗ್ರಂಥದಲ್ಲಿ ಹೀಗೆ ಹೇಳಿರುವರು.—**"ಅನ್ಯಥಾ ವೇದಪಾಂಡಿತ್ಯಂ ಶಾಸ್ತ್ರಪಾಂಡಿತ್ಯಮನ್ಯಥಾ । ಅನ್ಯಥಾ ಪರಮಂ ತತ್ತ್ವಂ ಲೋಕಾಃ ಕ್ಲಿಶ್ಯಂತಿ ಚಾನ್ಯಥಾ ॥"** ಇದರ ಅಭಿಪ್ರಾಯವೇನಂದರೆ—"ನಯ ಪ್ರಮಾಣ ಮೊದಲಾದ ಸ್ವರೂಪವುಳ್ಳ ವೇದಗಳ ಹಾಗೂ ಶಾಸ್ತ್ರಗಳ ತಿಳುವಳಿಕೆಯು ಬೇರೊಂದು ರೀತಿಯಾಗಿದೆ ನಯ-ಪ್ರಮಾಣ, ನಿಕ್ಷೇಪಾದಿಗಳಿಂದ ರಹಿತವಾದ ಪರಮತತ್ತ್ವ (ಪರಮಾತ್ಮತತ್ತ್ವ)ವು ಇನ್ನೊಂದು ಪ್ರಕಾರವಾಗಿದೆ. ಜನರು ಮತ್ತೊಂದು ರೀತಿಯ (ಮಿಥ್ಯಾ) ಮಾರ್ಗವನ್ನನುಸರಿಸಿ ವ್ಯರ್ಥವಾಗಿ ಕ್ಲೇಶಪಡುತ್ತಾರೆ." ಆದಕಾರಣ ಯಥಾರ್ಥಸ್ವರೂಪವುಳ್ಳ ಶುದ್ಧಾತ್ಮನೊಬ್ಬನೇ ಉಪಾದೇಯನಾಗಿರುತ್ತಾನೆಂದು ಭಾವಾರ್ಥವು

**ಕೇವಲದಂಸಣಣಾಣಮಉ, ಕೇವಲಸುಕ್ಖಸಹಾಉ ।**
**ಕೇವಲವೀರಿಉ ಸೋ ಮುಣಹಿ, ಜೋ ಜಿ ಪರಾವರು ಭಾಉ ॥ ೨೪ ॥**

"ಕೇವಲದರ್ಶನಜ್ಞಾನಮಯಃ ಕೇವಲಸುಖಸ್ವಭಾವಃ ।
ಕೇವಲವೀರ್ಯಸ್ತಂ ಮನ್ಯಸ್ವ ಯ ಏವ ಪರಾಪರೋ ಭಾವಃ ॥ ೨೪ ॥"

**ಅನ್ವಯಾರ್ಥ:**—**ಜೋ**—ಯಾವನು **ಕೇವಲದಂಸಣಣಾಣಮಉ**—ಪರವಸ್ತುಗಳ ಆಶ್ರಯ (ಸಹಾಯ)ವಿಲ್ಲದ ಕೇವಲದರ್ಶನಮಯನೂ, ಕೇವಲಜ್ಞಾನಮಯನೂ **ಕೇವಲಸುಕ್ಖಸಹಾಉ**—ಕೇವಲ ಆನಂದಮಯವಾದ ಸುಖಸ್ವಭಾವವುಳ್ಳವನೂ **ಕೇವಲವೀರಿಉ**—ಅನಂತವೀರ್ಯಸ್ವಭಾವವುಳ್ಳವನೂ ಆಗಿರುವನೋ **ಜೋಜಿ**—ಆ ಶುದ್ಧಾತ್ಮನನ್ನೇ **ಮುಣಹಿ ಪರಾವರು ಭಾಉ**—ಉತ್ತಮರಾದ ಅರ್ಹತ್ಪರಮೇಷ್ಠಿಗಳಿಗಿಂತಲೂ ಉತ್ಕೃಷ್ಟನಾದ ಮುಕ್ತಿಗತ-ಶುದ್ಧಾತ್ಮನೆಂದು ತಿಳಿ.

**ಭಾವಾರ್ಥ:**—ಪರಮಾತ್ಮರಲ್ಲಿ ಸಕಲಪರಮಾತ್ಮರೆಂದೂ ನಿಷ್ಕಲಪರಮಾತ್ಮರೆಂದೂ ಎರಡು ಭೇದಗಳಿವೆ. ಸಕಲ ಅಂದರೆ ಶರೀರಸಹಿತರೂ ಆಕಾರವುಳ್ಳವರೂ

ಆದ ಅರ್ಹತ್ಪರಮೇಷ್ಠಿಗಳಿಗೆ 'ಸಕಲಪರಮಾತ್ಮ'ರೆಂದೂ ಶರೀರರಹಿತರೂ ನಿರಾಕಾರರೂ ಆದ ಸಿದ್ಧಪರಮೇಷ್ಠಿಗಳಿಗೆ 'ನಿಷ್ಕಲಪರಮಾತ್ಮ'ರೆಂದೂ ಹೆಸರು. ಅಂತಹ ಸಿದ್ಧಸ್ವರೂಪರಾದ ಶುದ್ಧಾತ್ಮರೇ ಸರ್ವವಿಧದಿಂದಲೂ ಧ್ಯಾನಿಸುವುದಕ್ಕೆ ಯೋಗ್ಯರಾಗಿರುವರು.

**ಏಯಹಿಂ ಜುತ್ತಉ ಲಕ್ಖಣಹಿಂ, ಜೋ ಪರು ಣಿಕ್ಕಲು ದೇಉ ।**
**ಸೋ ತಹಿಂ ಣಿವಸಇ ಪರಮಪಏ, ಜೋ ತಇಲೋಯಹಂ ಝೇಉ ॥ ೨೫ ॥**

ಏತೈರ್ಯುಕ್ತೋ ಲಕ್ಷಣೈಃ ಯಃ ಪರೋ ನಿಷ್ಕಲೋ ದೇವಃ ।
ಸ ತತ್ರ ನಿವಸತಿ ಪರಮಪದೇ ಯಃ ತ್ರೈಲೋಕ್ಯಸ್ಯ ಧ್ಯೇಯಃ ॥ ೨೫ ॥"

**ಅನ್ವಯಾರ್ಥ:— ಏಯಹಿಂ ಜುತ್ತಉ ಲಕ್ಖಣಹಿಂ**— ಹಿಂದೆ ಹೇಳಲ್ಪಟ್ಟ 'ತ್ರಿಭುವನವಂದಿತನು' ಮೊದಲಾದ ಈ ಲಕ್ಷಣಗಳಿಂದ ಕೂಡಿರುವ **ಜೋ ಪರು ಣಿಕ್ಕಲು ದೇಉ**— ಪರಮಾತ್ಮಸ್ವಭಾವವುಳ್ಳವನೂ, ಔದಾರಿಕ, ವೈಕ್ರಿಯಕ, ಆಹಾರಕ, ತೈಜಸ, ಕಾರ್ಮಣಗಳೆಂಬೈದು ವಿಧದ ಶರೀರಗಳಿಂದ ರಹಿತನೂ ತ್ರಿಭುವನಾರಾಧ್ಯನೂ ಆದ ಯಾವ ಶುದ್ಧಾತ್ಮನಿರುವನೋ **ಸೋ ತಹಿಂ ಣಿವಸಇ ಪರಮಪಏ**— ಅವನು ಆ ಲೋಕದ ಅಗ್ರಭಾಗದಲ್ಲಿರುವ ಪರಮಪದ (ಮೋಕ್ಷ)ದಲ್ಲಿ ವಿರಾಜಮಾನನಾಗಿರುತ್ತಾನೆ **ಜೋ ತಇಲೋಯಹಂ ಝೇಉ**— ಅಂತಹ ಯಾವ ಸಿದ್ಧಾತ್ಮನು ಮೂರು ಲೋಕಗಳ ಭವ್ಯರಿಗೆ ಧ್ಯೇಯ (ಧ್ಯಾನಮಾಡುವುದಕ್ಕೆ ಯೋಗ್ಯ)ನಾಗಿರುತ್ತಾನೆ

**ಭಾವಾರ್ಥ:**— ಇಲ್ಲಿ ಸಿದ್ಧಪರಮೇಷ್ಠಿಗಳ ವರ್ಣನೆಯನ್ನು ಮಾಡಿರುವರು. ಅವರಂತೆಯೇ ತನ್ನಾತ್ಮನ ಸ್ವರೂಪವೂ ಇರುತ್ತದೆಂದೂ ಅದೇ ಧ್ಯಾನಯೋಗ್ಯವಾಗಿರುವುದೆಂದೂ ಮುಖ್ಯಾಭಿಪ್ರಾಯವು.

ಹೀಗೆ ಮೂರುಪ್ರಕಾರವಾದ ಆತ್ಮರ ಸ್ವರೂಪವನ್ನು ನಿರೂಪಿಸುವ ಪ್ರಥಮಮಹಾಧಿಕಾರದಲ್ಲಿ ಮುಕ್ತಿಪ್ರಾಪ್ತರಾದ ಸಿದ್ಧಜೀವರ ವ್ಯಾಖ್ಯಾನದ ಮುಖ್ಯತೆಯಿಂದ ಹತ್ತು ದೋಹಕ-ಸೂತ್ರಗಳು ಮುಗಿದುವು. ಇನ್ನು ಮುಂದೆ ಐದು ಪ್ರಕ್ಷೇಪಕಗಳಿಂದ ಕೂಡಿದ ಇಪ್ಪತ್ತೈದು ದೋಹಕಸೂತ್ರಗಳಿಂದ, ಮುಕ್ತಿಯಲ್ಲಿ ಪ್ರಕಟರೂಪವಾಗಿ ಪರಮಾತ್ಮನಿರುವಂತೆ ಶುದ್ಧನಿಶ್ಚಯನಯದಿಂದ ಶರೀರದಲ್ಲಿಯೂ ಶಕ್ತಿರೂಪದಿಂದ ಪರಮಾತ್ಮನಿರುತ್ತಾನೆಂದು ಮೊದಲಾಗಿ ಪರಮಾತ್ಮನ ಸ್ವರೂಪವನ್ನು ನಿರೂಪಿಸುತ್ತಾರೆ —

**ಜೇಹಉ ಣಿಮ್ಮಲು ಣಾಣಮಉ, ಸಿದ್ಧಿಹಿ ಣಿವಸಇ ದೇಉ ।**
**ತೇಹಉ ಣಿವಸಇ ಬಂಭು ಪರು, ದೇಹಹಂ ಮಂ ಕರಿ ಭೇಉ ॥ ೨೬ ॥**

"ಯಾದೃಶೋ ನಿರ್ಮಲೋ ಜ್ಞಾನಮಯಃ ಸಿದ್ಧೌ ನಿವಸತಿ ದೇವಃ ।
ತಾದೃಶೋ ನಿವಸತಿ ಬ್ರಹ್ಮಾ ಪರಃ ದೇಹೇ ಮಾ ಕುರು ಭೇದಮ್ ॥ ೨೬ ॥"

**ಅನ್ವಯಾರ್ಥ:— ಜೇಹಉ—** ಯಾವ ಪ್ರಕಾರವಾಗಿ ಕೇವಲಜ್ಞಾನಾದಿಗಳ ಪ್ರಕಟಸ್ವರೂಪವುಳ್ಳವನೂ **ಣಿಮ್ಮಲು—** ಭಾವಕರ್ಮ, ದ್ರವ್ಯಕರ್ಮ, ನೋಕರ್ಮ ರೂಪವಾದ ಮಲದಿಂದ ಬಿಡಲ್ಪಟ್ಟವನೂ **ಣಾಣಮಉ—** ಕೇವಲಜ್ಞಾನಾಂತರ್ಭೂತ ವಾದ ಅನಂತಗುಣಸ್ವರೂಪವುಳ್ಳವನೂ **ದೇಉ—** ಪರಮ ಆರಾಧ್ಯನೂ ಆದ ಸಿದ್ಧಪರ ಮೇಷ್ಠಿಯು **ಸಿದ್ಧಿಹಿ ಣಿವಸಇ—** ಮೋಕ್ಷದಲ್ಲಿ ವಾಸಿಸುತ್ತಿರುವನೋ **ತೇಹ ಉ—** ಅದೇ ಪ್ರಕಾರವಾಗಿ ಸರ್ವಲಕ್ಷಣಗಳಿಂದ ಯುಕ್ತನಾದ **ಬಂಭು ಪರು—** ಶುದ್ಧಬುದ್ಧ (ಜ್ಞಾನ) ಸ್ವಭಾವವುಳ್ಳ ಉತ್ಕೃಷ್ಟನಾದ ಪರಮಾತ್ಮನು **ದೇಹಹಂ—** ಶರೀರದಲ್ಲಿ **ಣಿವಸಇ—** ಶುದ್ಧದ್ರವ್ಯಾರ್ಥಿಕನಯದಿಂದ ಶಕ್ತಿರೂಪದಿಂದಿರುವನು. ಆದುದರಿಂದ ಎಲೈ ಪ್ರಭಾಕರಭಟ್ಟನೇ! ನೀನು **ಮಂ ಕರಿ ಭೇಉ—** ಸಿದ್ಧಪರಮಾತ್ಮನಲ್ಲಿಯೂ ತನ್ನಾತ್ಮನಲ್ಲಿಯೂ ಭೇದವನ್ನು ಮಾಡಬೇಡ ಹೀಗೆಯೇ ಶ್ರೀ ಕುಂದಕುಂದಾಚಾರ್ಯರೂ 'ಮೋಕ್ಷಪ್ರಾಭೃತ"ದಲ್ಲಿ ಹೇಳಿರುವರು —**"ಣಮಿಏಹಿಂ ಜಂ ಣಮಿಜ್ಜಇ ಝಾಇ ಜ್ಜಇ ಝಾಇಏಹಿಂ ಅಣವರಯಂ। ಥುವ್ವಂತೇಹಿಂ ಥುಣಿಜ್ಜಇ ದೇಹತ್ಥಂ ಕಿಂ ಪಿ ತಂ ಮುಣಹ ॥"** ಅರ್ಥಾತ್ "ನಮಸ್ಕರಿಸಲು ಯೋಗ್ಯರಾದ ಮಹಾಪುರುಷ ರಿಂದಲೂ ನಮಸ್ಕರಿಸಲ್ಪಡುವುದೂ, ಸ್ತುತಿ (ಸ್ತೋತ್ರ) ಮಾಡಲು ಯೋಗ್ಯರಾದ ಸತ್ಪು ರುಷರಿಂದಲೂ ಸ್ತೋತ್ರಮಾಡಲ್ಪಡುವುದೂ, ಧ್ಯಾನಿಸುವುದಕ್ಕೆ ಯೋಗ್ಯರಾದ ಆಚಾರ್ಯ ಪರಮೇಷ್ಠಿಗಳು ಮೊದಲಾದವರಿಂದಲೂ ನಿತ್ಯವೂ ಧ್ಯಾನಮಾಡಲ್ಪಡುವುದೂ ಆದ ಆತ್ಮ ನೆಂಬುದೊಂದು ಪದಾರ್ಥವು ದೇಹದಲ್ಲಿರುತ್ತದೆ ಅದನ್ನೇ ನೀನು ಪರಮಾತ್ಮನೆಂದು ತಿಳಿ" ಅಂತಹ ಪರಮಾತ್ಮನೇ ಉಪಾದೇಯನಾಗಿರುತ್ತಾನೆಂದು ಭಾವವು.

**ಜೇಂ ದಿಟ್ಠೇಂ ತುಟ್ಟಂತಿ ಲಹು, ಕಮ್ಮಇಂ ಪುವ್ವ-ಕಿಯಾಇಂ।**
**ಸೋ ಪರು ಜಾಣಹಿ ಜೋಇಯಾ, ದೇಹಿ ವಸಂತು ಣ ಕಾಇಂ ॥ ೨೭ ॥**

ಯೇನ ದೃಷ್ಟೇನ ತ್ರುಟ್ಯಂತಿ ಲಘು ಕರ್ಮಾಣಿ ಪೂರ್ವಕೃತಾನಿ।
ತಂ ಪರಂ ಜಾನಾಸಿ ಯೋಗಿನ್ ದೇಹೇ ವಸಂತಂ ನ ಕಿಮ್ ॥ ೨೭ ॥

**ಅನ್ವಯಾರ್ಥ:— ಜೋಇಯಾ—** ಎಲೈ ಯೋಗಿಯೇ! **ಜೇಂ ದಿಟ್ಠೇಂ—** ಪರಮ ಸಮಾಧಿರೂಪವಾದ ಕಣ್ಣಿನಿಂದ ನೋಡಲ್ಪಟ್ಟ ಯಾವ ಪರಮಾತ್ಮನಿಂದ **ಲಹು—** ಶೀಘ್ರವಾಗಿ **ಪುವ್ವಕಿಯಾಇಂ—** ಪೂರ್ವೋಪಾರ್ಜಿತಗಳಾದ **ಕಮ್ಮಇಂ—** ಕರ್ಮ ಗಳು **ತುಟ್ಟಂತಿ** — ಚೂರ್ಣ (ನಾಶ)ವಾಗುತ್ತವೆಯೋ **ದೇಹಿ ವಸಂತು—** ದೇಹದಲ್ಲಿ ವಾಸವಾಗಿರುವ **ಸೋ ಪರು—** ಆ ಪರಮಾತ್ಮನನ್ನು **ಜಾಣಹಿ ಣ ಕಾಇಂ—** ನೀನು ತಿಳಿಯುವುದಿಲ್ಲವೇನು?

**ಭಾವಾರ್ಥ:** — ಸದಾನಂದೈಕರೂಪವಾದ ವೀತರಾಗನಿರ್ವಿಕಲ್ಪಸಮಾಧಿಯೆಂಬ ನಿರ್ಮಲ-ನೇತ್ರದಿಂದ ಪರಮಾತ್ಮನನ್ನು ನೋಡಿದಮಾತ್ರಕ್ಕೆ, ಪರಮಾತ್ಮತ್ವಕ್ಕೆ ಪ್ರತಿಬಂಧಕ ಗಳೂ ಸ್ವಸಂವೇದನಜ್ಞಾನದ ಅಭಾವದಿಂದ ಪೂರ್ವದಲ್ಲಿ ಸಂಪಾದಿಸಲ್ಪಟ್ಟವುಗಳೂ

ಆದ ಕರ್ಮಗಳು ಅಂತರ್ಮುಹೂರ್ತದಲ್ಲಿ ನಾಶವಾಗುತ್ತವೆ ಅಂತಹ ನಿತ್ಯಾನಂದೈಕ ಸ್ವಭಾವವುಳ್ಳನನೂ ಪರಮೋತ್ಕೃಷ್ಟನೂ ಆದ ಪರಮಾತ್ಮನು ತನ್ನ ದೇಹದಲ್ಲಿರುತ್ತಿದ್ದರೂ ಎಲೈ ಯೋಗಿಯೇ! ನೀನೇಕೆ ಆತನನ್ನು ತಿಳಿಯುವುದಿಲ್ಲ? ಅಂದರೆ, ಅಂತಹ ಪರಮಾತ್ಮನನ್ನೇ ತಿಳಿದು ಧ್ಯಾನಿಸಬೇಕೆಂದು ಭಾವವು

**ಜಿತ್ಥು ಣ ಇಂದಿಯ-ಸುಹದುಹಇಂ, ಜಿತ್ಥು ಣ ಮಣವಾವಾರು ।**
**ಸೋ ಅಪ್ಪಾ ಮುಣಿ ಜೀವ ತುಹುಂ, ಅಣ್ಣು ಪರಿಂ ಅವಹಾರು ॥ ೨೮ ॥**

"ಯತ್ರ ನೇಂದ್ರಿಯಸುಖದುಃಖಾನಿ ಯತ್ರ ನ ಮನೋವ್ಯಾಪಾರಃ ।
ತಂ ಆತ್ಮಾನಂ ಮನ್ಯಸ್ವ ಜೀವ ತ್ವಂ ಅನ್ಯತ್ಪರಮುಪಹರ ॥ ೨೮ ॥"

**ಅನ್ವಯಾರ್ಥ:— ಜಿತ್ಥು** — ಯಾವ ಶುದ್ಧಾತ್ಮಸ್ವಭಾವದಲ್ಲಿ **ಣ ಇಂದಿಯ ಸುಹದುಹಇಂ** — ಆಕುಲತೆಯನ್ನುಂಟುಮಾಡುವ ಇಂದ್ರಿಯಜನಿತ ಸುಖದುಃಖಗಳು ಇರುವುದಿಲ್ಲವೋ **ಜಿತ್ಥು ಣ ಮಣವಾವಾರು** — ಯಾವುದರಲ್ಲಿ ಸಂಕಲ್ಪ-ವಿಕಲ್ಪರೂಪವಾದ ಮನೋವ್ಯಾಪಾರವಿರುವುದಿಲ್ಲವೊ **ಸೋ** — ಪೂರ್ವೋಕ್ತ ಲಕ್ಷಣವುಳ್ಳ ಆ ಪದಾರ್ಥವನ್ನು **ಜೀವ ತುಹುಂ** — ಎಲೈ ಜೀವನೇ! ನೀನು **ಅಪ್ಪಾ ಮುಣಿ** — ಸ್ವಶುದ್ಧಾತ್ಮನನ್ನಾಗಿ ತಿಳಿ **ಅಣ್ಣು ಪರಿಂ ಅವಹಾರು** — ಉಳಿದೆಲ್ಲ ವಿಭಾವಗಳನ್ನು ಬಿಡು

**ಭಾವಾರ್ಥ:**— ಶುದ್ಧಾತ್ಮಸ್ವಭಾವದಲ್ಲಿ ಅನಾಕುಲತ್ವಲಕ್ಷಣವುಳ್ಳ ಪಾರಮಾರ್ಥಿಕ ಸುಖಕ್ಕೆ ವಿಪರೀತಗಳಾದ ಆಕುಲತೆಯನ್ನುಂಟುಮಾಡುವ ಇಂದ್ರಿಯಜನ್ಯಸುಖದುಃಖಗಳೂ, ನಿರ್ವಿಕಲ್ಪ-ಪರಮಾತ್ಮತ್ವದಿಂದ ವಿಲಕ್ಷಣವಾದ ಸಂಕಲ್ಪ-ವಿಕಲ್ಪರೂಪವಾದ ಮನೋವ್ಯಾಪಾರವೂ ಇರುವುದಿಲ್ಲ. ಅಂತಹ ನಿತ್ಯಾನಂದೈಕಸ್ವರೂಪವುಳ್ಳವನಾದ ಸ್ವಶುದ್ಧಾತ್ಮನನ್ನು ವೀತರಾಗನಿರ್ವಿಕಲ್ಪಸಮಾಧಿಯಲ್ಲಿ ನಿರತನಾಗಿ ತಿಳಿಯಬೇಕೆಂದೂ, ಪರಮಾತ್ಮಸ್ವಭಾವಕ್ಕೆ ವಿಪರೀತಗಳಾದ ಪಂಚೇಂದ್ರಿಯವಿಷಯಾಭಿಲಾಷೆಯೇ ಮೊದಲಾದ ವಿಭಾವಗಳನ್ನು ಸರ್ವಪ್ರಕಾರದಿಂದಲೂ ಬಿಡಬೇಕೆಂದೂ ತಾತ್ಪರ್ಯವು ನಿರ್ವಿಕಲ್ಪಸಮಾಧಿಗೆ ಸರ್ವತ್ರ 'ವೀತರಾಗ' ಎಂಬ ವಿಶೇಷಣವನ್ನು ಕೊಟ್ಟಿದೇಕೆ? ಎಂಬ ಪ್ರಶ್ನೆಗೆ ಉತ್ತರವೇನಂದರೆ,— "ವೀತರಾಗತ್ವದ ಕಾರಣದಿಂದಲೇ ನಿರ್ವಿಕಲ್ಪಸಮಾಧಿಯುಂಟಾಗುತ್ತದೆ. ಅಂದರೆ ವೀತರಾಗತ್ವವಿರುವಲ್ಲಿ ನಿರ್ವಿಕಲ್ಪಸಮಾಧಿಯು ಸಿದ್ಧಿಸುತ್ತದೆ ಎಂಬೀ ರಹಸ್ಯವನ್ನು ತಿಳಿಸುವುದಕ್ಕಾಗಿಯೂ ಅಥವಾ ಸರಾಗಿ (ರಾಗಯುಕ್ತರು)ಗಳೂ ಸಹ ತಾವು ನಿರ್ವಿಕಲ್ಪಸಮಾಧಿಯಲ್ಲಿರುತ್ತೇವೆಂದು ಹೇಳುವುದನ್ನು ನಿಷೇಧಿಸುವುದಕ್ಕಾಗಿಯೂ ನಿರ್ವಿಕಲ್ಪಸಮಾಧಿಗೆ ವೀತರಾಗವೆಂಬ ವಿಶೇಷಣವನ್ನು ಕೊಟ್ಟಿದಾಗಿದೆ. ಹೀಗೆಯೇ 'ನಿರ್ದೋಷಪರಮಾತ್ಮ' ಮೊದಲಾದ ಪದಗಳಲ್ಲಿಯೂ 'ನಿರ್ದೋಷ' ಮೊದಲಾದ ವಿಶೇಷಣಗಳನ್ನು ಕೊಟ್ಟಿದರ ಪ್ರಯೋಜನವನ್ನು ತಿಳಿಯಬೇಕು.

**ದೇಹಾದೇಹಹಿಂ ಜೋ ವಸಇ, ಭೇಯಾಭೇಯಣಯೇಣ ।**
**ಸೋ ಅಪ್ಪಾ ಮುಣಿ ಜೀವ ತುಹುಂ, ಕಿಂ ಅಣ್ಣೇಂ ಬಹುಏಣ ॥ ೨೯ ॥**

"ದೇಹಾದೇಹಯೋಃ ಯೋ ವಸತಿ ಭೇದಾಭೇದನಯೇನ ।
ತಮಾತ್ಮಾನಂ ಮನ್ಯಸ್ವ ಜೀವ ತ್ವಂ ಕಿಮನ್ಯೇನ ಬಹುನಾ ॥ ೨೯ ॥"

**ಅನ್ವಯಾರ್ಥ:— ಜೋ —** ಆವನು **ದೇಹಾದೇಹಹಿಂ ವಸಇ ಭೇಯಾಭೇಯಣಯೇಣ**— ಅನುಪಚರಿತಾಸದ್ಭೂತವ್ಯವಹಾರನಯದಿಂದ (ಅಭೇದನಯದಿಂದ) ಆತ್ಮನಿಂದ ಅಭಿನ್ನವಾದ ಸ್ವದೇಹದಲ್ಲಿ ವಾಸಮಾಡಿಕೊಂಡಿರುವನೋ, ಮತ್ತು ಶುದ್ಧ ನಿಶ್ಚಯನಯ (ಭೇದನಯ)ದಿಂದ ತನ್ನ ದೇಹದಿಂದ ಭಿನ್ನ (ಬೇರೆ)ವಾದ ಆತ್ಮಸ್ವರೂಪದಲ್ಲಿರುತ್ತಾನೋ **ಸೋ ಅಪ್ಪಾ ಮುಣಿ ಜೀವ ತುಹುಂ**— ಅವನನ್ನು ಜೀವನೇ! ನೀನು ಆತ್ಮನನ್ನಾಗಿ (ಆತ್ಮನೆಂದು) ತಿಳಿ **ಕಿಂ ಅಣ್ಣೇಂ ಬಹುಎಣ**— ಶುದ್ಧಾತ್ಮನಿಗಿಂತ ಭಿನ್ನಗಳಾದ ಇತರ ದೇಹರಾಗಾದಿಗಳಿಂದೇನು ಪ್ರಯೋಜನ?

**ತಾತ್ಪರ್ಯ:**— ಯಾವ ಪರಮಾತ್ಮನು ದೇಹದಲ್ಲಿರುತ್ತಿದ್ದರೂ ನಿಶ್ಚಯನಯದಿಂದ ದೇಹಸ್ವರೂಪನಾಗಿರುವುದಿಲ್ಲವೊ, ಅಂತಹ ಸ್ವಶುದ್ಧಾತ್ಮನೇ ಉಪಾದೇಯನಾಗಿರುತ್ತಾನೆ.

**ಜೀವಾಜೀವ ಮ ಏಕ್ಕು ಕರಿ, ಲಕ್ಖಣ-ಭೇಏಂ ಭೇಉ ।**
**ಜೋ ಪರು ಸೋ ಪರು ಭಣಮಿ ಮುಣಿ, ಅಪ್ಪಾ ಅಪ್ಪ ಅಭೇಉ ॥ ೩೦ ॥**

"ಜೀವಾಜೀವೌ ಮಾ ಏಕೌ ಕುರು ಲಕ್ಷಣಭೇದೇನ ಭೇದಃ ।
ಯತ್ಪರಂ ತತ್ಪರಂ ಭಣಾಮಿ ಮನ್ಯಸ್ವ ಆತ್ಮನ ಆತ್ಮನಾ ಅಭೇದಃ ॥ ೩೦ ॥"

**ಅನ್ವಯಾರ್ಥ:**— ಎಲೈ ಪ್ರಭಾಕರಭಟ್ಟನೇ! **ಜೀವಾಜೀವ ಮ ಏಕ್ಕು ಕರಿ**— ಜೀವ – ಅಜೀವಗಳನ್ನು ಒಂದನ್ನಾಗಿ ಮಾಡಬೇಡ (ತಿಳಿಯಬೇಡ) ಏಕೆಂದರೆ **ಲಕ್ಖಣಭೇಏಂ ಭೇಉ**— ಲಕ್ಷಣಭೇದದಿಂದ (ಜೀವ ಮತ್ತು ಅಜೀವದಲ್ಲಿ) ಭೇದವಿರುತ್ತದೆ **ಜೋ ಪರು**— ಪರವಸ್ತುಗಳ ಸಂಬಂಧದಿಂದುಂಟಾದ ಯಾವ ರಾಗಾದಿ ವಿಭಾವ (ವಿಕಾರ)ಗಳಿವೆಯೋ **ಸೋ ಪರು**— ಅವುಗಳನ್ನು ಪರ (ಆತ್ಮನಿಂದ ಭಿನ್ನವಾದ) ವಸ್ತುಗಳನ್ನಾಗಿಯೂ, ಮತ್ತು **ಅಪ್ಪಾ ಅಪ್ಪ ಅಭೇಉ**— ಆತ್ಮನಿಗೆ ಆತ್ಮನೊಡನೆ ಅಭೇದವಿರುತ್ತದೆಂದೂ **ಮುಣಿ**— ತಿಳಿ **ಭಣಮಿ**—(ಹೀಗ ನಾನು) ಹೇಳುತ್ತೇನೆ

**ಭಾವಾರ್ಥ:** ಸ್ಪರ್ಶರಸಗಂಧವರ್ಣಶಬ್ದಾದಿಗಳಿಂದ ರಹಿತವಾದ ಶುದ್ಧ-ಚೈತನ್ಯವು ಜೀವನ ಲಕ್ಷಣವಾಗಿರುತ್ತದೆ. ಇದನ್ನು ಸಮಯಸಾರ (ಪ್ರಾಭೃತ)ದಲ್ಲಿ ಹೀಗೆ ಹೇಳಿರುವರು.—"**ಅರಸಮರೂವಮಗಂಧಂ ಅವ್ವತ್ತಂ ಚೇದಣಾಗುಣಮಸದ್ದಂ । ಜಾಣ ಅಲಿಂಗಗ್ಗಹಣಂ ಜೀವಮಣಿದ್ದಿಟ್ಠಸಂಠಾಣಂ ॥**" "ಜೀವದ್ರವ್ಯವು ಐದು ವಿಧವಾದ ರಸಗಳಿಂದಲೂ, ಐದು ವಿಧವಾದ ವರ್ಣಗಳಿಂದಲೂ, ಎರಡು ವಿಧವಾದ ಗಂಧಗಳಿಂದಲೂ ರಹಿತವಾದುದೂ, ಪ್ರಕಟ (ದೃಷ್ಟಿಗೋಚರ)ವಲ್ಲದುದೂ, ಚೈತನ್ಯ ಗುಣವುಳ್ಳುದೂ, ಶಬ್ದರಹಿತವಾದುದೂ, ಲಿಂಗಗ್ರಹಣವಿಲ್ಲದುದೂ (ಲಿಂಗರಹಿತವೂ) ಸಂಸ್ಥಾನ (ಆಕಾರ)ವಿಲ್ಲದುದೂ ಅಂದರೆ ನಿರಾಕಾರವೂ ಆಗಿರುತ್ತದೆಂದು ತಿಳಿ"

ಇಂತಹ ಜೀವದ್ರವ್ಯಕ್ಕಿಂತ ಭಿನ್ನವಾದ ಲಕ್ಷಣವುಳ್ಳ ಅಜೀವದ್ರವ್ಯವು—ಜೀವಸಂಬಂಧಿಯೆಂದೂ ಅಜೀವಸಂಬಂಧಿಯೆಂದೂ ಎರಡು ಪ್ರಕಾರವಾಗಿದೆ, ದ್ರವ್ಯಕರ್ಮ, ಭಾವಕರ್ಮ, ನೋಕರ್ಮರೂಪವಾದುದು (ಅಥವಾ ದೇಹರಾಗಾದಿರೂಪವುಳ್ಳದು) ಜೀವಸಂಬಂಧಿ ಅಜೀವದ್ರವ್ಯವಾಗಿದೆ. ಪುದ್ಗಲ ಮೊದಲಾದ ಐದು ವಿಧದ ಅಜೀವಗಳು ಅಜೀವಸಂಬಂಧಿ ಅಜೀವದ್ರವ್ಯಗಳಾಗಿವೆ ಹೀಗೆ ಜೀವ ಮತ್ತು ಅಜೀವಗಳು ಬೇರೆ ಬೇರೆ ಲಕ್ಷಣಗಳುಳ್ಳವುಗಳು ಇದರಿಂದ ಅಜೀವವು ಜೀವನಿಗಿಂತ ಸರ್ವಥಾ ಭಿನ್ನವಾಗಿದೆ ರಾಗಾದಿ ವಿಭಾವ-ಪರಿಣಾಮಗಳು ಜೀವನಲ್ಲಿ ಉಂಟಾಗುವವುಗಳಾದರೂ ಅವು ಕರ್ಮಜನಿತಗಳಾಗಿರುವುದರಿಂದ ಜೀವಭಿನ್ನಗಳಾದ ಪರವಸ್ತುಗಳೇ ಆಗಿರುತ್ತವೆ.

**ಅಮಣು ಅಣಿಂದಿಉ ಣಾಣಮಉ, ಮುತ್ತಿವಿರಹಿಉ ಚಿಮಿತ್ತು ।**
**ಆಪ್ಪಾ ಇಂದಿಯವಿಸಉ ಣವಿ, ಲಕ್ಖಣು ಏಹು ಣಿರುತ್ತು ॥ ೩೧ ॥**

"ಅಮನಾಃ ಅನಿಂದ್ರಿಯೋ ಜ್ಞಾನಮಯಃ ಮೂರ್ತಿವಿರಹಿತಶ್ಚಿನ್ಮಾತ್ರಃ ।
ಆತ್ಮಾ ಇಂದ್ರಿಯವಿಷಯೋ ನೈವ ಲಕ್ಷಣಮೇತನ್ನಿರುಕ್ತಮ್ ॥ ೩೧ ॥"

**ಅನ್ವಯಾರ್ಥ:**—**ಆಮಣು**—ಮನಸ್ಸಿಲ್ಲದವನೂ **ಅಣಿಂದಿಉ**—ಇಂದ್ರಿಯಗಳಿಂದ ರಹಿತನೂ **ಣಾಣಮಉ**—ಕೇವಲಜ್ಞಾನಸ್ವರೂಪನೂ **ಮುತ್ತಿವಿರಹಿಉ**—ಮೂರ್ತಿರಹಿತ (ಅಮೂರ್ತಿ)ನೂ **ಚಿಮಿತ್ತು**—ಚಿನ್ಮಾತ್ರ (ಶುದ್ಧಚೇತನಾಸ್ವರೂಪವುಳ್ಳವ)ನೂ ಆದ **ಅಪ್ಪಾ**—ಶುದ್ಧಾತ್ಮನು **ಇಂದಿಯವಿಸಉ ಣವಿ**—ಇಂದ್ರಿಯಗಳಿಗೆ ಗೋಚರನಾಗಿರುವುದಿಲ್ಲ **ಲಕ್ಖಣು ಏಹು ಣಿರುತ್ತು**—ಆತ್ಮನ ಈ ಲಕ್ಷಣವು ನಿಶ್ಚಿತವಾಗಿ ಹೇಳಲ್ಪಟ್ಟಿದೆ

**ಭಾವಾರ್ಥ:**—ಆತ್ಮನು ಪರಮಾತ್ಮಸ್ವರೂಪಕ್ಕೆ ವಿಪರೀತವಾದ ಮಾನಸಿಕ ವಿಕಲ್ಪಜಾಲರಹಿತನಾಗಿರುವುದರಿಂದ ಅಮನಸ್ಕ (ಮನರಹಿತ)ನೂ, ಅತೀಂದ್ರಿಯ ಶುದ್ಧಾತ್ಮ-ವಿಪರೀತವಾದ ಇಂದ್ರಿಯಸಮೂಹದಿಂದ ರಹಿತನಾಗಿರುವುದರಿಂದ ಅತೀಂದ್ರಿಯನೂ, ಲೋಕಾಲೋಕಗಳನ್ನು ಪ್ರಕಾಶಪಡಿಸುವ ಕೇವಲಜ್ಞಾನಸಹಿತನಾಗಿರುವುದರಿಂದ ಜ್ಞಾನಮಯನೂ, ಅಮೂರ್ತಾತ್ಮನಿಗೆ ವಿಪರೀತವಾದ ಲಕ್ಷಣವುಳ್ಳ, ಸ್ಪರ್ಶರಸಗಂಧವರ್ಣಗಳುಳ್ಳ ಮೂರ್ತಿರಹಿತನಾಗಿರುವುದರಿಂದ ಅಮೂರ್ತಿಯೂ, ಇತರ ದ್ರವ್ಯಗಳಲ್ಲಿಲ್ಲದಿರುವ (ಜೀವದ್ರವ್ಯದಲ್ಲಿ ಮಾತ್ರವಿರುವ) ಶುದ್ಧಚೈತನ್ಯದಿಂದ ಯುಕ್ತನಾಗಿರುವುದರಿಂದ ಶುದ್ಧಚೇತನಾಸ್ವರೂಪನೂ ಆಗಿರುವನು. ಇಂತಹ ಆತ್ಮನು ವೀತರಾಗಸ್ವಸಂವೇದನಜ್ಞಾನಕ್ಕೆ ಮಾತ್ರ ಗೋಚರನಾಗಿರುವನಲ್ಲದೆ ಇಂದ್ರಿಯಗಳಿಗೆ ಗೋಚರನಾಗಿರುವುದಿಲ್ಲ. ಪೂರ್ವೋಕ್ತಲಕ್ಷಣವುಳ್ಳ ಪರಮಾತ್ಮನು ಉಪಾದೇಯನಾಗಿರುತ್ತಾನೆಂದು ಭಾವವು.

**ಭವತಣುಭೋಯವಿರತ್ತಮಣು, ಜೋ ಅಪ್ಪಾ ಝಾಏಇ ।**
**ತಾಸು ಗುರುಕ್ಕೀ ವೆಲ್ಲಡೀ, ಸಂಸಾರಿಣಿ ತುಟ್ಟೇಇ ॥ ೩೨ ॥**

"ಭವತನುಭೋಗವಿರಕ್ತಮನಾ ಯ ಆತ್ಮಾನಂ ಧ್ಯಾಯತಿ ।
ತಸ್ಯ ಗುರ್ವೀ ವಲ್ಲೀ ಸಾಂಸಾರಿಕೀ ತ್ರುಟ್ಯತಿ ॥ ೩೨ ॥"

**ಅನ್ವಯಾರ್ಥ:—ಜೋ—** ಯಾವ ಜೀವನು **ಭವತಣುಭೋಯವಿರತ್ತ ಮಣು—** ಸಂಸಾರ, ಶರೀರ ಮತ್ತು ಭೋಗಗಳಲ್ಲಿ ವಿರಕ್ತವಾದ ಮನಸ್ಸುಳ್ಳವನಾಗಿ **ಅಪ್ಪಾಝಾಏಇ—** ಶುದ್ಧಾತ್ಮನನ್ನು ಧ್ಯಾನಿಸುತ್ತಾನೆಯೋ **ತಾಸು—** ಅವನಿಗೆ **ಗುರುಕ್ಕೀವೆಲ್ಲಡೀ ಸಂಸಾರಿಣಿ—** ಸಂಸಾರರೂಪವಾದ ವಿಶಾಲವಾದ ಬಳ್ಳಿಯು **ತುಟ್ಟೇಇ—** ಚೂರ್ಣ (ನಾಶ)ವಾಗುತ್ತದೆ

**ಭಾವಾರ್ಥ:—** ಆತ್ಮಜ್ಞಾನದ ಬಲದಿಂದ ಸ್ವಶುದ್ಧಾತ್ಮಸುಖದಲ್ಲಿ ಆಸಕ್ತನಾದ ಜೀವನು ಸಂಸಾರಶರೀರಭೋಗಗಳಲ್ಲಿ ವಿರಕ್ತವಾದ(ವೈರಾಗ್ಯವುಳ್ಳ) ಮನಸ್ಸುಳ್ಳವನಾಗಿ ಶುದ್ಧಾತ್ಮನನ್ನು ಧ್ಯಾನಿಸುವುದರಿಂದ ಅವನನ್ನು ಸುತ್ತಿಕೊಂಡಿರುವ ಸಂಸಾರವೆಂಬ ಲತೆ (ಬಳ್ಳಿ)ಯು ಕತ್ತರಿಸಲ್ಪಡುತ್ತದೆ ಅಂದರೆ ಶುದ್ಧಾತ್ಮಧ್ಯಾನದಿಂದ ಸಂಸಾರವು ನಾಶವಾಗಿ ಮುಕ್ತಿ (ಸಂಸಾರದಿಂದ ಬಿಡುಗಡೆ)ಯುಂಟಾಗುವುದೆಂದು ಭಾವವು

**ದೇಹಾ-ದೇವಲಿ ಜೋ ವಸಇ, ದೇಉ ಅಣಾಇ-ಅಣಂತು ।**
**ಕೇವಲಣಾಣ-ಫುರಂತತಣು, ಸೋ ಪರಮಪ್ಪು ಣಿಭಂತು ॥ ೩೩ ॥**

"ದೇಹದೇವಾಲಯೇ ಯಃ ವಸತಿ ದೇವಃ ಅನಾದ್ಯನಂತಃ ।
ಕೇವಲಜ್ಞಾನಸ್ಫುರತ್ತನುಃ ಸ ಪರಮಾತ್ಮಾ ನಿರ್ಭ್ರಾಂತಃ ॥ ೩೩ ॥"

**ಅನ್ವಯಾರ್ಥ:—ಜೋ—** ಯಾವ ಆತ್ಮನು **ದೇಹಾದೇವಲಿ—** ದೇಹವೆಂಬ ದೇವಾಲಯದಲ್ಲಿ **ವಸಇ—** ವ್ಯವಹಾರನಯದಿಂದ ವಾಸವಾಗಿರುತ್ತಾನೋ **ಸೋ—** ಅವನು **ದೇಉ—** ನಿಶ್ಚಯನಯದಿಂದ ಆರಾಧ್ಯ (ಪೂಜ್ಯ)ನೂ **ಅಣಾಇಅಣಂತು—** ಆದಿ ಅಂತ್ಯಗಳಿಲ್ಲದವನೂ **ಕೇವಲಣಾಣ-ಫುರಂತತಣು—** ಕೇವಲಜ್ಞಾನವೆಂಬ ಪ್ರಕಾಶರೂಪವಾದ ಶರೀರವುಳ್ಳವನೂ **ಣಿಭಂತು—** ಭ್ರಾಂತಿ (ಸಂದೇಹ) ರಹಿತನೂ ಆದ **ಪರಮಪ್ಪು—** ಪರಮಾತ್ಮನಾಗಿರುವನು

**ಭಾವಾರ್ಥ:—** ವ್ಯವಹಾರನಯದಿಂದ ಆತ್ಮನು ಮೂರ್ತವೂ, ಸರ್ವಾಶುಚಿಮಯವೂ ಹೇಯವೂ, ಆದ್ಯಂತವುಳ್ಳುದೂ, ಜಡವೂ, ಸಂದೇಹಾಸ್ಪದವೂ ಆದ ದೇಹ (ಶರೀರ)ದಲ್ಲಿ ವಾಸಮಾಡಿಕೊಂಡಿರುವನಾದರೂ ಶುದ್ಧನಿಶ್ಚಯನಯದಿಂದ ಅವನು ಪವಿತ್ರನೂ, ಪೂಜ್ಯನೂ, ಶುದ್ಧದ್ರವ್ಯಾರ್ಥಿಕನಯದಿಂದ ಲೋಕಾಲೋಕಗಳನ್ನು ಪ್ರಕಾಶಪಡಿಸುವ ಕೇವಲಜ್ಞಾನಮಯನೂ, ಭ್ರಾಂತಿರಹಿತನೂ ಆದ ಪರಮಾತ್ಮನಾಗಿರುವನು. ಸರ್ವ ಅಶುಚಿಮೊದಲಾದ ದೇಹಧರ್ಮವನ್ನು ಸ್ಪರ್ಶಮಾಡದ ಆ ಶುದ್ಧಾತ್ಮನೇ ಉಪಾದೇಯನಾಗಿರುತ್ತಾನೆಂದು ಭಾವವು

**ದೇಹೇ ವಸಂತು ವಿ ಣವಿ ಛಿವಇ, ಣಿಯಮೇಂ ದೇಹು ವಿ ಜೋ ಜಿ ।**
**ದೇಹೇಂ ಛಿಪ್ಪಇ ಜೋ ವಿ ಣವಿ, ಮುಣಿ ಪರಮಪ್ಪಉ ಸೋ ಜಿ ॥ ೩೪ ॥**

"ದೇಹೇ ವಸನ್ನಪಿ ನೈವ ಸ್ಪೃಶತಿ ನಿಯಮೇನ ದೇಹಮಪಿ ಯ ಏವ ।
ದೇಹೇನ ಸ್ಪೃಶ್ಯತೇ ಯೋಽಪಿ ನೈವ ಮನ್ಯಸ್ವ ಪರಮಾತ್ಮಾನಂ ತಮೇವ ॥ ೩೪ ॥"

**ಅನ್ವಯಾರ್ಥ:— ಜೋ ಜಿ**— ಯಾವ ಆತ್ಮನು **ದೇಹೇ ವಸಂತು ವಿ**— ಶರೀರ ದಲ್ಲಿ ವಾಸಮಾಡುತ್ತಿದ್ದರೂ **ಣಿಯಮೇಂ**— ನಿಶ್ಚಯನಯದಿಂದ **ದೇಹು ವಿ ಣವಿ ಛಿವಇ**— ದೇಹ (ಶರೀರ)ವನ್ನೂ ಸ್ಪರ್ಶಿಸು (ಮುಟ್ಟು)ವುದಿಲ್ಲ **ದೇಹೇಂ**— ದೇಹದಿಂದ **ಜೋ ವಿ**— ಯಾವ ಆತ್ಮನು ಕೂಡ **ಣವಿ ಛಿಪ್ಪಇ**- ಸ್ಪರ್ಶಿಸಲ್ಪಡುವುದಿಲ್ಲ **ಸೋ ಜಿ**- ಆ ಆತ್ಮನನ್ನೇ **ಪರಮಪ್ಪಉ ಮುಣಿ**— ಪರಮಾತ್ಮನನ್ನಾಗಿ ತಿಳಿ

**ಭಾವಾರ್ಥ:**— ಜೀವನು ಶುದ್ಧಾತ್ಮಾನುಭವಕ್ಕೆ ವಿಪರೀತಗಳಾದ ಕ್ರೋಧ ಮಾನ ಮಾಯಾ ಲೋಭ ಮೊದಲಾದ ವಿಭಾವಪರಿಣಾಮಗಳ ಮೂಲಕ, ಪೂರ್ವೋಪಾರ್ಜಿತ ಕರ್ಮದಿಂದ ನಿರ್ಮಿಸಲ್ಪಟ್ಟಿದೂ ಅಶುಚಿಮಯವೂ ಆದ ಶರೀರದಲ್ಲಿ, ಅನುಪಚರಿತಾ ಸದ್ಭೂತ-ವ್ಯವಹಾರನಯದಿಂದ ವಾಸಮಾಡುತ್ತಿದ್ದರೂ ನಿಶ್ಚಯನಯದಿಂದ (ನಿಶ್ಚಯ ವಾಗಿ) ಆತನು ದೇಹವನ್ನು ಸ್ಪರ್ಶಿಸುವುದಿಲ್ಲ, ದೇಹವೂ ಆತನನ್ನು ಸ್ಪರ್ಶಿಸುವುದಿಲ್ಲ ಅಂತಹ ದೇಹಸ್ಥ ಆತ್ಮನೇ ಪರಮಾತ್ಮನೆಂದು ವೀತರಾಗನಿರ್ವಿಕಲ್ಪಸಮಾಧಿಯಿಂದ ತಿಳಿ ಯಬೇಕೆಂದೂ, ಆ ಶುದ್ಧಾತ್ಮನೇ ದೇಹದಲ್ಲಿ ಮಮತ್ವಪರಿಣಾಮವಿಲ್ಲದಿರುವ ವಿವೇಕಿ ಗಳಾದ ಪುರುಷರಿಂದ ಆರಾಧಿಸಲ್ಪಡುತ್ತಾನೆಂದೂ ಭಾವಾರ್ಥವು

**ಜೋ ಸಮಭಾವ-ಪರಿಟ್ಠಿಯಹಂ, ಜೋಇಹಂ ಕೋಇ ಫುರೇಇ ।**
**ಪರಮಾಣಂದು ಜಣಂತು ಫುಡು, ಸೋ ಪರಮಪ್ಪ ಹವೇಇ ॥ ೩೫ ॥**

"ಯಃ ಸಮಭಾವಪ್ರತಿಷ್ಠಿತಾನಾಂ ಯೋಗಿನಾಂ ಕಶ್ಚಿತ್ ಸ್ಫುರತಿ ।
ಪರಮಾನಂದಂ ಜನಯನ್ ಸ್ಫುಟಂ ಸ ಪರಮಾತ್ಮಾ ಭವತಿ ॥ ೩೫ ॥"

**ಅನ್ವಯಾರ್ಥ:— ಸಮಭಾವಪರಿಟ್ಠಿಯಹಂ**—ಜೀವಿತ, ಮರಣ, ಲಾಭಾಲಾಭ ಮೊದಲಾದುವುಗಳಲ್ಲಿ ಸಮಭಾವದಿಂದ ಕೂಡಿರುವ **ಜೋಇಹಂ**— ಯೋಗಿಗಳಿಗೆ **ಪರಮಾಣಂದು ಜಣಂತು**— ವೀತರಾಗಪರಮಾನಂದವನ್ನುಂಟುಮಾಡುವವನಾಗಿ **ಜೋ ಕೋ ಇ**— ಯಾವನೋರ್ವನು **ಫುರೇಇ**—ಹೊಳೆಯು (ಪ್ರಕಾಶಿಸು)ತ್ತಾನಯೋ **ಸೋ ಫುಡು**— ಆತನು ನಿಶ್ಚಯವಾಗಿ **ಪರಮಪ್ಪ ಹವೇಇ**— ಪರಮಾತ್ಮನಾಗಿರು ತ್ತಾನೆ

**ಭಾವಾರ್ಥ:**— ಜೀವಿತ-ಮರಣ, ಲಾಭ-ಅಲಾಭ, ಸುಖ-ದುಃಖ ಮತ್ತು ಶತ್ರು ಮಿತ್ರಾದಿಗಳಲ್ಲಿ ಸಮತಾಭಾವದಿಂದ ಕೂಡಿದವರೂ, ಸ್ವಶುದ್ಧಾತ್ಮನಲ್ಲಿ ಸಮ್ಯಕ್-ಶ್ರದ್ಧಾನಜ್ಞಾನಾನುಷ್ಠಾನರೂಪವಾದ ಅಭೇದರತ್ನತ್ರಯಾತ್ಮಕ ವೀತರಾಗನಿರ್ವಿಕಲ್ಪ ಸಮಾಧಿಯಲ್ಲಿರುವವರೂ ಆದ ಪರಮಯೋಗಿಗಳ ಹೃದಯದಲ್ಲಿ ವೀತರಾಗಪರಮಾ ನಂದವನ್ನುಂಟುಮಾಡುವವನಾಗಿ ಪರಮಾತ್ಮನು ಪ್ರಕಾಶಿಸುತ್ತಾನೆ. ಹೀಗೆಯೇ ಗ್ರಂ ಥಾಂತರದಲ್ಲಿಯೂ ಹೇಳಲ್ಪಟ್ಟಿದೆ. **"ಆತ್ಮಾನುಷ್ಠಾನನಿಷ್ಠಸ್ಯ ವ್ಯವಹಾರಬಹಿಃ**

**ಸ್ಥಿತೇಃ । ಜಾಯತೇ ಪರಮಾನಂದಃ ಕಶ್ಚಿದ್ಯೋಗೇನ ಯೋಗಿನಃ"** ಅರ್ಥಾತ್—ಆತ್ಮಾನುಭವದಲ್ಲಿ ತಲ್ಲೀನನೂ, ವ್ಯವಹಾರರಹಿತನಾಗಿ ಶುದ್ಧನಿಶ್ಚಯದಲ್ಲಿರುವವನೂ ಆದ ಯೋಗಿಗೆ ಧ್ಯಾನದಿಂದ ಅನಿರ್ವಚನೀಯವಾದ ಪರಮಾನಂದವುಂಟಾಗಿರುತ್ತದೆ. ಅಂತಹ ಪರಮಾತ್ಮನು ಉಪಾದೇಯನಾಗಿರುತ್ತಾನೆಂದು ತಾತ್ಪರ್ಯವು

**ಕಮ್ಮ-ಣಿಬದ್ಧು ವಿ ಜೋಇಯಾ, ದೇಹಿ ವಸಂತು ವಿ ಜೋ ಜಿ ।**
**ಹೋಇ ಣ ಸಯಲು ಕಯಾ ವಿ ಫುಡು, ಮುಣಿ ಪರಮಪ್ಪಉ ಸೋ ಜಿ ॥ ೩೬ ॥**

"ಕರ್ಮನಿಬದ್ಧೋಽಪಿ ಯೋಗಿನ್ ದೇಹೇ ವಸನ್ನಪಿ ಯ ಏವ ।
ಭವತಿ ನ ಸಕಲಃ ಕದಾಪಿ ಸ್ಫುಟಂ ಮನ್ಯಸ್ವ ಪರಮಾತ್ಮಾನಂ ತಮೇವ ॥ ೩೬ ॥"

**ಅನ್ವಯಾರ್ಥ:**—**ಜೋಇಯಾ**—ಎಲೈ ಯೋಗಿಯೇ! **ಜೋ ಜಿ**—ಯಾವ ಆತ್ಮನು **ಕಮ್ಮಣಿಬದ್ಧು ವಿ**—ಕರ್ಮಗಳಿಂದ ಬದ್ಧನಾಗಿದ್ದರೂ **ದೇಹಿ ವಸಂತು ವಿ**—ಶರೀರದಲ್ಲಿ ವಾಸಮಾಡಿಕೊಂಡಿದ್ದರೂ **ಕಯಾವಿ**—ಎಂದಿಗೂ **ಹೋಇ ಣ ಸಯಲು**—ದೇಹಯುಕ್ತ ಅಥವಾ ದೇಹರೂಪನಾಗಿ ಆಗುವುದಿಲ್ಲ **ಸೋ ಜಿ**—ಅವನನ್ನೇ. **ಪರಮಪ್ಪಉ**—ಪರಮಾತ್ಮನನ್ನಾಗಿ **ಫುಡು ಮುಣಿ**—ನಿಶ್ಚಯವಾಗಿ ತಿಳಿ

**ಭಾವಾರ್ಥ:**—ಜೀವನು ಅಶುದ್ಧ-ನಯದಿಂದ, ಪರಮಾತ್ಮಭಾವನೆಗೆ ವಿರುದ್ಧಗಳಾದ ರಾಗದ್ವೇಷಮೋಹಾದಿಗಳ ಮೂಲಕ ಸಂಪಾದಿಸಲ್ಪಟ್ಟ ಕರ್ಮಗಳಿಂದ ಬದ್ಧನಾಗಿ ದೇಹದಲ್ಲಿರುತ್ತಿದ್ದರೂ ನಿಶ್ಚಯನಯದಿಂದ ಆತನು ಎಂದಿಗೂ ದೇಹಯುಕ್ತ (ದೇಹದಿಂದ ಕೂಡಿದವ)ನಾಗಿರುವುದಿಲ್ಲ. ಎಲೈ ಪ್ರಭಾಕರಭಟ್ಟನೇ! ಅಂತಹ ಪರಮಾತ್ಮನನ್ನು ನೀನು ವೀತರಾಗಸ್ವಸಂವೇದನಜ್ಞಾನದಿಂದ ಭಾವಿಸು ಯಾವಾಗಲೂ ಅಂತಹ ಪರಮಾತ್ಮನೇ ಉಪಾದೇಯನಾಗಿರುತ್ತಾನೆಂದು ಭಾವವು

**ಜೋ ಪರಮತ್ಥೇಂ ಣಿಕ್ಕಲು ವಿ, ಕಮ್ಮವಿಭಿಣ್ಣಉ ಜೋ ಜಿ ।**
**ಮೂಢಾ ಸಯಲು ಭಣಂತಿ ಫುಡು, ಮುಣಿ ಪರಮಪ್ಪಉ ಸೋ ಜಿ ॥ ೩೭ ॥**

"ಯಃ ಪರಮಾರ್ಥೇನ ನಿಷ್ಕಲೋಽಪಿ ಕರ್ಮವಿಭಿನ್ನೋ ಯ ಏವ ।
ಮೂಢಾಃ ಸಕಲಂ ಭಣಂತಿ ಸ್ಫುಟಂ ಮನ್ಯಸ್ವ ಪರಮಾತ್ಮಾನಂ ತಮೇವ ॥ ೩೭ ॥"

**ಅನ್ವಯಾರ್ಥ:**—**ಜೋ**—ಆವ ಜೀವನು **ಪರಮತ್ಥೇಂ**—ನಿಶ್ಚಯನಯದಿಂದ (ನಿಶ್ಚಯವಾಗಿ) **ಣಿಕ್ಕಲು ವಿ**—ಶರೀರರಹಿತನಾಗಿದ್ದರೂ **ಕಮ್ಮವಿಭಿಣ್ಣಉ**—ಕರ್ಮಗಳಿಂದ ಭಿನ್ನ (ಬೇರೆ)ನಾಗಿದ್ದರೂ **ಮೂಢಾ**—ಮೂರ್ಖ (ಅಜ್ಞಾನಿ)ರು **ಸಯಲು**—ದೇಹಸಹಿತನಾಗಿರುವನೆಂದು **ಭಣಂತಿ ಫುಡು**—ನಿಶ್ಚಿತವಾಗಿ ಹೇಳುತ್ತಾರೆ (ಅಥವಾ ತಿಳಿಯುತ್ತಾರೆ) **ಸೋ ಜಿ**—ಅವನನ್ನೇ **ಪರಮಪ್ಪಉ**—ಪರಮಾತ್ಮನನ್ನಾಗಿ **ಮುಣಿ**—ತಿಳಿ.

**ಭಾವಾರ್ಥ:**—ಪರಮಾರ್ಥದಿಂದ ಜೀವನು ದೇಹಕರ್ಮಾದಿಜಡಪದಾರ್ಥಗಳಿಂದ ಸರ್ವಥಾ ಭಿನ್ನಸ್ವರೂಪವುಳ್ಳವನಾಗಿದ್ದರೂ ಭೇದಾಭೇದರತ್ನತ್ರಯಭಾವನಾರಹಿತರಾದ ಮೂಢಾತ್ಮರು ಅವನು ದೇಹಯುಕ್ತನಾಗಿದ್ದಾನೆಂದು ತಿಳಿಯುತ್ತಾರೆ. ಎಲೈ ಪ್ರಭಾಕರ ಭಟ್ಟನೇ! ನೀನು ದೇಹಕರ್ಮರಹಿತನಾದ ಪರಮಾತ್ಮನನ್ನು ಭೇದವಿಜ್ಞಾನದಿಂದ ತಿಳಿದು ಧ್ಯಾನಿಸು ಪರಮಾತ್ಮನು ವೀತರಾಗನಿರ್ವಿಕಲ್ಪಸಮಾಧಿಯಲ್ಲಿ ತಲ್ಲೀನರಾದವರಿಗೆ ಸರ್ವದಾ ಉಪಾದೇಯನಾಗಿಯೂ ಅದಿಲ್ಲದ ಮೂಢ (ಅಜ್ಞಾನಿ) ಜನರಿಗೆ ಹೇಯನಾಗಿಯೂ ಇರುತ್ತಾನೆಂದು ಭಾವವು

**ಗಯಣಿ ಅಣಂತವಿ ಎಕ್ಕಉಡು, ಜೇಹಉ ಭುಅಣು ವಿಹಾಇ ।**
**ಮುಕ್ಕಹಂ ಜಸು ಪಏ ಬಿಂಬಿಯಉ, ಸೋ ಪರಮಪ್ಪು ಅಣಾಇ ॥ ೩೮ ॥**

"ಗಗನೇ ಅನಂತೇಽಪಿ ಏಕಮುಡು ಯಥಾ ಭುವನಂ ವಿಭಾತಿ ।
ಮುಕ್ತಸ್ಯ ಯಸ್ಯ ಪದೇ ಬಿಂಬಿತಂ ಸ ಪರಮಾತ್ಮಾ ಅನಾದಿಃ ॥ ೩೮ ॥"

**ಅನ್ವಯಾರ್ಥ:**—**ಗಯಣಿ ಅಣಂತಿ ವಿ**—ಅನಂತವಾದ ಆಕಾಶದಲ್ಲಿಯೂ **ಎಕ್ಕ ಉಡು ಜೇಹಉ**—ಒಂದು ನಕ್ಷತ್ರವು ಹೇಗೋ (ಹೇಗೆ ಶೋಭಿಸುತ್ತದೆಯೋ) ಹಾಗೆ **ಮುಕ್ಕಹಂ ಜಸು**—ಮುಕ್ತನಾದ ಯಾವ ಆತ್ಮನ **ಪಏ**—ಕೇವಲಜ್ಞಾನದಲ್ಲಿ **ಭುಅಣು**—(ಮೂರು) ಲೋಕವು **ಬಿಂಬಿಯಉ**—ಪ್ರತಿಬಿಂಬಿಸಲ್ಪಟ್ಟದಾಗಿ **ವಿಹಾಇ**—ಶೋಭಿಸುತ್ತದೆಯೋ **ಸೋ ಪರಮಪ್ಪು**—ಆ ಪರಮಾತ್ಮನು **ಅಣಾಇ**—ಅನಾದಿಯಾಗಿರುತ್ತಾನೆ

**ಭಾವಾರ್ಥ:**—ಅನಂತವಾದ ಆಕಾಶದ ಮಧ್ಯದಲ್ಲಿ ಒಂದು ನಕ್ಷತ್ರವು ಶೋಭಿಸುವಂತೆ ಯಾವ ಮುಕ್ತಾತ್ಮನ ಅನಂತಜ್ಞಾನದಲ್ಲಿ ಸಮಸ್ತ ಲೋಕ ಮತ್ತು ಅಲೋಕಗಳು (ಕನ್ನಡಿಯಲ್ಲಿ ವಸ್ತುಗಳು ಪ್ರತಿಬಿಂಬಿಸುವಂತೆ) ಪ್ರತಿಫಲಿಸುತ್ತವೆಯೋ ಅಂದರೆ, ಮುಕ್ತಾತ್ಮನ ಕೇವಲಜ್ಞಾನಕ್ಕೆ ಸಮಸ್ತಲೋಕಾಲೋಕಗಳು ಗೋಚರಿಸುತ್ತವೆಯೋ ಅಂತಹ ಆ ಮುಕ್ತಾತ್ಮನೇ ರಾಗಾದಿಸಮಸ್ತವಿಕಲ್ಪರಹಿತರಾದ ಯೋಗಿಗಳಿಗೆ ಉಪಾದೇಯನಾಗಿರುತ್ತಾನೆಂದು ಭಾವವು

**ಜೋಇಯ-ವಿಂದಹಿಂ ಣಾಣಮಉ, ಜೋ ಝಾಇಜ್ಜಇ ಝೇಉ ।**
**ಮೋಕ್ಖಹಂ ಕಾರಣಿ ಅಣವರಉ, ಸೋ ಪರಮಪ್ಪು ದೇಉ ॥ ೩೯ ॥**

"ಯೋಗಿವೃಂದೈಃ ಜ್ಞಾನಮಯಃ ಯೋ ಧ್ಯಾಯತೇ ಧ್ಯೇಯಃ ।
ಮೋಕ್ಷಸ್ಯ ಕಾರಣೇ ಅನವರತಂ ಸ ಪರಮಾತ್ಮಾ ದೇವಃ ॥ ೩೯ ॥"

**ಅನ್ವಯಾರ್ಥ:**—**ಝೇಉ**—ಧ್ಯೇಯ (ಧ್ಯಾನಿಸುವುದಕ್ಕೆ ಯೋಗ್ಯ)ರೂಪನಾದವನೂ **ಣಾಣಮಉ**—(ಕೇವಲ) ಜ್ಞಾನಮಯನೂ ಆದ **ಜೋ**—ಯಾವ ಪರಮಾತ್ಮನು **ಜೋಇಯವಿಂದಹಿಂ**—ಯೋಗಿಗಳ ಸಮೂಹಗಳಿಂದ **ಮೋಕ್ಖಹಂ ಕಾರಣಿ**—ಮೋಕ್ಷದ ಕಾರಣದಿಂದ (ಮೋಕ್ಷಕ್ಕಾಗಿ) **ಅಣವರಉ**—ಯಾವಾಗಲೂ

**ಝಾಇಜ್ಜಇ**— ಧ್ಯಾನಿಸಲ್ಪಡುತ್ತಾನೆಯೋ **ಸೋ ಪರಮಪ್ಪ ದೇಉ**— ಆ ಪರಮಾತ್ಮನು ಪರಮ ಆರಾಧ್ಯನಾಗಿರುತ್ತಾನೆ

**ಭಾವಾರ್ಥ:**— ಶುದ್ಧಾತ್ಮ–ವೀತರಾಗನಿರ್ವಿಕಲ್ಪಸಮಾಧಿಯಲ್ಲಿ ನಿರತರಾದ ಪರಮಯೋಗಿಗಳು ಧ್ಯಾನಿಸುವುದಕ್ಕೆ ಯೋಗ್ಯನೂ ಅನಂತಜ್ಞಾನಮಯನೂ ಆದ ಪರಮಾತ್ಮನನ್ನು ಯಾವಾಗಲೂ ಧ್ಯಾನಿಸುತ್ತಿರುತ್ತಾರೆ ಅಂತಹ ಪರಮಾತ್ಮನು ಶುದ್ಧಾತ್ಮಜ್ಞಾನಕ್ಕೆ ವಿಪರೀತಗಳಾದ ಆರ್ತರೌದ್ರಧ್ಯಾನಗಳಿಂದ ರಹಿತರೂ ಧರ್ಮಧ್ಯಾನಯುಕ್ತರೂ ಆದ ಮುಮುಕ್ಷುಗಳಿಗೆ ಉಪಾದೇಯನೂ ಧ್ಯಾನಿಸುವುದಕ್ಕೆ ಯೋಗ್ಯನೂ ಆಗಿರುತ್ತಾನೆಂದು ಭಾವವು. ಏಕೆಂದರೆ, ಆರ್ತರೌದ್ರಧ್ಯಾನಗಳುಳ್ಳವರಿಗೆ ಪರಮಾತ್ಮಧ್ಯಾನವುಂಟಾಗಲಾರದು.

**ಜೋ ಜಿಉ ಹೇಉ ಲಹೇವಿ ವಿಹಿ, ಜಗು ಬಹು-ವಿಹಉ ಜಣೇಇ ।**
**ಲಿಂಗತ್ತಯುಪರಿಮುಂಡಿಯಉ, ಸೋ ಪರಮಪ್ಪ ಹವೇಇ ॥ ೪೦ ॥**

"ಯೋ ಜೀವಃ ಹೇತುಂ ಲಬ್ಧ್ವಾ ವಿಧಿಂ ಜಗತ್ ಬಹುವಿಧಂ ಜನಯತಿ ।
ಲಿಂಗತ್ರಯುಪರಿಮುಂಡಿತಃ ಸ ಪರಮಾತ್ಮಾ ಭವತಿ ॥ ೪೦ ॥"

**ಅನ್ವಯಾರ್ಥ:**— **ಜೋ ಜಿಉ**— ಯಾವ ಜೀವನು **ಹೇಉ ಲಹೇವಿ ವಿಹಿ**— ಜ್ಞಾನಾವರಣಾದಿಕರ್ಮರೂಪವಾದ ಕಾರಣವನ್ನು ಪಡೆದು **ಜಗು ಬಹುವಿಹಉ**— (ತ್ರಸಸ್ಥಾವರಾದಿ) ಅನೇಕ ಪ್ರಕಾರವಾದ ಲೋಕವನ್ನು **ಜಣೇಇ**— ಉಂಟುಮಾಡುತ್ತಾನೆಯೋ **ಸೋ**— ಆ ಜೀವನು **ಲಿಂಗತ್ತಯುಪರಿಮುಂಡಿಯಉ**— ಪುಲ್ಲಿಂಗ, ಸ್ತ್ರೀಲಿಂಗ ಮತ್ತು ನಪುಂಸಕಲಿಂಗಗಳೆಂಬ ಮೂರು ಲಿಂಗಗಳಿಂದ ಕೂಡಿರುವವನಾಗಿ **ಪರಮಪ್ಪ ಹವೇಇ**— ಪರಮಾತ್ಮನಾಗಿರುತ್ತಾನೆ

**ಭಾವಾರ್ಥ:**-ಹಿಂದೆ ವರ್ಣಿಸಲ್ಪಟ್ಟಿರುವ ಆತ್ಮನು ಶುದ್ಧದ್ರವ್ಯಾರ್ಥಿಕನಯದಿಂದ ಶುದ್ಧನಾಗಿದ್ದರೂ ಅನಾದಿ ಪರಂಪರಾಗತವಾದ ಜ್ಞಾನಾವರಣಾದಿಕರ್ಮಬಂಧದಿಂದ ಆಚ್ಛಾದಿತ (ಮುಚ್ಚಲ್ಪಟ್ಟವ)ನಾಗಿರುವುದರಿಂದ ಆತನು ವೀತರಾಗನಿರ್ವಿಕಲ್ಪಸಹಜಾನಂದೈಕಸುಖಾಸ್ವಾದವನ್ನು ಪಡೆಯದವನಾಗಿ ವ್ಯವಹಾರನಯದಿಂದ ಒಮ್ಮೆ ತ್ರಸಜೀವನೂ ಇನ್ನೊಮ್ಮೆ ಸ್ಥಾವರಜೀವನೂ ಆಗುತ್ತಾನೆ ಮತ್ತು ಪುಲ್ಲಿಂಗ, ಸ್ತ್ರೀಲಿಂಗ, ನಪುಂಸಕಲಿಂಗಗಳೆಂಬ ಮೂರುಲಿಂಗ(ಚಿಹ್ನೆ)ಗಳಿಂದ ಕೂಡಿದವನಾಗಿಯೂ ಇರುತ್ತಾನೆ. ಈ ಕಾರಣದಿಂದ ಅವನು ಜಗತ್ಕರ್ತ. (ಸೃಷ್ಟಿಕರ್ತ)ನೆಂದು ಹೇಳಲ್ಪಡುತ್ತಾನೆ. ಅಂತಹ ಆತ್ಮನು ಪರಮಾತ್ಮೋಪಲಬ್ಧಿಗೆ ವಿರುದ್ಧವಾದ ವೇದತ್ರಯ (ಪುಂವೇದ, ಸ್ತ್ರೀವೇದ, ನಪುಂಸಕವೇದ) ಜನಿತಗಳಾದ ರಾಗಾದಿವಿಕಲ್ಪಗಳ ಸಮೂಹವನ್ನು ನಿರ್ವಿಕಲ್ಪಸಮಾಧಿಯಿಂದ ಯಾವಾಗ ನಾಶಗೊಳಿಸುತ್ತಾನೋ ಆಗ ಆತನು ಪರಮೋಪಾದೇಯವಾದ ಮೋಕ್ಷಸುಖದ ಸಾಧಕನಾಗುತ್ತಾನೆ. ಅಂತಹ ಶುದ್ಧಾತ್ಮನೇ ಉಪಾದೇಯನಾಗಿರುತ್ತಾನೆಂದು ಭಾವಾರ್ಥವು.

**ಜಸು ಅಬ್ಭಂತರಿ ಜಗು ವಸಇ, ಜಗ-ಅಬ್ಭಂತರಿ ಜೋ೯ ಜಿ ।**
**ಜಗಿ ಜಿ ವಸಂತು ವಿ ಜಗು ಜಿಣ ವಿ, ಮುಣಿ ಪರಮಪ್ಪಉ ಸೋ೯ಜಿ ॥೪೧॥**

"ಯಸ್ಯ ಅಭ್ಯಂತರೇ ಜಗತ್ ವಸತಿ ಜಗದಭ್ಯಂತರೇ ಯ ಏವ ।
ಜಗತಿ ಏವ ವಸನ್ನಪಿ ಜಗತ್ ಏವ ನಾಪಿ ಮನ್ಯಸ್ವ ಪರಮಾತ್ಮಾನಂ
ತಮೇವ ॥ ೪೧ ॥"

**ಅನ್ವಯಾರ್ಥ:— ಜಸು ಅಬ್ಭಂತರಿ**— ಯಾವ ಆತ್ಮನ ಕೇವಲಜ್ಞಾನದೊಳಗೆ **ಜಗು ವಸಇ**— ಜಗತ್ತು ಪ್ರತಿಫಲಿಸಿರುವುದೋ **ಜಗ-ಅಬ್ಭಂತರಿ**— ಜಗತ್ತಿನ ಒಳಗೆ **ಜೋ೯ ಜಿ**— ಯಾವ ಆತ್ಮನು **ವಸಇ**— ವಾಸಮಾಡಿಕೊಂಡಿರುವನೋ **ಜಗಿ ಜಿ ವಸಂತು ವಿ**— ಜಗತ್ತಿನಲ್ಲೇ ವಾಸಮಾಡುತ್ತಿದ್ದರೂ **ಜಗು ಜಿ ಣವಿ**— ಜಗತ್ತಿನೊಡನೆ ತನ್ಮಯನಾಗಿರುವುದಿಲ್ಲವೋ **ಮುಣಿ ಪರಮಪ್ಪಉ ಸೋ೯ ಜಿ**— ಅವನನ್ನೇ ಪರಮಾತ್ಮ ನನ್ನಾಗಿ ತಿಳಿ.

**ಭಾವಾರ್ಥ:**— ದರ್ಪಣ(ಕನ್ನಡಿ)ದ ಮುಂದಿರುವ ವಸ್ತುಗಳು ಅದರಲ್ಲಿ ಪ್ರತಿಬಿಂಬಿಸುವಂತೆ ಪರಮಾತ್ಮನ ಕೇವಲಜ್ಞಾನದಲ್ಲಿ ಮೂರು ಲೋಕಗಳಲ್ಲಿರುವ ಸಮಸ್ತದ್ರವ್ಯ(ವಸ್ತು)ಗಳು ಪ್ರತಿಬಿಂಬಿಸುತ್ತವೆ ಅರ್ಥಾತ್ ಪರಮಾತ್ಮನು ಕೇವಲಜ್ಞಾನದಿಂದ ಲೋಕದಲ್ಲಿರುವ ಸಮಸ್ತ-ದ್ರವ್ಯ-ಪರ್ಯಾಯಗಳನ್ನು ಏಕಕಾಲದಲ್ಲಿ ತಿಳಿಯುತ್ತಾನೆ ಅಂತಹ ಪರಮಾತ್ಮನು ಲೋಕದಲ್ಲಿ ವಾಸಮಾಡಿಕೊಂಡಿರುತ್ತಾನೆ ಅರ್ಥಾತ್ ಕೇವಲಜ್ಞಾನದ ಮೂಲಕ ಲೋಕದಲ್ಲಿ ವ್ಯಾಪಿಸಿರುತ್ತಾನೆ ಆತನು ಜ್ಞಾತೃ(ತಿಳಿಯುವವ)ವೂ ಜಗತ್ತು ಜ್ಞೇಯ (ತಿಳಿಯಲ್ಪಡತಕ್ಕುದು)ವೂ ಆಗಿರುತ್ತದೆ ಹೀಗೆ ಪರಮಾತ್ಮನು ಲೋಕದಲ್ಲಿದ್ದು ಲೋಕವನ್ನು ತಿಳಿಯುತ್ತಿದ್ದರೂ, ರೂಪವನ್ನು ನೋಡುವ ನೇತ್ರೇಂದ್ರಿಯವು ರೂಪೀದ್ರವ್ಯದಿಂದ ಬೇರೆಯಾಗಿದ್ದು ಅದರೊಡನೆ ತನ್ಮಯವಾಗದಿರುವಂತೆ ನಿಶ್ಚಯನಯದಿಂದ ಪರಮಾತ್ಮನು ಲೋಕದೊಡನೆ ತನ್ಮಯನಾಗಿರುವುದಿಲ್ಲ ಪರಮಾತ್ಮನು ಸರ್ವವ್ಯಾಪಕನೂ, ನಿರ್ಲಿಪ್ತನೂ ಆಗಿರುವನು ಅಂತಹ ಪರಮಾತ್ಮನನ್ನು ವೀತರಾಗನಿರ್ವಿಕಲ್ಪಸಮಾಧಿಯಲ್ಲಿ ಸ್ಥಿರನಾಗಿ ಧ್ಯಾನಿಸೆಂದು ಭಾವವು.

**ದೇಹಿ ವಸಂತು ವಿ ಹರಿ-ಹರ ವಿ, ಜಂ ಅಜ್ಜ ವಿ ಣ ಮುಣಂತಿ ।**
**ಪರಮ-ಸಮಾಹಿ-ತವೇಣ ವಿಣು, ಸೋ೯ ಪರಮಪ್ಪು ಭಣಂತಿ ॥ ೪೨ ॥**

"ದೇಹೇ ವಸಂತಮಪಿ ಹರಿಹರಾ ಅಪಿ ಯಂ ಅದ್ಯಾಪಿ ನ ಜಾನಂತಿ ।
ಪರಮಸಮಾಧಿತಪಸಾ ವಿನಾಂ ತಂ ಪರಮಾತ್ಮಾನಂ ಭಣಂತಿ ॥ ೪೨ ॥"

**ಅನ್ವಯಾರ್ಥ:— ದೇಹಿ ವಸಂತು ವಿ ಜಂ**— ದೇಹದಲ್ಲಿ ವಾಸಮಾಡಿಕೊಂಡಿರುವ ಯಾವ ಆತ್ಮನನ್ನೂ **ಹರಿಹರ ವಿ**— ಹರಿಹರರೂ ಕೂಡ **ಪರಮಸಮಾಹಿ-ತವೇಣ ವಿಣು**— ವೀತರಾಗನಿರ್ವಿಕಲ್ಪಸಮಾಧಿರೂಪವಾದ ತಪಸ್ಸಿನ ಹೊರತು **ಅಜ್ಜ ವಿ**— ಇಂದಿಗೂ **ಣ ಮುಣಂತಿ**— ತಿಳಿಯುವುದಿಲ್ಲವೋ **ಸೋ೯ ಪರಮಪ್ಪು ಭಣಂತಿ**— ಆವನನ್ನು ಪರಮಾತ್ಮನೆಂದು ಹೇಳುತ್ತಾರೆ.

**ಭಾವಾರ್ಥ:**— ಪರಮಾತ್ಮಸ್ವಭಾವದಿಂದ ವಿಲಕ್ಷಣವಾದ ಶರೀರದಲ್ಲಿ ಅನುಪ ಚರಿತಾಸದ್ಭೂತವ್ಯವಹಾರನಯದಿಂದ ವಾಸಮಾಡಿಕೊಂಡಿರುವ ಪರಮಾತ್ಮನನ್ನು ಹರಿ ಹರರೇ ಮೊದಲಾದ ಮಹಾಪುರುಷರೂ ಸಹ ವೀತರಾಗನಿರ್ವಿಕಲ್ಪನಿತ್ಯಾನಂದೈಕಸುಖಾ- ಮೃತರಸಾಸ್ವಾದರೂಪವಾದ ಸಮಾಧಿ-ತಪಸ್ಸಿನ ಹೊರತು ಎಂದಿಗೂ ತಿಳಿಯಲಾರರು. ಹೀಗೆಂದು ವೀತರಾಗಸರ್ವಜ್ಞರು ಹೇಳಿರುತ್ತಾರೆ ಇಲ್ಲೊಂದು ಪ್ರಶ್ನೆ — ಪೂರ್ವ ಭವದಲ್ಲಿ ಓರ್ವಜೀವನು ಜಿನದೀಕ್ಷೆ-ಯನ್ನು ಸ್ವೀಕರಿಸಿ ವ್ಯವಹಾರನಿಶ್ಚಯರತ್ನತ್ರಯಾ ರಾಧಕನಾಗಿ ವಿಶಿಷ್ಟಪುಣ್ಯಬಂಧವನ್ನು ಮಾಡಿಕೊಂಡು ಅಮೇಲೆ ಅಜ್ಞಾನಭಾವದಿಂದ ನಿದಾನಬಂಧವನ್ನು ಮಾಡಿ ಸ್ವರ್ಗದಲ್ಲಿ ಜನಿಸಿ ಪುನಃ ಮನುಷ್ಯಭವವನ್ನು ತಾಳಿ ತ್ರಿಖಂಡಾಧಿಪತಿಯಾದ ವಾಸುದೇವ (ಹರಿ)ನಾಗುವನು ಮತ್ತೋರ್ವ ಜೀವನು ಇದೇ ಭವದಲ್ಲಿ ಜಿನದೀಕ್ಷೆಯನ್ನು ಕೈಕೊಂಡು ವಿಶಿಷ್ಟ-ಸಮಾಧಿಯ ಬಲದಿಂದ ಪುಣ್ಯ ಬಂಧವನ್ನು ಮಾಡಿಕೊಳ್ಳುವನು ಆದರೆ ಪೂರ್ವಕೃತ-ಚಾರಿತ್ರಮೋಹಕರ್ಮದ ಉದ ಯದಿಂದ ವಿಷಯಭೋಗಗಳಲ್ಲಾಸಕ್ತನಾಗಿ ರುದ್ರ (ಹರ) ನೆನಿಸುವನು ಇಂತಹ ಹರಿ ಹರಾದಿಗಳೂ ಪರಮಾತ್ಮನನ್ನು ಅದೇಕೆ ತಿಳಿಯಲಾರರು? ಎಂಬೀ ಪ್ರಶ್ನೆಗೆ ಉತ್ತರ ವಿದು — ಹರಿಹರಾದಿ-ಮಹಾಪುರುಷರು ರತ್ನತ್ರಯಾರಾಧಕರಾಗಿದ್ದರೂ ತದ್ಭವಮೋಕ್ಷಕ್ಕೆ ಕಾರಣವಾದ ವೀತರಾಗನಿರ್ವಿಕಲ್ಪರತ್ನತ್ರಯವನ್ನು ಅವರು ಪಡೆಯಲಿಲ್ಲ ಆದಕಾರಣ ಶುದ್ಧೋಪಯೋಗರೂಪವಾದ ವೀತರಾಗರತ್ನತ್ರಯಧಾರಕರಾಗಿ ತದ್ಭವಮೋಕ್ಷಗಾಮಿ ಗಳಾದ ಯೋಗಿಗಳು ಪರಮಾತ್ಮಸ್ವರೂಪವನ್ನು ತಿಳಿಯುವಂತೆ ಸರಾಗರತ್ನತ್ರಯಧಾರಿ ಗಳಾದ ಹರಿಹರರು ತಿಳಿಯಲಾರರು ಇಲ್ಲಿ ತದ್ಭವಮೋಕ್ಷಸಾಧಕರಾದ ಮಹಾ ಮುನಿಗಳಿಂದ ಆರಾಧಿಸಲ್ಪಡುವ ಶುದ್ಧಾತ್ಮನೇ ಉಪಾದೇಯನಾಗಿರುತ್ತಾನೆಂದು ಭಾವವು.

**ಭಾವಾಭಾವಹಿಂ ಸಂಜುವಉ, ಭಾವಾಭಾವಹಿಂ ಜೋ ಜಿ ।**
**ದೇಹಿ ಜಿ ದಿಟ್ಠಉ ಜಿಣವರಹಿಂ, ಮುಣಿ ಪರಮಪ್ಪಉ ಸೋ ಜಿ ॥ ೪೩ ॥**

"ಭಾವಾಭಾವಾಭ್ಯಾಂ ಸಂಯುಕ್ತಃ ಭಾವಾಭಾವಾಭ್ಯಾಂ ಯ ಏವ ।
ದೇಹೇ ಏವ ದೃಷ್ಟಿಃ ಜಿನವರೈಃ ಮನ್ಯಸ್ವ ಪರಮಾತ್ಮಾನಂ ತಮೇವ ॥ ೪೩ ॥"

**ಅನ್ವಯಾರ್ಥ:**— ಪರ್ಯಾಯಾರ್ಥಿಕನಯದಿಂದ **ಭಾವಭಾವಹಿಂ**— ಉತ್ಪಾದ- ವ್ಯಯ (ಉತ್ಪತ್ತಿ-ನಾಶ)ಗಳಿಂದ **ಸಂಜುವಉ**—ಕೂಡಿರುವವನೂ, ದ್ರವ್ಯಾರ್ಥಿಕನಯ ದಿಂದ **ಭಾವಭಾವಹಿಂ**—ಉತ್ಪಾದವ್ಯಯಗಳಿಂದ ರಹಿತನೂ ಆದ **ಜೋಜಿ**—ಯಾವ ಪರಮಾತ್ಮನು **ಜಿಣವರಹಿಂ**—ತದ್ಭವಮೋಕ್ಷಸಾಧಕರಾದ ಜಿನೇಂದ್ರರಿಂದ **ದೇಹಿಜಿ ದಿಟ್ಠಉ**—ಶರೀರದಲ್ಲಿಯೂ ಕಾಣಲ್ಪಟ್ಟನೋ **ಸೋ ಜಿ ಪರಮಪ್ಪಉ ಮುಣಿ**—ಆತ ನನ್ನೇ ಪರಮಾತ್ಮನನ್ನಾಗಿ ತಿಳಿ

**ಭಾವಾರ್ಥ:**— ಪರ್ಯಾಯಾರ್ಥಿಕನಯದಿಂದ ಜೀವನು ಉತ್ಪಾದವ್ಯಯಗಳುಳ್ಳವ ನಾಗಿರುವನು ಅರ್ಥಾತ್ ಆತನಲ್ಲಿ ಒಂದು ಪರ್ಯಾಯದ ವ್ಯಯವೂ ಮತ್ತೊಂದು

ಪರ್ಯಾಯದ ಉತ್ಪಾದವೂ ಆಗುತ್ತಿರುತ್ತದೆ ಆದರೆ ದ್ರವ್ಯಾರ್ಥಿಕನಯದಿಂದ ಆತನು ಉತ್ಪಾದವ್ಯಯಗಳಿಂದ ರಹಿತನಾಗಿ ಸರ್ವದಾ ಧ್ರುವ (ಅವಿನಾಶಿ)ನಾಗಿರುವನು ಅಂತಹ ಪರಮಾತ್ಮನನ್ನು ತದ್ಭವಮೋಕ್ಷಗಾಮಿಗಳಾದ ಮಹಾಯೋಗಿಗಳು ಈ ದೇಹ ದಲ್ಲಿಯೇ ಕೃಷ್ಣನೀಲಕಾಪೋತಲೇಶ್ಯೆ ಮೊದಲಾದ ಸಮಸ್ತವಿಭಾವ-ಪರಿಣಾಮದಿಂದ ರಹಿತವಾದದೂ ಶುದ್ಧಾತ್ಮೋಪಲಬ್ಧಿರೂಪವೂ ಆದ ವೀತರಾಗಪರಮಸಮಾಧಿಯ ಬಲ ದಿಂದ ಕಾಣುತ್ತಾರೆ ಅಂತಹ ಪರಮಾತ್ಮನನ್ನು ನೀನು ಪರಮಸಮಾಧಿಯ ಮೂಲಕ ತಿಳಿ. ಏಕೆಂದರೆ, ಅಂತಹ ಪರಮಾತ್ಮನೇ ಉಪಾದೇಯನಾಗಿರುತ್ತಾನೆಂದು ಭಾವವು.

**ದೇಹಿ ವಸಂತೇಂ ಜೇಣ ಪರ, ಇಂದಿಯ-ಗಾಮು ವಸೇಇ ।**
**ಉವ್ವಸು ಹೋಇ ಗಪಿಣ ಫುಡು, ಸೋ ಪರಮಪ್ಪು ಹವೇಇ ॥ ೪೪ ॥**

"ದೇಹೇ ವಸತಾ ಯೇನ ಪರಂ ಇಂದ್ರಿಯಗ್ರಾಮಃ ವಸತಿ ।
ಉದ್ವಾಸೋ ಭವತಿ ಗತೇನ ಸ್ಫುಟಂ ಸ ಪರಮಾತ್ಮಾ ಭವತಿ ॥ ೪೪ ॥"

**ಅನ್ವಯಾರ್ಥ:— ದೇಹಿ ವಸಂತೇಂ ಜೇಣ ಪರ**— ಯಾವ ಆತ್ಮನು ದೇಹ ದಲ್ಲಿ ವಾಸಮಾಡಿಕೊಂಡಿರುತ್ತಿರಲು **ಇಂದಿಯ-ಗಾಮು ವಸೇಇ**— ಇಂದ್ರಿಯಗಳ ಸಮೂಹವು ಇರುತ್ತದೋ **ಗಪಿಣ**— ಆತನು ಭವಾಂತರವನ್ನು ಹೊಂದುತ್ತಿರಲು **ಉವ್ವಸು ಹೋಇ ಫುಡು**— ನಿಶ್ಚಯವಾಗಿ ಇಂದ್ರಿಯಸಮೂಹವು ಸ್ವವಿಷಯಪ್ರವೃತ್ತಿ ಯಿಂದ ವಿಮುಖವಾಗುತ್ತದೋ **ಸೋ ಪರಮಪ್ಪು ಹವೇಇ**— ಆ ಆತ್ಮನೇ ಪರ ಮಾತ್ಮನಾಗಿರುತ್ತಾನೆ

**ಭಾವಾರ್ಥ:**— ವ್ಯವಹಾರನಯದಿಂದ ಜೀವನು ಶುದ್ಧಾತ್ಮವಿಲಕ್ಷಣವಾದ ಶರೀರ ದಲ್ಲಿ ವಾಸಮಾಡಿಕೊಂಡಿರುವಾಗ ಮಾತ್ರ ಸ್ವಪರಜ್ಞಾನದ ಅಭಾವದಿಂದ ಇಂದ್ರಿಯ ಗಳು ತಮ್ಮ ವಿಷಯಗಳಲ್ಲಿ ಪ್ರವರ್ತಿಸುತ್ತವೆ. ಆತನು ದೇಹವನ್ನು ಬಿಟ್ಟೊಡನ ಇಂದ್ರಿಯಗಳು ವಿಷಯಪ್ರವೃತ್ತಿಯಿಂದ ದೂರವಾಗುತ್ತವೆ. ಇಂತಹ ಚಿದಾನಂದಮಯ ನಾದ ನಿಜಾತ್ಮನೇ ಪರಮಾತ್ಮನಾಗಿರುವನು. ಅತೀಂದ್ರಿಯಸುಖಾಸ್ವಾದಿಗಳೂ ಪರಮ ಸಮಾಧಿಮಗ್ನರೂ ಆದ ಮುನಿಗಳಿಗೆ ಈ ಪರಮಾತ್ಮನ ಧ್ಯಾನವೇ ಮುಕ್ತಿಗೆ ಕಾರಣ ವಾಗಿರುವುದರಿಂದ ಪರಮಾತ್ಮಧ್ಯಾನವೇ ಸರ್ವಥಾ ಉಪಾದೇಯವಾಗಿರುತ್ತದೆ.

**ಜೋ ಣಿಯ-ಕರಣಹಿಂ ಪಂಚಹಿಂ ವಿ, ಪಂಚ ವಿ ವಿಸಯ ಮುಣೇಇ ।**
**ಮುಣಿಉ ಣ ಪಂಚಹಿಂ ಪಂಚಹಿಂ ವಿ, ಸೋ ಪರಮಪ್ಪು ಹವೇಇ ॥ ೪೫ ॥**

'ಯಃ ನಿಜಕರಣೈಃ ಪಂಚಭಿರಪಿ ಪಂಚಾಪಿ ವಿಷಯಾನ್ ಜಾನಾತಿ ।
ಜ್ಞಾತಃ ನ ಪಂಚಭಿಃ ಪಂಚಭಿರಪಿ ನ ಪರಮಾತ್ಮಾ ಭವತಿ ॥ ೪೫ ॥

**ಅನ್ವಯಾರ್ಥ:— ಜೋ ಪಂಚಹಿಂ ವಿ ಣಿಯಕರಣಹಿಂ**— ಯಾವಾತನು ತನ್ನ ಐದು ಇಂದ್ರಿಯಗಳಿಂದ **ಪಂಚ ವಿ ವಿಸಯ ಮುಣೇಇ**— ಸ್ಪರ್ಶ ಮೊದಲಾದ

ಐದು ವಿಷಯಗಳನ್ನು **ಮುಣೇಇ**–ತಿಳಿಯುತ್ತಾನೋ ಮತ್ತು **ಪಂಚಹಿಂ ಪಂಚಹಿಂ ವಿ**–ಐದು ಇಂದ್ರಿಯಗಳಿಂದಲೂ ಐದು ಇಂದ್ರಿಯವಿಷಯಗಳಿಂದಲೂ **ಣ ಮುಣಿಉ**–ತಾನು ತಿಳಿಯಲ್ಪಡುವುದಿಲ್ಲವೋ **ಸೋ ಪರಮಪ್ಪು ಹವೇಇ**– ಆತನು ಪರಮಾತ್ಮನಾಗಿರುತ್ತಾನೆ

**ಭಾವಾರ್ಥ:**— ಶುದ್ಧನಿಶ್ಚಯನಯದಿಂದ ಆತ್ಮನು ಅತೀಂದ್ರಿಯಜ್ಞಾನಮಯನಾಗಿದ್ದರೂ ಅನಾದಿಕರ್ಮಬಂಧದ ಕಾರಣದಿಂದ— ವ್ಯವಹಾರನಯದಿಂದ ಇಂದ್ರಿಯಮಯವಾದ ಶರೀರವನ್ನು ಧರಿಸಿ ಸ್ಪರ್ಶನೇಂದ್ರಿಯಮೊದಲಾದ್ಯೈದು ಇಂದ್ರಿಯಗಳ ಮೂಲಕ ಸ್ಪರ್ಶಮೊದಲಾದ್ಯೈದು ವಿಷಯಗಳನ್ನು ತಿಳಿಯುತ್ತಾನೆ ಅರ್ಥಾತ್ ಇಂದ್ರಿಯಜ್ಞಾನವುಳ್ಳವನಾಗಿರುತ್ತಾನೆ ಆದರೆ ಪಂಚ ಇಂದ್ರಿಯಗಳಿಂದಲಾಗಲಿ, ಇಂದ್ರಿಯವಿಷಯಗಳಿಂದಲಾಗಲಿ ಆತ್ಮನು ಎಂದಿಗೂ ತಿಳಿಯಲ್ಪಡುವುದಿಲ್ಲ ಅತಏವ ಪಂಚೇಂದ್ರಿಯವಿಷಯಸುಖಾನುಭವಕ್ಕೆ ವ್ಯತಿರಿಕ್ತವಾದ ಹಾಗೂ ವೀತರಾಗನಿರ್ವಿಕಲ್ಪ-ಪರಮಾನಂದಾಸ್ವಾದರೂಪವಾದ ಸಮಾಧಿಯಿಂದ ತಿಳಿಯಲ್ಪಡುವ ಪರಮಾತ್ಮನು ಅತೀಂದ್ರಿಯಸುಖಸಾಧಕನಾಗಿರುವುದರಿಂದ ಉಪಾದೇಯನಾಗಿರುತ್ತಾನೆ

**ಜಸು ಪರಮತ್ಥೇಂ ಬಂಧು ಣವಿ, ಜೋಇಯ ಣ ವಿ ಸಂಸಾರು ।**
**ಸೋ ಪರಮಪ್ಪಉ ಜಾಣಿ ತುಹುಂ, ಮಣಿ ಮಿಲ್ಲಿವಿ ವವಹಾರು ॥ ೪೬ ॥**

"ಯಸ್ಯ ಪರಮಾರ್ಥೇನ ಬಂಧೋ ನೈವ ಯೋಗಿನ್ ನಾಪಿ ಸಂಸಾರಃ ।
ತಂ ಪರಮಾತ್ಮಾನಂ ಜಾನೀಹಿ ತ್ವಂ ಮನಸಿ ಮುಕ್ತ್ವಾ ವ್ಯವಹಾರಮ್ ॥ ೪೬ ॥"

**ಅನ್ವಯಾರ್ಥ:**—**ಜೋಇಯ**— ಎಲೈ ಯೋಗಿಯೇ! **ಪರಮತ್ಥೇಂ ಜಸು ಬಂಧ ಣವಿ**— ನಿಶ್ಚಯನಯದಿಂದ ಯಾವ ಶುದ್ಧಾತ್ಮನಿಗೆ ಬಂಧವಿರುವುದಿಲ್ಲವೋ **ಣ ವಿ ಸಂಸಾರು**— ಸಂಸಾರವೂ ಇರುವುದಿಲ್ಲವೋ **ಸೋ ಪರಮಪ್ಪಉ**— ಆ ಪರಮಾತ್ಮನನ್ನು **ತುಹುಂ**— ನೀನು **ಮಣಿ ವವಹಾರು ಮಿಲ್ಲಿವಿ**— ಮನಸ್ಸಿನಲ್ಲಿ ವ್ಯವಹಾರವನ್ನು ಬಿಟ್ಟು. **ಜಾಣಿ**— ತಿಳಿ.

**ಭಾವಾರ್ಥ:**— ಚಿದಾನಂದೈಕಸ್ವಭಾವವುಳ್ಳ ಪರಮಾತ್ಮನಲ್ಲಿ ತದ್ವಿಲಕ್ಷಣವೂ ಪರಮಾಗಮದಲ್ಲಿ ನಿರೂಪಿಸಲ್ಪಟ್ಟುದೂ, ದ್ರವ್ಯ-ಕ್ಷೇತ್ರ-ಕಾಲ-ಭವ-ಭಾವರೂಪ-ಪಂಚಪರಿವರ್ತನ (ಭ್ರಮಣ) ಸ್ವರೂಪವುಳ್ಳುದೂ ಆದ ಪಂಚಪ್ರಕಾರವಾದ ಸಂಸಾರವು ಇರುವುದಿಲ್ಲ. ಮತ್ತು ಇಂತಹ ಸಂಸಾರಕ್ಕೆ ಕಾರಣಭೂತವೂ, ಕೇವಲಜ್ಞಾನಾದಿ ಅನಂತಚತುಷ್ಟಯವ್ಯಕ್ತಿರೂಪವಾದ ಮೋಕ್ಷಪದಾರ್ಥದಿಂದ ವಿಲಕ್ಷಣವಾದುದೂ, ಪ್ರಕೃತಿಸ್ಥಿತಿ-ಅನುಭಾಗ-ಪ್ರದೇಶಭೇದದಿಂದ ನಾಲ್ಕು ವಿಧವುಳ್ಳುದೂ ಆದ ಬಂಧವೂ ಇರುವುದಿಲ್ಲ ಎಲೈ ಯೋಗಿಯೇ! ಅಂತಹ ಪರಮಾತ್ಮನನ್ನು ನೀನು ಮನಸ್ಸಿನಲ್ಲಿ ಲೌಕಿಕವ್ಯವಹಾರವನ್ನು ತೊರೆದು ನಿರ್ವಿಕಲ್ಪಸಮಾಧಿಯಲ್ಲಿರುವವನಾಗಿ ಭಾವಿಸು. ಇಲ್ಲಿ ಸಂಸಾರದಿಂದಲೂ ಕರ್ಮಬಂಧದಿಂದಲೂ ರಹಿತನಾದ ಪರಮಾತ್ಮನು ಮೋಕ್ಷ

ಸುಖದಾಯಕನಾಗಿರುವುದರಿಂದ ಸರ್ವಥಾ ಉಪಾದೇಯನಾಗಿರುತ್ತಾನೆಂಬುದು ತಾತ್ಪರ್ಯಾರ್ಥವು.

**ಣೇಯಾಭಾವೇ ವಿಲ್ಲಿ ಜಿಮ, ಥಕ್ಕಇ ಣಾಣು ವಲೇವಿ ।**
**ಮುಕ್ಕಹಂ ಜಸು ಪಯ ಬಿಂಬಿಯಉ, ಪರಮಸಹಾಉ ಭಣೇವಿ ॥ ೪೭ ॥**

"ಜ್ಞೇಯಾಭಾವೇ ವಲ್ಲೀ ಯಥಾ ತಿಷ್ಠತಿ ಜ್ಞಾನಂ ವಲಿತ್ವಾ ।
ಮುಕ್ತಾನಾಂ ಯಸ್ಯ ಪದೇ ಬಿಂಬಿತಂ ಪರಮಸ್ವಭಾವಂ ಭಣಿತ್ವಾ ॥ ೪೭ ॥"

**ಅನ್ವಯಾರ್ಥ:— ಜಸು ಪಯ ಬಿಂಬಿಯವು**— ಭಗವಂತನಾದ ಯಾವ ಪರಮಾತ್ಮನ ಕೇವಲಜ್ಞಾನ ಅಥವಾ ಪರಮಾತ್ಮಸ್ವರೂಪದಲ್ಲಿ ಪ್ರತಿಬಿಂಬಿತ (ತದಾಕಾರಪರಿಣಿತ)ವಾದ **ಮುಕ್ಕಹಂ**–ಮುಕ್ತಾತ್ಮರ **ಣಾಣು**–ಜ್ಞಾನವು **ಣೇಯಾಭಾವೇ** —ಜ್ಞೇಯ (ತಿಳಿಯಲ್ಪಡಲು ಯೋಗ್ಯವಾದ) ವಸ್ತುವಿನ ಅಭಾವವಾಗುತ್ತಿರಲು **ವಿಲ್ಲಿ ಜಿಮ**–ಬಳ್ಳಿಯು ಹೇಗೋ ಹಾಗೆ **ವಲೇವಿ ಥಕ್ಕಇ**–ಪರಾವರ್ತಿಸಿ ಇರುತ್ತದೆ ಹೀಗೆ **ಪರಮಸಹಾಉ ಭಣೇವಿ**- ಪರಮಸ್ವಭಾವವನ್ನು ತಿಳಿದು ಅದನ್ನು ಆರಾಧಿಸು

**ಭಾವಾರ್ಥ:**— ಪರಮಾತ್ಮನ ಕೇವಲಜ್ಞಾನದಲ್ಲಿ ಲೋಕಾಲೋಕಗಳಲ್ಲಿರುವ ಸಮಸ್ತ-ಪದಾರ್ಥಗಳೂ ಪ್ರತಿಬಿಂಬಿತವಾಗುತ್ತವೆ. ಅರ್ಥಾತ್ ಕೇವಲಜ್ಞಾನದಿಂದ ತಿಳಿಯಲ್ಪಡದಿರುವ ಯಾವುದೊಂದು ಪದಾರ್ಥವೂ ಇರುವುದಿಲ್ಲ. ಲೋಕಾಲೋಕಗಳಲ್ಲಿರುವ ಸಮಸ್ತ ದ್ರವ್ಯಗಳನ್ನೂ ಅವುಗಳ ಭೂತಭವಿಷ್ಯದ್ವರ್ತಮಾನಕಾಲಸಂಬಂಧಿ ಸಮಸ್ತ ಪರ್ಯಾಯಗಳನ್ನೂ ಏಕಕಾಲದಲ್ಲಿ ತಿಳಿಯುವ ಜ್ಞಾನಕ್ಕೆ ಕೇವಲಜ್ಞಾನವೆಂದು ಹೆಸರು. ಬಳ್ಳಿಯು ಹರಡುವುದಕ್ಕೆ ಆಧಾರವಾದ ಮಂಡಪ (ಚಪ್ಪರ) ವಿರುವವರೆಗೆ ಮಾತ್ರ ಹರಡಿ ಮುಂದೆ ಆಧಾರವಿಲ್ಲದೆ ಆಚೀಚೆಗೆ ಅಥವಾ ಹಿಂದಕ್ಕೆ ತಿರುಗುವಂತೆ ಮುಕ್ತಾತ್ಮರ ಜ್ಞಾನವೂ ಸಂಪೂರ್ಣ-ಜ್ಞೇಯಪದಾರ್ಥಗಳನ್ನು ತಿಳಿದು ಮುಂದೆ ಜ್ಞೇಯ ಪದಾರ್ಥದ ಅಭಾವದಿಂದ ವಿರಮಿಸುತ್ತದೆ ಅರ್ಥಾತ್ ಆದರ ಜ್ಞಾತೃತ್ವ (ತಿಳಿಯುವಿಕೆಯ) ಶಕ್ತಿಯು ಎಂದಿಗೂ ಕುಂಠಿತವಾಗುವುದಿಲ್ಲವೆಂದಭಿಪ್ರಾಯವು. ಇಂತಹ ಕೇವಲಜ್ಞಾನಮಯನಾದ ಶುದ್ಧಾತ್ಮನೇ ಉಪಾದೇಯನಾಗಿರುತ್ತಾನೆಂದು ಭಾವವು.

**ಕಮ್ಮಹಿಂ ಜಾಸು ಜಣಂತಹಿಂ ವಿ, ಣಿಉಣಿಉಕಜ್ಜು ಸಯಾವಿ ।**
**ಕಿಂ ಪಿ ಣ ಜಣಿಯಉ ಹರಿಉ ಣವಿ, ಸೋ ಪರಮಪ್ಪಉ ಭಾವಿ ॥ ೪೮ ॥**

"ಕರ್ಮಭಿಃ ಯಸ್ಯ ಜನಯದ್ಭಿರಪಿ ನಿಜನಿಜಕಾರ್ಯಂ ಸದಾಪಿ ।
ಕಿಮಪಿ ನ ಜನಿತೋ ಹೃತಃ ನೈವ ತಂ ಪರಮಾತ್ಮಾನಂ ಭಾವಯ ॥ ೪೮ ॥"

**ಅನ್ವಯಾರ್ಥ:— ಸಯಾ ವಿ**–ನಿರಂತರವೂ **ಣಿಉಣಿಉ ಕಜ್ಜು**— ತಮ್ಮ ತಮ್ಮ ಸುಖದುಃಖಾದಿರೂಪಕಾರ್ಯಗಳನ್ನು **ಜಣಂತಹಿಂ ವಿ ಕಮ್ಮಹಿಂ**–ಉಂಟುಮಾಡುತ್ತಿರುವ ಕರ್ಮಗಳಿಂದಲೂ **ಜಾಸು**–ಯಾವ ಆತ್ಮನಿಗೆ **ಕಿಂ ಪಿ ಣ ಜನಿಯವು**— ಏನೊಂದೂ

ಉಂಟುಮಾಡಲ್ಪಡಲಿಲ್ಲವೋ **ಣ ವಿ ಹರಿಉ**–ಏನೊಂದೂ ನಾಶಗೊಳಿಸಲ್ಪಡಲಿಲ್ಲವೋ **ಸೋ ಪರಮಪ್ಪಉ ಭಾವಿ**–ಆ ಪರಮಾತ್ಮನನ್ನು ಭಾವಿಸು.

**ಭಾವಾರ್ಥ** — ವ್ಯವಹಾರನಯದಿಂದ ಶುದ್ಧಾತ್ಮಸ್ವರೂಪಪ್ರತಿಬಂಧಕಗಳಾದ ಜ್ಞಾನಾವರಣಾದಿ ಕರ್ಮಗಳು ತಮ್ಮ ಕಾರ್ಯಗಳಾದ ಸುಖದುಃಖಾದಿಗಳನ್ನುಂಟುಮಾಡುವುವು ಆದರೆ ಶುದ್ಧನಿಶ್ಚಯನಯದಿಂದ ಆ ಕರ್ಮಗಳು ಆತ್ಮನ ಅನಂತಜ್ಞಾನಾದಿಗಳಲ್ಲಿ ಯಾವುದನ್ನೂ ಉಂಟುಮಾಡಲಾರವು ಅಥವಾ ಯಾವುದೊಂದನ್ನೂ ಅಪಹರಿಸ (ನಾಶಗೊಳಿಸ)ಲಾರವು ಹಾಗೂ ಯಾವುದೊಂದು ಗುಣವನ್ನೂ ಪರಿವರ್ತನಗೊಳಿಸಲಾರವು ಹೀಗೆ ಕರ್ಮಗಳಿಂದ ಉಂಟುಮಾಡುವುದಕ್ಕೂ ಅಪಹರಿಸುವುದಕ್ಕೂ ಅಸಾಧ್ಯವಾದ ಚಿದಾನಂದಸ್ವರೂಪವನ್ನು ಭಾವಿಸಬೇಕೆಂದು ಭಾವವು.

**ಕಮ್ಮಣಿಬದ್ಧು ವಿ ಹೋಇ ಣವಿ, ಜೋ ಫುಡು ಕಮ್ಮು ಕಯಾ ವಿ।**
**ಕಮ್ಮು ವಿ ಜೋ ಣ ಕಯಾ ವಿ ಫುಡು, ಸೋ ಪರಮಪ್ಪಉ ಭಾವಿ ॥ ೪೯ ॥**

"ಕರ್ಮನಿಬದ್ಧೋಽಪಿ ಭವತಿ ನೈವ ಯಃ ಸ್ಫುಟಂ ಕರ್ಮ ಕದಾಪಿ ।
ಕರ್ಮಾಪಿ ಯೋ ನ ಕದಾಪಿ ಸ್ಫುಟಂ ತಂ ಪರಮಾತ್ಮಾನಂ ಭಾವಯ ॥ ೪೯ ॥"

**ಅನ್ವಯಾರ್ಥ:— ಜೋ ಕಮ್ಮಣಿಬದ್ಧು ವಿ**—ಯಾವ ಆತ್ಮನು ಕರ್ಮನಿಬದ್ಧನಾಗಿದ್ದರೂ ಕೂಡ **ಫುಡು**—ನಿಶ್ಚಯವಾಗಿ **ಕಯಾ ವಿ**—ಎಂದಿಗೂ **ಕಮ್ಮು ಣವಿ ಹೋಇ**—ಕರ್ಮಸ್ವರೂಪನಾಗಿ ಆಗುವುದಿಲ್ಲವೋ **ಕಮ್ಮು ವಿ**—ಕರ್ಮವೂ **ಫುಡು**—ನಿಶ್ಚಯವಾಗಿ **ಕಯಾ ವಿ ಯೋ ಣ ಹೋಇ**—ಎಂದಿಗೂ ಆತ್ಮಸ್ವರೂಪವುಳ್ಳದ್ದಾಗಿ ಆಗುವುದಿಲ್ಲವೋ **ಸೋ ಪರಮಪ್ಪಉ ಭಾವಿ**—ಅಂತಹ ಪರಮಾತ್ಮನನ್ನು ಭಾವಿಸು

**ಭಾವಾರ್ಥ:**— ವ್ಯವಹಾರನಯದಿಂದ ಆತ್ಮನು ತನ್ನ ಶುದ್ಧಾತ್ಮಸ್ವರೂಪದ ಪ್ರಾಪ್ತಿಯ ಅಭಾವದಿಂದಾಗಿ ಸಂಪಾದಿಸಲ್ಪಟ್ಟ ಜ್ಞಾನಾವರಣಾದಿ ಶುಭಾಶುಭಕರ್ಮಗಳಿಂದ ಬದ್ಧನಾಗಿರುವನಾದರೂ ಶುದ್ಧನಿಶ್ಚಯನಯದಿಂದ ಕರ್ಮಸ್ವರೂಪವುಳ್ಳವನಾಗಿರುವುದಿಲ್ಲ ಅರ್ಥಾತ್ ತನ್ನ ಕೇವಲಜ್ಞಾನಾದಿ ಅನಂತಗುಣಸ್ವರೂಪವನ್ನು ಬಿಟ್ಟು ಕರ್ಮರೂಪವಾಗಿ ಪರಿಣಮಿಸುವುದಿಲ್ಲ. ಅದರಂತೆಯೇ ಜ್ಞಾನಾವರಣಾದಿ ದ್ರವ್ಯ-ಭಾವರೂಪವಾದ ಕರ್ಮವೂ ಸಹ ತನ್ನ ಕರ್ಮಪುದ್ಗಲಸ್ವರೂಪವನ್ನು ಬಿಟ್ಟು ಪರಮಾತ್ಮರೂಪವಾಗಿ ಪರಿಣಮಿಸುವುದಿಲ್ಲ. ಜೀವನು ಚೈತನ್ಯಮಯನು. ಕರ್ಮಪುದ್ಗಲವು ಅಚೇತನ (ಜಡ)ವಾದದು. ಚೇತನವು ಅಚೇತನವಾಗಿಯೂ ಅಚೇತನವು ಚೇತನವಾಗಿಯೂ ಎಂದಿಗೂ ಪರಿಣಮಿಸಲಾರದೆಂಬುದು ಅನಾದಿಕಾಲದಿಂದಲೂ ನಿಶ್ಚಿತವಾದುದು. ಅತಏವ ದ್ರವ್ಯ-ಭಾವಕರ್ಮಗಳಿಂದ ಸರ್ವಥಾ ಭಿನ್ನನಾದವನೂ, ಜ್ಞಾನದರ್ಶನಮಯನೂ ಸರ್ವಥಾ ಉಪಾದೇಯನೂ ಆದ ಪರಮಾತ್ಮನನ್ನು ನೀನು ದೇಹರಾಗಾದಿ-ಪರಿಣತಿರೂಪವಾದ ಬಹಿರಾತ್ಮತ್ವವನ್ನು ಬಿಟ್ಟು ಶುದ್ಧಾತ್ಮಪರಿಣತಿಭಾವನಾರೂಪವಾದ ಅಂತರಾತ್ಮತ್ವದಲ್ಲಿ ನಿಶ್ಚಲನಾಗಿ ಧ್ಯಾನಿಸೆಂದು ಭಾವಾರ್ಥವು.

ಹೀಗೆ ಮೂರುಪ್ರಕಾರವಾದ ಆತ್ಮರುಗಳ ಸ್ವರೂಪವನ್ನು ನಿರೂಪಿಸುವ ಪ್ರಥಮ ಮಹಾಧಿಕಾರದಲ್ಲಿ "ನಿರ್ಮಲನೂ ಜ್ಞಾನಮಯನೂ ಆದ ಶುದ್ಧಾತ್ಮನು ಮೋಕ್ಷದಲ್ಲಿ ವ್ಯಕ್ತಿರೂಪದಿಂದಿರುವಂತೆ ಶುದ್ಧನಿಶ್ಚಯನಯದಿಂದ ದೇಹದಲ್ಲಿಯೂ ಶಕ್ತಿರೂಪದಿಂದಿರುತ್ತಾನೆ" ಎಂಬ ವ್ಯಾಖ್ಯಾನದ ಮುಖ್ಯತೆಯಿಂದ ಇಪ್ಪತ್ತನಾಲ್ಕು ಗಾಥಾಸೂತ್ರಗಳು ಹೇಳಲ್ಪಟ್ಟವು.

ಇನ್ನು ಮುಂದೆ ಆರು ಸೂತ್ರಗಳಿಂದ ಜೀವನ ಸ್ವದೇಹಪ್ರಮಾಣತ್ವವನ್ನು ನಿರೂಪಿಸುತ್ತಾರೆ:—

**ಕಿ ವಿ ಭಣಂತಿ ಜಿಉ ಸವ್ವಗಉ, ಜಿಉ ಜಡು ಕೇ ವಿ ಭಣಂತಿ ।**
**ಕಿ ವಿ ಭಣಂತಿ ಜಿಉ ದೇಹ-ಸಮು, ಸುಣ್ಣು ವಿ ಕೇ ವಿ ಭಂತಿ ॥ ೫೦ ॥**

"ಕೇಽಪಿ ಭಣಂತಿ ಜೀವಂ ಸರ್ವಗತಂ ಜೀವಂ ಜಡಂ ಕೇಽಪಿ ಭಣಂತಿ ।
ಕೇಽಪಿ ಭಣಂತಿ ಜೀವಂ ದೇಹಸಮಂ ಶೂನ್ಯಮಪಿ ಕೇಽಪಿ ಭಣಂತಿ ॥ ೫೦ ॥"

**ಅನ್ವಯಾರ್ಥ:— ಕಿ ವಿ**— ಕೆಲವರು— ಸಾಂಖ್ಯ, ನೈಯಾಯಿಕ, ಮೀಮಾಂಸಕರು **ಜಿಉ ಸವ್ವಗಉ ಭಣಂತಿ**— ಜೀವನನ್ನು ಸರ್ವವ್ಯಾಪಿಯನ್ನಾಗಿ ಹೇಳುತ್ತಾರೆ **ಕೇ ವಿ**— ಕೆಲವು ಸಾಂಖ್ಯಮತೀಯರು **ಜಿಉ ಜಡು ಭಣಂತಿ**— ಜೀವನನ್ನು ಜಡನನ್ನಾಗಿ ಹೇಳುತ್ತಾರೆ **ಕಿ ವಿ**— ಕೆಲವರು— ಜೈನಮತೀಯರು **ಜಿಉ ದೇಹ-ಸಮು ಭಣಂತಿ**— ಜೀವನನ್ನು ದೇಹಪ್ರಮಾಣವುಳ್ಳವನನ್ನಾಗಿ ಹೇಳುತ್ತಾರೆ **ಕೇ ವಿ**— ಕೆಲವರು— ಬೌದ್ಧದಾರ್ಶನಿಕರು **ಜಿಉ ಸುಣ್ಣು ವಿ ಭಣಂತಿ**— ಜೀವನನ್ನು ಶೂನ್ಯನನ್ನಾಗಿಯೂ ಹೇಳುತ್ತಾರೆ.

**ಭಾವಾರ್ಥ:**— ಭಿನ್ನ-ಭಿನ್ನ ಮತೀಯರು ಹೇಳುವ ಜೀವನ ಈ ನಾಲ್ಕು ಲಕ್ಷಣಗಳಲ್ಲಿ ಯಾವುದು ಸರಿಯಾದುದು? ಮತ್ತು ಯಾವುದು ಸರಿಯಲ್ಲ? ಹೀಗೆಂದು ಶಿಷ್ಯನು ಪ್ರಶ್ನೆಮಾಡಿದನೆಂದು ಭಾವವು.

**ಅಪ್ಪಾ ಜೋಇಯ ಸವ್ವಗಉ, ಅಪ್ಪಾ ಜಡು ವಿ ವಿಯಾಣಿ ।**
**ಅಪ್ಪಾ ದೇಹಪಮಾಣು ಮುಣಿ, ಅಪ್ಪಾ ಸುಣ್ಣು ವಿಯಾಣಿ ॥ ೫೧ ॥**

"ಆತ್ಮಾ ಯೋಗಿನ್ ಸರ್ವಗತಃ ಆತ್ಮಾ ಜಡೋಽಪಿ ವಿಜಾನೀಹಿ ।
ಆತ್ಮಾನಂ ದೇಹಪ್ರಮಾಣಂ ಮನ್ಯಸ್ವ ಆತ್ಮಾನಂ ಶೂನ್ಯಂ ವಿಜಾನೀಹಿ ॥ ೫೧ ॥"

**ಅನ್ವಯಾರ್ಥ:-ಜೋಇಯ**- ಯೋಗಿಯೇ! ಮುಂದೆ ಹೇಳುವ ನಯವಿಭಾಗದಿಂದ **ಅಪ್ಪಾ ಸವ್ವಗಉ**— ಆತ್ಮನು ಸರ್ವಗತ (ಸರ್ವವ್ಯಾಪಿ)ನೆಂದೂ **ಅಪ್ಪಾ ಜಡು ವಿ**— ಆತ್ಮನು ಜಡನೆಂದೂ **ವಿಯಾಣಿ**— ತಿಳಿ. **ಅಪ್ಪಾ ದೇಹಪಮಾಣು**— ಆತ್ಮನನ್ನು ದೇಹಪ್ರಮಾಣವುಳ್ಳವನನ್ನಾಗಿ **ಮುಣಿ**— ತಿಳಿ. **ಅಪ್ಪಾ ಸುಣ್ಣು ವಿಯಾಣಿ**— ಆತ್ಮನನ್ನು ಶೂನ್ಯನನ್ನಾಗಿ ಚೆನ್ನಾಗಿ ತಿಳಿ.

**ಭಾವಾರ್ಥ:**—ವಿವಿಧನಯಾಪೇಕ್ಷೆಯಿಂದ ಆತ್ಮನು ಸರ್ವವ್ಯಾಪಕನೂ, ಜಡನೂ, ಸ್ವದೇಹಪ್ರಮಾಣವುಳ್ಳವನೂ, ಶೂನ್ಯನೂ ಆಗಿರುವನು. ವಿವಕ್ಷಿತನಯವಿಭಾಗದಿಂದ ಹೀಗೆ ತಿಳಿಯುವುದರಲ್ಲಿ ಯಾವ ದೋಷವೂ ಇರುವುದಿಲ್ಲವೆಂದು ತಾತ್ಪರ್ಯವು.

**ಅಪ್ಪಾ ಕಮ್ಮ-ವಿವಜ್ಜಿಯಉ, ಕೇವಲ-ಣಾಣೇ ಜೇಣ ।**
**ಲೋಯಾಲೋಉ ವಿ ಮುಣಇ ಜಿಯ, ಸವ್ವಗು ಉಚ್ಚ ಇ ತೇಣ ॥ ೫೨ ॥**

"ಆತ್ಮಾ ಕರ್ಮವಿವರ್ಜಿತಃ ಕೇವಲಜ್ಞಾನೇನ ಯೇನ ।
ಲೋಕಾಲೋಕಮಪಿ ಮನುತೇ ಜೀವ ಸರ್ವಗಃ ಉಚ್ಯತೇ ತೇನ ॥ ೫೨ ॥"

**ಅನ್ವಯಾರ್ಥ**—**ಅಪ್ಪಾ**—ಆತ್ಮನು **ಜೇಣ**—ಯಾವ ಕಾರಣದಿಂದ **ಕಮ್ಮವಿವಜ್ಜಿಯಉ**—ಕರ್ಮರಹಿತನಾಗಿ **ಕೇವಲಣಾಣೇ**—ಕೇವಲ ಜ್ಞಾನದಿಂದ **ಲೋಯಾಲೋಉ ವಿ**—ಲೋಕಾಲೋಕಗಳನ್ನೂ **ಮುಣಇ**—ತಿಳಿಯುತ್ತಾನೆಯೋ **ಜಿಯ**—ಎಲೈಜೀವನೇ! **ತೇಣ**—ಆ ಕಾರಣದಿಂದ **ಸವ್ವಗು ಉಚ್ಚ ಇ**—ಸರ್ವಗತನೆಂದು ಹೇಳಲ್ಪಡುತ್ತಾನೆ

**ಭಾವಾರ್ಥ:**—ಕರ್ಮರಹಿತನಾದ ಆತ್ಮನು ಕೇವಲ ಜ್ಞಾನದಿಂದ ಲೋಕಾಲೋಕಗಳನ್ನು ತಿಳಿಯುವ ಕಾರಣದಿಂದ ಆತನು ಸರ್ವವ್ಯಾಪಿಯೆಂದು ಹೇಳಲ್ಪಡುತ್ತಾನೆ. ವ್ಯವಹಾರದಿಂದ ಈ ಆತ್ಮನು ಕೇವಲಜ್ಞಾನದ ಮೂಲಕ ಲೋಕಾಲೋಕಗಳನ್ನು ತಿಳಿಯುತ್ತಾನೆ ದೇಹದ ಮಧ್ಯದಲ್ಲಿರುತ್ತಿದ್ದರೂ ನಿಶ್ಚಯನಯದಿಂದ ತನ್ನಾತ್ಮಸ್ವರೂಪವನ್ನು ತಿಳಿಯುತ್ತಾನೆ ಆ ಕಾರಣದಿಂದ ನೇತ್ರೇಂದ್ರಿಯವು ರೂಪವಿಷಯದಲ್ಲಿ ಪ್ರವರ್ತಿಸುವಂತೆ ವ್ಯವಹಾರನಯದಿಂದ ಆತನು ಜ್ಞಾನಾಪೇಕ್ಷೆಯಿಂದ ಸರ್ವವ್ಯಾಪಕನಾಗಿರುತ್ತಾನೆ ಮಾತ್ರವಲ್ಲದೆ ಪ್ರದೇಶಾಪೇಕ್ಷೆಯಿಂದಲ್ಲ. ರೂಪೀ ಪದಾರ್ಥಗಳನ್ನು ನೋಡುವ ನೇತ್ರೇಂದ್ರಿಯವು ಆ ಪದಾರ್ಥಗಳಲ್ಲಿ ತನ್ಮಯವಾಗದಿರುವಂತೆ ಲೋಕಾಲೋಕಗಳನ್ನು ತಿಳಿಯುವ ಆತ್ಮನೂ ಅವುಗಳಲ್ಲಿ ತನ್ಮಯನಾಗುವುದಿಲ್ಲವೆಂದಭಿಪ್ರಾಯವು ಇಲ್ಲೊಂದು ಪ್ರಶ್ನೆ ಬರಬಹುದು. ಏನೆಂದರೆ:—ಮೇಲೆ ಹೇಳಿದಂತೆ ಆತ್ಮನು, ವ್ಯವಹಾರನಯದಿಂದ ಲೋಕಾಲೋಕಗಳನ್ನು ತಿಳಿಯುತ್ತಾನೆಂದಾದರೆ ವ್ಯವಹಾರನಯದಿಂದಲೇ ಸರ್ವಜ್ಞತ್ವವುಂಟಾಗುವುದು ಮತ್ತು ನಿಶ್ಚಯನಯದಿಂದುಂಟಾಗುವುದಿಲ್ಲವೆಂದು ಹೇಳಿದಂತಾಯಿತು. ಅದು ಹೇಗೆ? ಎಂದು. ಈ ಪ್ರಶ್ನೆಗೆ ಉತ್ತರ:—ಜೀವನು ತನ್ನಾತ್ಮನನ್ನು ತನ್ಮಯನಾಗಿ ತಿಳಿಯುವಂತೆ ಪರದ್ರವ್ಯವನ್ನು ತನ್ಮಯತ್ವದಿಂದ ತಿಳಿಯುವುದಿಲ್ಲ. ಅರ್ಥಾತ್ ಭಿನ್ನ ಸ್ವರೂಪದಿಂದ ತಿಳಿಯುತ್ತಾನೆ. ಈ ಕಾರಣದಿಂದ ವ್ಯವಹಾರನಯವೆಂದು ಹೇಳಿದುದಲ್ಲದೆ ಜ್ಞಾನದ ಅಭಾವದಿಂದಲ್ಲ. ಒಂದುವೇಳೆ ನಿಶ್ಚಯನಯದಿಂದ ತನ್ನನ್ನು ತನ್ಮಯತ್ವದಿಂದ ತಿಳಿಯುವಂತೆ ಪರದ್ರವ್ಯವನ್ನು ತನ್ಮಯನಾಗಿ ತಿಳಿದುದಾದರೆ ಪರಕೀಯ-ಸುಖದುಃಖ-ರಾಗದ್ವೇಷಾದಿಗಳಿಂದ ತಾನೂ ಸುಖಿದುಃಖಿ ರಾಗಿ ಹಾಗೂ ದ್ವೇಷಿಯಾಗುವನು. ಇದು ಮಹತ್ತರವಾದ ದೋಷವಾಗಿದೆ.

ಹೀಗೆಂದಿಗೂ ಆಗಲಾರದು. ಇದಿಷ್ಟೇ ಕಾರಣವಲ್ಲದೆ ಕೇವಲಜ್ಞಾನದಲ್ಲಿ ಯಾವ ಭೇದವೂ ಇರುವುದಿಲ್ಲ. ಅದು ಸ್ವದ್ರವ್ಯವನ್ನು ನಿಸ್ಸಂದೇಹವಾಗಿ ತಿಳಿಯುವಂತೆ ಪರ ದ್ರವ್ಯವನ್ನೂ ತಿಳಿಯುತ್ತದೆ. ಇಲ್ಲಿ ಯಾವ ಜ್ಞಾನದ ಅಪೇಕ್ಷೆಯಿಂದ ಜೀವನು ಸರ್ವವ್ಯಾಪಕನೆಂದು ಹೇಳಲ್ಪಟ್ಟಿರುವನೋ ಆ ಕೇವಲಜ್ಞಾನವು ಅನಂತಸುಖದಿಂದ ಅಭಿನ್ನವಾಗಿರುವುದರಿಂದ ಅರ್ಥಾತ್ ಜ್ಞಾನ ಮತ್ತು ಆನಂದಗಳಲ್ಲಿ ಭೇದವಿಲ್ಲ ದಿರುವುದರಿಂದ ಉಪಾದೇಯವಾಗಿರುತ್ತದೆಂದು ತಿಳಿಯಬೇಕು.

**ಜೇ ಣಿಯಬೋಹಪರಿಟ್ಠಿಯಹಂ, ಜೀವಹಂ ತುಟ್ಟಿಇ ಣಾಣು ।**
**ಇಂದಿಯಜಣಿಯಉ ಜೋಇಯಾ, ತಿಂ ಜಿಉ ಜಡು ವಿ**
**ವಿಯಾಣು ॥ ೫೩ ॥**

"ಯೇನ ನಿಜಬೋಧಪ್ರತಿಷ್ಠಿತಾನಾಂ ಜೀವಾನಾಂ ತ್ರುಟ್ಯತಿ ಜ್ಞಾನಮ್ ।
ಇಂದ್ರಿಯಜನಿತಂ ಯೋಗಿನ್ ತೇನ ಜೀವಂ ಜಡಮಪಿ ವಿಜಾನೀಹಿ ॥ ೫೩ ॥"

**ಅನ್ವಯಾರ್ಥ:**— **ಜೇ**–ಯಾವಕಾರಣದಿಂದ **ಣಿಯಬೋಹಪರಿಟ್ಠಿಯಹಂ**— ಆತ್ಮಜ್ಞಾನದಿಂದ ಕೂಡಿಕೊಂಡಿರುವ **ಜೀವಹಂ**— ಜೀವರುಗಳ **ಇಂದಿಯಜಣಿಯಉ**— ಇಂದ್ರಿಯಜನಿತವಾದ **ಣಾಣು ತುಟ್ಟಿಇ**— ಜ್ಞಾನವು ನಾಶವನ್ನು ಹೊಂದು ತ್ತದೋ **ತಿಂ ಜಿಉ**— ಆಕಾರಣದಿಂದ ಜೀವನನ್ನು **ಜಡು ವಿ ವಿಯಾಣು**— ಜಡನನ್ನಾಗಿಯೂ ತಿಳಿ.

**ಭಾವಾರ್ಥ:**— ಮಹಾಮುನಿಗಳಿಗೆ ವೀತರಾಗನಿರ್ವಿಕಲ್ಪಸಮಾಧಿಯ ಸಮಯ ದಲ್ಲಿ ಸ್ವಸಂವೇದನಜ್ಞಾನವಿರುತ್ತಿದ್ದರೂ ಇಂದ್ರಿಯಜನಿತವಾದ ಜ್ಞಾನವಿರುವುದಿಲ್ಲ ಕೇವಲಜ್ಞಾನಿಗಳಿಗಂತೂ ಯಾವಸಮಯದಲ್ಲಿಯೂ ಇಂದ್ರಿಯಜ್ಞಾನವಿರುವುದಿಲ್ಲ ಹೀಗ ಇಂದ್ರಿಯಜ್ಞಾನಾಭಾವದ ಅಪೇಕ್ಷೆಯಿಂದ ಜೀವನು ಜಡನಾಗಿರುವನೆಂದು ಭಾವವು. ಇಲ್ಲಿ ಇಂದ್ರಿಯಜ್ಞಾನವು ಹೇಯವೂ ಅತೀಂದ್ರಿಯಜ್ಞಾನವು ಉಪಾದೇಯವೂ ಆಗಿರು ತ್ತದೆಂದು ಭಾವಾರ್ಥವು.

**ಕಾರಣವಿರಹಿಉ ಸುದ್ಧಜಿಉ, ವಡ್ಢಇ ಖಿರಇ ಣ ಜೇಣ ।**
**ಚರಮಸರೀರಪಮಾಣು ಜಿಉ, ಜಿಣವರ ಬೋಲ್ಲಹಿಂ ತೇಣ ॥ ೫೪ ॥**

"ಕಾರಣವಿರಹಿತಃ ಶುದ್ಧಜೀವಃ ವರ್ಧತೇ ಕ್ಷರತಿ ನ ಯೇನ ।
ಚರಮಶರೀರಪ್ರಮಾಣಂ ಜೀವಂ ಜಿನವರಾ ಬ್ರುವಂತಿ ತೇನ ॥ ೫೪ ॥"

**ಅನ್ವಯಾರ್ಥ: ಜೇಣ**–ಆವಕಾರಣದಿಂದ. **ಕಾರಣವಿರಹಿಉ ಸುದ್ಧಜಿಉ**— ಹಾನಿವೃದ್ಧಿಗಳಿಗೆ ಕಾರಣವಾದ ಶರೀರನಾಮಕರ್ಮದಿಂದ ರಹಿತನಾದ ಶುದ್ಧಜೀವನು **ಣ ವಡ್ಢಇ ಖಿರಇ**–ವೃದ್ಧಿಯಾಗುವುದಿಲ್ಲ ಮತ್ತು ಹೀನ (ಕಡಿಮೆ) ನಾಗುವುದಿಲ್ಲವೋ **ತೇಣ**— ಆ ಕಾರಣದಿಂದ **ಜಿಣವರ**— ಜಿನೇಂದ್ರದೇವರು **ಜಿಉ ಚರಮಸರೀರ ಪಮಾಣು**— ಜೀವನನ್ನು ಚರಮಶರೀರಪ್ರಮಾಣವುಳ್ಳವನನ್ನಾಗಿ **ಬೋಲ್ಲಹಿಂ**–ಹೇಳು ತ್ತಾರೆ.

**ಭಾವಾರ್ಥ** —ಸಂಸಾರವಸ್ಥೆಯಲ್ಲಿ ಆತ್ಮಪ್ರದೇಶದ ವೃದ್ಧಿಹಾನಿಗಳಿಗೆ ಕಾರಣವಾದ ಶರೀರನಾಮಕರ್ಮದೊಡನೆ ಕೂಡಿರುವುದರಿಂದ ಜೀವನು ವೃದ್ಧಿಹಾನಿಗಳನ್ನು ಹೊಂದುತ್ತಿರುತ್ತಾನೆ ಆದರೆ ಮುಕ್ತಾವಸ್ಥೆಯಲ್ಲಿ ವೃದ್ಧಿಹಾನಿಗಳಿಗೆ ಕಾರಣವಾದ ನಾಮಕರ್ಮದ ಸಂಬಂಧವಿಲ್ಲದಿರುವುದರಿಂದ ಆತನು ವೃದ್ಧಿಹಾನಿಗಳನ್ನು ಹೊಂದದೆ ಚರಮಶರೀರಪ್ರಮಾಣ (ಕೊನೆಯಶರೀರ ಅರ್ಥಾತ್ ಮುಕ್ತಿಯನ್ನು ಪಡೆಯುವುದಕ್ಕಿಂತ ಪೂರ್ವದಲ್ಲಿದ್ದ ಶರೀರಕ್ಕಿಂತ ಸ್ವಲ್ಪ ಕಡಿಮೆಯಾದ ಪರಿಮಾಣ)ವುಳ್ಳವನಾಗಿಯೇ ಇರುತ್ತಾನೆ **ಪ್ರಶ್ನೆ:**—ದೀಪಕ್ಕೆ ಆವರಣವಿರುವವರೆಗೆ ಅದರ ಪ್ರಕಾಶವು ಹೊರಗೆ ವ್ಯಾಪಿಸುವುದಿಲ್ಲ ಪ್ರಕಾಶವನ್ನು ತಡೆಗಟ್ಟುವ ಆವರಣವನ್ನು ತೆಗೆದೊಡನ ದೀಪದ ಪ್ರಕಾಶವು ಹೊರಗೆ ವಿಸ್ತಾರವಾಗಿ ವ್ಯಾಪಿಸುತ್ತದೆ ಅದರಂತೆಯೇ ಮುಕ್ತಾವಸ್ಥೆಯಲ್ಲಿ ಕರ್ಮಬಂಧರೂಪವಾದ ಆವರಣವಿಲ್ಲದಿರುವುದರಿಂದ ಆತ್ಮಪ್ರದೇಶವು ಲೋಕಪ್ರಮಾಣವಾಗಿ ವ್ಯಾಪಿಸಬೇಕು ಹೀಗಿರಲು ಆತ್ಮನು ಶರೀರಪ್ರಮಾಣವುಳ್ಳವನೆಂಬುದು ಹೇಗೆ? **ಉತ್ತರ:**—ದೀಪಪ್ರಕಾಶದ ವಿಸ್ತಾರ(ಹರಡುವಿಕೆ)ವು ಸ್ವಭಾವಜನಿತವಾದುದು. ಅದು ಇನ್ನೊಂದರಿಂದ ಉಂಟಾಮದಲ್ಲ ಆದರಿಂದ ಅದು ಆವರಣದಿಂದ ಮುಚ್ಚಲ್ಪಟ್ಟಿರುವಾಗ ಸಂಕೋಚವನ್ನೂ ಆವರಣವು ಕಳೆದಮೇಲೆ ವಿಸ್ತಾರವನ್ನೂ ಹೊಂದುತ್ತದೆ. ಅರ್ಥಾತ್ ದೀಪದ ಪ್ರಕಾಶದಲ್ಲಿ ವಿಸ್ತರಿಸುವಿಕೆಯು ಸ್ವಾಭಾವಿಕವಾಗಿ ಮೊದಲೇ ಇರುತ್ತಿದ್ದು ಆಮೇಲ ಆವರಣವನ್ನುಂಟುಮಾಡುವುದರಿಂದ ಮಾತ್ರ ಅದು ಸಂಕುಚಿತವಾಗುತ್ತದೆ ಪುನಃ ಆವರಣವನ್ನು ದೂರಗೊಳಿಸಿದೊಡನೆ ಮೊದಲಿನ ವಿಸ್ತಾರವನ್ನೇ ಹೊಂದುತ್ತದೆ ಆದರೆ ಜೀವನಾದರೋ ಅನಾದಿಯಿಂದಲೂ ಕರ್ಮಗಳಿಂದ ಆಚ್ಛಾದಿಸಲ್ಪಟ್ಟಿರುವುದರಿಂದ ಆತನಲ್ಲಿ ಮೊದಲು ಸ್ವಾಭಾವಿಕವಾದ ವಿಸ್ತಾರವಿರುವುದಿಲ್ಲ ಅರ್ಥಾತ್ ಆತನು ಮೊದಲೆಂದೂ ವಿಸ್ತಾರವನ್ನು ಹೊಂದಿರಲಿಲ್ಲ ಆತನಲ್ಲಿ ಶರೀರನಾಮಕರ್ಮಜನಿತಗಳಾದ ಸಂಕೋಚವಿಸ್ತಾರಗಳು ಮಾತ್ರ ಇರುತ್ತವೆ ಅತಏವ ಆತನು ತಾನು ಹೊಂದಿದ ಶರೀರಕ್ಕನುಸಾರವಾಗಿ—ಸ್ಥೂಲಶರೀರದಲ್ಲಿ ಅದರಷ್ಟೇ ವಿಸ್ತರಿಸಿಯೂ, ಸೂಕ್ಷ್ಮಶರೀರದಲ್ಲಿ ಅದರಷ್ಟೇ ಸಂಕುಚಿತನಾಗಿಯೂ ಇರುತ್ತಾನೆ. ಆದಕಾರಣ ಕರ್ಮಸಂಬಂಧರಹಿತನಾದ ಜೀವನು ಒಣಗಿದ ಮಣ್ಣಿನ ಭಾಜನ(ಪಾತ್ರ)ವು ಸಂಕೋಚವಿಸ್ತಾರವನ್ನು ಹೊಂದದೆ ಒಂದೇ ಆಕಾರದಲ್ಲಿರುವಂತೆ ಚರಮಶರೀರದಷ್ಟೇ ಪುರುಷಾಕಾರವುಳ್ಳವನಾಗಿರುತ್ತಾನೆ (ಪ್ರಾಕೃತ ಸಿದ್ಧಭಕ್ತಿಯಲ್ಲಿ. **"ಚರಮಸರೀರೇಣ ತೇ ಹು ಕಿಂಚೂಣಾ"** ಎಂದು ಹೇಳಿರುವಂತೆ ಶುದ್ಧಾತ್ಮನು ಕೊನೆಯ ಶರೀರಪರಿಮಾಣದಿಂದ ನಿಬಿಡರೂಪದಿಂದಲೂ ಉಗುರು ತೊಗಲು ಮೊದಲಾದ ಶರೀರಭಾಗಗಳು ಕಡಮೆಯಾಗಿರುವುದರಿಂದಲೂ ಸ್ವಲ್ಪ ಕಡಮೆಯಾದ ಆಕಾರವುಳ್ಳವನಾಗಿರುತ್ತಾನೆಂದು ತಿಳಿಯಬೇಕು.) ಇಲ್ಲಿ, ಶುದ್ಧಬುದ್ಧ(ಜ್ಞಾನ)ಸ್ವಭಾವವುಳ್ಳ ಪರಮಾತ್ಮನು ಮುಕ್ತಿಯಲ್ಲಿರುವಂತೆ ದೇಹದಲ್ಲಿ ಇರುವವನಾಗಿ ರಾಗಾದಿಗಳ ಅಭಾವವಾಗುತ್ತಿರಲು ಪರಮಾತ್ಮನಮಾನನಾಗುತ್ತಾನೆ ಅಂತಹ ಸ್ವಶುದ್ಧಾತ್ಮನೇ ಉಪಾದೇಯನಾಗಿರುತ್ತಾನೆಂದು ಭಾವಾರ್ಥವು.

**ಅಟ್ಠ ವಿ ಕಮ್ಮಾಇಂ ಬಹುವಿಹಇಂ, ಣವಣವದೋಸ ವಿ ಜೇಣ ।**
**ಸುದ್ಧಹಂ ಏಕ್ಕುವಿ ಅತ್ಥಿ ಣವಿ, ಸುಣ್ಣು ವಿ ವುಚ್ಚಇ ತೇಣ ॥ ೫೫ ॥**

"ಅಷ್ಟಾವಪಿ ಕರ್ಮಾಣಿ ಬಹುವಿಧಾನಿ ನವನವ ದೋಷಾ ಅಪಿ ಯೇನ ।
ಶುದ್ಧಾನಾಂ ಏಕೋಽಪಿ ಅಸ್ತಿ ನೈವ ಶೂನ್ಯೋಽಪಿ ಉಚ್ಯತೇ ತೇನ ॥ ೫೫ ॥"

**ಅನ್ವಯಾರ್ಥ:**—**ಜೇಣ**—ಯಾವ ಕಾರಣದಿಂದ **ಬಹುವಿಹಇಂ**—ಅನೇಕ ಅಂತರ್ಭೇದಗಳುಳ್ಳ **ಅಟ್ಠ ವಿ ಕಮ್ಮಾಇಂ**—ಎಂಟುವಿಧವಾದ ಕರ್ಮಗಳೂ **ಣವ ಣವ ದೋಸ ವಿ**—ಹದಿನೆಂಟು ದೋಷಗಳೂ ಇವುಗಳಲ್ಲಿ **ಏಕ್ಕುವಿ**—ಒಂದು ಕೂಡ **ಸುದ್ಧಹಂ ಣವಿ ಅತ್ಥಿ**—ಶುದ್ಧಾತ್ಮರುಗಳಿಗೆ ಇರುವುದಿಲ್ಲವೋ **ತೇಣ**—ಆದಕಾರಣ ದಿಂದ ಆತ್ಮನು **ಸುಣ್ಣು ವಿ ವುಚ್ಚಇ**—ಶೂನ್ಯನೆಂಮೂ ಹೇಳಲ್ಪಡುತ್ತಾನೆ

**ಭಾವಾರ್ಥ:**—ಶುದ್ಧನಿಶ್ಚಯನಯದಿಂದ ಈ ಆತ್ಮನಲ್ಲಿ ಅನೇಕ ಅಂತರ್ಭೇದ ಗಳುಳ್ಳ ಜ್ಞಾನಾವರಣಮೊದಲಾದೆಂಟು ದ್ರವ್ಯಕರ್ಮಗಳಲ್ಲಿ ಯಾವುದೊಂದೂ ಇರು ವುದಿಲ್ಲ. ಕ್ಷುಧಾದಿದೋಷಗಳಿಗೆ ಕಾರಣಭೂತವಾದ ಕರ್ಮಗಳು ನಾಶವಾಗುವುದ ರಿಂದ ಹಸಿವು ಬಾಯಾರಿಕೆ ಮೊದಲಾದ ಹದಿನೆಂಟು ದೋಷಗಳಲ್ಲಿ ಯಾವುದೊಂದು ದೋಷವೂ ಇರುವುದಿಲ್ಲ ಮತ್ತು ಅಪಿಶಬ್ದದಿಂದ ಸತ್ತಾ, ಚೈತನ್ಯ, ಬೋಧ, ಆನಂದ ಮೊದಲಾದ ಶುದ್ಧಪ್ರಾಣಗಳಿರುತ್ತಿದ್ದರೂ ಇಂದ್ರಿಯ, ಬಲ ಮೊದಲಾದ ಹತ್ತು ಅಶುದ್ಧ ಪ್ರಾಣಗಳಿರುವುದಿಲ್ಲ. ಆದಕಾರಣ ಸಂಸಾರಿಜೀವರುಗಳಲ್ಲಿಯೂ ಶಕ್ತಿರೂಪದಿಂದ ಶುದ್ಧತ್ವವಿರುವುದರಿಂದ ನಿಶ್ಚಯನಯದಿಂದ ರಾಗಾದಿ ವಿಭಾವಗಳ ಶೂನ್ಯತೆಯಿರುತ್ತದೆ ಮುಕ್ತಜೀವರಂತೂ ಪ್ರಕಟವಾಗಿಯೇ ರಾಗಾದಿವಿಭಾವಗಳಿಂದ ಶೂನ್ಯರಾಗಿರುವರು ಆದರೆ ಬೌದ್ಧಮತೀಯರೇ ಮೊದಲಾದವರು ಆತ್ಮನನ್ನು ಸರ್ವಥಾ ಶೂನ್ಯನನ್ನಾಗಿ ತಿಳಿಯುವಂತೆ ಆತನು ಅನಂತಜ್ಞಾನಾದಿಗುಣಗಳಿಂದ ಶೂನ್ಯನಾಗಿರುವುದಿಲ್ಲ. ಇದನ್ನೇ **'ಪಂಚಾಸ್ತಿಕಾಯ'**ದಲ್ಲಿ ಹೀಗೆ ಹೇಳಿರುವರು—**"ಜೇಸಿಂ ಜೀವಸಹಾವೋ ಣತ್ಥಿ ಅಭಾವೋ ಯ ಸವ್ವಹಾ ತತ್ಥ । ತೇ ಹೊಂತಿ ಭಿಣ್ಣದೇಹಾ ಸಿದ್ಧಾ ವಾಚಿಗೋ ಯರಮದೀದಾ"** ಅರ್ಥಾತ್—"ಯಾವ ಸಿದ್ಧರುಗಳ ಜೀವಸ್ವಭಾವವು ನಿಶ್ಚಲವಾಗಿ ರುವುದೋ ಆ ಸ್ವಭಾವದ ಸರ್ವಥಾ ಅಭಾವವಿರುವುದಿಲ್ಲ ಅಂತಹ ಸಿದ್ಧಪರಮೇಷ್ಠಿ ಗಳು ದೇಹರಹಿತರೂ ವಚನಾತೀತರೂ ಅರ್ಥಾತ್ ವಚನದಿಂದ ಹೇಳಲಸಾಧ್ಯವಾದ ಸ್ವರೂಪವುಳ್ಳವರೂ ಆಗಿರುತ್ತಾರೆ". ಹೀಗೆ ಮಿಥ್ಯಾತ್ವರಾಗಾದಿಭಾವಗಳಿಂದ ಶೂನ್ಯನೂ ಚಿದಾನಂದೈಕಸ್ವಭಾವದಿಂದ ಪರಿಪೂರ್ಣನೂ ಆದ ಪರಮಾತ್ಮನು ಉಪಾದೇಯನಾಗಿರು ತ್ತಾನೆಂದು ಭಾವವು.

ಈ ಪ್ರಕಾರವಾಗಿ ಮೂರುವಿಧವಾದ ಆತ್ಮರುಗಳ ಸ್ವರೂಪವನ್ನು ಪ್ರತಿಪಾದಿ ಸುವ ಪ್ರಥಮ ಮಹಾಧಿಕಾರದಲ್ಲಿ, ಜ್ಞಾನಾಪೇಕ್ಷೆಯಿಂದ ವ್ಯವಹಾರನಯದಿಂದ ಲೋಕಾ ಲೋಕವ್ಯಾಪಕನೆಂದು ಹೇಳಲ್ಪಟ್ಟಿರುವ ಪರಮಾತ್ಮನೇ ನಿಶ್ಚಯನಯದಿಂದ ಅಸಂ

ಖ್ಯಾತಪ್ರದೇಶವುಳ್ಳವನಾಗಿದ್ದರೂ ಸ್ವದೇಹಪ್ರಮಾಣವುಳ್ಳವನಾಗಿರುತ್ತಾನೆಂಬ ವಿಷಯವನ್ನು ನಿರೂಪಿಸುವುದರ ಮುಖ್ಯತೆಯಿಂದ ಆರು ಸೂತ್ರಗಳು ಹೇಳಲ್ಪಟ್ಟುವು.

ಮುಂದೆ ದ್ರವ್ಯ, ಗುಣ, ಪರ್ಯಾಯಗಳನ್ನು ನಿರೂಪಿಸುವುದರ ಮುಖ್ಯತೆಯಿಂದ ಮೂರು ಸೂತ್ರಗಳು ಹೇಳಲ್ಪಡುತ್ತವೆ —

**ಅಪ್ಪಾ ಜಣಿಯಉ ಕೇಣ ಣ ವಿ, ಅಪ್ಪೇಂ ಜಣಿಉ ಣ ಕೋಇ ।**
**ದವ್ವಸಹಾವೇಂ ಣಿಚ್ಚು ಮುಣಿ, ಪಜ್ಜಉ ವಿಣಸಇ ಹೋಇ ॥ ೫೬ ॥**

"ಆತ್ಮಾ ಜನಿತಃ ಕೇನ ನಾಪಿ ಆತ್ಮನಾ ಜನಿತಂ ನ ಕಿಮಪಿ ।
ದ್ರವ್ಯಸ್ವಭಾವೇನ ನಿತ್ಯಂ ಮನ್ಯಸ್ವ ಪರ್ಯಾಯಃ ವಿನಶ್ಯತಿ ಭವತಿ ॥ ೫೬ ॥"

**ಅನ್ವಯಾರ್ಥ:**— **ಅಪ್ಪಾ**—ಆತ್ಮನು **ಕೇಣ ವಿ ಣ ಜಣಿಯಉ**—ಯಾರಿಂದಲೂ ಉಂಟುಮಾಡಲ್ಪಡಲಿಲ್ಲ **ಅಪ್ಪೇಂ**—ಆತ್ಮನಿಂದ **ಕೋಇ ಣ ಜಣಿಉ**—ಯಾವುದೊಂದು ದ್ರವ್ಯವೂ ಉಂಟುಮಾಡಲ್ಪಡಲಿಲ್ಲ **ದವ್ವಸಹಾವೇಂ**—ದ್ರವ್ಯಸ್ವಭಾವದಿಂದ **ಣಿಚ್ಚುಮುಣಿ**—ಆತ್ಮನು ನಿತ್ಯನೆಂದು ತಿಳಿ **ಪಜ್ಜಉ ವಿಣಸಇ ಹೋಇ**—ಪರ್ಯಾಯವು ನಾಶವಾಗುತ್ತದೆ ಹಾಗೂ ಉಂಟಾಗುತ್ತದೆ.

**ಭಾವಾರ್ಥ:**—ಸಂಸಾರಿಜೀವನು ವ್ಯವಹಾರನಯದಿಂದ ಶುದ್ಧಾತ್ಮಜ್ಞಾನವಿಲ್ಲದಿರುವ ಕಾರಣದಿಂದ ಸಂಪಾದಿಸಲ್ಪಟ್ಟ ಶುಭಾಶುಭಕರ್ಮಗಳ ನಿಮಿತ್ತದಿಂದ ನರನಾರಕಾದಿ ಪರ್ಯಾಯಗಳಲ್ಲಿ ಜನಿಸು(ಹುಟ್ಟು) ತ್ತಾನೆ ಹಾಗೂ ಮರಣವನ್ನು ಹೊಂದುತ್ತಾನೆ. ಮತ್ತು ತಾನೂ ಶುದ್ಧಾತ್ಮಜ್ಞಾನದಿಂದ ರಹಿತನಾಗಿ ಶುಭಾಶುಭಕರ್ಮಗಳನ್ನು ಮಾಡುತ್ತಾನೆ (ಬಂಧಿಸಿಕೊಳ್ಳುತ್ತಾನೆ). ಆದರೂ ಶುದ್ಧನಿಶ್ಚಯನಯದಿಂದ ಆತನು ಶಕ್ತಿರೂಪದಿಂದ ಶುದ್ಧನಾಗಿಯೇ ಇರುತ್ತಾನೆ. ಆದುದರಿಂದ ಆತನು ಕರ್ಮಗಳಿಂದುಂಟಾಗುವ ನರನಾರಕಾದಿ ಪರ್ಯಾಯಗಳನ್ನು ಹೊಂದುವುದಿಲ್ಲ ಮತ್ತು ತಾನು ಕರ್ಮನೋಕರ್ಮಾದಿಗಳನ್ನೂ ಉಂಟುಮಾಡುವುದಿಲ್ಲ. ಆತನು ಕೇವಲ ಶುದ್ಧನಿಶ್ಚಯನಯದಿಂದ ಮಾತ್ರವೇ ಅಲ್ಲದೆ ವ್ಯವಹಾರನಯದಿಂದಲೂ ಕರ್ಮಾದಿಗಳನ್ನುಂಟುಮಾಡುವುದಿಲ್ಲ. ಈ ಕಾರಣದಿಂದ ದ್ರವ್ಯಾರ್ಥಿಕನಯದಿಂದ ಆತನು ನಿತ್ಯನಾಗಿರುತ್ತಾನೆ ಹಾಗೂ ಪರ್ಯಾಯಾರ್ಥಿಕನಯದಿಂದ ಉತ್ಪತ್ತಿಯನ್ನೂ ನಾಶವನ್ನೂ ಹೊಂದುತ್ತಾನೆ **ಪ್ರಶ್ನೆ:**— ನರನಾರಕಾದಿ ಪರ್ಯಾಯಗಳ ಅಪೇಕ್ಷೆಯಿಂದ ಸಂಸಾರಿಜೀವರುಗಳಲ್ಲಿ ಉತ್ಪತ್ತಿ-ವಿನಾಶಗಳು ಕಂಡುಬರುತ್ತವೆ. ಪರಂತು ಸಿದ್ಧಾತ್ಮ (ಮುಕ್ತಾತ್ಮ)ರಲ್ಲಿ ಈ ಉತ್ಪಾದ-ವ್ಯಯ (ಉತ್ಪತ್ತಿ-ವಿನಾಶ)ಗಳು ಹೇಗೆ ಘಟಿಸುತ್ತವೆ? **ಉತ್ತರ:**—ಮುಕ್ತಾತ್ಮರುಗಳ 'ಅಗುರುಲಘು' ಎಂಬ ಗುಣದ ಪರಿಣತಿರೂಪವಾದ ಅರ್ಥಪರ್ಯಾಯವು ಪರಮಾಗಮದಲ್ಲಿ ಪ್ರಸಿದ್ಧವಾಗಿದೆ. ಅದು ಪ್ರತಿಸಮಯದಲ್ಲಿಯೂ ಆವಿರ್ಭಾವ-ತಿರೋಭಾವರೂಪವಾಗಿರುತ್ತದೆ ಅರ್ಥಾತ್ ಸಮಯ-ಸಮಯದಲ್ಲಿ ಪೂರ್ವಪರಿಣತಿ (ಪರ್ಯಾಯ)ಯ ವ್ಯಯವೂ ಉತ್ತರ ಪರ್ಯಾಯದ ಆವಿರ್ಭಾವ (ಉತ್ಪಾದ)ವೂ ಆಗುತ್ತಿರುತ್ತದೆ. ಈ

ಅರ್ಥಪರ್ಯಾಯದ ಅಪೇಕ್ಷೆಯಿಂದ ಮುಕ್ತಾತ್ಮರಲ್ಲಿ ಉತ್ಪಾದವ್ಯಯಗಳುಂಟಾಗುತ್ತವೆ ಅಥವಾ ಸಮಸ್ತ ಜ್ಞೇಯಪದಾರ್ಥಗಳು ಉತ್ಪಾದ-ವ್ಯಯ-ಧ್ರೌವ್ಯಗಳಿಂದ ಕೂಡಿರುತ್ತವೆ ಮುಕ್ತಾತ್ಮರ ಜ್ಞಾನಕ್ಕೆ ಆ ಜ್ಞೇಯಪದಾರ್ಥಗಳೆಲ್ಲವೂ ಗೋಚರವಾಗುತ್ತವೆ ಹೀಗೆ ಜ್ಞಾನಪರಿಣತಿಯ ಅಪೇಕ್ಷೆಯಿಂದ ಅವರಲ್ಲಿ ಉತ್ಪಾದ-ವ್ಯಯಗಳು ಘಟಿಸುತ್ತವೆ ಅಥವಾ ಮುಕ್ತಾವಸ್ಥೆಯಲ್ಲಿ ಮೊದಲಿದ್ದ ಸಂಸಾರ-ಪರ್ಯಾಯದ ನಾಶವೂ ಸಿದ್ಧಪರ್ಯಾಯದ ಉತ್ಪಾದ ಹಾಗೂ ಶುದ್ಧಜೀವದ್ರವ್ಯದ ಧ್ರೌವ್ಯತ್ವವೂ ಇರುವುದರಿಂದ ಮುಕ್ತಾತ್ಮರುಗಳಲ್ಲಿ ಉತ್ಪಾದ-ವ್ಯಯ-ಧ್ರೌವ್ಯಗಳಿರುತ್ತವೆಂದು ತಿಳಿಯಬೇಕು ಹೀಗೆ ಉತ್ಪಾದ ವ್ಯಯಧ್ರೌವ್ಯಯುಕ್ತವಾದ ಸಿದ್ಧಸ್ವರೂಪವು ಉಪಾದೇಯವಾದುದೆಂದು ಭಾವಾರ್ಥವಾಗಿದೆ.

**ತಂ ಪರಿಯಾಣಹಿ ದವ್ವು ತುಹುಂ, ಜಂ ಗುಣ-ಪಜ್ಜಯ-ಜುತ್ತು ।**
**ಸಹಭುವ ಜಾಣಹಿ ತಾಹಂ ಗುಣ, ಕಮಭುವ ಪಜ್ಜಉ ವುತ್ತು ॥ ೫೭ ॥**

"ತತ್ ಪರಿಜಾನೀಹಿ ದ್ರವ್ಯಂ ತ್ವಂ ಯತ್ ಗುಣಪರ್ಯಾಯಯುಕ್ತಮ್ ।
ಸಹಭುವಃ ಜಾನೀಹಿ ತೇಷಾಂ ಗುಣಾಃ ಕ್ರಮಭುವಃ ಪರ್ಯಾಯಾಃ
ಉಕ್ತಾಃ ॥ ೫೭ ॥"

**ಅನ್ವಯಾರ್ಥ:—ಜಂ—**ಆವುದು. **ಗುಣಪಜ್ಜಯಜುತ್ತು—**ಗುಣ ಮತ್ತು ಪರ್ಯಾಯಗಳಿಂದ ಯುಕ್ತವಾಗಿರುವುದೋ **ತಂ—**ಅದು **ತುಹುಂ ದವ್ವು ಪರಿಯಾಣಹಿ** ನೀನು ದ್ರವ್ಯವೆಂದು ತಿಳಿ **ಸಹಭುವ—**ಒಡನೆ ಉಂಟಾಗಿರುವವುಗಳು ಹಾಗೂ ನಿತ್ಯವಾದವುಗಳು **ತಾಹಂ ಗುಣ ಜಾಣಹಿ—**ಆ ದ್ರವ್ಯಗಳ ಗುಣಗಳೆಂದು ತಿಳಿ **ಕಮಭುವ—**ಕ್ರಮವಾಗಿ ಉಂಟಾಗುವವುಗಳು ಹಾಗೂ ಅನಿತ್ಯವಾದುವುಗಳು **ಪಜ್ಜವು ಉತ್ತು—**ಪರ್ಯಾಯಗಳೆಂದು ಹೇಳಲ್ಪಟ್ಟಿವೆ

**ಭಾವಾರ್ಥ:—**'ತತ್ವಾರ್ಥಸೂತ್ರ'ದಲ್ಲಿ **"ಗುಣಪರ್ಯಯವದ್ದ್ರವ್ಯಂ"** ಎಂದು ಹೇಳಿರುವಂತೆ ದ್ರವ್ಯವು ಗುಣ ಮತ್ತು ಪರ್ಯಾಯಗಳಿಂದ ಕೂಡಿರುತ್ತದೆ ಅಥವಾ ಗುಣಪರ್ಯಾಯಗಳುಳ್ಳುದೇ ದ್ರವ್ಯವಾಗಿರುತ್ತದೆ. ಗುಣಗಳು ದ್ರವ್ಯದೊಡನೆ ಸಹಭಾವಿಗಳಾಗಿರುತ್ತವೆ ಅವು ದ್ರವ್ಯದಲ್ಲಿ ಯಾವಾಗಲೂ ಏಕರೂಪದಿಂದಲೂ ನಿತ್ಯರೂಪದಿಂದಲೂ ಇರುತ್ತವೆ. ಪರ್ಯಾಯಗಳು ನಾನಾರೂಪಗಳಾಗಿದ್ದು, ಒಂದು ಸಮಯದಲ್ಲಿರುವ ಪರ್ಯಾಯವು ಇನ್ನೊಂದು ಸಮಯದಲ್ಲಿರುವುದಿಲ್ಲ. ಹೀಗೆ ಅವು ಪ್ರತಿ ಸಮಯ ಉತ್ಪಾದ-ವ್ಯಯ (ಮೊದಲಿನ ಪರ್ಯಾಯದ ನಾಶ ಹಾಗೂ ಅನಂತರದ ಪರ್ಯಾಯದ ಉತ್ಪತ್ತಿ)ಗಳಿಂದ ಕೂಡಿರುವುವುಗಳಾಗಿರುತ್ತವೆ ಆದಕಾರಣ ಪರ್ಯಾಯಗಳು ಕ್ರಮಭಾವಿಗಳಾಗಿವೆ. ಇದನ್ನೇ **"ನಯಚಕ್ರ"** ದಲ್ಲಿ—**'ಸಹಭುವೋ ಗುಣಾಃ, ಕ್ರಮಭುವಃ ಪರ್ಯಾಯಾಃ"** ಎಂಬ ವಚನದಿಂದ ಸ್ಪಷ್ಟೀಕರಿಸುವರು. ಹೀಗೆಯೇ 'ಅನ್ವಯಿನೋ ಗುಣಾಃ, ವ್ಯತಿರೇಕಿಣಃ ಪರ್ಯಾಯಾಃ' ಎಂಬುದರ ಅಭಿಪ್ರಾಯವೂ ಆಗಿರುತ್ತದೆ.

**ವಿವರಣೆ:**— ಜೀವದ್ರವ್ಯದಲ್ಲಿ ಜ್ಞಾನ, ದರ್ಶನ, ಸುಖ, ವೀರ್ಯಮೊದಲಾದ ಅನಂತಗುಣಗಳಿರುತ್ತವೆ ಪುದ್ಗಲದ್ರವ್ಯದಲ್ಲಿ ಸ್ಪರ್ಶ, ರಸ, ಗಂಧ, ವರ್ಣ ಮೊದಲಾದ ಅನಂತಗುಣಗಳಿರುತ್ತವೆ ಈ ಗುಣಗಳು ದ್ರವ್ಯದಲ್ಲಿ ಸಹಭಾವಿಗಳಾಗಿವೆ, ಅನ್ವಯಿ ಗಳಾಗಿವೆ, ಮತ್ತು ಸದಾ ನಿತ್ಯವಾದುವುಗಳಾಗಿವೆ. ಇವು ದ್ರವ್ಯದೊಡನೆ ತನ್ಮಯ ರೂಪದಿಂದಿದ್ದು ಅದರಿಂದೆಂದೂ ಬೇರೆಯಾಗಲಾರವು. ಪರ್ಯಾಯವು ಸ್ವಭಾವಪರ್ಯಾಯ ವೆಂದೂ ವಿಭಾವಪರ್ಯಾಯವೆಂದೂ ಎರಡು ವಿಧವಾಗಿದೆ ಸಿದ್ಧತ್ವಾದಿಗಳು ಜೀವನ ಸ್ವಭಾವಪರ್ಯಾಯಗಳು ಮತ್ತು ಕೇವಲಜ್ಞಾನಾದಿಗಳು ಸ್ವಭಾವಗುಣಗಳು ಇವು ಜೀವದ್ರವ್ಯದ ಹೊರತು ಇತರ ಯಾವ ದ್ರವ್ಯದಲ್ಲಿಯೂ ಇರುವುದಿಲ್ಲ ಅಸ್ತಿತ್ವ, ವಸ್ತುತ್ವ, ದ್ರವ್ಯತ್ವ ಮತ್ತು ಅಗುರುಲಘುತ್ವ ಈ ಸ್ವಭಾವಗುಣಗಳು ಸರ್ವದ್ರವ್ಯ ಗಳಲ್ಲಿಯೂ ಸಮಾನವಾಗಿರುತ್ತವೆ ಅಗುರುಲಘುಗುಣದ ಪರಿಣಮನ (ಪರ್ಯಾಯ)ವು ಷಡ್ಗುಣ-ಹಾನಿವೃದ್ಧಿರೂಪವಾಗಿರುತ್ತದೆ ಹಾಗೂ ಈ ಸ್ವಭಾವಪರ್ಯಾಯವು ಸಮಸ್ತ ದ್ರವ್ಯಗಳಲ್ಲಿರುತ್ತದೆ ಅರ್ಥಾತ್ ಯಾವುದೊಂದು ದ್ರವ್ಯವೂ ಷಡ್ಗುಣ-ಹಾನಿರಹಿತ ವಾಗಿರುವುದಿಲ್ಲ ಇದೇ ಅರ್ಥಪರ್ಯಾಯವೂ ಶುದ್ಧಪರ್ಯಾಯವೂ ಆಗಿರುತ್ತದೆ ಈ ಶುದ್ಧಪರ್ಯಾಯವು ಸಂಸಾರಿ ಜೀವರುಗಳಲ್ಲಿಯೂ ಸರ್ವ ಅಜೀವ ಪದಾರ್ಥಗಳಲ್ಲಿಯೂ ಸಿದ್ಧರಲ್ಲಿಯೂ ಇರುತ್ತದೆ. ಸಿದ್ಧಪರ್ಯಾಯ ಹಾಗೂ ಕೇವಲಜ್ಞಾನಾದಿಗುಣಗಳು ಸಿದ್ಧ ರಲ್ಲಿ ಮಾತ್ರ ಇರುತ್ತವೆ. ಸಂಸಾರಿ ಜೀವರುಗಳಲ್ಲಿ ಮತಿಜ್ಞಾನಾದಿ ವಿಭಾವಗುಣಗಳೂ ನರನಾರಕಾದಿ ವಿಭಾವಪರ್ಯಾಯಗಳೂ ಇರುತ್ತವೆ ಕೇವಲ ಪರಮಾಣುರೂಪದಿಂದಿರು ವುದು ಪುದ್ಗಲದ್ರವ್ಯವು ವರ್ಣಾದಿಗಳು ಅದರ ಸ್ವಭಾವಗುಣಗಳು ಮತ್ತು ವರ್ಣಾದಿಗಳ ವರ್ಣಾಂತರಾದಿರೂಪಪರಿಣಮನವು ವಿಭಾವಗುಣ-ವ್ಯಂಜನಪರ್ಯಾಯವು. ಹಾಗೆಯೇ ಒಂದು ಪರಮಾಣುವಿನಲ್ಲಿ ಎರಡು ಮೂರು ಮೊದಲಾದ ಅನೇಕ ಪರಮಾಣುಗಳು ಸೇರಿ ಕೊಂಡು ಸ್ಕಂಧರೂಪವಾಗುವಿಕೆಯು ವಿಭಾವದ್ರವ್ಯ-ವ್ಯಂಜನಪರ್ಯಾಯವಾಗಿದೆ ದ್ವ್ಯಣು ಕಾದಿ-ಸ್ಕಂಧಗಳಲ್ಲಿರುವ ವರ್ಣಾದಿಗಳು ವಿಭಾವಗುಣಗಳೆಂದು ಹೇಳಲ್ಪಡುತ್ತವೆ, ಮತ್ತು ವರ್ಣದಿಂದ ವರ್ಣಾಂತರ(ಬೇರೊಂದು ವರ್ಣ)ವನ್ನೂ ರಸದಿಂದ ರಸಾಂತರವನ್ನೂ ಗಂಧ ದಿಂದ ಗಂಧಾಂತರವನ್ನೂ ಹೊಂದುವಿಕೆಯು ವಿಭಾವಪರ್ಯಾಯವೆನಿಸುತ್ತದೆ. ಪರಮಾಣು ರೂಪ-ಶುದ್ಧದ್ರವ್ಯದಲ್ಲಿ ಒಂದು ವರ್ಣ, ಒಂದು ರಸ, ಒಂದು ಗಂಧ, ಶೀತ-ಉಷ್ಣಸ್ಪರ್ಶಗಳ ಲ್ಲೊಂದು ಮತ್ತು ಸ್ನಿಗ್ಧ-ರೂಕ್ಷಸ್ಪರ್ಶಗಳಲ್ಲೊಂದು ಹೀಗೆ ಇವೈದು ಗುಣಗಳು ಮುಖ್ಯ ವಾಗಿರುತ್ತವೆ ಮತ್ತೂ ಅಸ್ತಿತ್ವಾದಿ ಅನಂತಗುಣಗಳಿರುತ್ತವೆ. ಇವೆಲ್ಲವೂ ಸ್ವಭಾವ ಗುಣಗಳೆಂದು ಹೇಳಲ್ಪಡುತ್ತವೆ. ಪರಮಾಣುವಿನ ಆಕಾರವು ಸ್ವಭಾವದ್ರವ್ಯವ್ಯಂಜನ ಪರ್ಯಾಯವಾಗಿದೆ. ವರ್ಣಾದಿ–ಗುಣರೂಪ-ಪರಿಣಮನವು ಸ್ವಭಾವಗುಣವ್ಯಂಜನ ಪರ್ಯಾಯವು. ಜೀವ ಮತ್ತು ಪುದ್ಗಲ ಇವೆರಡು ದ್ರವ್ಯಗಳಲ್ಲಿ ಸ್ವಭಾವ-ವಿಭಾವ ಗಳೆರಡೂ ಇರುತ್ತವೆ. ಧರ್ಮ, ಅಧರ್ಮ, ಆಕಾಶ ಮತ್ತು ಕಾಲ ಇವು ನಾಲ್ಕರಲ್ಲಿ ಅಸ್ತಿತ್ವಾದಿಸ್ವಭಾವ-ಗುಣಗಳೇ ಇರುತ್ತವೆ. ಅರ್ಥಪರ್ಯಾಯುಷಡ್ಗುಣಹಾನಿವೃದ್ಧಿರೂಪ-

ಸ್ವಭಾವಪರ್ಯಾಯ ಇವು ಎಲ್ಲದರಲ್ಲಿಯೂ ಇರುತ್ತವೆ ಧರ್ಮಾದಿ ಚತುರ್ದ್ರವ್ಯಗಳಲ್ಲಿ ವಿಭಾವಗುಣ-ಪರ್ಯಾಯವಿರುವುದಿಲ್ಲ ಆಕಾಶದಲ್ಲಿ ಘಟಾಕಾಶ ಮಠಾಕಾಶ ಎಂದು ಮೊದಲಾಗಿ ಹೇಳುವಿಕೆಯು ಉಪಚಾರಮಾತ್ರವಾಗಿದೆ. ಹೀಗೆ ಷಟ್‌ದ್ರವ್ಯಗಳ ಗುಣ ಪರ್ಯಾಯಗಳು ಹೇಳಲ್ಪಟ್ಟಿವೆ. ಈ ಆರು ದ್ರವ್ಯಗಳಲ್ಲಿ ಶುದ್ಧಗುಣ ಹಾಗೂ ಶುದ್ಧಪರ್ಯಾಯಯುಕ್ತವಾದ ಶುದ್ಧಜೀವದ್ರವ್ಯವೇ ಉಪಾದೇಯವಾಗಿರುತ್ತದೆಂದು ಭಾವಾರ್ಥವು.

**ಅಪ್ಪಾ ಬುಜ್ಝಹಿ ದವ್ವು ತುಹುಂ, ಗುಣ ಪುಣು ದಂಸಣು ಣಾಣು ।**
**ಪಜ್ಜಯ ಚಉಗಇಭಾವ ತಣು, ಕಮ್ಮವಿಣಿಮ್ಮಿಯ ಜಾಣು ॥ ೫೮ ॥**

"ಆತ್ಮಾನಂ ಬುಧ್ಯಸ್ವ ದ್ರವ್ಯಂ ತ್ವಂ ಗುಣೌ ಪುನಃ ದರ್ಶನಂ ಜ್ಞಾನಮ್ ।
ಪರ್ಯಾಯಾನ್ ಚತುರ್ಗತಿಭಾವಾನ್ ತನುಂ ಕರ್ಮವಿನಿರ್ಮಿತಾನ್
ಜಾನೀಹಿ ॥ ೫೮ ॥"

**ಅನ್ವಯಾರ್ಥ:**— ಶಿಷ್ಯನೇ! **ತುಹುಂ**— ನೀನು **ಅಪ್ಪಾ ದವ್ವು ಬುಜ್ಝಹಿ**—ಆತ್ಮನನ್ನು ದ್ರವ್ಯವನ್ನಾಗಿ ತಿಳಿ. **ಪುಣು**—ಮತ್ತೆ **ದಂಸಣು ಣಾಣು**— ದರ್ಶನವನ್ನೂ ಜ್ಞಾನವನ್ನೂ **ಗುಣು ಬುಜ್ಝಹಿ**— ಗುಣಗಳನ್ನಾಗಿ ತಿಳಿ **ಚಉಗಇಭಾವ ತಣು**— ಚತುರ್ಗತಿಗಳ ಭಾವಗಳನ್ನೂ ಶರೀರವನ್ನೂ **ಕಮ್ಮವಿಣಿಮ್ಮಿಯ**— ಕರ್ಮವಿನಿರ್ಮಿತ (ಕರ್ಮಜನಿತ)ವಾದ **ಪಜ್ಜಯ ಜಾಣು**— ಪರ್ಯಾಯಗಳನ್ನಾಗಿ ತಿಳಿ.

**ಭಾವಾರ್ಥ:**— ಶಿಷ್ಯನೇ! ನೀನು ಶುದ್ಧನಿಶ್ಚಯನಯದಿಂದ ಶುದ್ಧಬುದ್ಧೈಕಸ್ವಭಾವವುಳ್ಳ ಆತ್ಮನು ದ್ರವ್ಯವೆಂದೂ ಜ್ಞಾನದರ್ಶನಗಳು ಆತ್ಮನ ಗುಣಗಳೆಂದೂ ತಿಳಿ. ಜ್ಞಾನವು ಸವಿಕಲ್ಪವೂ ದರ್ಶನವು ನಿರ್ವಿಕಲ್ಪವೂ ಆಗಿರುತ್ತದೆ ಜ್ಞಾನವು ಎಂಟು ವಿಧವಾಗಿದೆ ಅದರಲ್ಲಿ ಕೇವಲಜ್ಞಾನವು ಪೂರ್ಣವೂ ಅಖಂಡವೂ ಶುದ್ಧವೂ ಆಗಿರುತ್ತದೆ. ಮತಿ, ಶ್ರುತ, ಅವಧಿ ಮತ್ತು ಮನಃಪರ್ಯಯ ಇವು ನಾಲ್ಕು ಜ್ಞಾನಗಳು ಸಮ್ಯಗ್‌ಜ್ಞಾನಗಳಾಗಿವೆ. ಕುಮತಿ, ಕುಶ್ರುತ ಹಾಗೂ ಕುಅವಧಿ ಇವು ಮೂರು ಮಿಥ್ಯಾಜ್ಞಾನಗಳು. ಕೇವಲಜ್ಞಾನವನ್ನು ಬಿಟ್ಟು ಉಳಿದ ಈ ಏಳು ಜ್ಞಾನಗಳು ಖಂಡಜ್ಞಾನಗಳೂ ಅಶುದ್ಧಜ್ಞಾನಗಳೂ ಆಗಿರುತ್ತವೆ ಅರ್ಥಾತ್ ಇವುಗಳು ಕೇವಲಜ್ಞಾನದಂತೆ ಅಖಂಡಜ್ಞಾನಗಳಾಗಿಯೂ ಸರ್ವಥಾ ಶುದ್ಧಜ್ಞಾನಗಳಾಗಿಯೂ ಇರುವುದಿಲ್ಲ. ಅತಏವ ಪರಮಾತ್ಮನಲ್ಲಿ ಅಖಂಡ-ಕೇವಲಜ್ಞಾನವೊಂದೇ ಇರುತ್ತದೆ. ದರ್ಶನವು ನಾಲ್ಕು ವಿಧವಾಗಿದೆ. ಈ ನಾಲ್ಕರಲ್ಲಿ ಕೇವಲದರ್ಶನವು ಸಕಲ(ಪೂರ್ಣ-ಅಖಂಡ)ವೂ ಶುದ್ಧವೂ ಆಗಿರುತ್ತದೆ. ಉಳಿದ ಚಕ್ಷುದರ್ಶನ, ಅಚಕ್ಷುದರ್ಶನ ಮತ್ತು ಅವಧಿದರ್ಶನ ಇವು ಮೂರು ವಿಕಲ ಹಾಗೂ ಅಶುದ್ಧಗಳಾಗಿವೆ ಗುಣಗಳಲ್ಲಿ ಸಾಧಾರಣಗುಣಗಳೆಂದೂ ಅಸಾಧಾರಣಗುಣಗಳೆಂದೂ ಸಾಧಾರಣಾಸಾಧಾರಣಗುಣಗಳೆಂದೂ ಮೂರುಭೇದಗಳಿರುತ್ತವೆ. ಜೀವದ್ರವ್ಯದಲ್ಲಿರುವ ಅಸ್ತಿತ್ವ, ವಸ್ತುತ್ವ, ಪ್ರಮೇಯತ್ವಾದಿಗಳು ಇತರದ್ರವ್ಯಗಳಲ್ಲಿಯೂ ಇರುವುದರಿಂದ ಸಾಧಾರಣಗುಣಗಳಾಗಿವೆ ಜ್ಞಾನಸುಖಾದಿಗಳು ಜೀವ

ದ್ರವ್ಯದಲ್ಲಿ ಮಾತ್ರವೇ ಇರುವುದರಿಂದ ಸ್ವಜಾತಿಯಲ್ಲಿ ಸಾಧಾರಣಗಳಾಗಿದ್ದರೂ ವಿಜಾತಿಯಲ್ಲಿ ಅಸಾಧಾರಣಗಳಾಗಿವೆ ಪುದ್ಗಲವು ಮೂರ್ತದ್ರವ್ಯವಾಗಿರುವುದರಿಂದ ಅಮೂರ್ತತ್ವಗುಣವು ಪುದ್ಗಲದ್ರವ್ಯದ ಕುರಿತು ಅಸಾಧಾರಣವಾಗಿಯೂ ಆಕಾಶಾದಿಗಳ ಕುರಿತು ಸಾಧಾರಣವಾಗಿಯೂ ಇರುತ್ತದೆ. ಪ್ರದೇಶತ್ವಗುಣವು ಕಾಲದ್ರವ್ಯದ ಹೊರತು ಇತರ ಐದು ದ್ರವ್ಯಗಳಲ್ಲಿರುವುದರಿಂದ ಈ ಐದು ದ್ರವ್ಯಗಳ ಅಪೇಕ್ಷೆಯಿಂದ ಸಾಧಾರಣವೂ ಕಾಲದ್ರವ್ಯದಲ್ಲಿಲ್ಲದಿರುವುದರಿಂದ ಕಾಲದ್ರವ್ಯಾಪೇಕ್ಷೆಯಿಂದ ಅಸಾಧಾರಣವೂ ಆಗಿರುತ್ತದೆ ಪುದ್ಗಲಪರಮಾಣುವು ದ್ರವ್ಯವಾಗಿದ ಸ್ಪರ್ಶರಸಗಂಧವರ್ಣರೂಪವಾದ ಮೂರ್ತತ್ವವು ಅದರ ವಿಶೇಷಗುಣವಾಗಿರುತ್ತದೆ ಶಬ್ದಬಂಧಾದಿಗಳು ಅದರ ಪರ್ಯಾಯಗಳು ಹೀಗೆಯೇ ಇತರ ಎಲ್ಲ ದ್ರವ್ಯಗಳಲ್ಲಿಯೂ ಅವುಗಳ ಸ್ವರೂಪವು **'ದ್ರವ್ಯ'**ವೆಂದೂ ಅಸ್ತಿತ್ವಮೊದಲಾದುದು **'ಗುಣ'**ವೆಂದೂ ಸ್ವಭಾವದ ಪರಿಣತಿಯು **'ಪರ್ಯಾಯ'**ವೆಂದೂ ತಿಳಿಯಬೇಕು ಜೀವ ಮತ್ತು ಪುದ್ಗಲದ ಹೊರತು ಇತರ ನಾಲ್ಕುದ್ರವ್ಯಗಳಲ್ಲಿ ವಿಭಾವಗುಣ ಹಾಗೂ ವಿಭಾವಪರ್ಯಾಯಗಳು ಇರುವುದಿಲ್ಲ. ಜೀವ-ಪುದ್ಗಲಗಳಲ್ಲಿ ಸ್ವಭಾವ-ವಿಭಾವಗಳೆರಡೂ ಇರುತ್ತವೆ ಆದರೆ ಸಿದ್ಧ(ಮುಕ್ತಜೀವ)ರಲ್ಲಿ ಸ್ವಭಾವಮಾತ್ರವಿರುತ್ತದೆ ಮತ್ತು ಸಂಸಾರಿಗಳಲ್ಲಿ ವಿಭಾವದ ಮುಖ್ಯತೆಯಿರುತ್ತದೆ ಪುದ್ಗಲಪರಮಾಣುವಿನಲ್ಲಿ ಸ್ವಭಾವವೂ ಸ್ಕಂಧದಲ್ಲಿ ವಿಭಾವವೂ ಮಾತ್ರವಿರುತ್ತದೆ ಹೀಗಿದ್ದು ಆರು ದ್ರವ್ಯಗಳ ಸಂಕ್ಷಿಪ್ತ-ವ್ಯಾಖ್ಯೆಯೆಂದು ತಿಳಿಯಬೇಕು.

ಈ ಪ್ರಕಾರವಾಗಿ ಮೂರುವಿಧದ ಆತ್ಮರುಗಳ ಸ್ವರೂಪವನ್ನು ಪ್ರತಿಪಾದಿಸುವ ಪ್ರಥಮ-ಮಹಾಧಿಕಾರದಲ್ಲಿ ದ್ರವ್ಯ, ಗುಣ, ಪರ್ಯಾಯಗಳನ್ನು ನಿರೂಪಿಸುವುದರ ಮುಖ್ಯತೆಯಿಂದ ಮೂರು ಸೂತ್ರಗಳು ಹೇಳಲ್ಪಟ್ಟವು

ಮುಂದೆ ನಾಲ್ಕು ಸೂತ್ರಗಳಿಂದ ಅನಾದಿಕರ್ಮಸಂಬಂಧ ಹಾಗೂ ಕರ್ಮಶಕ್ತಿಯ ಸ್ವರೂಪವನ್ನೂ ಆಮೇಲೆ ನಾಲ್ಕು ಸೂತ್ರಗಳಿಂದ ಕರ್ಮಫಲವನ್ನೂ ನಿರೂಪಿಸುತ್ತಾರೆ.

**ಜೀವಹಂ ಕಮ್ಮು ಅಣಾಇ ಜಿಯ, ಜಣಿಯಉ ಕಮ್ಮು ಣ ತೇಣ ।**
**ಕಮ್ಮೇಂ ಜೀಉ ವಿ ಜಣಿಉ ಣವಿ, ದೋಹಿಂ ವಿ ಆಇ ಣ ಜೇಣ ॥ ೫೯ ॥**

"ಜೀವಾನಾಂ ಕರ್ಮಾಣಿ ಅನಾದೀನಿ ಜೀವ ಜನಿತಂ ಕರ್ಮ ನ ತೇನ ।
ಕರ್ಮಣಾ ಜೀವೋऽಪಿ ಜನಿತಃ ನೈವ ದ್ವಯೋರಪಿ ಆದಿಃ ನ ಯೇನ ॥ ೫೯ ॥"

**ಅನ್ವಯಾರ್ಥ:—ಜಿಯ**—ಜೀವನೇ! **ಜೀವಹಂ ಕಮ್ಮು ಅಣಾಇ**—ಜೀವರುಗಳಿಗೆ ಕರ್ಮಗಳು ಅನಾದಿಗಳಾಗಿವೆ ಅರ್ಥಾತ್ ಜೀವರುಗಳಿಗೆ ಕರ್ಮಗಳೊಡನೆ ಅನಾದಿಸಂಬಂಧವಿರುತ್ತದೆ. **ತೇಣ**—ಆ ಜೀವನಿಂದ. **ಕಮ್ಮು ಣ ಜಣಿಯಉ**—ಕರ್ಮವು ಉಂಟುಮಾಡಲ್ಪಡಲಿಲ್ಲ **ಕಮ್ಮೇಂ**—ಕರ್ಮದಿಂದ **ಜೀಉ ವಿ ಣವಿ**

**ಜಣಿಉ**— ಜೀವನೂ ಉಂಟುಮಾಡಲ್ಪಡಲಿಲ್ಲ (ಹುಟ್ಟಲಿಲ್ಲ) **ಜೇಣ**— ಯಾವ ಕಾರಣ ದಿಂದ **ದೋಹಿಂ ವಿ**— ಜೀವ, ಕರ್ಮ ಇವೆರಡಕ್ಕೂ **ಣ ಆಇ**— ಆದಿಯಿರುವುದಿಲ್ಲ ಅರ್ಥಾತ್ ಜೀವಕರ್ಮಗಳೆರಡೂ ಅನಾದಿಗಳಾಗಿವೆ.

**ಭಾವಾರ್ಥ:**— ವ್ಯವಹಾರನಯದಿಂದ ಪರ್ಯಾಯಪರಂಪರಾಪೇಕ್ಷೆಯಿಂದ ಜೀವ ನಿಗೆ ಪ್ರತಿಸಮಯ ನವೀನಕರ್ಮಗಳ ಬಂಧವಾಗುತ್ತದೆ ಬೀಜವೃಕ್ಷನ್ಯಾಯದಂತೆ ಅರ್ಥಾತ್ ಬೀಜದಿಂದ ವೃಕ್ಷ(ಮರವೂ) ವೃಕ್ಷದಿಂದ ಬೀಜವೂ ಹುಟ್ಟುವಂತೆ ಜೀವನಿಗೆ ಕರ್ಮಗಳಿಂದ ದೇಹಾದಿಗಳೂ ಜೀವನ ಆ ದೇಹಾದಿಗಳ ಶುಭಾಶುಭಕ್ರಿಯೆಗಳಿಂದ ಕರ್ಮಗಳೂ ಜನಿಸುತ್ತವೆ. ಈ ಪರಂಪರೆಯು ಅನಾದಿಯಾಗಿರುತ್ತದೆ. ಪರಂತು ಶುದ್ಧನಿಶ್ಚಯನಯದಿಂದ ಜೀವನು ನಿರ್ಮಲ-ಜ್ಞಾನದರ್ಶನಮಯನಾಗಿರುವನು. ಜೀವನು ಕರ್ಮಗಳನ್ನಾಗಲಿ, ಕರ್ಮಗಳು ಜೀವನನ್ನಾಗಲಿ ಉಂಟುಮಾಡುವುದಿಲ್ಲ. ಜೀವನು ಅನಾದಿಯಾಗಿರುವಂತೆ ಕರ್ಮಗಳೂ ಅನಾದಿಗಳಾಗಿವೆ ಜೀವನು ಅನಾದಿ ಕಾಲದಿಂದ ಕರ್ಮಬದ್ಧನಾಗಿರುತ್ತಾನೆ ಹಾಗೂ ಕರ್ಮಗಳು ಕ್ಷಯ(ನಾಶ)ದಿಂದ ಮುಕ್ತ (ಸಿದ್ಧ)ನಾಗುತ್ತಾನೆ. ಈ ವ್ಯಾಖ್ಯಾನದಿಂದ "ಜೀವನು ಸದಾಮುಕ್ತ(ಕರ್ಮರಹಿತ) ನಾಗಿರುತ್ತಾನೆ" ಎಂದು ಹೇಳುವವರ ಮತವು ನಿರಾಕರಿಸಲ್ಪಡುತ್ತದೆ ಗ್ರಂಥಾಂತರ ದಲ್ಲಿಯೂ ಹೀಗೆ ಹೇಳಲ್ಪಟ್ಟಿದೆ — "**ಮುಕ್ತಶ್ಚೇತ್ಪ್ರಾಗ್ಭವೇ ಬದ್ಧೋ ನೋ ಬದ್ಧೋ ಮೋಚನಂವೃಥಾ । ಅಬದ್ಧೋ ಮೋಚನಂ ನೈವ ಮುಂಚೇರರ್ಥೋ ನಿರರ್ಥಕಃ ॥ ಅನಾದಿತೋ ಹಿ ಮುಕ್ತಶ್ಚೇತ್ಪಶ್ಚಾದ್ಬಂಧಃ ಕಥಂ ಭವೇತ್ । ಬಂಧನಂ ಮೋಚನಂ ನೋಚೇನ್ಮುಂಚೇರರ್ಥೋ ನಿರರ್ಥಕಃ ॥**" ಇದರ ಅಭಿಪ್ರಾಯವೇ ನೆಂದರೆ — ಜೀವನು ಮೊದಲು ಕರ್ಮದಿಂದ ಬದ್ಧನಾಗಿದ್ದರೆ ಅನಂತರ ಮುಕ್ತನಾಗ ಬಲ್ಲನು ಮೊದಲು ಬದ್ಧನಾಗದಿರುವವನಾವರೆ ಆತನು ಮುಕ್ತನಾದನೆಂದು ಹೇಳುವಿಕೆಯು ವ್ಯರ್ಥವು. 'ಮುಕ್ತಿ' ಅಥವಾ 'ಮೋಕ್ಷ'ವೆಂದರೆ 'ಬಿಡುಗಡೆ' ಎಂದೂ 'ಮುಕ್ತ' ಎಂದರೆ ಬಿಡಲ್ಪಟ್ಟವನೆಂದೂ ಅರ್ಥವು. ಬಂಧಿಸಲ್ಪಡದವನು ಬಿಡುಗಡೆಯನ್ನು ಹೊಂದುವುದಾದರೂ ಹೇಗೆ? ಅದರಂತೆ ಅಬದ್ಧನಾದವನು ಮುಕ್ತನಾದನೆಂಬಲ್ಲಿ 'ಮುಕ್ತ' ಶಬ್ದದ ಅರ್ಥವು ನಿರರ್ಥಕವಾಗಿದೆ. ಜೀವನು ಅನಾದಿಯಿಂದ ಮುಕ್ತನಾಗಿರುವುದಾದರೆ ಆ ಮೇಲೆ ಆತನಿಗೆ ಬಂಧವು ಹೇಗುಂಟಾಗುವುದು? ಹೀಗೆ ಬಂಧನವಿದ್ದುದು ಮಾತ್ರ ಮುಕ್ತಿಯಾಯಿತೆಂದು ಹೇಳುವುದು ಯುಕ್ತಿಸಂಗತವಾದುದಲ್ಲದೆ ಬಂಧನವಿಲ್ಲದಿರುವಲ್ಲಿ ಮುಕ್ತನೆನ್ನುವ ಮಾತು ನಿರರ್ಥಕವಾಗಿದೆ. ಅತಏವ ಜೀವನು ಅನಾದಿಕರ್ಮಬದ್ಧನಾಗಿದ್ದು ಸರ್ವಕರ್ಮಗಳ ಸಂಪೂರ್ಣಕ್ಷಯದಿಂದ ಮುಕ್ತನಾಗುವನಲ್ಲದೆ ಆತನು ಸದಾಮುಕ್ತ ಅಥವಾ ಸದಾಶಿವನಾಗಿರುವುದಿಲ್ಲವೆಂದು ಭಾವವು.

**ಏಹು ವವಹಾರೇಂ ಜೀವಡಉ, ಹೇಉ ಲಹೇವಿಣು ಕಮ್ಮು ।**
**ಬಹುವಿಹಭಾವೇಂ ಪರಿಣವಇ, ತೇಣ ಜಿ ಧಮ್ಮು ಅಹಮ್ಮು ॥ ೬೦ ॥**

"ಏಷ ವ್ಯವಹಾರೇಣ ಜೀವಃ ಹೇತುಂ ಲಬ್ಧ್ವಾ ಕರ್ಮ ।
ಬಹುವಿಧಭಾವೇನ ಪರಿಣಮತಿ ತೇನ ಏವ ಧರ್ಮಃ ಅಧರ್ಮಃ ॥ ೬೦ ॥"

**ಅನ್ವಯಾರ್ಥ:— ಏಹು ಜೀವಡಲು**— ಈ ಜೀವನು **ವವಹಾರೇಂ**—ವ್ಯವಹಾರನಯದಿಂದ **ಕಮ್ಮು ಹೇಉ**— ಕರ್ಮರೂಪವಾದ ಕಾರಣವನ್ನು **ಲಹೇವಿಣು**— ಪಡೆದು **ಬಹುವಿಹಭಾವೇಂ**— ನಾನಾವಿಧವಾದ ವಿಕಲ್ಪಭಾವದಿಂದ **ಪರಿಣವಇ**— ಪರಿಣಮಿಸುತ್ತಾನೆ **ತೇಣ ಜಿ**—ಆಕಾರಣದಿಂದಲೇ **ಧಮ್ಮು ಅಹಮ್ಮು**— ಪುಣ್ಯರೂಪನಾಗಿಯೂ ಪಾಪರೂಪನಾಗಿಯೂ ಆಗುತ್ತಾನೆ

**ಭಾವಾರ್ಥ:**— ಈ ಜೀವನು ಶುದ್ಧನಿಶ್ಚಯನಯದಿಂದ ವೀತರಾಗಚಿದಾನಂದೈಕಸ್ವಭಾವವುಳ್ಳವನಾಗಿದ್ದರೂ ವ್ಯವಹಾರನಯದಿಂದ ವೀತರಾಗನಿರ್ವಿಕಲ್ಪಸ್ವಸಂವೇದನಜ್ಞಾನದ ಅಭಾವದಿಂದ ಸಂಪಾದಿಸಲ್ಪಟ್ಟ ಶುಭಾಶುಭಕರ್ಮಗಳ ಕಾರಣದಿಂದ ಪುಣ್ಯಾತ್ಮನೂ ಪಾಪಾತ್ಮನೂ ಆಗುತ್ತಾನೆ ಅರ್ಥಾತ್ ಸ್ವಾರ್ಜಿತ-ಶುಭಕರ್ಮದ ದೆಸೆಯಿಂದ ಪುಣ್ಯವಂತನಾಗಿಯೂ ಪಾಪಕರ್ಮದ ದೆಸೆಯಿಂದ ಪಾಪಿಯೂ ಆಗುತ್ತಾನೆ ಹೀಗೆ ವ್ಯವಹಾರದಿಂದ ಪುಣ್ಯಪಾಪಸ್ವರೂಪನಾಗಿದ್ದರೂ, ಪರಮಾತ್ಮಾನುಭವದಲ್ಲಿ ತನ್ಮಯರೂಪವಾದ ವೀತರಾಗಸಮ್ಯಗ್ದರ್ಶನ,ಜ್ಞಾನ, ಚಾರಿತ್ರ ಮತ್ತು ಬಾಹ್ಯಪದಾರ್ಥಗಳಲ್ಲಿ ಇಚ್ಛಾನಿರೋಧರೂಪವಾದ ತಪಸ್ಸು ಈ ಚತುರ್ವಿಧನಿಶ್ಚಯಾರಾಧನೆಗಳನ್ನು ಭಾವಿಸುವ ಸಮಯದಲ್ಲಿ ಸಾಕ್ಷಾತ್ ಉಪಾದೇಯಭೂತನೂ ವೀತರಾಗಪರಮಾನಂದೈಕರೂಪನೂ ಆದ ಶುದ್ಧಾತ್ಮನೇ ಉಪಾದೇಯನಾಗಿರುವನು

**ತೇ ಪುಣು ಜೀವಹಂ ಜೋಇಯಾ, ಅಟ್ಠ ವಿ ಕಮ್ಮ ಹವಂತಿ ।**
**ಜೇಹಿಂ ಜಿ ಝಂಪಿಯ ಜೀವ ಣವಿ, ಅಪ್ಪಸಹಾಉ ಲಹಂತಿ ॥ ೬೧ ॥**

"ತಾನಿ ಪುನಃ ಜೀವಾನಾಂ ಯೋಗಿನ್ ಅಷ್ಟೌ ಅಪಿ ಕರ್ಮಾಣಿ ಭವಂತಿ ।
ಯೈಃ ಏವ ಛಾದಿತಾಃ ಜೀವಾಃ ನೈವ ಆತ್ಮಸ್ವಭಾವಂ ಲಭಂತೇ ॥ ೬೧ ॥"

**ಅನ್ವಯಾರ್ಥ: - ಜೋಇಯಾ**— ಎಲೈ ಯೋಗಿಯೇ! **ಜೀವಹಂ**— ಜೀವರುಗಳ **ತೇ ಪುಣು ಕಮ್ಮ**— ಆ ಕರ್ಮಗಳಾದರೋ **ಅಟ್ಠ ವಿ ಹವಂತಿ**— ಎಂಟುವಿಧವುಳ್ಳವುಗಳಾಗಿರುತ್ತವೆ. **ಜೇಹಿಂ ಜಿ ಝಂಪಿಯ**—ಯಾವ ಕರ್ಮಗಳಿಂದಲೇ ಆಚ್ಛಾದಿಸಲ್ಪಟ್ಟಿರುವ **ಜೀವ**— ಜೀವರುಗಳು **ಣವಿ ಅಪ್ಪಸಹಾಉ ಲಹಂತಿ**— ಆತ್ಮಸ್ವಭಾವವನ್ನು ಹೊಂದುವುದಿಲ್ಲ.

**ಭಾವಾರ್ಥ:**—ಆತ್ಮಸ್ವಭಾವವು ಸಮ್ಯಕ್ತ್ವಾದ್ಯಷ್ಟಗುಣರೂಪವಾಗಿರುತ್ತದೆ ಹೇಗೆಂದರೆ.—"**ಸಮ್ಮತ್ತಣಾಣದಂಸಣವೀರಿಯಸುಹುಮಂ ತಹೇವ ಅವಗಹಣಂ । ಅಗುರುಗಲಹುಗಂ ಅವ್ವಾಬಾಹಂ ಆಟ್ಠಗುಣಾ ಹೊಂತಿ ಸಿದ್ಧಾಣಂ॥**" ಅಂದರೆ ಕ್ಷಾಯಿಕ ಸಮ್ಯಕ್ತ್ವ, ಕೇವಲಜ್ಞಾನ, ಕೇವಲದರ್ಶನ, ಅನಂತವೀರ್ಯ, ಸೂಕ್ಷ್ಮತ್ವ, ಅವಗಾಹನತ್ವ, ಅಗುರುಲಘುತ್ವ, ಅವ್ಯಾಬಾಧತ್ವ ಇವೆಂಟುಗುಣಗಳು ಸಿದ್ಧರಲ್ಲಿರುತ್ತವೆ ಅರ್ಥಾತ್

ಈ ಎಂಟುಗುಣಗಳ ಸಮೂಹವು ಆತ್ಮನ ನಿಜಸ್ವಭಾವವಾಗಿರುತ್ತದೆ ಶುದ್ಧ-ಆತ್ಮಾದಿ ಪದಾರ್ಥಗಳಲ್ಲಿ ವಿಪರೀತಶ್ರದ್ಧಾನರಹಿತವಾದ ಪರಿಣಾಮವು ಕ್ಷಾಯಿಕಸಮ್ಯಕ್ತ್ವ ವಾಗಿರುತ್ತದೆ. ಲೋಕ-ತ್ರಯ-ಕಾಲತ್ರಯವರ್ತಿಸರ್ವ-ಪದಾರ್ಥಗಳನ್ನು ಏಕಸಮಯ ದಲ್ಲಿ ವಿಶೇಷರೂಪದಿಂದ ತಿಳಿಯುವುದು ಕೇವಲಜ್ಞಾನವೆನಿಸುತ್ತದೆ ಜಗತ್ತ್ರಯ-ಕಾಲತ್ರಯವರ್ತಿಪದಾರ್ಥಗಳ ಯುಗಪತ್ಸಾಮಾನ್ಯಗ್ರಹಣವು ಕೇವಲದರ್ಶನವು ಕೇವಲಜ್ಞಾನದಲ್ಲಿ ಅನಂತಜ್ಞಾಯಕಶಕ್ತಿರೂಪವಾದುದು ಅನಂತವೀರ್ಯವು ಅತೀಂದ್ರಿಯ ಜ್ಞಾನವಿಷಯಕವಾದುದು ಸೂಕ್ಷ್ಮತ್ವವು ಏಕಜೀವಾವಗಾಹಕ್ಷೇತ್ರದಲ್ಲಿ ಅನಂತ ಜೀವಾವಗಾಹಸಾಮರ್ಥ್ಯಕ್ಕೆ ಅವಗಾಹನತ್ವವೆಂದು ಹೆಸರು ಏಕಾಂತಗುರುಲಘು ತ್ವಾಭಾವವು ಅಗುರುಲಘುತ್ವಗುಣವಾಗಿದೆ ವೇದನೀಯ-ಕರ್ಮೋದಯಜನಿತವಾದ ಸಮಸ್ತಬಾಧೆಗಳ ವಿನಾಶದಿಂದುಟಾಗುವ ನಿರಾಬಾಧಗುಣವು ಅವ್ಯಾಬಾಧಗುಣವೆನಿ ಸುತ್ತದೆ. ಈ ಎಂಟುಗುಣಗಳು ಸಂಸಾರಾವಸ್ಥೆಯಲ್ಲಿ ಜ್ಞಾನಾವರಣಾದಿ ಎಂಟು ಕರ್ಮಗಳಿಂದ ಆಚ್ಛಾದಿಸಲ್ಪಟ್ಟಿರುತ್ತವೆ ಹೇಗೆಂದರೆ:— ಸಮ್ಯಕ್ತ್ವಗುಣವು ಮಿಥ್ಯಾತ್ವ ವೆಂಬ ದರ್ಶನಮೋಹನೀಯಕರ್ಮದಿಂದಲೂ, ಕೇವಲಜ್ಞಾನವು ಕೇವಲಜ್ಞಾನಾವರಣ ಕರ್ಮದಿಂದಲೂ, ಕೇವಲದರ್ಶನವು ಕೇವಲದರ್ಶನಾವರಣಕರ್ಮದಿಂದಲೂ, ಅನಂತ ವೀರ್ಯವು ವೀರ್ಯಾಂತರಾಯಕರ್ಮದಿಂದಲೂ ಆಚ್ಛಾದಿಸಲ್ಪಟ್ಟಿರುತ್ತದೆ. ಸೂಕ್ಷ್ಮತ್ವ ಗುಣವು ಆಯುಃಕರ್ಮದಿಂದಾಚ್ಛಾದಿತವಾಗಿದೆ ಏಕೆಂದರೆ, ಆಯುಃಕರ್ಮದ ಉದಯ ದಿಂದ ಜೀವನು ಪರಭವವನ್ನು ಹೊಂದುವಾಗ ಅಲ್ಲಿ ಇಂದ್ರಿಯಜ್ಞಾನವುಳ್ಳವ ನಾಗುತ್ತಾನೆ. ಅತೀಂದ್ರಿಯಜ್ಞಾನದ ಅಭಾವದಿಂದ ಅಲ್ಲಿ ಆತನು ಕೆಲವೊಂದು ಸ್ಥೂಲವಸ್ತುಗಳನ್ನು ಮಾತ್ರ ತಿಳಿಯುತ್ತಾನಲ್ಲದೆ ಸೂಕ್ಷ್ಮವಸ್ತುಗಳನ್ನು ತಿಳಿಯುವುದಿಲ್ಲ. ಶರೀರನಾಮಕರ್ಮೋದಯದಿಂದ ಅವಗಾಹನತ್ವಗುಣವು ಆಚ್ಛಾದಿತವಾಗಿದೆ. ಸಿದ್ಧಾ ವಸ್ಥೆಗೆ ಯೋಗ್ಯವೂ ವಿಶಿಷ್ಟರೂಪವೂ ಆದ ಅಗುರುಲಘುತ್ವಗುಣವು ನಾಮಕರ್ಮದ ಉದಯದಿಂದ ಅಥವಾ ಗೋತ್ರಕರ್ಮದ ಉದಯದಿಂದ ಆಚ್ಛಾದಿಸಲ್ಪಟ್ಟಿದೆ. ಇಲ್ಲಿ ಗುರುತ್ವವೆಂದರೆ ಉಚ್ಚಗೋತ್ರಜನಿತ-ಮಹತ್ತ್ವವೆಂದೂ ಲಘುತ್ವವೆಂದರೆ ನೀಚಗೋತ್ರ ಜನಿತ-ಲಘುತ್ವ (ನೀಚತ್ವ) ವೆಂದೂ ಅಭಿಪ್ರಾಯವು ಇವೆರಡಕ್ಕೂ ಕಾರಣಭೂತವಾದ ಗೋತ್ರಕರ್ಮೋದಯದಿಂದ ವಿಶಿಷ್ಟಅಗುರುಲಘುತ್ವಗುಣವು ಆಚ್ಛಾದಿತವಾಗಿದೆ ಅವ್ಯಾ ಬಾಧಗುಣವು ವೇದನೀಯ ಕರ್ಮೋದಯದಿಂದ ಆಚ್ಛಾದಿಸಲ್ಪಟ್ಟಿದೆ. ಹೀಗೆ ಸಂಕ್ಷೇಪ ದಿಂದ ಕರ್ಮಗಳು ಗುಣಗಳನ್ನು ಆಚ್ಛಾದಿಸುವ (ಮುಚ್ಚಿಕೊಳ್ಳುವ) ನಿಯಮವಾಗಿದೆ. ಈ ಕಾರಣದಿಂದಲೇ ಜೀವನು ಸಂಸಾರದಲ್ಲಿ ಭ್ರಮಿಸುತ್ತಿರುತ್ತಾನೆ. ಮುಕ್ತಾವಸ್ಥೆ ಯಲ್ಲಿ ಆಯಾಯಗುಣಗಳನ್ನಾಚ್ಛಾದಿಸಿರುವ ಆಯಾಯಕರ್ಮಗಳ ಆವರಣವು ದೂರ ವಾಗುವುದರಿಂದ ಪೂರ್ವೋಕ್ತಗಳಾದ ಎಂಟುಗುಣಗಳು ಪ್ರಕಟವಾಗುತ್ತವೆ. ಹೀಗೆ ಎಂಟುಗುಣಗಳ ಸಂಕ್ಷಿಪ್ತ-ವರ್ಣನೆಯಾಗಿದೆ. ಇನ್ನು ವಿಶೇಷರೂಪದಿಂದ ಅಮೂರ್ತತ್ವ, ನಿರ್ನಾಮಗೋತ್ರಮೊದಲಾದ ಸಾಧಾರಣ ಹಾಗೂ ಅಸಾಧಾರಣರೂಪವಾದ ಅನಂತ

ಗುಣಗಳನ್ನು ಯಥಾಸಂಭವ ಶಾಸ್ತ್ರಪ್ರಮಾಣದಿಂದ ತಿಳಿದುಕೊಳ್ಳಬೇಕು ಇಲ್ಲಿ ಪೂರ್ವೋಕ್ತಸಮ್ಯಕ್ತ್ವಾದಿಶುದ್ಧಗುಣಸ್ವರೂಪನಾದ ಶುದ್ಧಾತ್ಮನೇ ಉಪಾದೇಯನಾಗಿರುತ್ತಾನೆಂಬುದು ತಾತ್ಪರ್ಯಾರ್ಥವು

**ವಿಸಯಕಸಾಯಹಿಂ ರಂಗಿಯಹಂ, ಜೇ ಅಣುಯಾ ಲಗ್ಗಂತಿ ।**
**ಜೀವ-ಪಏಸಹಂ ಮೋಹಿಯಹಂ, ಜಿಣ ಕಮ್ಮ ಭಣಂತಿ ॥ ೬೨ ॥**

"ವಿಷಯಕಷಾಯೈಃ ರಂಜಿತಾನಾಂ ಯೇ ಅಣವಃ ಲಗಂತಿ ।
ಜೀವಪ್ರದೇಶೇಷು ಮೋಹಿತಾನಾಂ ತಾನ್ ಜಿನಾಃ ಕರ್ಮ ಭಣಂತಿ ॥ ೬೨ ॥"

**ಅನ್ವಯಾರ್ಥ:— ವಿಸಯಕಸಾಯಹಿಂ**— ವಿಷಯಕಷಾಯಗಳಿಂದ **ರಂಗಿಯಹಂ**— ರಂಜಿತ(ಆಸಕ್ತ)ರಾದ ಮತ್ತು **ಮೋಹಿಯಹಂ** – ಮೋಹವಶರಾದ ಜೀವರುಗಳ **ಜೀವ-ಪಏಸಹಂ**— ಆತ್ಮಪ್ರದೇಶಗಳಲ್ಲಿ **ಜೇ ಅಣುಯಾ ಲಗ್ಗಂತಿ**— ಯಾವ ಪರಮಾಣುಗಳು ನೇರಿಕೊಳ್ಳುತ್ತವೆಯೋ (ಅಥವಾ ಬಂಧವಾಗುತ್ತವೆಯೋ) **ತೇ**— ಆ ಪರಮಾಣುಗಳ ಸ್ಕಂಧ(ಸಮೂಹ)ಗಳನ್ನು **ಜಿಣ ಕಮ್ಮ ಭಣಂತಿ**— ಜಿನೇಂದ್ರರು ಕರ್ಮವೆಂದು ಹೇಳುತ್ತಾರೆ.

**ಭಾವಾರ್ಥ:**— ಆತ್ಮಜ್ಞಾನದ ಅಭಾವದಿಂದ ಸಂಪಾದಿಸಲ್ಪಟ್ಟ ಮೋಹಕರ್ಮದ ಉದಯದಿಂದ ಶುದ್ಧಾತ್ಮಾನುಭವಕ್ಕೆ ವಿಪರೀತವಾದ ವಿಷಯ-ಕಷಾಯಗಳಲ್ಲಿ ಆಸಕ್ತರಾದ ಸಂಸಾರಿಜೀವರುಗಳಿಗೆ ತೈಲಲಿಪ್ತವಾದ ಶರೀರದಲ್ಲಿ ನೇರಿದ ಧೂಳು ಮಲರೂಪವಾಗಿ ಪರಿಣಮಿಸುವಂತೆ ಕರ್ಮವರ್ಗಣಗಳಿಗೆ ಯೋಗ್ಯವಾದ ಪುದ್ಗಲ-ಸ್ಕಂಧಗಳು ಜ್ಞಾನಾವರಣಾದಿಕರ್ಮರೂಪವಾಗಿ ಪರಿಣಮಿಸುತ್ತವೆ. ಹೀಗೆ ವಿಷಯಕಷಾಯಗಳಲ್ಲಿ ಆಸಕ್ತನಾಗಿರುವ ಸಮಯದಲ್ಲಿ ಕರ್ಮವನ್ನುಪಾರ್ಜಿಸುವವನೂ ವೀತರಾಗನಿರ್ವಿಕಲ್ಪ ಸಮಾಧಿಯಿಂದ ಕರ್ಮಮಲವನ್ನು ಕೆಡಿಸುವವನೂ ಆದ ಪೂರ್ವೋಕ್ತಪರಮಾತ್ಮನೇ ನಿರ್ವಿಕಲ್ಪಸಮಾಧಿಯ ಕಾಲದಲ್ಲಿ ಉಪಾದೇಯನಾಗಿರುತ್ತಾನೆಂದು ಭಾವವು. ಈ ಪ್ರಕಾರವಾಗಿ ಕರ್ಮಸ್ವರೂಪವನ್ನು ನಿರೂಪಿಸುವಿಕೆಯ ಮುಖ್ಯತೆಯಿಂದ ನಾಲ್ಕು ಸೂತ್ರ (ಗಾಥೆ)ಗಳು ಹೇಳಲ್ಪಟ್ಟುವು. ಮುಂದಿನ ನಾಲ್ಕು ಸೂತ್ರಗಳಿಂದ ಕರ್ಮಫಲವನ್ನು ಪ್ರತಿಪಾದಿಸುತ್ತಾರೆ —

**ಪಂಚ ವಿ ಇಂದಿಯ ಅಣ್ಣು ಮಣು, ಅಣ್ಣು ವಿ ಸಯಲವಿಭಾವ ।**
**ಜೀವಹಂ ಕಮ್ಮಇಂ ಜಣಿಯ ಜಿಯ, ಅಣ್ಣು ವಿ ಚಉಗಇತಾವ ॥ ೬೩ ॥**

"ಪಂಚಾಪಿ ಇಂದ್ರಿಯಾಣಿ ಅನ್ಯತ್ ಮನಃ ಅನ್ಯದಪಿ ಸಕಲವಿಭಾವಃ ।
ಜೀವಾನಾಂ ಕರ್ಮಣಾ ಜನಿತಾ ಜೀವ ಅನ್ಯದಪಿ ಚತುರ್ಗತಿತಾಪಾಃ ॥ ೬೩ ॥"

**ಅನ್ವಯಾರ್ಥ:— ಜಿಯ**— ಜೀವನೇ! **ಪಂಚ ವಿ ಇಂದಿಯ ಮಣು**— ಐದು ಇಂದ್ರಿಯಗಳೂ ಮನಸ್ಸೂ **ಅಣ್ಣು**— ಆತ್ಮನಿಂದ ಭಿನ್ನ(ಬೇರೆ)ವಾದುವುಗಳು **ಸಯಲ ವಿಭಾವ ವಿ ಅಣು** — ರಾಗಾದಿ ಸಕಲ-ವಿಭಾವಪರಿಣಾಮಗಳೂ ಭಿನ್ನವಾದುವುಗಳು

**ಚಉಗಇತಾವ ವಿ ಅಣ್ಣ**— ಚತುರ್ಗತಿಗಳ ಸಂಬಂಧವಾದ ದುಃಖಗಳೂ ಕೂಡ ಭಿನ್ನವಾದುವುಗಳು. ಇವೆಲ್ಲವೂ **ಜೀವಹಂ**— ಜೀವರುಗಳಿಗೆ **ಕಮ್ಮಇಂ ಜಣಿಯ**— ಕರ್ಮದಿಂದ ಉಂಟುಮಾಡಲ್ಪಟ್ಟವುಗಳಾಗಿವೆ.

**ಭಾವಾರ್ಥ:**–ಸ್ಪರ್ಶನ ರಸನ ಮೊದಲಾದ ಐದು ಇಂದ್ರಿಯಗಳೂ ಅನೇಕಸಂಕಲ್ಪ ವಿಕಲ್ಪಜಾಲರೂಪವಾದ ಮನವೂ ರಾಗದ್ವೇಷಮೋಹಾದಿ-ಸಕಲವಿಭಾವಗಳೂ ಚತುರ್ಗತಿಜನಿತ ದುಃಖದಾಹಗಳೂ ಇವೆಲ್ಲವೂ ಅತೀಂದ್ರಿಯನೂ ಶುಭಾಶುಭಸಂಕಲ್ಪವಿಕಲ್ಪ ರಹಿತನೂ ಶುದ್ಧಾತ್ಮತತ್ತ್ವಾನುಭೂತಿಯುಳ್ಳವನೂ ವೀತರಾಗಪರಮಾನಂದಸುಖಾಮೃತಾಸ್ವಾದಕನೂ ಆದ ಆತ್ಮನಿಂದ ಭಿನ್ನವಾದುವುಗಳು. ಅಶುದ್ಧನಿಶ್ಚಯನಯದಿಂದ ಸಂಸಾರಿ ಜೀವರುಗಳಿಗೆ ಆತ್ಮಜ್ಞಾನಾಭಾವೋಪಾರ್ಜಿತ-ಕರ್ಮದಿಂದ ಪೂರ್ವೋಕ್ತ ಇಂದ್ರಿಯಾದಿಗಳು ಉಂಟಾಗಿರುತ್ತವೆ. ಅರ್ಥಾತ್ ಈ ಇಂದ್ರಿಯಾದಿಗಳು ಕರ್ಮಜನಿತಗಳಾಗಿರುತ್ತವೆ. ಹೀಗೆ ಆತ್ಮಭಿನ್ನಗಳಾದ ಇಂದ್ರಿಯಾದಿಗಳಿಂದಲೂ ಸಮಸ್ತ-ಸಂಕಲ್ಪವಿಕಲ್ಪಗಳಿಂದಲೂ ರಹಿತನಾದ ಶುದ್ಧಾತ್ಮನೇ ಪರಮಸಮಾಧಿಯಲ್ಲಿ ಸಾಕ್ಷಾತ್ ಉಪಾದೇಯನಾಗಿರುತ್ತಾನೆಂದು ಭಾವವು.

**ದುಕ್ಖು ವಿ ಸುಕ್ಖು ವಿ ಬಹುವಿಹಉ, ಜೀವಹಂ ಕಮ್ಮು ಜಣೇಇ ।**
**ಅಪ್ಪಾ ದೇಖಇ ಮುಣಇ ಪರ, ಣಿಚ್ಛಉ ಏಉಂ ಭಣೇಇ ॥ ೬೪ ॥**

"ದುಃಖಮಪಿ ಸುಖಮಪಿ ಬಹುವಿಧಂ ಜೀವಾನಾಂ ಕರ್ಮ ಜನಯತಿ ।
ಆತ್ಮಾ ಪಶ್ಯತಿ ಮನುತೇ ಪರಂ ನಿಶ್ಚಯಃ ಏವಂ ಭಣತಿ ॥ ೬೪ ॥"

**ಅನ್ವಯಾರ್ಥ:—ಜೀವಹಂ**— ಜೀವರುಗಳಿಗೆ **ಬಹುವಿಹಉ**–ಅನೇಕಪ್ರಕಾರವಾದ **ದುಕ್ಖು ವಿ ಸುಕ್ಖು ವಿ**— ದುಃಖವನ್ನೂ ಸುಖವನ್ನೂ **ಕಮ್ಮು**— ಕರ್ಮವು **ಜಣೇಇ**— ಉಂಟುಮಾಡುತ್ತದೆ **ಅಪ್ಪಾ**— ಆತ್ಮನು **ದೇಖಇ ಮುಣಇ ಪರ**—(ಉಪಯೋಗಮಯನಾಗಿರುವುದರಿಂದ) ಕೇವಲ ನೋಡುತ್ತಾನೆ ಮತ್ತು ತಿಳಿಯುತ್ತಾನೆ **ಏಉಂ ಣಿಚ್ಛಉ ಭಣೇಇ**— ಹೀಗೆ ನಿಶ್ಚಯನಯವು ಹೇಳುತ್ತದೆ ಅರ್ಥಾತ್ ನಿಶ್ಚಯನಯದಿಂದ ಜಿನರು ಹೀಗೆ ಹೇಳುತ್ತಾರೆ

**ಭಾವಾರ್ಥ:**— ಅನಾಕುಲತ್ವಲಕ್ಷಣವುಳ್ಳ ಪಾರಮಾರ್ಥಿಕ-ವೀತರಾಗಸುಖಕ್ಕೆ ವಿಪರೀತವಾದ ಸಾಂಸಾರಿಕ-ಸುಖದುಃಖಗಳು ಅಶುದ್ಧ-ನಿಶ್ಚಯನಯದಿಂದ ಯದ್ಯಪಿ ಜೀವಸಂಬಂಧಿಗಳಾಗಿದ್ದರೂ ಶುದ್ಧನಿಶ್ಚಯನಯದಿಂದ ಅವುಗಳು ಜೀವಜನಿತಗಳಾಗಿರುವುದಿಲ್ಲ. ಅವುಗಳು ಕರ್ಮಜನಿತಗಳಾಗಿರುವಕಾರಣ ವಸ್ತುತಃ ಜೀವಸಂಬಂಧಿಗಳಾಗಿರುವುದಿಲ್ಲ. ಜೀವನು ಉಪಯೋಗಮಯನಾಗಿರುವುದರಿಂದ ವಸ್ತುಸ್ವರೂಪವನ್ನು ನೋಡುತ್ತಾನೆ ಮತ್ತು ತಿಳಿಯುತ್ತಾನೆ. ಇಲ್ಲಿ ಪಾರಮಾರ್ಥಿಕ-ಆತ್ಮೀಯಸುಖಕ್ಕೆ ವಿಪರೀತವಾದ ಇಂದ್ರಿಯಜನಿತ-ಸಾಂಸಾರಿಕ-ಸುಖದುಃಖಾದಿವಿಕಲ್ಪಗಳು ತ್ಯಾಜ್ಯಗಳಾಗಿರುತ್ತವೆಂದು ಭಗವಾನ್ ಜಿನೇಂದ್ರದೇವರು ನಿರೂಪಿಸಿದ್ದಾರೆಂದು ತಾತ್ಪರ್ಯಾರ್ಥವು.

**ಬಂಧು ವಿ ಮೊಕ್ಖು ವಿ ಸಯಲು ಜಿಯ, ಜೀವಹಂ ಕಮ್ಮು ಜಣೇಇ ।**
**ಅಪ್ಪಾ ಕಿಂಪಿ ವಿ ಕುಣಇ ಣವಿ, ಣಿಚ್ಛಉ ಏಉಂ ಭಣೇಇ ॥ ೬೫ ॥**

"ಬಂಧಮಪಿ ಮೋಕ್ಷಮಪಿ ಸಕಲಂ ಜೀವ ಜೀವಾನಾಂ ಕರ್ಮ ಜನಯತಿ ।
ಆತ್ಮಾ ಕಿಮಪಿ ಕರೋತಿ ನೈವ ನಿಶ್ಚಯಃ ಏವಂ ಭಣತಿ ॥ ೬೫ ॥"

**ಅನ್ವಯಾರ್ಥ:**— **ಜಿಯ**— ಜೀವನೇ! **ಜೀವಹಂ**— ಜೀವರುಗಳಿಗೆ **ಬಂಧು ವಿ ಮೊಕ್ಖು ವಿ**–ಬಂಧವನ್ನೂ ಮೋಕ್ಷವನ್ನೂ **ಸಯಲು**–ಎಲ್ಲವನ್ನೂ **ಕಮ್ಮು ಜಣೇಇ**– ಕರ್ಮವು ಉಂಟುಮಾಡುತ್ತದೆ **ಅಪ್ಪಾ**— ಆತ್ಮನು **ಕಿಂಪಿ ವಿ ಕುಣಇ ಣವಿ**— ಯಾವುದನ್ನೂ ಮಾಡುವುದಿಲ್ಲ **ಣಿಚ್ಛಉ ಏಉಂ ಭಣೇಇ**— ನಿಶ್ಚಯನಯವು ಹೀಗೆ ಹೇಳುತ್ತದೆ ಅರ್ಥಾತ್ ನಿಶ್ಚಯನಯದಿಂದ ಜಿನೇಂದ್ರರು ಹೀಗೆ ಹೇಳುತ್ತಾರೆ.

**ಭಾವಾರ್ಥ:**— ಅನುಪಚರಿತಾಸದ್ಭೂತವ್ಯವಹಾರನಯದಿಂದ ಜ್ಞಾನಾವರಣಾದಿ-ದ್ರವ್ಯಕರ್ಮಬಂಧವನ್ನೂ ಅಶುದ್ಧನಿಶ್ಚಯನಯದಿಂದ ರಾಗಾದಿಭಾವಕರ್ಮಬಂಧವನ್ನೂ ಇವೆರಡೂ ನಯಗಳ ಅಪೇಕ್ಷೆಯಿಂದ ದ್ರವ್ಯಭಾವಕರ್ಮಗಳ ಮೋಕ್ಷವನ್ನೂ ಜೀವನು ಮಾಡಿಕೊಳ್ಳುತ್ತಾನೆ ಆದರೆ ಶುದ್ಧಪಾರಿಣಾಮಿಕಭಾವವನ್ನು ಗ್ರಹಿಸುವ ಶುದ್ಧನಿಶ್ಚಯನಯದಿಂದ ಜೀವನು ಯಾವವಿಧದ ಬಂಧಮೋಕ್ಷಾದಿಗಳನ್ನೂ ಉಂಟುಮಾಡುವುದಿಲ್ಲ ಅರ್ಥಾತ್ ಬಂಧಮೋಕ್ಷಾದಿಗಳಿಂದ ರಹಿತನಾಗಿರುವನು. ಹೀಗೆ ಶುದ್ಧನಿಶ್ಚಯನಯದಿಂದ ಯಾವ ಜೀವನು ಬಂಧಮೋಕ್ಷಗಳಿಗೆ ಕರ್ತನಾಗಿರುವುದಿಲ್ಲವೋ ಅಂತಹ ಶುದ್ಧಾತ್ಮನೇ ಆರಾಧ್ಯನಾಗಿರುತ್ತಾನೆಂದು ಭಾವಾರ್ಥವು.

**ಸೋ ಣತ್ಥಿ ತ್ತಿ ಪಏಸೋ, ಚಉರಾಸೀಜೋಣಿಲಕ್ಖಮಜ್ಝಮ್ಮಿ ।**
**ಜಿಣವಯಣಂ ಣ ಲಹಂತೋ, ಜತ್ಥ ಣ ಡುಲುಡುಲ್ಲಿಓ ಜೀವೋ ॥೬೫॥***

"ಸ ನಾಸ್ತಿ ಇತಿ ಪ್ರದೇಶಃ ಚತುರಾಶೀತಿಯೋನಿಲಕ್ಷಮಧ್ಯೇ ।
ಜಿನವಚನಂ ನ ಲಭಮಾನಃ ಯತ್ರ ನ ಭ್ರಮಿತಃ ಜೀವಃ ॥ ೬೫ ॥"

**ಅನ್ವಯಾರ್ಥ:**— **ಜೀವೋ**— ಜೀವನು **ಜಿಣವಯಣಂ**— ಜಿನವಚನ (ಜಿನಾಗಮ)ವನ್ನು **ಣ ಲಹಂತೊ**–ಪಡೆಯದವನಾಗಿ **ಚಉರಾಸೀಜೋಣಿಲಕ್ಖಮಜ್ಝಮ್ಮಿ**– ಎಂಭತ್ತನಾಲ್ಕುಲಕ್ಷಯೋನಿಗಳ ಮಧ್ಯದಲ್ಲಿ **ಜತ್ಥ ಣ ಡುಲುಡುಲ್ಲಿಓ**— ಎಲ್ಲಿ ಭ್ರಮಿಸಲಿಲ್ಲವೋ **ಸೋ ಣತ್ಥಿ ತ್ತಿ ಪಏಸೋ**— ಆ ಪ್ರದೇಶ (ಸ್ಥಾನ)ವೆಂಬುದು ಇರುವುದಿಲ್ಲ.

**ಭಾವಾರ್ಥ:**— ಭೇದಾಭೇದರತ್ನತ್ರಯಪ್ರತಿಪಾದಕವಾದ ಜಿನವಚನವನ್ನು ಪಡೆಯದಿರುವ ಈ ಜೀವನು ಅನಾದಿಕಾಲದಿಂದ ಎಂಭತ್ತನಾಲ್ಕುಲಕ್ಷಯೋನಿಗಳಲ್ಲಿ ಎಲ್ಲಿ ಭ್ರಮಣೆಯನ್ನು ಮಾಡಲಿಲ್ಲವೋ ಅಂತಹ ಯಾವುದೊಂದು ಸ್ಥಾನ (ಯೋನಿ)ವೂ ಇರುವುದಿಲ್ಲ ಅರ್ಥಾತ್ ಎಲ್ಲಾ ಯೋನಿಗಳಲ್ಲಿಯೂ ಜನ್ಮ-ಮರಣಗಳನ್ನು ಹೊಂದಿರುವನು.

---

* ಈ ದೋಹೆಯು ಪ್ರಕ್ಷೇಪಕವಾಗಿರುತ್ತದೆ.

ಯಾವ ಜಿನವಚನವನ್ನು ಪಡೆಯದಿರುವುದರಿಂದ ಈ ಜೀವನು ಜಗತ್ತಿನಲ್ಲಿ ಭ್ರಮಿಸು ತ್ತಿರುವನೋ ಆ ಜಿನವಚನವು ಸರ್ವಥಾ ಉಪಾದೇಯವಾಗಿರುತ್ತದೆಂದು ತಾತ್ಪರ್ಯವು

**ಅಪ್ಪಾ ಪಂಗುಹ ಅಣುಹರಇ, ಅಪ್ಪು ಣ ಜಾಇ ಣ ಏಇ ।**
**ಭುವಣತ್ತಯುಹಂ ವಿ ಮಜ್ಝಿ ಜಿಯ, ವಿಹಿ ಆಣಇ ವಿಹಿ ಣೇಇ ॥ ೬೬ ॥**

"ಆತ್ಮಾ ಪಂಗೋಃ ಅನುಹರತಿ ಆತ್ಮಾ ನ ಯಾತಿ ನ ಆಯಾತಿ ।
ಭುವನತ್ರಯಸ್ಯ ಅಪಿ ಮಧ್ಯೇ ಜೀವ ವಿಧಿಃ ಆನಯತಿ ವಿಧಿಃ ನಯತಿ ॥ ೬೬ ॥"

**ಅನ್ವಯಾರ್ಥ:— ಜಿಯ**— ಜೀವನೇ! **ಅಪ್ಪಾ ಪಂಗುಹ ಅಣುಹರಇ**—ಆತ್ಮನು ಪಂಗು(ಕುಂಟ-ನಡೆಯಲಾರದವ)ವನ್ನು ಅನುಸರಿಸುತ್ತಾನೆ ಅರ್ಥಾತ್ ಪಂಗುವಿಗೆ ಸಮಾನನಾಗಿರುತ್ತಾನೆ. **ಅಪ್ಪು ಣ ಜಾಇ ಣ ಆಇ**— ಆತ್ಮನು ಎಲ್ಲಿಯೂ ಹೋಗು ವುದಿಲ್ಲ, ಬರುವುದಿಲ್ಲ. ಜೀವನನ್ನು **ಭುವಣತ್ತಯುಹಂ ವಿ ಮಜ್ಝಿ**— ಮೂರುಲೋಕ ಗಳ ಮಧ್ಯದಲ್ಲಿಯೂ (ಮೂರುಲೋಕಗಳಲ್ಲಿಯೂ) **ವಿಹಿ ಆಣಇ**— ಕರ್ಮವು ತರು ತ್ತದೆ **ವಿಹಿ ಣೇಇ**— ಕರ್ಮವು ಒಯ್ಯುತ್ತದೆ.

**ಭಾವಾರ್ಥ:**— ಈ ಜೀವನು ಶುದ್ಧನಿಶ್ಚಯನಯದಿಂದ ಅನಂತವೀರ್ಯಸ್ವರೂಪನಾ ಗಿರುವುದರಿಂದ ಶುಭಾಶುಭಕರ್ಮರೂಪವಾದ ಬಂಧನದಿಂದ ರಹಿತನಾಗಿದ್ದರೂ ವ್ಯವ ಹಾರನಯದಿಂದ ಅನಾದಿಸಂಸಾರದಲ್ಲಿ ಮನವಚನಕಾಯಗಳ ಶುಭಾಶುಭಕ್ರಿಯಾರೂಪ ವಾದ ಯೋಗದಿಂದ ಸಂಪಾದಿಸಲ್ಪಟ್ಟ ಶುಭಾಶುಭಕರ್ಮಗಳೆಂಬ ಶೃಂಖಲೆ (ಸಂಕಲೆ) ಗಳಿಂದ ದೃಢತರವಾಗಿ ಬಂಧಿಸಲ್ಪಟ್ಟವನಾಗಿ ಇಚ್ಛಾನುಸಾರ ಗಮನಾಗಮನದ ಸ್ವತಂ ತ್ರತೆಯಿಲ್ಲದೆ ಪಂಗುವಿನಂತಿರುವ ಬಂಧಿ (ಕೈದಿ)ಯಂತೆ ತಾನು ಸ್ವತಃ ಎಲ್ಲಿಗೂ ಹೋಗ ಲಾರನು ಹಾಗೂ ಬರಲಾರನು. ಬಂದಿಯಾದ ಮನುಷ್ಯನನ್ನು ಕಾರಾಗೃಹದ ಅಧಿಕಾರ (ಚೌಕೀದಾರ)ಯು ತನಗೆ ಬೇಕಾದಲ್ಲಿ ತಿರುಗಾಡಿಸುವಂತೆ ಕರ್ಮಬದ್ಧನಾದ ಸಂಸಾರಿ ಜೀವನನ್ನು ಕರ್ಮ(ವಿಧಿ)ವು ಜಗತ್ರಯದಲ್ಲಿ ತಿರುಗಾಡಿಸುತ್ತದೆ ಇಲ್ಲಿ ವೀತರಾಗ ಸದಾನಂದೈಕರೂಪನೂ ಸರ್ವಥಾ ಉಪಾದೇಯನೂ ಆದ ಪರಮಾತ್ಮನಿಂದ ಭಿನ್ನಗಳಾದ ಶುಭಾಶುಭಕರ್ಮಗಳು ತ್ಯಾಜ್ಯಗಳಾಗಿರುತ್ತವೆಂದು ಭಾವವು ಹೀಗೆ ಕರ್ಮಶಕ್ತಿಸ್ವರೂಪ ವನ್ನು ನಿರೂಪಿಸುವ ಸ್ಥಾನದಲ್ಲಿ ಎಂಟುಸೂತ್ರ(ದೋಹೆ)ಗಳು ಹೇಳಲ್ಪಟ್ಟುವು.

ಇನ್ನು ಮುಂದೆ ಭೇದಾಭೇದಭಾವನೆಯ ಮುಖ್ಯತೆಯಿಂದ ಪ್ರತ್ಯೇಕಪ್ರತ್ಯೇಕವಾಗಿ ಒಂಭತ್ತು ಸ್ವತಂತ್ರಸೂತ್ರಗಳನ್ನು ಹೇಳುತ್ತಾರೆ:—

**ಅಪ್ಪಾ ಅಪ್ಪು ಜಿ ಪರು ಜಿ ಪರು, ಅಪ್ಪಾ ಪರು ಜಿ ಣ ಹೋಇ ।**
**ಪರು ಜಿ ಕಯಾಇ ವಿ ಅಪ್ಪು ಣವಿ, ಣಿಯಮೇ ಪಭಣಹಿಂ ಜೋಇ ॥೬೭॥**

"ಆತ್ಮಾ ಆತ್ಮಾ ಏವ ಪರಃ ಏವ ಪರಃ ಆತ್ಮಾ ಪರಃ ಏವ ನ ಭವತಿ ।
ಪರಃ ಏವ ಕದಾಚಿದಪಿ ಆತ್ಮಾ ನೈವ ನಿಯಮೇನ ಪ್ರಭಣಂತಿ ಯೋಗಿನಃ ॥ ೬೭ ॥

**ಅನ್ವಯಾರ್ಥ:—ಅಪ್ಪಾ ಅಪ್ಪು ಜಿ ಹೋಇ—** ನಿಜವಸ್ತುವು ಅಥವಾ ಆತ್ಮನು ಆತ್ಮನೇ ಆಗಿರುತ್ತಾನೆ **ಪರು ಜಿ ಪರು ಹೋಇ—** ಪರವಸ್ತುವು ಪರವಸ್ತುವೇ ಆಗಿರುತ್ತದೆ **ಅಪ್ಪಾ ಪರು ಜಿ ಣ ಹೋಇ—** ಆತ್ಮನು ಪರದ್ರವ್ಯವಾಗಿರುವುದೇ ಇಲ್ಲ **ಪರು ಜಿ—** ಪರದ್ರವ್ಯವೂ **ಕಯಾಇವಿ—** ಎಂದಿಗೂ **ಅಪ್ಪ ಣವಿ ಹೋಇ—** ಆತ್ಮನಾಗಿರುವುದೇ ಇಲ್ಲ. ಹೀಗೆಂದು **ಜೋಇ ಣಿಯಮೇ ಪಭಣಹಿಂ—** ಯೋಗಿಗಳು ನಿಶ್ಚಯದಿಂದ ಹೇಳುತ್ತಾರೆ

**ಭಾವಾರ್ಥ:—** ಕೇವಲಜ್ಞಾನಾದಿಸ್ವಭಾವವುಳ್ಳ ಶುದ್ಧಾತ್ಮನು ಶುದ್ಧಾತ್ಮಸ್ವರೂಪನಾಗಿಯೇ ಇರುತ್ತಾನೆ ಜಡಸ್ವರೂಪವನೂ ಉಪಾಧಿಸ್ವರೂಪವನೂ ಆಗಿರುವುದಿಲ್ಲ. ಪರಪದಾರ್ಥಗಳಾದ ಕಾಮಕ್ರೋಧಾದಿಗಳು ಅಥವಾ ಭಾವಕರ್ಮ, ದ್ರವ್ಯಕರ್ಮ, ನೋಕರ್ಮಗಳು ಪರವಸ್ತುಗಳಾಗಿಯೇ ಇರುತ್ತವೆ, ಅವು ಆತ್ಮವಸ್ತುಗಳಲ್ಲ. ಯದ್ಯಪಿ ಸಂಸಾರಾವಸ್ಥೆಯಲ್ಲಿ ಅಶುದ್ಧನಿಶ್ಚಯನಯದಿಂದ ಜೀವನು ಕಾಮಕ್ರೋಧಾದಿ-ವಿಭಾವವುಳ್ಳವನಾಗಿರುತ್ತಾನಾದರೂ ಶುದ್ಧನಿಶ್ಚಯನಯದಿಂದ ಕಾಮಕ್ರೋಧಾದಿರೂಪನಾಗಿರುವುದಿಲ್ಲ ಅರ್ಥಾತ್ ನಿಜಸ್ವಭಾವರೂಪನೇ ಆಗಿರುತ್ತಾನೆ. ರಾಗಾದಿವಿಭಾವಪರಿಣಾಮಗಳು ನಿಜಭಾವಗಳಾಗಿರುವುದಿಲ್ಲ. ಆದುದರಿಂದ ಜೀವನು ಎಂದೂ ರಾಗಾದಿಭಾವರೂಪವಾಗಿ ಪರಿಣಮಿಸುವುದಿಲ್ಲ ಈ ಪ್ರಕಾರವಾಗಿ ಯೋಗೀಶ್ವರರು ಹೇಳುತ್ತಾರೆ. ಇಲ್ಲಿ ಸಾಕ್ಷಾದುಪಾದೇಯಭೂತವಾದ ಮೋಕ್ಷಸುಖ(ಅತೀಂದ್ರಿಯಸುಖ)ದಲ್ಲಿ ತನ್ಮಯನೂ ಕಾಮಕ್ರೋಧಾದಿವಿಭಾವಗಳಿಂದ ಸರ್ವಥಾ ಭಿನ್ನಸ್ವಭಾವವುಳ್ಳವನೂ ಆದ ಯಾವ ಶುದ್ಧಾತ್ಮನಿರುವನೋ ಆತನೇ ಉಪಾದೇಯನಾಗಿರುತ್ತಾನೆಂಬುದು ತಾತ್ಪರ್ಯಾರ್ಥವಾಗಿರುತ್ತದೆ.

**ಣ ವಿ ಉಪ್ಪಜ್ಜಇ ಣ ವಿ ಮರಇ, ಬಂಧು ಣ ಮೊಕ್ಖು ಕರೇಇ ।**
**ಜಿಉ ಪರಮತ್ಥೇಂ ಜೋಇಯಾ, ಜಿಣವರು ಏಉಂ ಭಣೇಇ ॥ ೬೮ ॥**

"ನಾಪಿ ಉತ್ಪದ್ಯತೇ ನಾಪಿ ಮ್ರಿಯತೇ ಬಂಧಂ ನ ಮೋಕ್ಷಂ ಕರೋತಿ ।
ಜೀವಃ ಪರಮಾರ್ಥೇನ ಯೋಗಿನ್ ಜಿನವರಃ ಏವಂ ಭಣತಿ ॥ ೬೮ ॥"

**ಅನ್ವಯಾರ್ಥ:—ಜೋಇಯಾ—** ಯೋಗಿಯೇ! **ಪರಮತ್ಥೇಂ—** ನಿಶ್ಚಯನಯದಿಂದ **ಜಿಉ—** ಜೀವನು **ಣ ವಿ ಉಪ್ಪಜ್ಜಇ—** ಹುಟ್ಟುವುದೂ ಇಲ್ಲ **ಣ ವಿ ಮರಇ—** ಸಾಯುವುದೂ ಇಲ್ಲ **ಬಂಧು ಣ ಮೊಕ್ಖಂ ಕರೇಇ—** ಬಂಧವನ್ನೂ ಮೋಕ್ಷವನ್ನೂ ಮಾಡುವುದಿಲ್ಲ (ಮಾಡಿಕೊಳ್ಳುವುದಿಲ್ಲ) **ಜಿಣವರು ಏಉಂ ಭಣೇಇ**—ಜಿನೋತ್ತಮರು ಹೀಗೆ ಹೇಳುತ್ತಾರೆ.

**ಭಾವಾರ್ಥ:—** ಯದ್ಯಪಿ ಈ ಆತ್ಮನು ಶುದ್ಧಾನುಭೂತಿಯ ಅಭಾವವಿರುತ್ತಿರಲು ಶುಭಾಶುಭಯೋಗರೂಪದಿಂದ ಪರಿಣಮಿಸಿ ಜೀವನ ಮರಣ ಹಾಗೂ ಶುಭಾಶುಭ ಕರ್ಮಬಂಧವನ್ನು ಹೊಂದುತ್ತಾನೆ ಮತ್ತು ಶುದ್ಧಾನುಭೂತಿಯು ಪ್ರಕಟವಾಗುತ್ತಿರಲು ಶುದ್ಧೋಪಯೋಗಪರಿಣತನಾಗಿ ಮೋಕ್ಷವನ್ನೂ ಉಂಟುಮಾಡಿಕೊಳ್ಳುತ್ತಾನೆ. ಆದರೂ

ಶುದ್ಧಪಾರಿಣಾಮಿಕಪರಮಭಾವಗ್ರಾಹಕವಾದ ಶುದ್ಧದ್ರವ್ಯಾರ್ಥಿಕನಯದಿಂದ ಜೀವನು ಬಂಧಮೋಕ್ಷಗಳಿಗೆ ಕರ್ತೃವಾಗಿರುವುದಿಲ್ಲ. ಪ್ರಶ್ನೆ:— ಮೇಲೆ ಹೇಳಿದಂತೆ ಶುದ್ಧ ದ್ರವ್ಯಾರ್ಥಿಕಸ್ವರೂಪವಾದ ಶುದ್ಧನಿಶ್ಚಯನಯದಿಂದ ಜೀವನು ಮೋಕ್ಷಕ್ಕೂ ಕರ್ತನಾಗಿ ರುವುದಿಲ್ಲವೆಂದು ಹೇಳುವುದರಿಂದ ಶುದ್ಧನಿಶ್ಚಯನಯದಿಂದ ಮೋಕ್ಷವೇ ಇಲ್ಲವೆಂದು ಹೇಳಿದಂತಾಗುವುದು. ಹೀಗೆ ಮೋಕ್ಷವೇ ಇಲ್ಲದಿರುತ್ತಿರಲು ಆ ಮೋಕ್ಷಕ್ಕಾಗಿ ಪ್ರಯ ತ್ನಿಸುವುದರಿಂದ ಪ್ರಯೋಜನವೇನು? ಅದು ವ್ಯರ್ಥವಲ್ಲವೇ? ಉತ್ತರ — ಮೋಕ್ಷವು ಬಂಧ ಪೂರ್ವಕವಾದುದು. ಆ ಬಂಧವು ಶುದ್ಧನಿಶ್ಚಯನಯದಿಂದ ಇರುವುದಿಲ್ಲ ಬಂಧಕ್ಕೆ ವಿಪರೀತವಾದುದು ಮೋಕ್ಷವು. ಶುದ್ಧನಿಶ್ಚಯನಯದಿಂದ ಬಂಧವಿಲ್ಲದಿರುವ ಕಾರಣ ದಿಂದ ಮೋಕ್ಷವೂ ಇರುವುದಿಲ್ಲ. ಒಂದುವೇಳೆ ಶುದ್ಧನಿಶ್ಚಯನಯದಿಂದಲೂ ಜೀವನಿಗೆ ಬಂಧವಿರುವುದೆಂದು ಹೇಳುವುದಾದರೆ ಸರ್ವದಾ ಬಂಧವೇ ಇರಬೇಕಾಗುವುದು ಬಂಧಾ ಭಾವರೂಪವಾದ ಮೋಕ್ಷವಿರಲಾರದು. ಈ ವಿಷಯದಲ್ಲಿ ಹೀಗೆ ದೃಷ್ಟಾಂತವನ್ನು ಹೇಳಬಹುದು:— ಒಬ್ಬ ಮನುಷ್ಯನು ಶೃಂಖಲೆ(ಸಂಕಲೆ)ಯಿಂದ ಬಂಧಿಸಲ್ಪಟ್ಟಿರುವನು ಮತ್ತೊಬ್ಬನು ಬಂಧನರಹಿತನಾಗಿರುವನು. ಇವರಿಬ್ಬರಲ್ಲಿ ಮೊದಲಿನವನು ಸಂಕಲೆಯ ಬಂಧನದಿಂದ ಬಿಡಲ್ಪಟ್ಟರೆ "ಆತನು ಬಂಧಮುಕ್ತನಾದನು" ಎನ್ನುವುದು ಉಚಿತ ವಾಗಿರುತ್ತದೆ. ಎರಡನೆಯವನನ್ನು ಕುರಿತು "ನೀನು ಮುಕ್ತನಾದೆ" ಎಂದು ಹೇಳಿದರೆ ಆತನು-"ನಾನು ಯಾವಾಗ ಯಾರಿಂದ ಬಂಧಿಸಲ್ಪಟ್ಟಿದ್ದೆನು?" ಮತ್ತು "ಯಾವಾಗ ಯಾರು ನನ್ನನ್ನು ಬಂಧನದಿಂದ ಬಿಡಿಸಿದವರು?" ಎಂದು ಕೋಪವನ್ನು ತಾಳುವನು ಅಭಿಪ್ರಾಯವೇನೆಂದರೆ, ಮೊದಲು ಬಂಧಿತನಾಗಿದ್ದವನು ಮುಕ್ತನಾದನು ಎಂದು ಹೇಳುವುದು ಯುಕ್ತಿಸಂಗತವಾದುದಲ್ಲದೆ ಬಂಧನವೇ ಇಲ್ಲದವನು ಮುಕ್ತನಾದನೆಂದು ಹೇಳುವ ಮಾತು ಅಸಂಗತವಾಗಿದೆ ಅದೇ ಪ್ರಕಾರವಾಗಿ ಶುದ್ಧನಿಶ್ಚಯನಯಾಪೇಕ್ಷೆ ಯಿಂದ ಜೀವನು ಕರ್ಮಬದ್ಧನಾಗಿರುವುದಿಲ್ಲ. ಈ ಕಾರಣದಿಂದ ಆತನು ಮುಕ್ತನಾದ ನೆಂದು ಹೇಳುವುದು ಅಸಂಗತವಾಗಿದೆ. ಬಂಧ— ಮುಕ್ತಿಗಳು ವ್ಯವಹಾರನಯದಿಂದಿ ರುತ್ತವಲ್ಲದೆ ಶುದ್ಧನಿಶ್ಚಯನಯದಿಂದ ಬಂಧವೂ ಇರುವುದಿಲ್ಲ, ಮುಕ್ತಿ (ಮೋಕ್ಷ)ಯೂ ಇರುವುದಿಲ್ಲ. ಆದರೆ, ವ್ಯವಹಾರನಯದಿಂದ ಬಂಧವಿರುವುದರಿಂದ ಮೋಕ್ಷ (ಕರ್ಮ ಬಂಧದ ಬಿಡುಗಡೆ)ಕ್ಕಾಗಿ ಯತ್ನಿಸಬೇಕಾದುದು ಉಚಿತವೂ ಅನಿವಾರ್ಯವೂ ಆಗಿರುತ್ತದೆ. ಇಲ್ಲಿ ಮುಕ್ತಜೀವಸದೃಶನಾದ ಸ್ವಶುದ್ಧಾತ್ಮನು ವೀತರಾಗನಿರ್ವಿಕಲ್ಪಸಮಾಧಿಯಲ್ಲಿ ಉಪಾದೇಯನಾಗಿರುತ್ತಾನೆಂದು ಭಾವಾರ್ಥವು.

**ಅತ್ಥಿ ಣ ಉಬ್ಭಉ ಜರಮರಣು, ರೋಯ ವಿ ಲಿಂಗ ವಿ ವಣ್ಣ ।**
**ಣಿಯಮಿಂ ಅಪ್ಪ ವಿಯಾಣಿ ತುಹುಂ, ಜೀವಹಂ ಎಕ್ಕ ವಿ ಸಣ್ಣ ॥ ೬೯ ॥**

"ಅಸ್ತಿ ನ ಉದ್ಭವಃ ಜರಾಮರಣಂ ರೋಗಾಃ ಅಪಿ ಲಿಂಗಾನ್ಯಪಿ ವರ್ಣಾಃ ।
ನಿಯಮೇನ ಆತ್ಮನ್ ವಿಜಾನೀಹಿ ತ್ವಂ ಜೀವಸ್ಯ ಏಕಾಪಿ ಸಂಜ್ಞಾ ॥ ೬೯ ॥"

**ಅನ್ವಯಾರ್ಥ:— ಅಪ್ಪ**— ಆತ್ಮನೇ! **ಜೀವಹಂ**-ಜೀವನಿಗೆ **ಉಬ್ಭಉ**-ಉತ್ಪತ್ತಿ (ಜನ್ಮ)ಯೂ **ಜರಮರಣು**—ಜರಾಮರಣಗಳೂ **ರೋಯ ವಿ ಲಿಂಗ ವಿ ವಣ್ಣ**— ರೋಗಗಳೂ ಲಿಂಗಗಳೂ ವರ್ಣಗಳೂ **ಎಕ್ಕ ವಿ ಸಣ್ಣ**— ಯಾವುದೊಂದು ಸಂಜ್ಞೆಯೂ **ಣ ಅತ್ಥಿ**— ಇರುವುದಿಲ್ಲ. ಹೀಗೆಂದು **ತುಹುಂ**— ನೀನು **ಣಿಯಮಿಂ**— ನಿಶ್ಚಯದಿಂದ **ವಿಯಾಣಿ**— ತಿಳಿ

**ಭಾವಾರ್ಥ:**— ಜೀವನಿಗೆ ಕ್ರೋಧಮಾನಮಾಯಾಲೋಭಮೊದಲಾದ ವಿಭಾವ ಪರಿಣಾಮಗಳಿಂದ ಉಪಾರ್ಜಿಸಲ್ಪಟ್ಟ ಕರ್ಮಗಳ ಉದಯದಿಂದ ಜನ್ಮಜರಾಮರಣ ಗಳೂ ರೋಗಗಳೂ ದ್ರವ್ಯಭಾವಲಿಂಗಗಳೂ ಶ್ವೇತಪೀತಾದಿವರ್ಣಗಳೂ ಆಹಾರ, ಭಯ, ಮೈಥುನ, ಪರಿಗ್ರಹಗಳೆಂಬ ಚತುಸ್ಸಂಜ್ಞೆಗಳು ಅಥವಾ ನಾಮಸಂಜ್ಞೆಗಳೂ ಉಂಟಾಗು ತ್ತವೆ ಆದರೆ ಶುದ್ಧನಿಶ್ಚಯನಯದಿಂದ ಕೇವಲಜ್ಞಾನಾದಿ-ಅನಂತಗುಣಗಳಿಂದ ಪರಿ ಪೂರ್ಣನಾಗಿರುವ ಜೀವನು ಕರ್ಮಸಂಬಂಧದಿಂದ ಸರ್ವಥಾ ಭಿನ್ನನಾಗಿರುವ ಕಾರಣ ಆತನಿಗೆ ಪೂರ್ವೋಕ್ತ ಜನ್ಮಜರಾಮರಣಾದಿಗಳಲ್ಲಿ ಯಾವುದೊಂದೂ ಇರುವುದಿಲ್ಲ. ಆತನು ಶುದ್ಧಾತ್ಮನು ಜನ್ಮಜರಾಮರಣಾದಿವಿಕಾರಗಳಿಂದ ಸರ್ವಥಾ ಭಿನ್ನನಾಗಿರು ವನು. ಇಲ್ಲಿ ಉಪಾದೇಯರೂಪನೂ ಅನಂತಸುಖಾದಿಗಳಿಗೆ ಸ್ಥಾನಭೂತನೂ ಆದ ಶುದ್ಧಾತ್ಮನೊಬ್ಬನೇ ಉಪಾದೇಯನಾಗಿರುವನು ಮತ್ತು ತದ್ವಿಪರೀತಗಳಾದ ಜನ್ಮ ಜರಾದಿಗಳು ತ್ಯಾಜ್ಯವಾದವುಗಳೆಂದು ತಾತ್ಪರ್ಯಾರ್ಥವಾಗಿದೆ

**ದೇಹಹಂ ಉಬ್ಭಉ ಜರಮರಣು, ದೇಹಹಂ ವಣ್ಣು ವಿಚಿತ್ತು ।**
**ದೇಹಹಂ ರೋಯ ವಿಹಾಣಿ ತುಹುಂ, ದೇಹಹಂ ಲಿಂಗು ವಿಚಿತ್ತು**
**॥ ೭೦ ॥**

"ದೇಹಸ್ಯ ಉದ್ಭವಃ ಜರಾಮರಣಂ ದೇಹಸ್ಯ ವರ್ಣಃ ವಿಚಿತ್ರಃ ।
ದೇಹಸ್ಯ ರೋಗಾಃ ವಿಜಾನೀಹಿ ತ್ವಂ ದೇಹಸ್ಯ ಲಿಂಗಂ ವಿಚಿತ್ರಮ್ ॥ ೭೦ ॥"

**ಅನ್ವಯಾರ್ಥ:— ದೇಹಹಂ**— ದೇಹಕ್ಕೆ **ಉಬ್ಭಉ**— ಜನ್ಮವೂ **ಜರಮರಣು**- ಮುಪ್ಪುಸಾವುಗಳೂ **ದೇಹಹಂ**— ದೇಹಕ್ಕೆ **ವಣ್ಣು ವಿಚಿತ್ತು**— ಶ್ವೇತಪೀತಾದಿ ನಾನಾ ವರ್ಣಗಳೂ ಅಥವಾ ಬ್ರಾಹ್ಮಣಾದಿವರ್ಣಗಳೂ **ದೇಹಹಂ**— ದೇಹಕ್ಕೆ— **ರೋಯ**— ವಾತಪಿತ್ತಕಫಾದಿಜನ್ಯರೋಗಗಳೂ **ದೇಹಹಂ**— ದೇಹಕ್ಕೆ **ಲಿಂಗು ವಿಚಿತ್ತು**— ನಾನಾ ವಿಧವಾದ ಸ್ತ್ರೀಲಿಂಗ, ಪುಲ್ಲಿಂಗ, ನಪುಂಸಕಲಿಂಗಗಳು ಮತ್ತು ದ್ರವ್ಯಮನವೂ ಇವು ಗಳಿರುತ್ತವೆಂದು **ವಿಹಾಣಿ ತುಹುಂ**— ನೀನು ತಿಳಿ.

**ಭಾವಾರ್ಥ:**- ಶುದ್ಧಾತ್ಮತತ್ತ್ವದ ಸಮ್ಯಕ್-ಶ್ರದ್ಧಾನಜ್ಞಾನಾನುಚರಣರೂಪವಾ ಅಭೇದರತ್ನತ್ರಯಭಾವನೆಗೆ ಪ್ರತಿಕೂಲಗಳಾದ ರಾಗ, ದ್ವೇಷ, ಮೋಹಾದಿಗಳಿಂದ ಸಂ ದಿಸಲ್ಪಟ್ಟ ಕರ್ಮಗಳ ಉದಯದಿಂದುಂಟಾಗುವ ಜನ್ಮಜರಾಮರಣಾದಿಗಳು ವ್ಯವಹಾ ನಯದಿಂದ ಜೀವಸಂಬಂಧಿಗಳಾಗಿದ್ದರೂ, ನಿಶ್ಚಯನಯದಿಂದ ಅವುಗಳು ಜೀವಸಂಬಂ

ಗಳಾಗಿರುವುದಿಲ್ಲ, ದೇಹಸಂಬಂಧಿಗಳಾಗಿರುತ್ತವೆ, ಹೀಗೆಂದು ತಿಳಿಯಬೇಕು. ಇಲ್ಲಿ ದೇಹಾದಿಮಮತ್ವರೂಪವಿಕಲ್ಪಜಾಲವನ್ನು ಬಿಟ್ಟು ವೀತರಾಗಸದಾನಂದೈಕರೂಪದಿಂದ ಪರಿಣಮಿಸುವ ಸ್ವಶುದ್ಧಾತ್ಮನೇ ಉಪಾದೇಯನಾಗಿರುತ್ತಾನೆಂಬುದು ಭಾವಾರ್ಥವು

**ದೇಹಹಂ ಪೇಕ್ಖಿವಿ ಜರಮರಣು, ಮಾ ಭಉ ಜೀವ ಕರೇಹಿ ।**
**ಜೋ ಅಜರಾಮರು ಬಂಭು ಪರು, ಸೋ ಅಪ್ಪಾಣು ಮುಣೇಹಿ ॥ ೭೧ ॥**

"ದೇಹಸ್ಯ ದೃಷ್ಟ್ವಾ ಜರಾಮರಣಂ ಮಾ ಭಯಂ ಜೀವ ಕಾರ್ಷೀಃ ।
ಯಃ ಅಜರಾಮರಃ ಬ್ರಹ್ಮಾ ಪರಃ ತಂ ಆತ್ಮಾನಂ ಮನ್ಯಸ್ವ ॥ ೭೧ ॥"

**ಅನ್ವಯಾರ್ಥ:—ಜೀವ**— ಎಲೈ ಜೀವನೇ! **ದೇಹಹಂ**—ದೇಹ(ಶರೀರ)ದ **ಜರ ಮರಣು**— ಜರಾಮರಣ(ಮುಪ್ಪು-ಸಾವು)ಗಳನ್ನು **ಪೇಕ್ಖಿವಿ**— ನೋಡಿ **ಭಉ ಮಾ ಕರೇಹಿ**— ಭಯವನ್ನು ಮಾಡಬೇಡ **ಅಜರಾಮರು**— ಅಜರಾಮರ(ಮುಪ್ಪು-ಸಾವು ಗಳಿಲ್ಲದವ)ನಾದ **ಜೋ ಬಂಭು ಪರು**— ಯಾವ ಪರಮಬ್ರಹ್ಮ (ಸರ್ವೋತ್ಕೃಷ್ಟನಾದ ಶುದ್ಧಾತ್ಮ)ನಿರುವನೋ **ಸೋ ಅಪ್ಪಾಣು ಮುಣೇಹಿ**— ಅವನನ್ನು ಆತ್ಮನನ್ನಾಗಿ ತಿಳಿ

**ಭಾವಾರ್ಥ:**— ಜೀವನೇ! ಜರಾಮರಣಗಳು ದೇಹಕ್ಕೆ ಮಾತ್ರ ಉಂಟಾಗುತ್ತವ ಲ್ಲದೆ ಆತ್ಮನಿಗುಂಟಾಗುವುದಿಲ್ಲವೆಂದು ನೀನು ನಿಶ್ಚಯನಯದಿಂದ ತಿಳಿದು ಜರಾಮರಣ ಗಳಿಗೆ ಹೆದರಬೇಡ ಜರಾಮರಣರಹಿತವೂ ಸರ್ವೋತ್ಕೃಷ್ಟವೂ ಆದ ಅಖಂಡ-ಪರ ಬ್ರಹ್ಮಸ್ವರೂಪವೇ ತನ್ನ ಆತ್ಮಸ್ವರೂಪವೆಂದು ತಿಳಿದು ಪಂಚೇಂದ್ರಿಯವಿಷಯಸಂಬಂಧ ವಾದ ಸಮಸ್ತವಿಕಲ್ಪಗಳನ್ನು ತೊರೆದವನಾಗಿ ಪರಮಸಮಾಧಿಯಲ್ಲಿ ಸ್ಥಿರನಾಗಿ ಆ ನಿಜ ಶುದ್ಧಾತ್ಮನನ್ನೇ ಧ್ಯಾನಿಸೆಂದು ತಾತ್ಪರ್ಯವು.

**ಛಿಜ್ಜಉ ಭಿಜ್ಜಉ ಜಾಉ ಖಉ, ಜೋಇಯ ಏಹು ಸರೀರು ।**
**ಅಪ್ಪಾ ಭಾವಹಿ ಣಿಮ್ಮಲಉ, ಜಿಂ ಪಾವಹಿ ಭವತೀರು ॥ ೭೨ ॥**

"ಛಿದ್ಯತಾಂ ಭಿದ್ಯತಾಂ ಯಾತು ಕ್ಷಯಂ ಯೋಗಿನ್ ಇದಂ ಶರೀರಮ್ ।
ಆತ್ಮಾನಂ ಭಾವಯ ನಿರ್ಮಲಂ ಯೇನ ಪ್ರಾಪ್ನೋಷಿ ಭವತೀರಮ್ ॥ ೭೨ ॥"

**ಅನ್ವಯಾರ್ಥ:—ಜೋಇಯ**— ಯೋಗಿಯೇ! **ಏಹು ಸರೀರು**– ಈ ಶರೀರವು **ಛಿಜ್ಜಉ ಭಿಜ್ಜವು**— ಛೇದಿಸಲ್ಪಡಲಿ(ಕತ್ತರಿಸಲ್ಪಡಲಿ) ಅಥವಾ ಭೇದಿಸಲ್ಪಡಲಿ (ವಿಭಾ ಗಿಸಲ್ಪಡಲಿ) **ಜಾಉ ಖಉ**— ನಾಶವನ್ನು ಹೊಂದಲಿ **ಣಿಮ್ಮಲಉ ಅಪ್ಪಾ**— ನೀನು ತನ್ನ ನಿರ್ಮಲ(ಕರ್ಮಮಲರಹಿತ)ನಾದ ಆತ್ಮನನ್ನು **ಭಾವಹಿ**— ಭಾವಿಸು (ಧ್ಯಾನಿಸು) **ಜಿಂ**— ಯಾವ ಆತ್ಮಭಾವನೆಯಿಂದ **ಭವತೀರು ಪಾವಹಿ**— ಸಂಸಾರದ ಪಾರವನ್ನು ಹೊಂದುವಿ.

**ಭಾವಾರ್ಥ:**— ಯಾವನು ಶರೀರಕ್ಕೆ ಛೇದನಭೇದನಾದಿಗಳುಂಟಾದರೂ ರಾಗ ದ್ವೇಷಾದಿವಿಕಲ್ಪವನ್ನು ಹೊಂದದೆ ನಿರ್ವಿಕಲ್ಪಭಾವದಿಂದ ಶುದ್ಧಾತ್ಮನನ್ನು ಧ್ಯಾನಿಸುತ್ತಾ

ನೆಯೋ ಆತನು ಅಲ್ಪಸಮಯದಲ್ಲಿಯೇ ಮೋಕ್ಷವನ್ನು ಪಡೆಯುವನೆಂದು ಭಾವಾರ್ಥವು

**ಕಮ್ಮಹಂ ಕೇರಾ ಭಾವಡಾ, ಅಣ್ಣು ಅಚೇಯಣು ದವ್ವು ।**
**ಜೀವಸಹಾವಂ ಭಿಣ್ಣು ಜಿಯ, ಣಿಯಮಿಂ ಬುಜ್ಝಹಿ ಸವ್ವು ॥ ೭೩ ॥**

"ಕರ್ಮಣಃ ಸಂಬಂಧಿನಃ ಭಾವಾಃ ಅನ್ಯತ್ ಅಚೇತನಂ ದ್ರವ್ಯಮ್ ।
ಜೀವಸ್ವಭಾವಾತ್ ಭಿನ್ನಂ ಜೀವ ನಿಯಮೇನ ಬುಧ್ಯಸ್ವ ಸರ್ವಮ್ ॥ ೭೩ ॥"

**ಅನ್ವಯಾರ್ಥ:—ಜಿಯ**—ಜೀವನೇ! **ಕಮ್ಮಹಂ ಕೇರಾ**—ಕರ್ಮಸಂಬಂಧಿಗಳಾದ **ಭಾವಡಾ**—ರಾಗಾದಿಭಾವಗಳೂ **ಅಣ್ಣು**—ಬೇರೆ **ಅಚೇಯಣು ದವ್ವು**—ಶರೀರಾದಿಅಚೇತನದ್ರವ್ಯವೂ **ಸವ್ವು**—ಸಮಸ್ತವೂ **ಜೀವಸಹಾವಹಂ ಬಿಣ್ಣು**—ಜೀವಸ್ವಭಾವದಿಂದ ಭಿನ್ನ (ಬೇರೆ)ವಾದುದೆಂದು **ಣಿಯಮಿಂ ಬುಜ್ಝಹಿ**—ನಿಶ್ಚಯದಿಂದ ತಿಳಿ.

**ಭಾವಾರ್ಥ:**—ಕರ್ಮಜನಿತಗಳಾದ ರಾಗಾದಿಭಾವಗಳೂ ಶರೀರಮೊದಲಾದ ಸಮಸ್ತಅಚೇತನ (ಜಡ) ದ್ರವ್ಯಗಳೂ ನಿರ್ಮಲ-ಜ್ಞಾನದರ್ಶನರೂಪವಾದ ಆತ್ಮಸ್ವರೂಪದಿಂದ ಸರ್ವಥಾ ಭಿನ್ನವಾದುವುಗಳು. ಇಲ್ಲಿ ಬಂಧಹೇತುಗಳಾದ ಮಿಥ್ಯಾತ್ವ, ಅವಿರತಿ, ಪ್ರಮಾದ, ಕಷಾಯ, ಯೋಗಗಳ ನಿವೃತ್ತಿರೂಪಪರಿಣಾಮದ ಕಾಲದಲ್ಲಿ ಶುದ್ಧಾತ್ಮನು ಉಪಾದೇಯನಾಗಿರುತ್ತಾನೆಂದು ಭಾವವು.

**ಅಪ್ಪಾ ಮೆಲ್ಲಿವಿ ಣಾಣಮಉ, ಅಣ್ಣು ಪರಾಯಉ ಭಾವು ।**
**ಸೋ ಛಂಡೇವಿಣು ಜೀವ ತುಹುಂ, ಭಾವಹಿ ಅಪ್ಪಸಹಾಉ ॥ ೭೪ ॥**

"ಆತ್ಮಾನಂ ಮುಕ್ತ್ವಾ ಜ್ಞಾನಮಯಂ ಅನ್ಯಃ ಪರಃ ಭಾವಃ ।
ತಂ ತ್ಯಕ್ತ್ವಾ ಜೀವ ತ್ವಂ ಭಾವಯ ಆತ್ಮಸ್ವಭಾವಮ್ ॥ ೭೪ ॥"

**ಅನ್ವಯಾರ್ಥ:—ಜೀವ**—ಜೀವನೇ! **ಣಾಣಮಉ ಅಪ್ಪಾ ಮೆಲ್ಲಿವಿ**—ಜ್ಞಾನಮಯನಾದ ಆತ್ಮನನ್ನು ಬಿಟ್ಟು **ಅಣ್ಣು ಪರಾಯಉ ಭಾಉ**—ಬೇರೆಯಾಗಿರುವುದು ಪರಭಾವವು **ತುಹುಂ**—ನೀನು **ಸೋ ಛಂಡೇವಿಣು**—ಆ ಪರಭಾವವನ್ನು **ಬಿಟ್ಟು** **ಅಪ್ಪಸಹಾಉ ಭಾವಹಿ**—ಆತ್ಮಸ್ವಭಾವವನ್ನು ಭಾವಿಸು

**ಭಾವಾರ್ಥ:**—ಜ್ಞಾನಮಯನಾದ ಆತ್ಮನ ಕೇವಲಜ್ಞಾನಾದ್ಯನಂತಗುಣರಾಶಿಯ ಹೊರತು ಮಿಕ್ಕುಳಿದ ಮಿಥ್ಯಾತ್ವರಾಗಾದಿ ಆಭ್ಯಂತರಭಾವಗಳೂ ದೇಹಾದಿಬಹಿರ್ಭಾವಗಳೂ ಶುದ್ಧಾತ್ಮನಿಗಿಂತ ವಿಲಕ್ಷಣಗಳಾದ ಪರಭಾವಗಳಾಗಿರುತ್ತವೆ ಅಂತಹ ಪರಭಾವವನ್ನು ಬಿಟ್ಟು ಶುದ್ಧಾತ್ಮಸ್ವಭಾವವನ್ನೇ ನೀನು ಭಾವಿಸೆಂದಭಿಪ್ರಾಯವು. ಇಲ್ಲಿ ಕೇವಲಜ್ಞಾನಾದಿ ಅನಂತಚತುಷ್ಟಯರೂಪ-ಕಾರ್ಯಸಮಯಸಾರಸಾಧಕವಾಗಿರುವ ಅಭೇಧರತ್ನತ್ರಯರೂಪ-ಕಾರಣಸಮಯಸಾರಮಯವಾಗಿ ಪರಿಣತವಾದ ಶುದ್ಧಾತ್ಮಸ್ವಭಾವವು ಧ್ಯಾನಿಸಲು ಯೋಗ್ಯವಾಗಿರುತ್ತದೆಂದು ಭಾವವು.

**ಅಟ್ಠಹಂ ಕಮ್ಮಹಂ ಬಾಹಿರಉ, ಸಯಲಹಂ ದೋಸಹಂ ಚತ್ತು ।**
**ದಂಸಣ-ಣಾಣ-ಚರಿತ್ತಮಉ, ಅಪ್ಪಾ ಭಾವಿ ಣಿರುತ್ತು ॥ ೭೫ ॥**

"ಅಷ್ಟಭ್ಯಃ ಕರ್ಮಭ್ಯಃ ಬಾಹ್ಯಂ ಸಕಲೈಃ ದೋಷೈಃ ತ್ಯಕ್ತಮ್ ।
ದರ್ಶನಜ್ಞಾನಚಾರಿತ್ರಮಯಂ ಆತ್ಮಾನಂ ಭಾವಯ ನಿಶ್ಚಿತಮ್ ॥ ೭೫ ॥"

**ಅನ್ವಯಾರ್ಥ:**–ಶುದ್ಧನಿಶ್ಚಯನಯದಿಂದ **ಅಟ್ಠಹಂ ಕಮ್ಮಹಂ ಬಾಹಿರಉ**–ಜ್ಞಾನಾವರಣಾದ್ಯಷ್ಟಕರ್ಮಗಳ ದೆಸೆಯಿಂದ ಬಹಿರ್ಭೂತ(ರಹಿತ)ನೂ **ಸಯಲಹಂ ದೋಸಹಂ ಚತ್ತು**–ಮಿಥ್ಯಾತ್ವರಾಗಾದಿ-ಸಕಲದೋಷಗಳಿಂದ ಬಿಡಲ್ಪಟ್ಟವನೂ **ದಂಸಣ-ಣಾಣ-ಚರಿತ್ತಮಉ**— ಸಮ್ಯಗ್ದರ್ಶನಜ್ಞಾನಚಾರಿತ್ರಮಯನೂ ಆದ **ಅಪ್ಪಾ ಭಾವಿ ಣಿರುತ್ತು**—ಆತ್ಮನನ್ನು ನಿಶ್ಚಯವಾಗಿ ಭಾವಿಸು

**ಭಾವಾರ್ಥ:**— ಶುದ್ಧನಿಶ್ಚಯನಯದಿಂದ ಜ್ಞಾನಾವರಣಾದ್ಯಷ್ಟವಿಧದ್ರವ್ಯಕರ್ಮಗಳಿಂದಲೂ ಮಿಥ್ಯಾತ್ವರಾಗಾದಿರೂಪಭಾವಕರ್ಮಗಳಿಂದಲೂ ರಹಿತನಾದವನೂ ಶುದ್ಧೋಪಯೋಗದೊಡನಿರುವ ಸ್ವಶುದ್ಧಾತ್ಮಸಮ್ಯಗ್ದರ್ಶನಜ್ಞಾನಚಾರಿತ್ರಗಳಿಂದ ಯುಕ್ತನೂ ಆದ ಆತ್ಮನನ್ನು ನೀನು ದೃಷ್ಟಶ್ರುತಾನುಭೂತ(ನೋಡಿದ, ಕೇಳಿದ, ಅನುಭವಿಸಿರುವ) ಭೋಗಾಕಾಂಕ್ಷಾರೂಪನಿದಾನಬಂಧಾದಿಸಮಸ್ತವಿಭಾವಪರಿಣಾಮಗಳನ್ನು ಬಿಟ್ಟವನಾಗಿ ನಿಶ್ಚಯದಿಂದ ಭಾವಿಸು. ಇಲ್ಲಿ ಸಮಸ್ತದ್ರವ್ಯಭಾವಕರ್ಮವಿನಿರ್ಮುಕ್ತನಾದ ಶುದ್ಧಾತ್ಮನು ಅಭೇದರತ್ನತ್ರಯಪರಿಣತರಾದ ಭವ್ಯರುಗಳಿಗೆ ಉಪಾದೇಯನಾಗಿರುತ್ತಾನೆಂದು ಭಾವವು

ಹೀಗೆ ತ್ರಿವಿಧಾತ್ಮಪ್ರತಿಪಾದಕವಾದ ಪ್ರಥಮಮಹಾಧಿಕಾರದಲ್ಲಿ ಭೇದಭಾವನೆಯನ್ನು ನಿರೂಪಿಸುವ ಒಂಭತ್ತು ಸ್ವತಂತ್ರದೋಹಕಸೂತ್ರಗಳು ಹೇಳಲ್ಪಟ್ಟುವು. ಈಗ ನಿಶ್ಚಯಸಮ್ಯಗ್ದೃಷ್ಟಿಯಮುಖ್ಯತೆಯಿಂದ ಸ್ವತಂತ್ರಸೂತ್ರವೊಂದನ್ನು ಹೇಳುತ್ತಾರೆ —

**ಅಪ್ಪಿಂ ಅಪ್ಪು ಮುಣಂತು ಜಿಉ, ಸಮ್ಮಾದಿಟ್ಠಿ ಹವೇಇ ।**
**ಸಮ್ಮಾಇಟ್ಠಿಉ ಜೀವಡಉ, ಲಹು ಕಮ್ಮಇಂ ಮುಚ್ಚೇಇ ॥ ೭೬ ॥**

"ಆತ್ಮನಾ ಆತ್ಮಾನಂ ಜಾನನ್ ಜೀವಃ ಸಮ್ಯಗ್‌ದೃಷ್ಟಿಃ ಭವತಿ ।
ಸಮ್ಯಗ್‌ದೃಷ್ಟಿಃ ಜೀವಃ ಲಘು ಕರ್ಮಣಾ ಮುಚ್ಯತೇ ॥ ೭೬ ॥"

**ಅನ್ವಯಾರ್ಥ:**—**ಜಿಉ**—ಜೀವನು **ಅಪ್ಪಿಂ ಅಪ್ಪು ಮುಣಂತು**—ತನ್ನಿಂದ ತನ್ನನ್ನು ತಿಳಿಯುವವನಾಗಿ **ಸಮ್ಮಾದಿಟ್ಠಿ ಹವೇಇ**—ಸಮ್ಯಗ್ದೃಷ್ಟಿಯಾಗುತ್ತಾನ **ಸಮ್ಮಾಇಟ್ಠಿಉ ಜೀವಡಉ**—ಸಮ್ಯಗ್ದೃಷ್ಟಿಯಾದ ಜೀವನು **ಕಮ್ಮಇಂ ಲಹು ಮುಚ್ಚೇಇ**—ಕರ್ಮದಿಂದ ಶೀಘ್ರವಾಗಿ ಬಿಡಲ್ಪಡುತ್ತಾನೆ.

**ಭಾವಾರ್ಥ:**— ಜೀವನು ವೀತರಾಗಸ್ವಸಂವೇದನಜ್ಞಾನಪರಿಣತನಾದ ಅಂತರಾತ್ಮನಿಂದ ಸ್ವಶುದ್ಧಾತ್ಮನನ್ನು ತಿಳಿಯುವವನಾಗಿ ಅರ್ಥಾತ್ ಸ್ವಶುದ್ಧಾತ್ಮಾನುಭವವನ್ನು ಹೊಂದುವವನಾಗಿ ವೀತರಾಗಸಮ್ಯಗ್ದೃಷ್ಟಿಯಾಗುವನು. ಹೀಗೆ ಸಮ್ಯಗ್ದೃಷ್ಟಿಯಾದ ಜೀವನು ಜ್ಞಾನಾವರಣಾದಿಕರ್ಮಗಳಿಂದ ಬೇಗನೆ ಬಿಡಲ್ಪಡುವನು ಅರ್ಥಾತ್ ಮುಕ್ತ

ನಾಗುವನು. ಹೀಗೆ ಯಾವಕಾರಣದಿಂದ ವೀತರಾಗಸಮ್ಯಗ್ದೃಷ್ಟಿಯಾದ ಜೀವನು ಕರ್ಮಗಳಿಂದ ಶೀಘ್ರವೇ ಬಿಡಲ್ಪಟ್ಟವನಾಗಿ ಮುಕ್ತನಾಗುವನೋ ಆ ಕಾರಣದಿಂದಲೇ ವೀತರಾಗಚಾರಿತ್ರಾನುಕೂಲವೂ ಶುದ್ಧಾತ್ಮಾನುಭೂತಿರೂಪವೂ ಆದ ವೀತರಾಗಸಮ್ಯಕ್ತ್ವವೇ ಭಾವನೀಯವಾಗಿರುತ್ತದೆಂದಭಿಪ್ರಾಯವು ಈ ಮೇಲಿನ ಅಭಿಪ್ರಾಯವನ್ನೇ ಶ್ರೀಕುಂದಕುಂದಾಚಾರ್ಯರು "**ಮೋಕ್ಷಪ್ರಾಭೃತ**"ದಲ್ಲಿ ಹೀಗೆ ಹೇಳಿರುತ್ತಾರೆ·—"**ಸದ್ದವ್ವರಓ ಸವಣೋ ಸಮ್ಮಾದಿಟ್ಠೀ ಹವೇಇ ಣಿಯಮೇಣ। ಸಮ್ಮತ್ತಪರಿಣದೋ ಉಣ ಖವೇಇ ದುಟ್ಠಟ್ಠಕಮ್ಮಾಇಂ॥**" ಅಂದರೆ ಸ್ವದ್ರವ್ಯ(ಆತ್ಮಸ್ವರೂಪ)ದಲ್ಲಿ ಮಗ್ನನಾದ ಯತಿಯು ನಿಶ್ಚಯವಾಗಿ ಸಮ್ಯಗ್ದೃಷ್ಟಿಯಾಗುತ್ತಾನೆ. ಸಮ್ಯಕ್ತ್ವಪರಿಣತನಾದ(ಸಮ್ಯಗ್ದೃಷ್ಟಿಯಾದ) ಆ ಜೀವನಾದರೋ ಎಂಟುವಿಧವಾದ ದುಷ್ಟಕರ್ಮಗಳನ್ನು ಕ್ಷಯ (ನಾಶ)ಗೊಳಿಸುತ್ತಾನೆ ಅರ್ಥಾತ್ ಮುಕ್ತನಾಗುತ್ತಾನೆ.

ಇನ್ನು ಮುಂದೆ ಮಿಥ್ಯಾದೃಷ್ಟಿಯ ಲಕ್ಷಣವನ್ನು ಪ್ರತಿಪಾದಿಸುವ ಮುಖ್ಯತೆಯಿಂದ ಎಂಟು ಸೂತ್ರಗಳು ಹೇಳಲ್ಪಡುತ್ತವೆ·—

**ಪಜ್ಜಯರತ್ತಉ ಜೀವಡಉ, ಮಿಚ್ಛಾದಿಟ್ಠಿ ಹವೇಇ।**
**ಬಂಧಇ ಬಹುವಿಹಕಮ್ಮಡಾ, ಜೇಂ ಸಂಸಾರು ಭಮೇಇ ॥ ೭೭ ॥**

"ಪರ್ಯಾಯರಕ್ತೋ ಜೀವಃ ಮಿಥ್ಯಾದೃಷ್ಟಿಃ ಭವತಿ।
ಬಧ್ನಾತಿ ಬಹುವಿಧಕರ್ಮಾಣಿ ಯೇನ ಸಂಸಾರಂ ಭ್ರಮತಿ ॥ ೭೭ ॥"

**ಅನ್ವಯಾರ್ಥ:— ಪಜ್ಜಯರತ್ತಉ ಜೀವಡಉ**— ನರನಾರಕಾದಿ ವಿಭಾವ ಪರ್ಯಾಯಗಳಲ್ಲಿ ರತನಾದ ಜೀವನು **ಮಿಚ್ಛಾದಿಟ್ಠಿ ಹವೇಇ**— ಮಿಥ್ಯಾದೃಷ್ಟಿಯಾಗಿರುವನು. ಆತನು **ಬಹುವಿಹಕಮ್ಮಡಾ**— ಅನೇಕಪ್ರಕಾರವಾದ ಕರ್ಮಗಳನ್ನು **ಬಂಧಇ**— ಬಂಧಿಸಿಕೊಳ್ಳುತ್ತಾನೆ. **ಜೇಂ**— ಯಾವ ಕರ್ಮಗಳಿಂದ (ಅಥವಾ ಕರ್ಮಬದ್ಧನಾಗಿರುವುದರಿಂದ) **ಸಂಸಾರು ಭಮೇಇ**— ಸಂಸಾರದಲ್ಲಿ ಭ್ರಮಿಸುತ್ತಾನೆ

**ಭಾವಾರ್ಥ:**— ಪರಮಾತ್ಮಾನುಭೂತಿರೂಪಶ್ರದ್ಧಾನದಿಂದ ರಹಿತವೂ ಎಂಟು ಮದಗಳು, ಎಂಟು ಮಲ(ದೋಷ)ಗಳು, ಆರು ಅನಾಯತನಗಳು ಮತ್ತು ಮೂರು **ಮೂಢತೆಗಳೆಂಬೀ** ಇಪ್ಪತ್ತೈದು **ದೋಷಗಳಿಂದ** ಕೂಡಿದುದೂ ಆದ ಅತತ್ತ್ವಶ್ರದ್ಧಾನರೂಪ-ಮಿಥ್ಯಾತ್ವಪರಿಣಾಮವುಳ್ಳ ಜೀವನಿಗೆ ಮಿಥ್ಯಾದೃಷ್ಟಿಯೆಂದು ಹೆಸರು. ಆ ಮಿಥ್ಯಾದೃಷ್ಟಿಯು ನರನಾರಕಾದಿವಿಭಾವಪರ್ಯಾಯಗಳಲ್ಲಿ ಆಸಕ್ತನಾಗಿರುತ್ತಾನೆ ಮತ್ತು ಮಿಥ್ಯಾತ್ವಪರಿಣಾಮದಿಂದ ಶುದ್ಧಾತ್ಮಾನುಭವವಿಲ್ಲದವನಾಗಿ ಅನೇಕವಿಧವಾದ ಕರ್ಮಗಳನ್ನು ಬಂಧಿಸಿಕೊಳ್ಳುತ್ತಾನೆ. ಆ ಕರ್ಮಗಳಿಂದ ದ್ರವ್ಯ-ಕ್ಷೇತ್ರ-ಕಾಲ-ಭವ-ಭಾವರೂಪದಿಂದ ಐದು ವಿಧವಾದ ಸಂಸಾರದಲ್ಲಿ ಭ್ರಮಿಸು (ತಿರುಗು)ತ್ತಿರುತ್ತಾನೆ ಹೀಗೆ ಈ ಜೀವನು ಜನ್ಮ-ಮರಣಗಳನ್ನು ಪಡೆಯದಿರುವ ಯಾವುದೊಂದು ಕ್ಷೇತ್ರವೂ ಕಾಲವೂ ಭವವೂ ಇರುವುದಿಲ್ಲ ಮತ್ತು ತಾನು ಹೊಂದದ ಯಾವುದೊಂದು ಶರೀರ

ವಾಗಲಿ, ಯಾವುದೊಂದು ಅಶುದ್ಧಭಾವವಾಗಲಿ ಇರುವುದಿಲ್ಲ **"ಮೋಕ್ಷಪ್ರಾಭೃತ"** ದಲ್ಲಿಯೂ ಮಿಥ್ಯಾದೃಷ್ಟಿಯ ಲಕ್ಷಣವನ್ನು ಹೀಗೆಯೇ ಹೇಳಿರುತ್ತಾರೆ–**"ಜೋ ಪುಣು ಪರದವ್ವರಓ ಮಿಚ್ಛಾಇಟ್ಠೀ ಹವೇಇ ಸೋ ಸಾಹೂ । ಮಿಚ್ಛತ್ತಪರಿಣದೋ ಉಣ ಬಜ್ಝದಿ ದುಟ್ಠಟ್ಠಕಮ್ಮೇಹಿಂ॥"** ಅರ್ಥಾತ್ ಯಾವ ಸಾಧುವು ಪರದ್ರವ್ಯ ಗಳಲ್ಲಿ ಮಗ್ನನಾಗಿರುತ್ತಾನೆಯೋ ಆತನು ಮಿಥ್ಯಾದೃಷ್ಟಿಯಾಗಿರುತ್ತಾನೆ ಅಂದರೆ ಮುನಿ ವ್ರತಧಾರಿಯಾದ ಸಾಧುವೂ ಪರದ್ರವ್ಯಾಸಕ್ತಿಯುಳ್ಳವನಾದುದಾದರೆ ಆತನು ಮಿಥ್ಯಾ ದೃಷ್ಟಿಯಾಗುವನೆಂದು ಭಾವವು ಹಾಗೆ ಮಿಥ್ಯಾತ್ವಪರಿಣತನಾದ ಆತನು ಎಂಟು ಪ್ರಕಾರವಾದ ದುಷ್ಟ (ಕೆಟ್ಟ–ದುಃಖವನ್ನುಂಟುಮಾಡುವ) ಕರ್ಮಗಳಿಂದ ಬಂಧಿಸಲ್ಪ ಡುತ್ತಾನೆ ಪುನಶ್ಚ—**"ಜೇ ಪಜ್ಜಏಸು ಣಿರದಾ ಜೀವಾ ಪರಸಮಯಿಗ ತ್ತಿ ಣಿದ್ದಿಟ್ಠಾ । ಆದಸಹಾವಮ್ಮಿ ಠಿದಾ ತೇ ಸಗಸಮಯಾ ಮುಣೇಯವ್ವಾ ॥"** ಅರ್ಥಾತ್ ಯಾವ ಜೀವರುಗಳು ನರನಾರಕಾದಿವಿಭಾವಪರ್ಯಾಯಗಳಲ್ಲಿ ಮಗ್ನರಾಗಿ ರುವರೋ ಅವರು ಪರಸಮಯಿ (ಮಿಥ್ಯಾದೃಷ್ಟಿ)ಗಳೆಂದು (ಜಿನೇಂದ್ರರಿಂದ) ಹೇಳಲ್ಪ ಟ್ಟಿರುವರು. ಮತ್ತು ಯಾರು ಆತ್ಮಸ್ವಭಾವದಲ್ಲಿ ಸ್ಥಿರ (ಮಗ್ನ)ವಾಗಿರುತ್ತಾರೆಯೋ ಅವರು ಸ್ವಸಮಯಿ (ಸಮ್ಯಗ್ದೃಷ್ಟಿ)ಗಳೆಂದು ತಿಳಿಯತಕ್ಕದು ಇಲ್ಲಿ ಸ್ವಸಂವಿತ್ತಿರೂಪ-ವೀತರಾಗಸಮ್ಯಕ್ತ್ವಕ್ಕೆ ಪ್ರತಿಪಕ್ಷವಾದ ಮಿಥ್ಯಾತ್ವವು ಹೇಯವಾದುದೆಂದು ಭಾವಾ ರ್ಥವು.

**ಕಮ್ಮಾಇಂ ದಿಢ-ಘಣ-ಚಿಕ್ಕಣಇಂ ಗುರುವಇಂ ವಜ್ಜಸಮಾಇಂ ।**
**ಣಾಣವಿಯಕ್ಖಣು ಜೀವಡಉ, ಉಪ್ಪಹಿ ಪಾಡಹಿಂ ತಾಇಂ ॥ ೭೮ ॥**

"ಕರ್ಮಾಣಿ ದೃಢ-ಘನ-ಚಿಕ್ಕಣಾನಿ ಗುರುಕಾಣಿ ವಜ್ರಸಮಾನಿ ।
ಜ್ಞಾನವಿಚಕ್ಷಣಂ ಜೀವಂ ಉತ್ಪಥೇ ಪಾತಯಂತಿ ತಾನಿ ॥ ೭೮ ॥

**ಅನ್ವಯಾರ್ಥ:—ಕಮ್ಮಾಇಂ**—ಕರ್ಮಗಳು **ದಿಢ-ಘಣ-ಚಿಕ್ಕಣಇಂ**–ಬಲಿಷ್ಟ ವಾದುವುಗಳು, ನಿಬಿಡವಾದುವುಗಳು ಮತ್ತು (ನಾಶಪಡಿಸಲಶಕ್ಯವಾಗಿರುವುದರಿಂದ) ಸ್ನಿಗ್ಧವಾದುವುಗಳು **ಗುರುವಇಂ**–ಮಹತ್ತರ(ಗುರು)ವಾದುವುಗಳು. **ವಜ್ಜಸಮಾಇಂ**–ವಜ್ರಸಮಾನವಾದುವುಗಳು ಅರ್ಥಾತ್ ವಜ್ರದಂತೆ ಅಭೇದ್ಯವಾದುವುಗಳು **ತಾಇಂ**–ಆ ಕರ್ಮಗಳು **ಣಾಣವಿಯಕ್ಖಣು**—ಜ್ಞಾನಾದಿಗುಣಗಳಿಂದ ವಿಚಕ್ಷಣ (ಚತುರ-ಸಮರ್ಥ)ನಾದ **ಜೀವಡಉ**–ಜೀವನನ್ನೂ **ಉಪ್ಪಹಿ ಪಾಡಹಿಂ**–ಉನ್ಮಾರ್ಗ (ಕೆಟ್ಟ ದಾರಿ)ದಲ್ಲಿ ಬೀಳಿಸುತ್ತವೆ.

**ಭಾವಾರ್ಥ:**—ಈ ಜೀವನು ಒಂದೇ ಸಮಯದಲ್ಲಿ ಲೋಕಾಲೋಕಗಳನ್ನು ಪ್ರಕಾಶಪಡಿಸುವ ಕೇವಲಜ್ಞಾನಾದಿ ಅನಂತಗುಣಗಳಿಂದ ಬುದ್ಧಿವಂತನೂ ಚತುರನೂ ಆಗಿರುತ್ತಾನೆ. ಆದರೂ ಸಂಸಾರಕ್ಕೆ ಕಾರಣಗಳಾದ ಈ ಕರ್ಮಗಳು ಜೀವನ ಜ್ಞಾನಾದಿ ಗುಣಗಳನ್ನು ಆಚ್ಛಾದಿಸಿ ಆತನನ್ನು ಅಭೇಧರತ್ನತ್ರಯರೂಪವಾದ ನಿಶ್ಚಯಮೋಕ್ಷ

ಮಾರ್ಗದಿಂದ ತಪ್ಪಿಸಿ ವಿಪರೀತವಾದ ಮಿಥ್ಯಾಮಾರ್ಗ(ದುರ್ಮಾರ್ಗ)ದಲ್ಲಿ ಬೀಳಿಸುತ್ತವೆ, ಅರ್ಥಾತ್ ಆತನು ಮೋಕ್ಷಮಾರ್ಗವನ್ನು ಮರೆತು ಸಂಸಾರಕಾನನದಲ್ಲಿ ಭ್ರಮಿಸುವಂತೆ ಮಾಡುತ್ತವೆ ಇಲ್ಲಿಯ ಅಭಿಪ್ರಾಯವೇನೆಂದರೆ, ಸಂಸಾರಕ್ಕೆ ಕಾರಣಗಳಾದ ಕರ್ಮಗಳೂ ಕರ್ಮಬಂಧಕ್ಕೆಕಾರಣಗಳಾದ ಮಿಥ್ಯಾತ್ವಾವಿರತಿಕಷಾಯಾದಿ-ಪರಿಣಾಮಗಳೂ ಹೇಯವಾಗಿರುತ್ತವೆ ಹಾಗೂ ಅಭೇದರತ್ನತ್ರಯರೂಪವಾದ ನಿಶ್ಚಯಮೋಕ್ಷಮಾರ್ಗವು ಉಪಾದೇಯವಾಗಿರುತ್ತದೆ.

**ಜಿಉ ಮಿಚ್ಛತ್ತೇಂ ಪರಿಣಮಿಉ, ವಿವರಿಉ ತಚ್ಚು ಮುಣೇಇ ।**
**ಕಮ್ಮವಿಣಿಮ್ಮಿಯ ಭಾವಡಾ, ತೇ ಅಪ್ಪಾಣು ಭಣೇಇ ॥ ೭೯ ॥**

"ಜೀವಃ ಮಿಥ್ಯಾತ್ವೇನ ಪರಿಣತಃ ವಿಪರೀತಂ ತತ್ತ್ವಂ ಮನುತೇ ।
ಕರ್ಮವಿನಿರ್ಮಿತಾನ್ ಭಾವಾನ್ ತಾನ್ ಆತ್ಮಾನಂ ಭಣತಿ ॥ ೭೯ ॥"

**ಅನ್ವಯಾರ್ಥಃ**— **ಜಿಉ**— ಜೀವನು **ಮಿಚ್ಛತ್ತೇಂ ಪರಿಣಮಿಉ**— ಅತತ್ತ್ವಶ್ರದ್ಧಾನರೂಪಮಿಥ್ಯಾತ್ವಪರಿಣತನಾಗಿ **ತಚ್ಚು ವಿವರಿಉ ಮುಣೇಇ**— ಜೀವಾದಿ ಪದಾರ್ಥಗಳ ಸ್ವರೂಪವನ್ನು ವಿಪರೀತವಾಗಿ ತಿಳಿಯುತ್ತಾನೆ. **ಕಮ್ಮವಿಣಿಮ್ಮಿಯ**— ಕರ್ಮನಿರ್ಮಿತಗಳಾದ **ತೇ ಭಾವಡಾ**— ಆ ಶರೀರಾದಿ ಪರಭಾವಗಳನ್ನು **ಅಪ್ಪಾಣು ಭಣೇಇ**— ಆತ್ಮನನ್ನಾಗಿ ಹೇಳುತ್ತಾನೆ ಅರ್ಥಾತ್ ತನ್ನಸ್ವರೂಪವೆಂದು ಹೇಳುತ್ತಾನೆ.

**ಭಾವಾರ್ಥ:**— ಶುದ್ಧಾತ್ಮಾನುಭೂತಿರುಚಿವಿಲಕ್ಷಣವೂ ಅತತ್ತ್ವಶ್ರದ್ಧಾನರೂಪವೂ ಆದ ಮಿಥ್ಯಾತ್ವದಿಂದ ಕೂಡಿರುವ ಜೀವನು ವಸ್ತುಸ್ವರೂಪವನ್ನು ವಿಪರೀತವಾಗಿ ತಿಳಿಯುತ್ತಾನೆ ಅರ್ಥಾತ್ ಶುದ್ಧಜ್ಞಾನಾದಿಮಯವಾದ ಆತ್ಮಸ್ವರೂಪವನ್ನು ಮಿಥ್ಯಾತ್ವ ರಾಗಾದಿರೂಪವಾದುದನ್ನಾಗಿ ತಿಳಿಯುತ್ತಾನೆ. ಹೀಗೆ ಭೇದವಿಜ್ಞಾನದ ಅಭಾವದಿಂದ ಕರ್ಮಜನಿತವಾದ ಶರೀರದ ಬಿಳುಪು, ಕಪ್ಪು, ಸ್ಥೂಲ, ಕೃಶ ಮೊದಲಾದ ಸ್ವರೂಪವನ್ನು ತನ್ನಸ್ವರೂಪವೆಂದು ತಿಳಿಯುತ್ತಾನೆ ಮತ್ತು ಈ ಕಾರಣದಿಂದ ಸಂಸಾರದಲ್ಲಿ ಭ್ರಮಿಸುತ್ತಾನೆ. ಭೇದವಿಜ್ಞಾನವುಳ್ಳ ಜೀವನು ಆತ್ಮಸ್ವರೂಪವು ಕರ್ಮಜನಿತಭಾವಗಳಿಂದ ಸರ್ವಥಾ ಭಿನ್ನವಾದುದೆಂದು ತಿಳಿಯುವವನಾಗಿ ರಾಗಾದಿಭಾವಗಳನ್ನು ಬಿಟ್ಟು ಸ್ವಶುದ್ಧಾತ್ಮನನ್ನೇ ಪರಿಗ್ರಹಿಸುತ್ತಾನೆಂದು ತಾತ್ಪರ್ಯವು

ಅನಂತರ, ಪೂರ್ವೋಕ್ತ-ಕರ್ಮಜನಿತಭಾವಗಳನ್ನು ಯಾವ ಮಿಥ್ಯಾತ್ವಪರಿಣಾಮದಿಂದ ಬಹಿರಾತ್ಮನು ತನ್ನವುಗಳನ್ನಾಗಿ ತಿಳಿಯುತ್ತಾನೆಯೋ ಆ ಪರಿಣಾಮವನ್ನು ಐದು ಸೂತ್ರಗಳಿಂದ ವಿವರಿಸುತ್ತಾರೆ:—

**ಹಉಂ ಗೋರಉ ಹಉಂ ಸಾಮಲಉ, ಹಉಂ ಜಿ ವಿಭಿಣ್ಣಉ ವಣ್ಣು ।**
**ಹಉಂ ತಣು-ಅಂಗಉಂ ಥೂಲು ಹಉಂ, ಏಹಉಂ ಮೂಢಉ**
**ಮಣ್ಣು ॥ ೮೦ ॥**

"ಅಹಂ ಗೌರಃ ಅಹಂ ಶ್ಯಾಮಃ ಅಹಮೇವ ವಿಭಿನ್ನಃ ವರ್ಣಃ ।
ಅಹಂ ತನ್ವಂಗಃ ಸ್ಥೂಲಃ ಅಹಂ ಏತಂ ಮೂಢಂ ಮನ್ಯಸ್ವ ॥ ೮೦ ॥"

**ಅನ್ವಯಾರ್ಥ:— ಹಉಂ ಗೋರಉ**— ನಾನು ಬಿಳಿವಾಗಿದ್ದೇನೆ **ಹಉಂ ಸಾಮಲಉ**— ನಾನು ಕಪ್ಪಾಗಿದ್ದೇನೆ **ಹಉಂ ಜಿ ವಿಭಿಣ್ಣಉ ವಣ್ಣು**— ನಾನೇ ಅನೇಕವರ್ಣ ಅಥವಾ ಮಿಶ್ರವರ್ಣವುಳ್ಳವನಾಗಿದ್ದೇನೆ **ಹಉಂ ತಣು-ಅಂಗಉಂ** ನಾನು ಕೃಶವಾದ ಶರೀರವುಳ್ಳವನಾಗಿದ್ದೇನೆ **ಹಉಂ ಥೂಲು**— ನಾನು ಸ್ಥೂಲನಾಗಿ ದ್ದೇನೆ **ಏಹಉಂ**— ಹೀಗೆ ತಿಳಿಯುವ ಮಿಥ್ಯಾತ್ವಪರಿಣತ (ಮಿಥ್ಯಾದೃಷ್ಟಿ)ನಾದ ಜೀವ ನನ್ನು **ಮೂಢಉ ಮಣ್ಣು**— ನೀನು ಮೂಢನನ್ನಾಗಿ ತಿಳಿ

**ಭಾವಾರ್ಥ:**— ನಿಶ್ಚಯನಯದಿಂದ ಆತ್ಮನಿಂದ (ತನ್ನಿಂದ) ಭಿನ್ನಗಳಾದ ಹಾಗೂ ಸರ್ವಥಾ ಹೇಯಗಳಾದ ಗೌರಸ್ಥೂಲಾದಿಭಾವಗಳನ್ನು ಸರ್ವಪ್ರಕಾರದಿಂದಲೂ ಉಪಾದೇಯನೂ ವೀತರಾಗನಿತ್ಯಾನಂದೈಕಸ್ವಭಾವವುಳ್ಳವನೂ ಆದ ಶುದ್ಧಜೀವನಲ್ಲಿ ಯಾವ ಮಿಥ್ಯಾದೃಷ್ಟಿಯು ಆರೋಪಿಸುತ್ತಾನೆಯೋ ಆತನು ನಿಜಶುದ್ಧಾತ್ಮಾನುಭೂತಿ ಯಿಂದ ಚ್ಯುತನಾದ ಮೂಢಾತ್ಮನಾಗಿರುತ್ತಾನೆ.

**ಹಉಂ ವರು ಬಂಭಣು ವಇಸು ಹಉಂ, ಹಉಂ ಖತ್ತಿಉ ಹಉಂ**
**ಸೇಸು ।**
**ಪುರಿಸು ಣಉಂಸಉ ಇತ್ಥಿ ಹಉಂ, ಮಣ್ಣಇ ಮೂಢು ವಿಸೇಸು ॥ ೮೧ ॥**

"ಅಹಂ ವರಃ ಬ್ರಾಹ್ಮಣಃ ವೈಶ್ಯಃ ಅಹಂ ಅಹಂ ಕ್ಷತ್ರಿಯಃ ಅಹಂ ಶೇಷಃ ।
ಪುರುಷಃ ನಪುಂಸಕಃ ಸ್ತ್ರೀ ಅಹಂ ಮನ್ಯತೇ ಮೂಢಃ ವಿಶೇಷಮ್ ॥ ೮೧ ॥"

**ಅನ್ವಯಾರ್ಥ:— ಮೂಢು**— ಮೂಢಾತ್ಮನಾದ ಮಿಥ್ಯಾದೃಷ್ಟಿಯು **ಹಉಂ ವರು ಬಂಭಣು**— ನಾನು ಶ್ರೇಷ್ಠಬ್ರಾಹ್ಮಣನು **ಹಉಂ ವಇಸು**— ನಾನು ವೈಶ್ಯನು. **ಹಉಂ ಖತ್ತಿಉ**— ನಾನು ಕ್ಷತ್ರಿಯನು **ಹಉಂ ಸೇಸು**— ನಾನು ಇತರ ಶೂದ್ರಾದಿ ವರ್ಣದವನು **ಹಉಂ**— ನಾನು **ಪುರಿಸು**— ಪುರುಷನು **ಣಉಂಸಉ**— ನಪುಂಸಕನು **ಇತ್ಥಿ**— ಸ್ತ್ರೀಯು ಹೀಗೆಂದು **ವಿಸೇಸು ಮಣ್ಣಇ**— ವಿಶೇಷವಾಗಿ ತಿಳಿಯುತ್ತಾನೆ.

**ಭಾವಾರ್ಥ:**— ನಿಶ್ಚಯನಯದಿಂದ ಬ್ರಾಹ್ಮಣಾದಿಭೇದಗಳು ಕರ್ಮಜನಿತಗಳಾ ಗಿರುತ್ತವೆ. ಅವು ಆತ್ಮಸಂಬಂಧವಾದುವುಗಳಲ್ಲ. ಆದಕಾರಣ ಇವೆಲ್ಲವೂ ಆತ್ಮ ಜ್ಞಾನಿಗೆ ಹೇಯ (ತ್ಯಾಜ್ಯ)ಗಳಾಗಿವೆ. ಆದರೆ ಯಾವ ಮಿಥ್ಯಾದೃಷ್ಟಿಯು ನಿಶ್ಚಯ ನಯದಿಂದ ವೀತರಾಗನಿತ್ಯಾನಂದಮಯನಾದ ನಿಜಶುದ್ಧಾತ್ಮನಲ್ಲಿ ಪೂರ್ವೋಕ್ತ ಬ್ರಾಹ್ಮಣಕ್ಷತ್ರಿಯಾದಿ-ಭೇದಗಳನ್ನು ಆರೋಪಿಸುತ್ತಾನೋ ಅರ್ಥಾತ್ ತನ್ನನ್ನು ಬ್ರಾಹ್ಮ ಣಾದಿವರ್ಣದವನನ್ನಾಗಿಯೂ ಸ್ತ್ರೀಪುರುಷಾದಿಸಂಜ್ಞೆ (ಲಿಂಗ)ಯುಳ್ಳವನನ್ನಾಗಿಯೂ ತಿಳಿಯುತ್ತಾನೋ ಆತನು ಕರ್ಮಬಂಧವನ್ನು ಮಾಡಿಕೊಳ್ಳುವವನೂ ನಿಜಶುದ್ಧಾತ್ಮ ತತ್ತ್ವದ ಭಾವನೆಯಿಲ್ಲದವನೂ ಆದ ಮೂರ್ಖ (ಮೂಢಾತ್ಮ)ನಾಗಿರುತ್ತಾನೆ.

**ತರುಣಉ ಬೂಢಉ ರೂಯಡಉ, ಸೂರಉ ಪಂಡಿಉ ದಿವ್ವು ।**
**ಖವಣಉ ವಂದಉ ಸೇವಡಉ, ಮೂಢಉ ಮಣ್ಣಇ ಸವ್ವು ॥ ೮೨ ॥**

"ತರುಣಃ ವೃದ್ಧಃ ರೂಪವಾನ್ ಶೂರಃ ಪಂಡಿತಃ ದಿವ್ಯಃ ।
ಕ್ಷಪಣಕಃ ವಂದಕಃ ಶ್ವೇತಪಟಃ ಮೂಢಃ ಮನ್ಯತೇ ಸರ್ವಮ್ ॥ ೮೨ ॥"

**ಅನ್ವಯಾರ್ಥ:—ತರುಣಉ ಬೂಢಉ**—ನಾನು ಯುವಕ (ತರುಣ)ನು, ವೃದ್ಧನು **ರೂಯಡಉ, ಸೂರಉ**—ರೂಪವಂತನು, ಶೂರನು **ಪಂಡಿಉ, ದಿವ್ವು**—ಪಂಡಿತನು, ಶ್ರೇಷ್ಠನು **ಖವಣಉ, ವಂದಉ**—ದಿಗಂಬರನು, ಬೌದ್ಧನು **ಸೇವಡಉ**—ಶ್ವೇತಪಟ(ಶ್ವೇತಾಂಬರ)ನು ಇತ್ಯಾದಿ **ಸವ್ವು**—ಶರೀರಸಂಬಂಧವಾದ ಸರ್ವಭೇದಗಳನ್ನೂ **ಮೂಢಉ**—ಮೂಢಜೀವನು **ಮಣ್ಣಇ**—ತನ್ನವುಗಳನ್ನಾಗಿ ತಿಳಿಯುತ್ತಾನೆ

**ಭಾವಾರ್ಥ:**—ಯದ್ಯಪಿ ವ್ಯವಹಾರನಯದಿಂದ ತರುಣ-ವೃದ್ಧಾದಿ-ಶರೀರಭೇದ ಗಳು ಆತ್ಮನವುಗಳೆಂದು ಹೇಳಲ್ಪಡುತ್ತವಾದರೂ ನಿಶ್ಚಯನಯದಿಂದ ಅವುಗಳೆಲ್ಲವೂ ಸಹಜಾನಂದೈಕಸ್ವಭಾವವುಳ್ಳ ಪರಮಾತ್ಮನಿಂದ ಭಿನ್ನವಾದುವುಗಳಾಗಿವೆ. ಹಾಗೂ ಕರ್ಮೋದಯಜನಿತಗಳಾಗಿರುವುದರಿಂದ ತ್ಯಾಜ್ಯಗಳಾಗಿವೆ ಅಂತಹ ತರುಣವೃದ್ಧಾದಿ ವಿಭಾವಪರ್ಯಾಯಗಳನ್ನು ಸ್ವಶುದ್ಧಾತ್ಮತತ್ತ್ವದಲ್ಲಿ ಆರೋಪಿಸುವ ಮಿಥ್ಯಾದೃಷ್ಟಿಯು ಖ್ಯಾತಿ-ಪೂಜಾ-ಲಾಭಾದಿವಿಭಾವಪರಿಣಾಮುಗಳಿಗೆ ಅಧೀನನಾಗಿ ಪರಮಾತ್ಮಭಾವನಾ ಚ್ಯುತನಾದ ಮೂಢಾತ್ಮನಾಗಿರುವನು.

**ಜಣಣೀ ಜಣಣು ವಿ ಕಂತ ಘರು, ಪುತ್ತು ವಿ ಮಿತ್ತು ವಿ ದವ್ವು ।**
**ಮಾಯಜಾಲು ವಿ ಅಪ್ಪಣಉ, ಮೂಢಉ ಮಣ್ಣಇ ಸವ್ವು ॥ ೮೩ ॥**

"ಜನನೀ ಜನಕಃ ಅಪಿ ಕಾಂತಾ ಗೃಹಂ ಪುತ್ರೋಽಪಿ ಮಿತ್ರಮಪಿ ದ್ರವ್ಯಮ್ ।
ಮಾಯಾಜಾಲಮಪಿ ಆತ್ಮೀಯಂ ಮೂಢಃ ಮನ್ಯತೇ ಸರ್ವಮ್ ॥ ೮೩ ॥"

**ಅನ್ವಯಾರ್ಥ:—ಜಣಣೀ ಜಣಣು ವಿ ಕಂತ ಘರು**—ತಾಯಿಯು, ತಂದೆಯು, ಪತ್ನಿಯು ಮತ್ತು ಮನೆಯು **ಪುತ್ತು ವಿ ಮಿತ್ತು ವಿ ದವ್ವು**—ಪುತ್ರನೂ, ಮಿತ್ರನೂ, ದ್ರವ್ಯವೂ **ಸವ್ವು**—ಇವೆಲ್ಲವೂ **ಮಾಯಾಜಾಲು ವಿ**—ಮಾಯಾಜಾಲ (ಅಸತ್ಯ, ಕೃತ್ರಿಮ, ಕರ್ಮಜನಿತ)ವಾಗಿರುತ್ತಿದ್ದರೂ **ಮೂಢಉ**—ಮೂಢಾತ್ಮನು **ಅಪ್ಪಣಉ ಮಣ್ಣಇ**—ತನ್ನದೆಂದು ತಿಳಿಯುತ್ತಾನೆ.

**ಭಾವಾರ್ಥ:**—ತಾಯಿ, ತಂದೆ, ಪತ್ನೀ, ಪುತ್ರ, ಮಿತ್ರ, ಬಂಧು, ಬಳಗ, ಕ್ಷೇತ್ರ, ವಾಸ್ತು, ಧನ, ಧಾನ್ಯ, ದ್ವಿಪದ, ಚತುಷ್ಪದ, ವಾಹನ, ಶಯ್ಯೆ, ಆಸನ, ಸುವರ್ಣ, ಹಿರಣ್ಯ ಮೊದಲಾದುವುಗಳೆಲ್ಲವೂ ಆತ್ಮಭಿನ್ನ-ಪರಸ್ವರೂಪವುಳ್ಳವುಗಳು, ಅರ್ಥಾತ್ ಇವುಗಳು ಶುದ್ಧಾತ್ಮನಿಂದ ಸರ್ವಥಾ ಭಿನ್ನವಾದುವುಗಳಾಗಿಯೂ ಕೇವಲ ಶರೀರ ಸಂಬಂಧಿಗಳಾಗಿಯೂ ಇರುತ್ತವೆ. ಇವು ಕರ್ಮೋದಯಜನಿತಗಳಾಗಿದ್ದು ನಾರಕಾದಿ

ಸಾಂಸಾರಿಕ ದುಃಖಗಳಿಗೆ ಕಾರಣಗಳಾಗಿರುತ್ತವೆ ಅತಏವ ಸಾಕ್ಷಾದುಪಾದೇಯ ಭೂತವೂ ಅನಾಕುಲತಾಲಕ್ಷಣವುಳ್ಳುದೂ ಆದ ಪಾರಮಾರ್ಥಿಕ ಸುಖವನ್ನಪೇಕ್ಷಿಸುವ ಜ್ಞಾನಿಗೆ ಇವುಗಳು ತ್ಯಾಜ್ಯಗಳಾಗಿರುತ್ತವೆ ಆದರೆ—**"ವಪುರ್ಗೃಹಂ ಧನಂ ದಾರಾಃ ಶತ್ರುಮಿತ್ರಾಣಿ ಬಾಂಧವಾಃ । ಸರ್ವಥಾನ್ಯಸ್ವಭಾವಾನಿ ಮೂಢಃ ಸ್ವಾನಿ ಪ್ರಪ ದ್ಯತೇ ॥"** ಎನ್ನುವಂತೆ ಆತ್ಮ-ಪರಪದಾರ್ಥಗಳ ಭೇದಜ್ಞಾನರಹಿತನಾದ ಮೂಢಾತ್ಮ (ಅಜ್ಞಾನೀಜೀವ)ನು ಸರ್ವಥಾ ಅನ್ಯಸ್ವಭಾವವುಳ್ಳ ಪರಸ್ತುಗಳಾದ ಈ ಪೂರ್ವೋಕ್ತ ಜನನೀಜನಕಪುತ್ರಮಿತ್ರಾದಿಗಳನ್ನು ಆತ್ಮವಸ್ತು(ತನ್ನ ಸಂಬಂಧವಾದವು)ಗಳನ್ನಾಗಿ ತಿಳಿ ಯುತ್ತಾನೆ. ಹೀಗೆ ಶುದ್ಧಾತ್ಮಭಿನ್ನಗಳಾದ ಪದಾರ್ಥಗಳ ಸಂಬಂಧವನ್ನು ವೀತರಾಗ ಪರಮಾನಂದೈಕಸ್ವಭಾವವುಳ್ಳ ಶುದ್ಧಾತ್ಮತತ್ತ್ವದಲ್ಲಿ ಆರೋಪಿಸುವ ಮಿಥ್ಯಾದೃಷ್ಟಿಯು ಸ್ವಶುದ್ಧಾತ್ಮದ್ರವ್ಯಭಾವನಾಶೂನ್ಯನಾದ ಮೂಢಾತ್ಮನಾಗಿರುವನೆಂದು ಭಾವಾರ್ಥವು.

**ದುಕ್ಖಹಂ ಕಾರಣಿ ಜೇ ವಿಸಯ, ತೇ ಸುಹಹೇಉ ರಮೇಇ ।**
**ಮಿಚ್ಛಾಇಟ್ಠಿಉ ಜೀವಡಉ, ಇತ್ಥು ಣ ಕಾಇಂ ಕರೇಇ ॥ ೮೪ ॥**

"ದುಃಖಸ್ಯ ಕಾರಣಂ ಯೇ ವಿಷಯಾಃ ತಾನ್ ಸುಖಹೇತೂನ್ ರಮತೇ ।
ಮಿಥ್ಯಾದೃಷ್ಟಿಃ ಜೀವಃ ಅತ್ರ ನ ಕಿಂ ಕರೋತಿ ॥ ೮೪ ॥"

**ಅನ್ವಯಾರ್ಥ:—** ಮಿಥ್ಯಾದೃಷ್ಟಿಯು **ದುಕ್ಖಹಂ ಕಾರಣಿ**—ದುಃಖಕ್ಕೆ ಕಾರಣ ಗಳಾದ **ಜೇ ವಿಸಯ**—ಯಾವ ಪಂಚೇಂದ್ರಿಯವಿಷಯಗಳಿವೆಯೋ **ತೇ ಸುಹಹೇಉ**-ಅವುಗಳನ್ನು ಸುಖಕ್ಕೆ ಕಾರಣಗಳನ್ನಾಗಿ ತಿಳಿದು **ರಮೇಇ**—ರಮಿಸುತ್ತಾನೆ ಅರ್ಥಾತ್ ಅವುಗಳಲ್ಲಿ ಆಸಕ್ತನಾಗುತ್ತಾನೆ ಹಾಗೂ ಅವುಗಳ ಪ್ರಾಪ್ತಿಯಿಂದ ಸಂತೋಷಪಡುತ್ತಾನೆ **ಇತ್ಥು**—ಈ ಲೋಕ(ಸಂಸಾರ)ದಲ್ಲಿ **ಮಿಚ್ಛಾಇಟ್ಠಿಉ ಜೀವಡಉ**—ಮಿಥ್ಯಾದೃಷ್ಟಿ ಯಾದ ಜೀವನು **ಕಾಇಂ ಣ ಕರೇಇ**—ಯಾವ ಅಕೃತ್ಯ(ಪಾಪ)ಗಳನ್ನು ಮಾಡುವುದಿಲ್ಲ? ಅರ್ಥಾತ್ ಎಲ್ಲಾ ಅಕೃತ್ಯಗಳನ್ನೂ ಮಾಡುತ್ತಾನೆಂದರ್ಥವು

**ಭಾವಾರ್ಥ:—** ಮಿಥ್ಯಾದೃಷ್ಟಿಯಾದ ಜೀವನು ವೀತರಾಗನಿರ್ವಿಕಲ್ಪಸಮಾಧಿ ಜನಿತವಾದ ಪರಮಾನಂದಸಮರಸೀಭಾವರೂಪಸುಖಕ್ಕೆ ವಿಪರೀತಗಳಾದ ಹಾಗೂ ನಿಶ್ಚ ಯದಿಂದ ದುಃಖರೂಪಗಳಾಗಿರುವ ಪಂಚೇಂದ್ರಿಯವಿಷಯಗಳನ್ನು ಸುಖಕ್ಕೆ ಕಾರಣಗಳ ನ್ನಾಗಿ ತಿಳಿದು ಅವುಗಳನ್ನನುಭವಿಸುತ್ತಾನೆಂದು ಭಾವವು.

ಈ ಪ್ರಕಾರವಾಗಿ ತ್ರಿವಿಧಾತ್ಮಪ್ರತಿಪಾದಕವಾದ ಪ್ರಥಮಮಹಾಧಿಕಾರದಲ್ಲಿ **"ಜಉ ಮಿಚ್ಛತ್ತೇಂ"** ಇತ್ಯಾದಿ ಎಂಟು ದೋಹಕಸೂತ್ರಗಳಿಂದ ಮಿಥ್ಯಾದೃಷ್ಟಿಪರಿಣ ತಿಯ ವ್ಯಾಖ್ಯೆಯು ಮುಗಿದುದು.

ಇನ್ನುಮುಂದೆ ಸಮ್ಯಗ್ದೃಷ್ಟಿಭಾವನೆಯ ವ್ಯಾಖ್ಯಾನದ ಮುಖ್ಯತೆಯಿಂದ **"ಕಾಲು ಲಹೇವಿಣು"** ಮೊದಲಾದೆಂಟು ಸೂತ್ರಗಳು ಹೇಳಲ್ಪಡುತ್ತವೆ:—

**ಕಾಲು ಲಹೇವಿಣು ಜೋಇಯಾ, ಜಿಮು ಜಿಮು ಮೋಹು ಗಲೇಇ ।**
**ತಿಮು ತಿಮು ದಂಸಣು ಲಹಇ ಜಿವು, ಣಿಯುಮೇಂ ಅಪ್ಪು ಮುಣೇಇ**
**॥ ೮೫ ॥**

"ಕಾಲಂ ಲಬ್ಧ್ವಾ ಯೋಗಿನ್ ಯಥಾ ಯಥಾ ಮೋಹಃ ಗಲತಿ ।
ತಥಾ ತಥಾ ದರ್ಶನಂ ಲಭತೇ ಜೀವಃ ನಿಯಮೇನ ಆತ್ಮಾನಂ ಮನುತೇ ॥ ೮೫ ॥"

**ಅನ್ವಯಾರ್ಥ:**—**ಜೋಇಯಾ**—ಯೋಗಿಯೇ! **ಕಾಲು ಲಹೇವಿಣು**—ಕಾಲವನ್ನು (ಕಾಲಲಬ್ಧಿಯನ್ನು) ಹೊಂದಿ **ಜಿಮು ಜಿಮು ಮೋಹು ಗಲೇಇ**—ಹೇಗೆ ಹೇಗೆ ಮೋಹವು ಗಲಿತ (ಕಡಮೆ)ವಾಗುವುದೋ **ತಿಮು ತಿಮು**—ಹಾಗೆ ಹಾಗೆ **ಜಿವು ದಂಸಣು ಲಹಇ**—ಜೀವನು ಸಮ್ಯಗ್ದರ್ಶನವನ್ನು ಹೊಂದುತ್ತಾನೆ **ಣಿಯುಮೇಂ ಅಪ್ಪು ಮುಣೇಇ**—ನಿಶ್ಚಯದಿಂದ ಆತ್ಮನನ್ನು (ಆತ್ಮಸ್ವರೂಪವನ್ನು) ತಿಳಿಯುತ್ತಾನೆ

**ಭಾವಾರ್ಥ**—ಈ ಸಂಸಾರದಲ್ಲಿ ಜೀವನು ಏಕೇಂದ್ರಿಯತ್ವದಿಂದ ವಿಕಲತ್ರಯತ್ವವನ್ನು ಹೊಂದುವುದೇ ದುರ್ಲಭವಾಗಿದೆ ಹೀಗೆಯೇ ವಿಕಲತ್ರಯತ್ವದಿಂದ ಪಂಚೇಂದ್ರಿಯತ್ವ, ಸಂಜ್ಞಿತ್ವ, ಪರ್ಯಾಪ್ತಿಯ ಪೂರ್ಣತೆ ಮತ್ತು ಮನುಷ್ಯತ್ವ ಇವುಗಳನ್ನು ಹೊಂದುವುದು ಉತ್ತರೋತ್ತರ ಕಠಿನವಾಗಿದೆ. ಮನುಷ್ಯಭವದಲ್ಲಿಯೂ ಯೋಗ್ಯ ದೇಶ, ಕುಲ, ವಸ್ತುಸ್ವರೂಪದ ಯಥಾರ್ಥ ಉಪದೇಶ ಇವುಗಳ ಪ್ರಾಪ್ತಿಯು ಅತ್ಯಂತ ದುರ್ಲಭವು. ಹೀಗಿರುತ್ತಿರಲು ಈ ಜೀವನಿಗೆ "ಕಾಕತಾಲೀಯನ್ಯಾಯ"ದಿಂದ ಎಂದಾದರೂ ಕಾಲಲಬ್ಧಿ (ಯೋಗ್ಯಕಾಲದ ಪ್ರಾಪ್ತಿ)ಯಿಂದ ಈ ಪೂರ್ವೋಕ್ತ ದೇಶಕುಲಾದಿ ದುರ್ಲಭಸಾಮಗ್ರಿಗಳು ದೊರೆತು ಪರಮಾಗಮದಲ್ಲಿ ಹೇಳಿದ ಶ್ರೇಯೋಮಾರ್ಗದಲ್ಲಿ ಶ್ರದ್ಧೆಯುಂಟಾಗಿ ಆತನಲ್ಲಿರುವ ಮಿಥ್ಯಾತ್ವವು ದೂರವಾಗುತ್ತಿರಲು ಮೋಹವು ಹೇಗೆ ಹೇಗೆ ಕಡಿಮೆಯಾಗುತ್ತ ಹೋಗುವುದೋ ಹಾಗೆ ಹಾಗೆ ಆತನಲ್ಲಿ "ಶುದ್ಧಾತ್ಮನೇ ಉಪಾದೇಯನಾಗಿರುತ್ತಾನೆ" ಎಂಬ ಶ್ರದ್ಧಾರೂಪವಾದ ಸಮ್ಯಕ್ತ್ವವುಂಟಾಗುತ್ತದೆ. ಆಗ ಆತನು ಶುದ್ಧಾತ್ಮಕರ್ಮಭೇದಜ್ಞಾನವನ್ನು ಪಡೆಯುತ್ತಾನೆ ಅರ್ಥಾತ್ ಕರ್ಮವು ಶುದ್ಧಾತ್ಮನಿಂದ ಸರ್ವಥಾ ಭಿನ್ನವಾದುದೆಂದು ತಿಳಿಯುತ್ತಾನೆ. ಹೀಗೆ ಉಪಾದೇಯಭೂತವಾದ ಶುದ್ಧಾತ್ಮತತ್ತ್ವದ ಶ್ರದ್ಧಾರೂಪಪರಿಣಾಮದಿಂದ ನಿಶ್ಚಯಸಮ್ಯಗ್ದೃಷ್ಟಿಯಾಗಿರುವ ಜೀವನು ಉಪಾದೇಯನಾಗಿರುತ್ತಾನೆಂದು ಭಾವವು.

**ಅಪ್ಪಾ ಗೋರಉ ಕಿಣ್ಹು ಣವಿ, ಅಪ್ಪಾ ರತ್ತು ಣ ಹೋಇ ।**
**ಅಪ್ಪಾ ಸುಹುಮು ವಿ ಥೂಲು ಣ ವಿ, ಣಾಣಿಉ ಜಾಣೇ ಜೋಇ ॥ ೮೬ ॥**

"ಆತ್ಮಾ ಗೌರಃ ಕೃಷ್ಣಃ ನಾಪಿ ಆತ್ಮಾ ರಕ್ತಃ ನ ಭವತಿ ।
ಆತ್ಮಾ ಸೂಕ್ಷ್ಮೋಽಪಿ ಸ್ಥೂಲಃ ನಾಪಿ ಜ್ಞಾನೀ ಜ್ಞಾನೇನ ಪಶ್ಯತಿ ॥ ೮೬ ॥"

**ಅನ್ವಯಾರ್ಥ:**—**ಅಪ್ಪಾ ಗೋರಉ ಕಿಣ್ಹು ಣ ವಿ**—ಆತ್ಮನು ಬಿಳುಪಾಗಿಯೂ ಇರುವುದಿಲ್ಲ, ಕಪ್ಪಾಗಿಯೂ ಇರುವುದಿಲ್ಲ. **ಅಪ್ಪಾ ರತ್ತು ಣ ಹೋಇ**—ಆತ್ಮನು

ಕೆಂಪಾಗಿಯೂ ಇರುವುದಿಲ್ಲ. **ಅಪ್ಪಾ ಸುಹುಮು ವಿ ಥೂಲು ಣ ವಿ**—ಆತ್ಮನು ಸೂಕ್ಷ್ಮನೂ ಅಲ್ಲ, ಸ್ಥೂಲನೂ ಅಲ್ಲ ಆತನು **ಣಾಣಿಲು**—ಜ್ಞಾನಸ್ವರೂಪನಾಗಿರುವನು. **ಜಾಣೇ ಜೋಇ**—ಜ್ಞಾನದಿಂದ ನೋಡುವನು ತಿಳಿಯುವನು. ಅಥವಾ ಜ್ಞಾನಿಯಾದ ಯೋಗಿಯು ಹೀಗೆ ಆತ್ಮಸ್ವರೂಪವನ್ನು ತಿಳಿಯುತ್ತಾನೆ

**ಭಾವಾರ್ಥ:**- ವ್ಯವಹಾರನಯದಿಂದ ಜೀವಸಂಬಂಧಿಗಳಾದ ಈ ಶ್ವೇತಕೃಷ್ಣಾದಿ ಧರ್ಮಗಳು ಶುದ್ಧನಿಶ್ಚಯನಯದಿಂದ ಶುದ್ಧಾತ್ಮನಿಂದ ಸರ್ವಥಾ ಭಿನ್ನಗಳಾಗಿರುತ್ತವೆ ಆದಕಾರಣ ವೀತರಾಗಸ್ವಸಂವೇದನಜ್ಞಾನವುಳ್ಳ ಯೋಗಿಯು ಈ ಬಾಹ್ಯಧರ್ಮಗಳನ್ನು ಶುದ್ಧಾತ್ಮನಲ್ಲಿ ಆರೋಪಿಸುವುದಿಲ್ಲ.

**ಅಪ್ಪಾ ಬಂಭಣು ವಇಸು ಣ ವಿ, ಣ ವಿ ಖತ್ತಿಉ ಣ ವಿ ಸೇಸು ।**
**ಪುರಿಸು ಣಉಂಸಉ ಇತ್ಥಿ ಣ ವಿ, ಣಾಣಿಉ ಮುಣಇ ಅಸೇಸು ॥ ೮೭ ॥**

"ಆತ್ಮಾ ಬ್ರಾಹ್ಮಣಃ ವೈಶ್ಯಃ ನಾಪಿ ನಾಪಿ ಕ್ಷತ್ರಿಯಃ ನಾಪಿ ಶೇಷಃ ।
ಪುರುಷಃ ನಪುಂಸಕಃ ಸ್ತ್ರೀ ನಾಪಿ ಜ್ಞಾನೀ ಮನುತೇ ಅಶೇಷಮ್ ॥ ೮೭ ॥"

**ಅನ್ವಯಾರ್ಥ:—ಅಪ್ಪಾ ಬಂಭಣು ವಇಸು ಣ ವಿ**—ಆತ್ಮನು ಬ್ರಾಹ್ಮಣನಲ್ಲ, ವೈಶ್ಯನೂ ಅಲ್ಲ. **ಣ ವಿ ಖತ್ತಿಉ ಣ ವಿ ಸೇಸು**—ಕ್ಷತ್ರಿಯನೂ ಅಲ್ಲ, ಉಳಿದ ಶೂದ್ರ ವರ್ಣದವನೂ ಅಲ್ಲ. **ಪುರಿಸು ಣಉಂಸಉ ಇತ್ಥಿ ಣ ವಿ**—ಪುರುಷನೂ ನಪುಂಸಕನೂ ಸ್ತ್ರೀಯೂ ಆಗಿರುವುದಿಲ್ಲ. **ಣಾಣಿಉ ಮುಣಇ ಅಸೇಸು**—ಜ್ಞಾನಸ್ವರೂಪನಾಗಿ ಸಮಸ್ತ ವಸ್ತುಗಳನ್ನು ತಿಳಿಯುತ್ತಾನೆ. ಅಥವಾ ಭೇದಜ್ಞಾನಿಯಾದ ಸಮ್ಯಗ್ದೃಷ್ಟಿಯು ಎಲ್ಲವನ್ನೂ ಹೀಗೆ ತಿಳಿಯುತ್ತಾನೆ.

**ಭಾವಾರ್ಥ:**—ವ್ಯವಹಾರನಯದಿಂದ ಆತ್ಮಪದಾರ್ಥದಿಂದ ಅಭಿನ್ನಗಳೂ, ಶುದ್ಧ ನಿಶ್ಚಯನಯದಿಂದ ಆತ್ಮಪದಾರ್ಥದಿಂದ ಭಿನ್ನವಾದುವುಗಳೂ ಆದ ಬ್ರಾಹ್ಮಣಾದಿ-ವರ್ಣ ಭೇದಗಳನ್ನೂ ಪುಲ್ಲಿಂಗಾದಿ-ಲಿಂಗಭೇದಗಳನ್ನೂ ವೀತರಾಗನಿರ್ವಿಕಲ್ಪಸಮಾಧಿಚ್ಯುತನಾದ ಬಹಿರಾತ್ಮನು ತನ್ನಾತ್ಮನಲ್ಲಿ ಯೋಜಿಸುವಂತೆ ತದ್ವಿಪರೀತಭಾವನಾಪರನಾದ ಅಂತರಾತ್ಮನು ಸ್ವಶುದ್ಧಾತ್ಮಸ್ವರೂಪದಲ್ಲಿ ಆರೋಪಿಸುವುದಿಲ್ಲವೆಂದು ಭಾವಾರ್ಥವು.

**ಅಪ್ಪಾ ವಂದಉ ಖವಣು ಣ ವಿ, ಅಪ್ಪಾ ಗುರಉ ಣ ಹೋಇ ।**
**ಅಪ್ಪಾ ಲಿಂಗಿಉ ಏಕ್ಕು ಣ ವಿ, ಣಾಣಿಉ ಜಾಣಇ ಜೋಇ ॥ ೮೮ ॥**

"ಆತ್ಮಾ ವಂದಕಃ ಕ್ಷಪಣಃ ನಾಪಿ ಆತ್ಮಾ ಗುರವಃ ನ ಭವತಿ ।
ಆತ್ಮಾ ಲಿಂಗೀ ಏಕಃ ನಾಪಿ ಜ್ಞಾನೀ ಜಾನಾತಿ ಯೋಗೀ ॥ ೮೮ ॥"

**ಅನ್ವಯಾರ್ಥ:—ಅಪ್ಪಾ ವಂದಉ ಖವಣು ಣ ವಿ**—ಆತ್ಮನು ಬೌದ್ಧನಲ್ಲ, ಕ್ಷಪಣ (ದಿಗಂಬರ)ನೂ ಅಲ್ಲ. **ಅಪ್ಪಾ ಗುರಉ ಣ ಹೋಇ**—ಆತ್ಮನು ಗುರವನೆನ್ನುವ ಶ್ವೇತಾಂಬರನೂ ಆಗಿರುವುದಿಲ್ಲ. **ಅಪ್ಪಾ ಲಿಂಗಿಉ ಎಕ್ಕು ಣ ವಿ**—ಆತ್ಮನು

ಯಾವುದೊಂದು ಚಿಹ್ನೆ (ವೇಷ)ಯುಳ್ಳವನೂ ಆಗಿರುವುದಿಲ್ಲ ಅರ್ಥಾತ್ ಏಕದಂಡೀ, ತ್ರಿದಂಡೀ, ಹಂಸ, ಪರಮಹಂಸ ಮೊದಲಾದ ಸಂಜ್ಞೆಗಳುಳ್ಳ ಸನ್ಯಾಸಿ, ಜಟಾಧಾರಿ, ಮುಂಡಿತ, ಯೋಗದಂಡ, ಜಪಮಾಲೆ, ರುದ್ರಾಕ್ಷಮಾಲೆ, ತಿಲಕ, ಕುಲಕ, ಘೋಷ ಮೊದಲಾದ ವೇಷಧಾರಿಗಳಲ್ಲಿ ಯಾವನೊಬ್ಬನೂ ಆಗಿರುವುದಿಲ್ಲ. ಆತ್ಮನು **ಣಾಣಿಉ**– ಜ್ಞಾನಸ್ವರೂಪವುಳ್ಳವನು ಆತನನ್ನು **ಜಾಣಇ ಜೋಇ**—ಯೋಗಿ (ಧ್ಯಾನಿ)ಯು ತಿಳಿಯುತ್ತಾನೆ ಅಥವಾ **ಣಾಣಿಉ ಜಾಣಇ ಜೋಇ**—ಜ್ಞಾನಿಯಾದ ಯೋಗಿಯು ಆತ್ಮಸ್ವರೂಪವನ್ನು ಹೀಗೆ (ಪೂರ್ವೋಕ್ತಪ್ರಕಾರ) ತಿಳಿಯುತ್ತಾನೆ.

**ಭಾವಾರ್ಥ:**—ಯದ್ಯಪಿ ವ್ಯವಹಾರನಯದಿಂದ ಈ ಆತ್ಮನು ವಂದಕಾದಿ ಅನೇಕ ವೇಷಗಳನ್ನು ಧರಿಸುವನಾದರೂ ಶುದ್ಧನಿಶ್ಚಯನಯದಿಂದ ಈ ಯಾವುದೊಂದು ವೇಷವೂ ಜೀವನದಾಗಿರುವುದಿಲ್ಲ ಇವೆಲ್ಲವೂ ದೇಹಸಂಬಂಧವಾದುವುಗಳು. ದೇಹಾಶ್ರಿತವಾದ ದ್ರವ್ಯಲಿಂಗವು ಉಪಚರಿತಾಸದ್ಭೂತವ್ಯವಹಾರನಯದಿಂದ ಜೀವಸ್ವರೂಪವೆಂದು ಹೇಳಲ್ಪಡುವುದಾದರೂ ನಿಶ್ಚಯನಯದಿಂದ ಅದು ಜೀವನ ಸ್ವರೂಪವಾಗಿರುವುದಿಲ್ಲ. ಹೀಗೆಯೇ ವೀತರಾಗನಿರ್ವಿಕಲ್ಪಸಮಾಧಿರೂಪವಾದ ಭಾವಲಿಂಗವು ಶುದ್ಧಾತ್ಮಸ್ವರೂಪ ಸಾಧಕವಾಗಿರುವುದರಿಂದ ಯದ್ಯಪಿ ಉಪಚಾರದಿಂದ ಶುದ್ಧಜೀವಸ್ವರೂಪವೆಂದು ಹೇಳಲ್ಪಡುವುದಾದರೂ ಸೂಕ್ಷ್ಮಶುದ್ಧನಿಶ್ಚಯನಯದಿಂದ ಅದೂ (ಭಾವಲಿಂಗವೂ) ಜೀವನದ್ದಾಗಿರುವುದಿಲ್ಲ. ಭಾವಲಿಂಗವು ಸಾಧನರೂಪವಾದುದು. ಅದೂ ನಹ ಪರಮಾವಸ್ಥೆಗೆ ಸಾಧಕವಾಗಿರುವುದಿಲ್ಲ.

**ಅಪ್ಪಾ ಗುರು ಣವಿ ಸಿಸ್ಸು ಣವಿ, ಣವಿ ಸಾಮಿಉ ಣವಿ ಭಿಚ್ಚು ।**
**ಸೂರಉ ಕಾಯರು ಹೋಇ ಣವಿ, ಣವಿ ಉತ್ತಮು ಣವಿ ಣಿಚ್ಚು ॥ ೮೯ ॥**

"ಆತ್ಮಾ ಗುರುಃ ನೈವ ಶಿಷ್ಯಃ ನೈವ ನೈವ ಸ್ವಾಮೀ ನೈವ ಭೃತ್ಯಃ ।
ಶೂರಃ ಕಾತರಃ ಭವತಿ ನೈವ ನೈವ ಉತ್ತಮಃ ನೈವ ನೀಚಃ ॥ ೮೯ ॥"

**ಅನ್ವಯಾರ್ಥ:**—**ಅಪ್ಪಾ ಗುರು ಣವಿ ಸಿಸ್ಸು ಣವಿ**—ಆತ್ಮನು ಗುರುವೂ ಅಲ್ಲ, ಶಿಷ್ಯನೂ ಅಲ್ಲ. **ಣವಿ ಸಾಮಿಉ ಣವಿ ಭಿಚ್ಚು**—ಸ್ವಾಮಿ (ಯಜಮಾನ)ಯೂ ಅಲ್ಲ, ಭೃತ್ಯ (ಸೇವಕ)ನೂ ಅಲ್ಲ. **ಸೂರಉ ಕಾಯರು ಹೋಇ ಣವಿ**-ಶೂರನೂ ಕಾತರ (ಭೀರು)ನೂ ಆಗಿರುವುದಿಲ್ಲ **ಣವಿ ಉತ್ತಮು ಣವಿ ಣಿಚ್ಚು**—ಉತ್ತಮನೂ ಆಗಿರುವುದಿಲ್ಲ, ನೀಚನೂ ಆಗಿರುವುದಿಲ್ಲ.

**ಭಾವಾರ್ಥ:**—ಗುರು-ಶಿಷ್ಯ-ಸ್ವಾಮಿ-ಸೇವಕ ಮೊದಲಾದ ಸಂಬಂಧಗಳು ವ್ಯವಹಾರದಿಂದ ಜೀವಸ್ವರೂಪವೆಂದು ತಿಳಿಯಲ್ಪಡುವುದಾದರೂ ಶುದ್ಧನಿಶ್ಚಯದಿಂದ ಅವು ಆತ್ಮಭಿನ್ನವಾದುವುಗಳು ಹಾಗೂ ತ್ಯಾಜ್ಯವಾದುವುಗಳು. ವೀತರಾಗಪರಮಾನಂದೈಕ ಸ್ವಶುದ್ಧಾತ್ಮೋಪಲಬ್ಧಿಯಿಂದ ಚ್ಯುತ(ರಹಿತ)ನಾದ ಬಹಿರಾತ್ಮನು ಆ ಗುರುಶಿಷ್ಯಾದಿ ಸಂಬಂಧಗಳನ್ನು ಆತ್ಮನಲ್ಲಾರೋಪಿಸುತ್ತಾನೆ. ಅದರೆ, ವೀತರಾಗನಿರ್ವಿಕಲ್ಪಸಮಾ

ಭಿನ್ನನಾದ ಅಂತರಾತ್ಮನು ಪರಸ್ವರೂಪಗಳಾದ ಆ ಸಂಬಂಧಗಳನ್ನು ಆತ್ಮನಲ್ಲಿ ಯೋಜಿಸುವುದಿಲ್ಲವೆಂದು ಭಾವಾರ್ಥವು.

**ಅಪ್ಪಾ ಮಾಣುಸು ದೇಉ ಣ ವಿ, ಅಪ್ಪಾ ತಿರಿಉ ಣ ಹೋಇ ।**
**ಅಪ್ಪಾ ಣಾರಉ ಕಹಿಂ ವಿ ಣವಿ, ಣಾಣಿಉ ಜಾಣಇ ಜೋಇ ॥ ೯೦ ॥**

"ಆತ್ಮಾ ಮನುಷ್ಯಃ ದೇವಃ ನಾಪಿ ಆತ್ಮಾ ತಿರ್ಯಗ್ ನ ಭವತಿ ।
ಆತ್ಮಾ ನಾರಕಃ ಕ್ವಾಪಿ ನೈವ ಜ್ಞಾನೀ ಜಾನಾತಿ ಯೋಗೀ ॥ ೯೦ ॥"

**ಅನ್ವಯಾರ್ಥ:— ಅಪ್ಪಾ ಮಾಣುಸು ದೇಉ ಣ ವಿ**— ಆತ್ಮನು ಮನುಷ್ಯನಲ್ಲ ದೇವನೂ ಅಲ್ಲ, **ಅಪ್ಪಾ ತಿರಿಉ ಣ ಹೋಇ**— ಆತ್ಮನು ತಿರ್ಯಂಚ(ಪಶು)ನೂ ಆಗಿರುವುದಿಲ್ಲ. **ಅಪ್ಪಾ ಣಾರಉ ಕಹಿಂ ವಿ ಣವಿ**— ಆತ್ಮನು ಎಲ್ಲಿಯೂ (ಯಾವ ಪ್ರಕಾರವಾಗಿಯೂ) ನಾರಕಿಯಾಗಿರುವುದಿಲ್ಲ. ಪರಂತು **ಣಾಣಿಉ**— ಆತನು ಜ್ಞಾನ ಸ್ವರೂಪನಾಗಿರುತ್ತಾನೆ. **ಜೋಇ ಜಾಣಇ**— ಆತನನ್ನು ತ್ರಿಗುಪ್ತಿಧಾರಿಯಾದ ಯೋಗಿಯು ನಿರ್ವಿಕಲ್ಪಸಮಾಧಿಯಲ್ಲಿ ಮಗ್ನನಾಗಿ ತಿಳಿಯುತ್ತಾನೆ ಅಥವಾ **ಣಾಣಿಉ ಜಾಣಇ ಜೋಇ**— ಭೇದಜ್ಞಾನಿಯಾದ ಯೋಗಿಯು ಆತ್ಮನು ಮನುಷ್ಯಾದಿಸ್ವರೂಪನಾಗಿರುವುದಿಲ್ಲವೆಂದು ತಿಳಿಯುತ್ತಾನೆ.

**ಭಾವಾರ್ಥ:**— ವಿಶುದ್ಧ-ಜ್ಞಾನದರ್ಶನಸ್ವಭಾವವುಳ್ಳ ಪರಮಾತ್ಮತತ್ತ್ವದ ಭಾವನೆಗೆ ಪ್ರತಿಪಕ್ಷಗಳಾದ ರಾಗದ್ವೇಷಾದಿವಿಭಾವಪರಿಣಾಮಗಳಿಂದ ಸಂಪಾದಿಸಲ್ಪಟ್ಟ ಕರ್ಮಗಳ ಉದಯದಿಂದುಂಟಾಗುವ ಮನುಷ್ಯಾದಿವಿಭಾವಪರ್ಯಾಯಗಳನ್ನು ಭೇದಾಭೇದರತ್ನತ್ರಯಭಾವನಾಚ್ಯುತನಾದ ಬಹಿರಾತ್ಮನು ಸ್ವಾತ್ಮಸಂಬಂಧವುಳ್ಳವುಗಳನ್ನಾಗಿ (ತನ್ನವುಗಳನ್ನಾಗಿ) ತಿಳಿಯುತ್ತಾನೆ. ಜ್ಞಾನಿಯಾದ ಅಂತರಾತ್ಮನು ಅವುಗಳನ್ನು ಆತ್ಮಭಿನ್ನವಾದವುಗಳನ್ನಾಗಿ ತಿಳಿಯುತ್ತಾನೆಂದು ಅಭಿಪ್ರಾಯವು.

**ಅಪ್ಪಾ ಪಂಡಿಉ ಮುಕ್ಖು ಣವಿ, ಣವಿ ಈಸರು ಣವಿ ಣೀಸು ।**
**ತರುಣಉ ಬೂಢಉ ಬಾಲು ಣವಿ, ಅಣ್ಣು ವಿ ಕಮ್ಮ-ವಿಸೇಸು ॥ ೯೧ ॥**

"ಆತ್ಮಾ ಪಂಡಿತಃ ಮೂರ್ಖಃ ನೈವ ನೈವ ಈಶ್ವರಃ ನೈವ ನಿಸ್ವಃ ।
ತರುಣಃ ವೃದ್ಧಃ ಬಾಲಃ ನೈವ ಅನ್ಯಃ ಅಪಿ ಕರ್ಮವಿಶೇಷಃ ॥ ೯೧ ॥"

**ಅನ್ವಯಾರ್ಥ:— ಅಪ್ಪಾ ಪಂಡಿಉ ಮುಕ್ಖು ಣವಿ**— ಆತ್ಮನು ಪಂಡಿತ (ವಿದ್ವಾಂಸ)ನಲ್ಲ, ಮೂರ್ಖನೂ ಆಗಿರುವುದಿಲ್ಲ **ಣವಿ ಈಸರು ಣವಿ ಣೀಸು**— ಈಶ್ವರ(ಸಮರ್ಥ, ಧನಿಕ)ನೂ ಅಲ್ಲ. ದರಿದ್ರನೂ ಅಲ್ಲ. **ತರುಣಉ ಬೂಢಉ ಬಾಲು ಣವಿ**— ತರುಣ(ಯುವಕ)ನಲ್ಲ, ವೃದ್ಧನಲ್ಲ ಮತ್ತು ಬಾಲಕನೂ ಆಗಿರುವುದಿಲ್ಲ. **ಕಮ್ಮವಿಸೇಸು**— ಕರ್ಮಜನಿತವಾದ ಈ ವಿಭಾವಪರ್ಯಾಯವಿಶೇಷವು **ಅಣ್ಣುವಿ**— ಆತ್ಮನಿಂದ ಬೇರೆಯಾದುದು. ಅಥವಾ **ಅಣ್ಣು ವಿ ಕಮ್ಮವಿಸೇಸು ಣವಿ**— ಕರ್ಮಜನಿತವಾದ ಇತರ ವಿಭಾವಪರ್ಯಾಯರೂಪನಾಗಿಯೂ ಆತ್ಮನಿರುವುದಿಲ್ಲ.

**ಭಾವಾರ್ಥ:**— ಯದ್ಯಪಿ ಶರೀರದ ಸಂಬಂಧದಿಂದ ಜೀವನಲ್ಲಿ ಪಂಡಿತಾದಿವ್ಯವಹಾರಗಳು ಕಲ್ಪಿಸಲ್ಪಡಬಹುದಾದರೂ ಶುದ್ಧನಿಶ್ಚಯನಯದಿಂದ ಇವುಗಳು ಶುದ್ಧಾತ್ಮದ್ರವ್ಯದಿಂದ ಸರ್ವಥಾ ಬೇರೆಯಾಗಿರುತ್ತವೆ. ಅತಏವ ಸಮ್ಯಗ್ದೃಷ್ಟಿಯೂ ಭೇದಜ್ಞಾನಿಯೂ ಆದ ಅಂತರಾತ್ಮನು ಈ ಪಂಡಿತಾದಿವಿಭಾವಪರ್ಯಾಯಗಳನ್ನು ಆತ್ಮನೊಡನೆ ಸೇರಿಸುವುದಿಲ್ಲ ಅರ್ಥಾತ್ ಇವುಗಳು ಆತ್ಮದ್ರವ್ಯದಿಂದ ಸರ್ವಥಾ ಭಿನ್ನವಾದುವುಗಳೆಂದೂ ಕರ್ಮಜನಿತವಾದುವುಗಳೆಂದೂ ಭಾವಿಸುತ್ತಾನೆಂದು ತಾತ್ಪರ್ಯವು

**ಪುಣ್ಣು ವಿ ಪಾಉ ವಿ ಕಾಲು ಣಹು, ಧಮ್ಮಾಧಮ್ಮು ವಿ ಕಾಉ ।**
**ಏಕ್ಕು ವಿ ಅಪ್ಪಾ ಹೋಇ ಣವಿ, ಮೆಲ್ಲಿವಿ ಚೇಯಣ-ಭಾಉ** ॥ ೬೨ ॥

"ಪುಣ್ಯಮಪಿ ಪಾಪಮಪಿ ಕಾಲಃ ನಭಃ ಧರ್ಮಾಧರ್ಮಮಪಿ ಕಾಯಃ ।
ಏಕಮಪಿ ಆತ್ಮಾ ಭವತಿ ನೈವ ಮುಕ್ತ್ವಾ ಚೇತನಭಾವಮ್ ॥ ೬೨ ॥"

**ಅನ್ವಯಾರ್ಥ:** – **ಅಪ್ಪಾ**— ಆತ್ಮನು **ಚೇಯಣಭಾಉ ಮೆಲ್ಲಿವಿ**– ಚೇತನಭಾವವನ್ನು ಬಿಟ್ಟು (ಜ್ಞಾನದರ್ಶನರೂಪವಾದ ಚೇತನಭಾವದ ಹೊರತು) **ಪುಣ್ಣು ವಿ ಪಾಉ ವಿ ಕಾಲು ಣಹು**— ಪುಣ್ಯ(ಶುಭಕರ್ಮ)ವೂ ಪಾಪ(ಅಶುಭಕರ್ಮ)ವೂ ಕಾಲದ್ರವ್ಯ(ಭೂತ-ಅನಾಗತ-ವರ್ತಮಾನ-ರೂಪಕಾಲ)ವೂ **ಧಮ್ಮಾಧಮ್ಮು ವಿ ಕಾಉ** — ಧರ್ಮದ್ರವ್ಯ ಅಧರ್ಮದ್ರವ್ಯ ಮತ್ತು ಕಾಯ(ಶರೀರ)ವೂ ಇವುಗಳಲ್ಲಿ **ಏಕ್ಕು ವಿ ಹೋಇ ಣವಿ** — ಯಾವುದೊಂದಾಗಿಯೂ ಇರುವುದಿಲ್ಲ. ಅರ್ಥಾತ್ ಚೇತನಭಾವವೊಂದೇ ಆತ್ಮನ ಸ್ವರೂಪವಾಗಿರುತ್ತದೆ

**ಭಾವಾರ್ಥ:**— ಶುದ್ಧನಿಶ್ಚಯನಯದಿಂದ ಶುದ್ಧಚೈತನ್ಯಸ್ವರೂಪನಾದ ಆತ್ಮನಲ್ಲಿ ಪುಣ್ಯಪಾಪಾದಿಗಳಿರುವುದಿಲ್ಲ. ಮಿಥ್ಯಾತ್ವರಾಗಾದಿವಿಭಾವಪರಿಣಾಮಗಳುಳ್ಳ ಬಹಿರಾತ್ಮನು ಈ ಪುಣ್ಯಪಾಪಾದಿಗಳನ್ನು ತನ್ನಾತ್ಮನಲ್ಲಿ ಯೋಜಿಸಿಕೊಳ್ಳುತ್ತಾನೆ ಅರ್ಥಾತ್ ನಾನು ಪುಣ್ಯಾತ್ಮನು, ಪಾಪಾತ್ಮನು ಎಂದು ಮೊದಲಾಗಿ ಹೇಳಿಕೊಳ್ಳುತ್ತಾನೆ. ಆದರೆ ಪುಣ್ಯಪಾಪಾದಿ-ಸಮಸ್ತಸಂಕಲ್ಪವಿಕಲ್ಪಪರಿಹಾರಭಾವನಾರೂಪವಾದುದೂ ಸ್ವಶುದ್ಧಾತ್ಮದ್ರವ್ಯದಲ್ಲಿ ಸಮ್ಯಕ್-ಶ್ರದ್ಧಾನಜ್ಞಾನಾನುಚರಣರೂಪ-ಅಭೇದರತ್ನತ್ರಯಾತ್ಮಕವೂ ಆದ ಪರಮಸಮಾಧಿಯಲ್ಲಿ ರತನಾಗಿರುವ ಅಂತರಾತ್ಮನು ಪೂರ್ವೋಕ್ತಪುಣ್ಯಪಾಪಾದಿ-ಸರ್ವಧರ್ಮಗಳನ್ನೂ ಸ್ವಶುದ್ಧಾತ್ಮನಿಂದ ಭಿನ್ನವಾದುವುಗಳನ್ನಾಗಿ ತಿಳಿಯುತ್ತಾನೆಂದು **ಭಾವಾರ್ಥವು.**

ಇಂತು ತ್ರಿವಿಧಾತ್ಮಪ್ರತಿಪಾದಕ-ಪ್ರಥಮಮಹಾಧಿಕಾರದಲ್ಲಿ ಸಮ್ಯಗ್ದೃಷ್ಟಿಯ ಭಾವನೆಯನ್ನು ನಿರೂಪಿಸುವ ಮುಖ್ಯತೆಯಿಂದ ಎಂಟು ಸೂತ್ರಗಳು ಹೇಳಲ್ಪಟ್ಟುವು.

ಇನ್ನುಮುಂದೆ ಸಾಮಾನ್ಯಭೇದಭಾವನೆಯ ಮುಖ್ಯತೆಯಿಂದ ಪ್ರಕ್ಷೇಪಕಗಳ ಹೊರತು "ಅಪ್ಪಾ ಸಂಜಮು" ಇತ್ಯಾದಿ ಮೂವತ್ತೊಂದು ಸೂತ್ರಗಳಿಂದ **ಅಧಿಕಾರ**ವನ್ನು ಪೂರ್ಣಗೊಳಿಸುತ್ತಾರೆ —

**ಅಪ್ಪಾ ಸಂಜಮು ಸೀಲು ತಉ, ಅಪ್ಪಾ ದಂಸಣು ಣಾಣು ।**
**ಅಪ್ಪಾ ಸಾಸಯಮೊಕ್ಖಪಉ, ಜಾಣಂತಉ ಅಪ್ಪಾಣು** ॥ ೯೩ ॥

"ಆತ್ಮಾ ಸಂಯಮಃ ಶೀಲಂ ತಪಃ ಆತ್ಮಾ ದರ್ಶನಂ ಜ್ಞಾನಮ್ ।
ಆತ್ಮಾ ಶಾಶ್ವತಮೋಕ್ಷಪದಂ ಜಾನನ್ ಆತ್ಮಾನಂ ॥ ೯೩ ॥"

**ಅನ್ವಯಾರ್ಥ:—ಅಪ್ಪಾ ಸಂಜಮು ಸೀಲು ತಉ**—ಆತ್ಮನು ಸಂಯಮ ವಾಗಿರುತ್ತಾನೆ, ಶೀಲವಾಗಿರುತ್ತಾನೆ ಮತ್ತು ತಪಸ್ಸಾಗಿರುತ್ತಾನೆ **ಅಪ್ಪಾ ದಂಸಣು ಣಾಣು**—ಆತ್ಮನು ದರ್ಶನವಾಗಿರುತ್ತಾನೆ, ಜ್ಞಾನವಾಗಿರುತ್ತಾನೆ **ಅಪ್ಪಾ ಅಪ್ಪಾಣು ಜಾಣಂತಉ**—ಆತ್ಮನು ತನ್ನನ್ನು (ಸ್ವಶುದ್ಧಾತ್ಮನನ್ನು) ತಿಳಿಯುವವನಾಗಿ **ಸಾಸಯ ಮೊಕ್ಖಪಉ**—ಶಾಶ್ವತವಾದ ಮೋಕ್ಷದ ಮಾರ್ಗವಾಗಿರುತ್ತಾನೆ ಪಾಠಾಂತರದಿಂದ **"ಸಾಸಯ ಸುಕ್ಖಪಉ"**—ಶಾಶ್ವತಸುಖದ ಸ್ಥಾನವಾಗಿರುತ್ತಾನೆ.

**ಭಾವಾರ್ಥ:**—ನಿಜಗುಣಪರ್ಯಾಯಧಾರಕನೂ ಜ್ಞಾನಸ್ವರೂಪನೂ ಚಿದಾನಂದನೂ ಆದ ಆತ್ಮನೇ ಸಂಯಮ, ಶೀಲ, ತಪ, ದರ್ಶನ, ಜ್ಞಾನ ಮತ್ತು ಮೋಕ್ಷಮಾರ್ಗ ಇವೆಲ್ಲವೂ ಆಗಿರುತ್ತಾನೆ. ಹೇಗೆಂದರೆ—ಸಾಧ್ಯಸಾಧಕರೂಪವಾಗಿ ವ್ಯವಹಾರದಿಂದ ಪಂಚೇಂದ್ರಿಯ ಮತ್ತು ಮನಸ್ಸಿನ ನಿಗ್ರಹ (ಸಂಯಮ, ದುಷ್ಪ್ರವೃತ್ತಿಯನ್ನು ತಡೆಯು ವಿಕೆ)ರೂಪವಾದ ಇಂದ್ರಿಯಸಂಯಮ ಹಾಗೂ ಪ್ರಾಣಿದಯಾರೂಪವಾದ ಪ್ರಾಣ ಸಂಯಮ ಇವುಗಳ ಬಲದಿಂದ ಮತ್ತು ನಿಶ್ಚಯದಿಂದ ಸ್ವಶುದ್ಧಾತ್ಮಸ್ವರೂಪದಲ್ಲಿ ಸ್ಥಿರನಾಗುವುದರಿಂದ ಆತ್ಮನು 'ಸಂಯಮ'ರೂಪನಾಗಿರುತ್ತಾನೆ ಕಾಮಕ್ರೋಧಾದಿಗಳ ತ್ಯಾಗರೂಪವಾಗಿ ವ್ರತರಕ್ಷಣಶೀಲವಾಗಿರುವುದು ನಿಶ್ಚಯಶೀಲಕ್ಕೆ ಸಹಕಾರಿಕಾರಣ ರೂಪವಾದ ವ್ಯವಹಾರಶೀಲವಾಗಿರುತ್ತದೆ. ಮತ್ತು ನಿಶ್ಚಯದಿಂದ ಅಂತರಂಗದಲ್ಲಿ ಸ್ವಶುದ್ಧಾತ್ಮದ್ರವ್ಯದ ನಿರ್ಮಲಾನುಭವವು "ಶೀಲ"ವಾಗಿರುತ್ತದೆ. ಈ ಕಾರಣದಿಂದ ಆತ್ಮನು ಶೀಲರೂಪನಾಗಿರುತ್ತಾನೆ. ಬಹಿರಂಗದಿಂದ ಸಹಕಾರಿಕಾರಣಭೂತವಾದ ಅನಶನಾದಿದ್ವಾದಶವಿಧತಪಶ್ಚರಣದಿಂದ, ನಿಶ್ಚಯದಿಂದ ಅಭ್ಯಂತರದಲ್ಲಿ ಸಮಸ್ತ ಪರ ದ್ರವ್ಯಗಳ ಇಚ್ಛಾನಿರೋಧದಿಂದ ಪರಮಾತ್ಮಸ್ವಭಾವ(ನಿಜಸ್ವಭಾವ)ದಲ್ಲಿ ಪ್ರತಾಪರೂಪ (ವಿಜಯ)ನಾಗಿರುವುದರಿಂದ ಮತ್ತು ಸಮಸ್ತವಿಭಾವಪರಿಣಾಮಗಳನ್ನು ಜಯಿಸಿರುವುದ ರಿಂದ ಆತ್ಮನೇ "ತಪಶ್ಚರಣ"ರೂಪನಾಗಿರುತ್ತಾನೆ. ಸ್ವಶುದ್ಧಾತ್ಮನೇ ಉಪಾದೇಯನಾಗಿರು ತ್ತಾನೆ ಎಂಬೀ ರುಚಿ(ಶ್ರದ್ಧೆ)ಯಿಂದ ಆತ್ಮನೇ "ಸಮ್ಯಗ್ದರ್ಶನ"ರೂಪನಾಗಿರುತ್ತಾನೆ. ವೀತರಾಗಸ್ವಸಂವೇದನಜ್ಞಾನದ ಅನುಭವದಿಂದ ಆತ್ಮನೇ "ಜ್ಞಾನ"ರೂಪನಾಗಿರುತ್ತಾನೆ ಮತ್ತು ಮಿಥ್ಯಾತ್ವರಾಗಾದಿಸಮಸ್ತವಿಕಲ್ಪಜಾಲವನ್ನು ತೊರೆದು ಪರಮಾತ್ಮತತ್ತ್ವದಲ್ಲಿ ಪರಮಸಮರಸೀಭಾವರೂಪವಾಗಿ ಪರಿಣಮಿಸುವುದರಿಂದ ಆತ್ಮನೇ "ಮೋಕ್ಷಮಾರ್ಗ" ರೂಪನಾಗಿರುತ್ತಾನೆ. ಇಲ್ಲಿ, ಬಾಹ್ಯದಲ್ಲಿ ದ್ರವ್ಯೇಂದ್ರಿಯಸಂಯಮಾದಿಗಳನ್ನು ಪಾಲಿ ಸುವುದರಿಂದ, ಅಂತರಂಗದಲ್ಲಿ ಶುದ್ಧಾತ್ಮಾನುಭವರೂಪವಾದ ಭಾವಸಂಯಮಾದಿ

ರೂಪವಾಗಿ ಪರಿಣಮಿಸುವ ಆತ್ಮನೇ ಅತೀಂದ್ರಿಯಸುಖಸಾಧಕನಾಗಿರುವುದರಿಂದ ಉಪಾದೇಯನಾಗಿರುತ್ತಾನೆಂದು ತಾತ್ಪರ್ಯಾರ್ಥವು

**ಅಣ್ಣು ಜಿ ದಂಸಣು ಅತ್ಥಿ ಣ ವಿ, ಅಣ್ಣು ಜಿ ಅತ್ಥಿ ಣ ಣಾಣು ।**
**ಅಣ್ಣುಜಿ ಚರಣು ಣ ಅತ್ಥಿ ಜಿಯ, ಮೆಲ್ಲಿವಿ ಅಪ್ಪಾ ಜಾಣು ॥ ೯೪ ॥**

"ಅನ್ಯತ್ ಏವ ದರ್ಶನಂ ಅಸ್ತಿ ನಾಪಿ ಅನ್ಯದೇವ ಅಸ್ತಿ ನ ಜ್ಞಾನಮ್ ।
ಅನ್ಯತ್ ಏವ ಚರಣಂ ನ ಅಸ್ತಿ ಜೀವ ಮುಕ್ತ್ವಾ ಆತ್ಮಾನಂ ಜಾನೀಹಿ ॥ ೯೪ ॥"

**ಅನ್ವಯಾರ್ಥ—ಜಿಯ**—ಎಲೈ ಜೀವನೇ! **ಅಪ್ಪಾ ಮೆಲ್ಲಿವಿ**–ಆತ್ಮನನ್ನು ಬಿಟ್ಟು (ಹೊರತು) **ಅಣ್ಣು ಜಿ ದಂಸಣು ಅತ್ಥಿ ಣ ವಿ**—ಬೇರೊಂದು ದರ್ಶನವೇ ಇರುವುದಿಲ್ಲ **ಅಣ್ಣು ಜಿ ಅತ್ಥಿ ಣ ಜಾಣು**—ಬೇರೆ ಜ್ಞಾನವೇ ಇರುವುದಿಲ್ಲ **ಅಣ್ಣು ಜಿ ಚರಣು ಣ ಅತ್ಥಿ**—ಬೇರೆ ಯಾವುದೊಂದು ಚಾರಿತ್ರವೂ ಇರುವುದೇ ಇಲ್ಲ ಹೀಗೆಂದು **ಜಾಣು**—ನೀನು ತಿಳಿ

**ಭಾವಾರ್ಥ:**–ಆತ್ಮನೇ ದರ್ಶನಜ್ಞಾನಚಾರಿತ್ರಸ್ವರೂಪನಾಗಿರುತ್ತಾನಲ್ಲದೆ ನಿಶ್ಚಯನಯದಿಂದ ಸ್ವಶುದ್ಧಾತ್ಮಸ್ವರೂಪವನ್ನು ಬಿಟ್ಟು ಬೇರೆ ದರ್ಶನಜ್ಞಾನಚಾರಿತ್ರ (ರತ್ನತ್ರಯ)ಗಳು ಇರುವುದಿಲ್ಲ. ಹೇಗೆಂದರೆ—ರತ್ನತ್ರಯದಲ್ಲಿ ವ್ಯವಹಾರರತ್ನತ್ರಯವೆಂದೂ ನಿಶ್ಚಯರತ್ನತ್ರಯವೆಂದೂ ಎರಡು ಭೇದವಿರುತ್ತದೆ ಮತ್ತು ಇವೆರಡರಲ್ಲಿ ಕಾರ್ಯಕಾರಣ ಅಥವಾ ಸಾಧ್ಯಸಾಧಕ ಭಾವವಿದೆ ಅರ್ಥಾತ್ ವ್ಯವಹಾರ-ದರ್ಶನಜ್ಞಾನಚಾರಿತ್ರಗಳು ಸಾಧಕಗಳಾಗಿಯೂ ನಿಶ್ಚಯ-ದರ್ಶನಜ್ಞಾನಚಾರಿತ್ರಗಳು ಸಾಧ್ಯಗಳಾಗಿಯೂ ಇರುತ್ತವೆ. ಷಡ್ದ್ರವ್ಯ, ಪಂಚಾಸ್ತಿಕಾಯ, ಸಪ್ತತತ್ತ್ವ, ನವಪದಾರ್ಥ ಇವುಗಳಲ್ಲಿ ನಿಶ್ಚಲಶ್ರದ್ಧಾನವು ವ್ಯವಹಾರ ಸಮ್ಯಗ್ದರ್ಶನ (ಸಮ್ಯಕ್ತ್ವ)ವು ಇದು ನಿಶ್ಚಯಸಮ್ಯಗ್ದರ್ಶನಕ್ಕೆ ಸಾಧಕ(ಕಾರಣ)ವಾಗಿರುವುದು. ಆದರೂ ನಿಶ್ಚಯನಯದಿಂದ "ವೀತರಾಗಪರಮಾನಂದೈಕಸ್ವಭಾವವುಳ್ಳ ಶುದ್ಧಾತ್ಮನೇ ಉಪಾದೇಯನಾಗಿರುತ್ತಾನೆ" ಎಂಬ ಶ್ರದ್ಧಾರೂಪಪರಿಣಾಮದಿಂದ ಪರಿಣತನಾದ ಶುದ್ಧಾತ್ಮನೇ ನಿಶ್ಚಯಸಮ್ಯಗ್ದರ್ಶನವು. ನಿಶ್ಚಯ ಸ್ವಸಂವೇದನಜ್ಞಾನಕ್ಕೆ ಸಾಧಕವಾಗಿರುವ ಶಾಸ್ತ್ರಜ್ಞಾನವು ವ್ಯವಹಾರಜ್ಞಾನವಾಗಿದೆ ಪರಂತು ನಿಶ್ಚಯನಯದಿಂದ ವೀತರಾಗ ಸ್ವಸಂವೇದನಜ್ಞಾನಪರಿಣತನಾದ ಶುದ್ಧಾತ್ಮನೇ ನಿಶ್ಚಯಜ್ಞಾನವು. ಮೂಲೋತ್ತರ ಗುಣಗಳು (ಇಪ್ಪತ್ತೆಂಟು ಮೂಲಗುಣಗಳು, ಎಂಭತ್ತನಾಲ್ಕು ಲಕ್ಷ ಉತ್ತರ ಗುಣಗಳು) ನಿಶ್ಚಯಚಾರಿತ್ರಸಾಧಕಗಳಾಗಿರುವುದರಿಂದ ವ್ಯವಹಾರ–ಚಾರಿತ್ರವೆನಿಸುತ್ತವೆ. ಆದರೂ ಶುದ್ಧಾತ್ಮಾನುಭೂತಿರೂಪನಿಶ್ಚಯಚಾರಿತ್ರಪರಿಣತನಾದ ನಿಜಶುದ್ಧಾತ್ಮನೇ ನಿಶ್ಚಯಚಾರಿತ್ರವು. ಹೀಗೆ ಅಭೇದರತ್ನತ್ರಯಪರಿಣತನಾದ ಪರಮಾತ್ಮನೇ ಉಪಾದೇಯನಾಗಿರುತ್ತಾನೆಂದು ಭಾವಾರ್ಥವು

**ಅಣ್ಣು ಜಿ ತಿತ್ಥು ಮ ಜಾಹಿ ಜಿಯ, ಅಣ್ಣು ಜಿ ಗುರುಉ ಮ ಸೇವಿ ।**
**ಅಣ್ಣು ಜಿ ದೇಉ ಮ ಚಿಂತಿ ತುಹುಂ, ಅಪ್ಪಾ ವಿಮಲು ಮುಏವಿ ॥೯೫॥**

"ಅನ್ಯತ್ ಏವ ತೀರ್ಥಂ ಮಾ ಯಾಹಿ ಜೀವ ಅನ್ಯತ್ ಏವ ಗುರುಂ ಮಾ ಸೇವಸ್ವ ।
ಅನ್ಯತ್ ಏವ ದೇವಂ ಮಾ ಚಿಂತಯ ತ್ವಂ ಆತ್ಮಾನಂ ವಿಮಲಂ ಮುಕ್ತ್ವಾ ॥೯೫॥"

**ಅನ್ವಯಾರ್ಥ:— ಜಿಯ—** ಎಲೈ ಜೀವನೇ! **ತುಹುಂ**—ನೀನು **ಅಪ್ಪಾ ವಿಮಲು ಮುಏವಿ**— ವಿಮಲ(ರಾಗಾದಿಮಲರಹಿತ)ನಾದ ಆತ್ಮನನ್ನು ಬಿಟ್ಟು **ಅಣ್ಣು ಜಿ ತಿತ್ಥು ಮ ಜಾಹಿ**—ಬೇರೆ ತೀರ್ಥವನ್ನು ಕುರಿತು ಹೋಗಬೇಡ. **ಅಣ್ಣು ಜಿ ಗುರುಉ ಮ ಸೇವಿ** —ಬೇರೊಬ್ಬ ಗುರುವನ್ನು ಸೇವಿಸಬೇಡ **ಅಣ್ಣು ಜಿ ದೇಉ ಮ ಚಿಂತಿ**— ಇತರ ದೇವರನ್ನು ಚಿಂತಿಸ(ಧ್ಯಾನಿಸ)ಬೇಡ.

**ಭಾವಾರ್ಥ:**— ಜೀವನೇ! ರಾಗಾದಿದೋಷರಹಿತನಾದ ಆತ್ಮನೇ ತೀರ್ಥವೂ ಗುರುವೂ ದೇವರೂ ಆಗಿರುತ್ತಾನೆ. ಆದಕಾರಣ ನೀನು ಆತ್ಮನಲ್ಲಿಯೇ ರಮಿಸು, ಆತ್ಮನನ್ನೇ ಸೇವಿಸು ಮತ್ತು ಆತ್ಮನನ್ನೇ ಆರಾಧಿಸು ಇತರ ತೀರ್ಥ, ಗುರು ಮತ್ತು ದೇವರನ್ನು ಸೇವಿಸಬೇಡ. ಏಕೆಂದರೆ, ವ್ಯವಹಾರನಯದಿಂದ ತೀರ್ಥಂಕರರುಗಳ ಮತ್ತು ಕೇವಲಿಗಳ ನಿರ್ವಾಣಭೂಮಿ(ಮುಕ್ತಿಯನ್ನು ಪಡೆದ ಸ್ಥಾನ)ಗಳು ಜಿನಪ್ರತಿಮೆಗಳು ಹಾಗೂ ಜಿನಚೈತ್ಯಾಲಯಗಳು ಇವುಗಳಿಂದ ಧರ್ಮಪ್ರವರ್ತಕರಾದ ಮಹಾಪುರುಷರ ಸ್ಮರಣೆಯುಂಟಾಗುವುದರಿಂದ ಇವು ತೀರ್ಥಗಳೆಂದು ಹೇಳಲ್ಪಡುತ್ತವೆ ಪರಂತು ವೀತರಾಗ ನಿರ್ವಿಕಲ್ಪಸಮಾಧಿಯೆಂಬ ಸುದೃಢ(ಒಡಕಿಲ್ಲದ) ನೌಕೆಯಿಂದ ಸಂಸಾರವೆಂಬ ಸಮುದ್ರವನ್ನು ದಾಂಟಲು ಸಮರ್ಥವಾದ ನಿಜಾತ್ಮತತ್ತ್ವವೇ ನಿಶ್ಚಯತೀರ್ಥವಾಗಿರುತ್ತದೆ. ವ್ಯವಹಾರನಯದಿಂದ ಶಿಕ್ಷಾದೀಕ್ಷಾದಿಗಳನ್ನು ಕೊಡುವವನು ಗುರುವಾಗಿರುತ್ತಾನೆ ಆದರೂ ನಿಶ್ಚಯನಯದಿಂದ ಪಂಚೇಂದ್ರಿಯವಿಷಯ-ಕಷಾಯಾದಿಸಮಸ್ತವಿಭಾವಪರಿಣಾಮಗಳನ್ನು ಬಿಡುವ ಸಮಯದಲ್ಲಿ ಸಂಸಾರವಿಚ್ಛಿತ್ತಿಗೆ ಕಾರಣನಾಗಿರುವ ಸ್ವಶುದ್ಧಾತ್ಮನೇ ಗುರುವು. ಯದ್ಯಪಿ ಪ್ರಥಮಾವಸ್ಥೆಯಲ್ಲಿ ಚಿತ್ತವನ್ನು ಸ್ಥಿರಗೊಳಿಸುವುದಕ್ಕಾಗಿ ಸಾಧ್ಯಸಾಧಕಭಾವದಿಂದ ಪರಂಪರೆಯಿಂದ ನಿರ್ವಾಣಕಾರಣಗಳಾದ ಜಿನಪ್ರತಿಮೆ ಮೊದಲಾದುವುಗಳು ದೇವರೆಂದು ಹೇಳಲ್ಪಡುತ್ತವಾದರೂ ನಿಶ್ಚಯನಯದಿಂದ ವೀತರಾಗನಿರ್ವಿಕಲ್ಪಸಮಾಧಿಯ ಕಾಲದಲ್ಲಿ ಪರಮಾರಾಧ್ಯವಾದ ಸ್ವಶುದ್ಧಾತ್ಮಸ್ವಭಾವವೇ ದೇವರೆನಿಸುತ್ತದೆ. ಹೀಗೆ ನಿಶ್ಚಯದಿಂದ ದೇವ, ಗುರು ಮತ್ತು ತೀರ್ಥಸ್ವರೂಪನಾದ ನಿಜಾತ್ಮನೇ ಆರಾಧ್ಯನಾಗಿರುತ್ತಾನೆ ಮತ್ತು ವ್ಯವಹಾರದಿಂದ ಜಿನೇಂದ್ರದೇವರು ಹಾಗೂ ಜಿನಪ್ರತಿಮೆಗಳು, ವ್ಯವಹಾರಗುರುಗಳಾದ ಮುನಿಗಳು(ನಿರ್ಗ್ರಂಥರು), ಸಿದ್ಧಕ್ಷೇತ್ರ ಮೊದಲಾದ ವ್ಯವಹಾರತೀರ್ಥಗಳು ಇವೆಲ್ಲವೂ ನಿಶ್ಚಯಕ್ಕೆ ಸಾಧಕಗಳಾಗಿರುವುದರಿಂದ ಪ್ರಾಥಮಿಕಾವಸ್ಥೆಯಲ್ಲಿ ಆರಾಧ್ಯಗಳಾಗಿರುತ್ತವೆ. ಏಕೆಂದರೆ ಇವುಗಳು ಸಾಕ್ಷಾತ್ ಮೋಕ್ಷಸಿದ್ಧಿಯ ಕಾರಣಗಳಾಗಿರುವುದಿಲ್ಲವಾದರೂ ಪರಂಪರೆಯಿಂದ ಸಿದ್ಧಿಕಾರಣಗಳಾಗಿರುತ್ತವೆಂದು ಭಾವವು.

**ಅಪ್ಪಾ ದಂಸಣು ಕೇವಲು ವಿ, ಅಣ್ಣು ಸವ್ವು ವವಹಾರು ।**
**ಏಕ್ಕು ಜಿ ಜೋಇಯ ಝಾಇಯಇ, ಜೋ ತಇಲೋಯಹಂ ಸಾರು ॥ ೯೬ ॥**

"ಅತ್ಮಾ ದರ್ಶನಂ ಕೇವಲೋಽಪಿ ಅನ್ಯಃ ಸರ್ವಃ ವ್ಯವಹಾರಃ ।
ಏಕ ಏವ ಯೋಗಿನ್ ಧ್ಯಾಯತೇ ಯಃ ತ್ರೈಲೋಕ್ಯಸ್ಯ ಸಾರಃ ॥ ೯೬ ॥"

**ಅನ್ವಯಾರ್ಥಃ— ಜೋಇಯ—** ಯೋಗಿಯೇ! **ಅಪ್ಪಾ ದಂಸಣು ಕೇವಲು—** ಕೇವಲ ಆತ್ಮನೇ ಸಮ್ಯಗ್ದರ್ಶನವು ಅಥವಾ ಆತ್ಮನು ಕೇವಲ ಸಮ್ಯಗ್ದರ್ಶನವೇ ಆಗಿರುತ್ತಾನೆ **ಅಣ್ಣು ಸವ್ವು ವವಹಾರು**–ಉಳಿದುದೆಲ್ಲವೂ ವ್ಯವಹಾರವಾಗಿರುತ್ತದೆ. **ಜೋ ತಇಲೋಯಹಂ ಸಾರು** – ತ್ರೈಲೋಕ್ಯ(ಮೂರುಲೋಕ)ದ ಸಾರವಾದ ಯಾವ ಆತ್ಮನಿರುತ್ತಾನೆಯೋ, **ಏಕ್ಕುಜಿ ಝಾಇಯಇ**—ಆತನೊಬ್ಬನೇ ಧ್ಯಾನಿಸಲ್ಪಡುತ್ತಾನೆ ಅರ್ಥಾತ್ ಅಂತಹ ಆತ್ಮನೇ ಧ್ಯಾನಿಸಲು ಯೋಗ್ಯನಾಗಿರುತ್ತಾನೆ

**ಭಾವಾರ್ಥಃ—** ವೀತರಾಗಚಿದಾನಂದೈಕಸ್ವರೂಪವುಳ್ಳ ಆತ್ಮತತ್ತ್ವದ ಸಮ್ಯಕ್-ಶ್ರದ್ಧಾನಜ್ಞಾನಾನುಭೂತಿರೂಪ-ಅಭೇದರತ್ನತ್ರಯಲಕ್ಷಣವುಳ್ಳ ನಿರ್ವಿಕಲ್ಪಸಮಾಧಿಪರಿಣತನಾದ ನಿಜಾತ್ಮನೇ ನಿಶ್ಚಯನಯದಿಂದ ಸಮ್ಯಕ್ತ್ವವು. ಉಳಿದುದೆಲ್ಲವೂ ವ್ಯವಹಾರವು. ಅತಏವ ಆ ನಿಜಾತ್ಮನನ್ನೇ ಧ್ಯಾನಿಸಬೇಕು ದ್ರಾಕ್ಷೆ, ಕರ್ಪೂರ, ಚಂದನ ಮೊದಲಾದ ಅನೇಕ ದ್ರವ್ಯಗಳ ಸಂಯೋಗದಿಂದ ತಯಾರಿಸಲ್ಪಟ್ಟ ಪಾನಕ (ಆಯುರ್ವೇದೋಕ್ತ ಪಾನದ್ರವ್ಯ)ವು ಯದ್ಯಪಿ ಅನೇಕರಸರೂಪವಾಗಿದ್ದರೂ ಅಭೇದವಿವಕ್ಷೆ (ಅಭೇದನಯ) ಯಿಂದ ಅದೊಂದು 'ಪಾನಕ'ವೆಂದು ಏಕರೂಪವಾಗಿ ಹೇಳಲ್ಪಡುವಂತೆ ಶುದ್ಧಾತ್ಮಾನುಭೂತಿರೂಪ-ನಿಶ್ಚಯಸಮ್ಯಗ್ದರ್ಶನಜ್ಞಾನಚರಿತ್ರ ಮೊದಲಾದ ಅನೇಕಭಾವಗಳಿಂದ ಪರಿಣತನಾದ ಆತ್ಮನು ಯದ್ಯಪಿ ಅನೇಕರೂಪನಾಗಿರುತ್ತಿದ್ದರೂ ಅಭೇದವಿವಕ್ಷೆಯಿಂದ ಆತ್ಮನು ಒಬ್ಬನೇ ಆಗಿರುತ್ತಾನೆಂದು ಅಥವಾ ಕೇವಲ ದರ್ಶನಸ್ವರೂಪನೆಂದು ಇಲ್ಲವೇ ಕೇವಲ ಜ್ಞಾನಸ್ವರೂಪನೆಂದು ಏಕರೂಪವಾಗಿ ಹೇಳಲ್ಪಡುತ್ತಾನೆ. ಅಭೇದರತ್ನತ್ರಯದ ಸ್ವರೂಪವನ್ನು ಗ್ರಂಥಾಂತರದಲ್ಲಿಯೂ ಹೀಗೆ ಹೇಳಿರುತ್ತಾರೆ. **"ದರ್ಶನಮಾತ್ಮವಿನಿಶ್ಚಿತಿರಾತ್ಮಪರಿಜ್ಞಾನಮಿಷ್ಯತೇ ಬೋಧಃ । ಸ್ಥಿತಿರಾತ್ಮನಿ ಚಾರಿತ್ರಂ ಕುತ ಏತೇಭ್ಯೋ ಭವತಿ ಬಂಧಃ ॥"** ಅರ್ಥಾತ್ ಆತ್ಮತತ್ತ್ವದ ನಿಶ್ಚಯವು ಸಮ್ಯಗ್ದರ್ಶನವಾಗಿದೆ. ಆತ್ಮನ ತಿಳುವಳಿಕೆಯು ಸಮ್ಯಗ್ಜ್ಞಾನವು. ಆತ್ಮನಲ್ಲೇ ನಿಶ್ಚಲ(ಸ್ಥಿರ)ವಾಗಿರುವಿಕೆಯು ಸಮ್ಯಕ್ಚಾರಿತ್ರವಾಗಿರುತ್ತದೆ. ಈಪ್ರಕಾರವಾದ ನಿಶ್ಚಯರತ್ನತ್ರಯ (ಅಭೇದ ರತ್ನತ್ರಯ)ವು ಸಾಕ್ಷಾತ್ ಮೋಕ್ಷದ ಕಾರಣವಾಗಿರುತ್ತದೆ. ಹೀಗಿರಲು ಈ ಅಭೇದ ರತ್ನತ್ರಯದಿಂದ ಕರ್ಮಬಂಧವಾದರೂ ಹೇಗಾಗಬೇಕು? ಎಂದಿಗೂ ಆಗಲಾರದೆಂದು ಭಾವವು ಹಾಗೆಯೇ—**"ರಯಣತ್ತಯಂ ಣ ವಟ್ಟಇ ಅಪ್ಪಾಣಂ ಮುಇತ್ತು ಅಣ್ಣದವಿಯಮ್ಮಿ । ತಮ್ಹಾ ತತ್ತಿಯಮಇಓ ಹೋದಿ ಹು ಮೊಕ್ಖಸ್ಸ ಕಾರಣಂ ಆದಾ॥"** ಅರ್ಥಾತ್ ರತ್ನತ್ರಯವು ಆತ್ಮನ ಹೊರತು ಇತರ ಯಾವ ದ್ರವ್ಯದಲ್ಲಿಯೂ ಇರಲಾರದು. ಆದುದರಿಂದ ರತ್ನತ್ರಯಮಯನಾದ ಆತ್ಮನೊಬ್ಬನೇ ಮೋಕ್ಷಕ್ಕೆ ಕಾರಣನಾಗಿರುವನು. ಅತಏವ ಅಭೇದರತ್ನತ್ರಯಪರಿಣತನಾದ ನಿಜಾತ್ಮನೇ ಉಪಾದೇಯನಾಗಿರುತ್ತಾನೆಂದು ತಾತ್ಪರ್ಯವು.

**ಅಪ್ಪಾ ಝಾಯುಹಿ ಣಿಮ್ಮಲಉ, ಕಿಂ ಬಹುಏ ಅಣ್ಣೇಣ ।**
**ಜೋ ಝಾಯುಂತಹಂ ಪರಮ-ಪಉ, ಲಬ್ಭಇ ಎಕ್ಕಖಣೇಣ ॥ ೯೭ ॥**

"ಆತ್ಮಾನಂ ಧ್ಯಾಯಸ್ವ ನಿರ್ಮಲಂ ಕಿಂ ಬಹುನಾ ಅನ್ಯೇನ ।
ಯಂ ಧ್ಯಾಯಮಾನಾನಾಂ ಪರಮಪದಂ ಲಭ್ಯತೇ ಏಕಕ್ಷಣೇನ ॥ ೯೭ ॥"

**ಅನ್ವಯಾರ್ಥ:— ಅಪ್ಪಾ ಝಾಯುಹಿ ಣಿಮ್ಮಲಉ**— ನಿರ್ಮಲ (ನಿರ್ದೋಷ) ನಾದ ಆತ್ಮನನ್ನು ಧ್ಯಾನಿಸು **ಕಿಂ ಬಹುಏ ಅಣ್ಣೇಣ**— ಇತರ ಬಹಳ ಪದಾರ್ಥ ಗಳಿಂದೇನು ಪ್ರಯೋಜನ? ಅರ್ಥಾತ್ ಆತ್ಮಭಿನ್ನಗಳಾದ ಇತರ ವಸ್ತುಗಳನ್ನು ಧ್ಯಾನಿ ಸುವುದರಿಂದ ಹಾಗೂ ರಾಗಾದಿವಿಕಲ್ಪ-ಭಾವಗಳನ್ನು ಹೊಂದುವುದರಿಂದ ಏನೂ ಪ್ರಯೋಜನವಿಲ್ಲ **ಜೋ ಝಾಯುಂತಹಂ**— ಯಾವ ಪರಮಾತ್ಮನನ್ನು ಧ್ಯಾನಿಸು ಪವರಿಗೆ **ಎಕ್ಕಖಣೇಣ**- ಒಂದು ಕ್ಷಣದಿಂದ (ಕ್ಷಣಮಾತ್ರದಲ್ಲಿ) **ಪರಮಪಉ ಲಬ್ಭಇ**- ಪರಮಪದ (ಮೋಕ್ಷಪದ)ವು ದೊರಕುತ್ತದೆ.

**ಭಾವಾರ್ಥ:**- ಸಮಸ್ತಶುಭಾಶುಭಸಂಕಲ್ಪವಿಕಲ್ಪರಹಿತವಾದ ಸ್ವಶುದ್ಧಾತ್ಮತತ್ತ್ವ ಧ್ಯಾನದಿಂದ ಅಂತರ್ಮುಹೂರ್ತದಲ್ಲಿ ಮೋಕ್ಷವುಂಟಾಗುತ್ತದೆ. ಅತಏವ ಸ್ವಶುದ್ಧಾತ್ಮ ತತ್ತ್ವವೊಂದನ್ನೇ ನಿರಂತರ ಧ್ಯಾನಿಸಬೇಕು. **"ಬೃಹದಾರಾಧನಾಶಾಸ್ತ್ರ"**ದಲ್ಲಿಯೂ ಹೀಗೆ ಹೇಳಿರುತ್ತಾರೆ - ಹದಿನಾರು ತೀರ್ಥಂಕರರುಗಳಿಗೆ ಒಂದೇ ಸಮಯ ತೀರ್ಥಂಕರರ ಉತ್ಪತ್ತಿಯ ದಿನ ಮೊದಲಲ್ಲಿ ಚಾರಿತ್ರ-ಜ್ಞಾನದ ಸಿದ್ಧಿಯುಂಟಾಗಿ ಆಮೇಲೆ ಅಂತರ್ಮು ಹೂರ್ತದಲ್ಲಿ ಮೋಕ್ಷವುಂಟಾಯಿತು. ಶಿಷ್ಯನ ಪ್ರಶ್ನೆ — ಪರಮಾತ್ಮಧ್ಯಾನದಿಂದ ಅಂತ ರ್ಮುಹೂರ್ತದಲ್ಲಿ ಮುಕ್ತಿಯುಂಟಾಗುವುದಾದರೆ ಈಗ (ಈಕಾಲದಲ್ಲಿ) ಅಂತಹ ಧ್ಯಾನವನ್ನು ಮಾಡುತ್ತಿರುವ ನಮಗೇಕೆ ಮುಕ್ತಿಯುಂಟಾಗುವುದಿಲ್ಲ? ಉತ್ತರ — ಚತುರ್ಥಕಾಲದಲ್ಲಿ ವಜ್ರವೃಷಭನಾರಾಚಸಂಹನನವುಳ್ಳವರಿಗೆ ಯಾವಪ್ರಕಾರವಾದ ನಿರ್ವಿಕಲ್ಪಶುಕ್ಲಧ್ಯಾನವು ಉಂಟಾಗುತ್ತಿದ್ದಿತೋ ಅಂತಹ ಶುಕ್ಲಧ್ಯಾನವು ಈ ಕಾಲದಲ್ಲಿ ಉಂಟಾಗುವುದಿಲ್ಲ ಇದನ್ನೇ ಗ್ರಂಥಾಂತರದಲ್ಲಿ.— **"ಅತ್ರೇದಾನೀಂ ನಿಷೇಧಂತಿ ಶುಕ್ಲಧ್ಯಾನಂ ಜಿನೋತ್ತಮಾಃ । ಧರ್ಮಧ್ಯಾನಂ ಪುನಃ ಪ್ರಾಹುಃ ಶ್ರೇಣಿಭ್ಯಾಂ ಪ್ರಾಗ್ನಿವರ್ತನಮ್॥"** ಅಂದರೆ, "ಭರತಕ್ಷೇತ್ರದಲ್ಲಿ ಈ ಪಂಚಮಕಾಲದಲ್ಲಿ ವೀತ ರಾಗಸರ್ವಜ್ಞಪರಮದೇವರು ಶುಕ್ಲಧ್ಯಾನವನ್ನು ನಿಷೇಧಿಸುತ್ತಾರೆ ಅರ್ಥಾತ್ ಈಕಾಲ ದಲ್ಲಿ ಧರ್ಮಧ್ಯಾನವುಂಟಾಗಬಹುದಲ್ಲದೆ ಶುಕ್ಲಧ್ಯಾನವುಂಟಾಗಲಾರದೆಂದು ಹೇಳು ತ್ತಾರೆ. ಈ ಕಾಲದಲ್ಲಿ ಉಪಶಮಶ್ರೇಣಿ-ಕ್ಷಪಕಶ್ರೇಣಿಗಳೆರಡೂ ಇರುವುದಿಲ್ಲ. ಗುಣಸ್ಥಾನಗಳಲ್ಲಿ ಏಳುಗುಣಸ್ಥಾನಗಳವರೆಗೆ ಮಾತ್ರವಿರುತ್ತವಲ್ಲದೆ ಆಮೇಲಿನ ಗುಣ ಸ್ಥಾನಗಳಿರುವುದಿಲ್ಲ." ಎಂದು ಹೇಳಲ್ಪಟ್ಟಿದೆ. ಇಲ್ಲಿ ಯಾವ ಪರಮಾತ್ಮಧ್ಯಾನದಿಂದ ಅಂತರ್ಮುಹೂರ್ತದಲ್ಲಿ ಮುಕ್ತಿಲಭಿಸುವುದೋ ಅಂತಹ ಪರಮಾತ್ಮನನ್ನು ಸಂಸಾರ ಸ್ಥಿತಿಯ ವಿಚ್ಛಿತ್ತಿಗಾಗಿ ಧ್ಯಾನಿಸಬೇಕೆಂದು ಭಾವಾರ್ಥವು. ಧರ್ಮಧ್ಯಾನದಿಂದ ಪರಂಪರೆಯಿಂದ ಮೋಕ್ಷವು ಲಭಿಸುವುದು.

**ಅಪ್ಪಾ ಣಿಯಮಣಿ ಣಿಮ್ಮಲಉ, ಣಿಯಮೇಂ ವಸಇ ಣ ಜಾಸು ।**
**ಸತ್ಥಪುರಾಣಇಂ ತವಚರಣು, ಮುಕ್ಖು ವಿ ಕರಹಿ ಕಿ ತಾಸು ॥ ೯೮ ॥**
"ಆತ್ಮಾ ನಿಜಮನಸಿ ನಿರ್ಮಲಃ ನಿಯಮೇನ ವಸತಿ ನ ಯಸ್ಯ ।
ಶಾಸ್ತ್ರಪುರಾಣಾನಿ ತಪಶ್ಚರಣಂ ಮೋಕ್ಷಂ ಅಪಿ ಕುರ್ವಂತಿ ಕಿಂ ತಸ್ಯ ॥ ೯೮ ॥"

**ಅನ್ವಯಾರ್ಥ —ಜಾಸು ಣಿಯಮಣಿ—** ಯಾವನಿಗೆ ತನ್ನ ಮನಸ್ಸಿನಲ್ಲಿ **ಣಿಯಮೇಂ**—ನಿಶ್ಚಯದಿಂದ **ಣಿಮ್ಮಲಉ ಅಪ್ಪಾ ಣ ವಸಇ**—ನಿರ್ಮಲನಾದ ಆತ್ಮನು ಸ್ಥಿರನಾಗಿರುವುದಿಲ್ಲವೋ **ತಾಸು**— ಅವನಿಗೆ **ಸತ್ಥಪುರಾಣಇಂ**—ಶಾಸ್ತ್ರಪುರಾಣಗಳು **ತವಚರಣು**—ತಪಶ್ಚರಣೆ ಇವುಗಳು **ಮುಕ್ಖು ವಿ ಕರಹಿ ಕಿ**—ಮೋಕ್ಷವನ್ನಾದರು ಉಂಟುಮಾಡುವವೇ? ಎಂದೂ ಉಂಟುಮಾಡಲಾರವೆಂದು ಭಾವವು.

**ಭಾವಾರ್ಥ:**—ಯಾವಾತನಲ್ಲಿ ವೀತರಾಗನಿರ್ವಿಕಲ್ಪಸಮಾಧಿರೂಪವಾದ ಶುದ್ಧಾತ್ಮಭಾವನೆಯು ಇರುವುದಿಲ್ಲವೋ ಆತನ ಶಾಸ್ತ್ರಪುರಾಣ ತಪಶ್ಚರಣಾದಿಗಳೆಲ್ಲವೂ ನಿರರ್ಥಕವಾಗಿವೆ ಅರ್ಥಾತ್ ಸರ್ವಥಾ ನಿರರ್ಥಕವಾದವುಗಳೆಂದಭಿಪ್ರಾಯವಲ್ಲ ಆದರೆ ಅವು ವೀತರಾಗಸಮ್ಯಕ್ತ್ವರೂಪವಾದ ನಿಜಶುದ್ಧಾತ್ಮಭಾವನೆಯಿಂದ ಕೂಡಿದ್ದರೆ ಮೋಕ್ಷಕ್ಕೆ ಬಾಹ್ಯ-ಸಹಕಾರಿಕಾರಣಗಳಾಗುತ್ತವೆ ಇಲ್ಲವಾದರೆ ಅರ್ಥಾತ್ ವೀತರಾಗಸಮ್ಯಕ್ತ್ವರಹಿತವಾಗಿದ್ದರೆ ಪುಣ್ಯಬಂಧಕ್ಕೆ ಕಾರಣಗಳಾಗುತ್ತವೆ ಇದಕ್ಕೂ ವಿಪರೀತವಾಗಿ ಮಿಥ್ಯಾತ್ವರಾಗಾದಿಗಳಿಂದ ಕೂಡಿದವುಗಳಾಗಿದ್ದರೆ ಪಾಪಬಂಧಕ್ಕೆ ಕಾರಣಗಳಾಗುತ್ತವೆ ಈ ಕಾರಣದಿಂದಲೇ 'ವಿದ್ಯಾನುವಾದ'ವೆಂಬ ಹತ್ತನೆಯ ಪೂರ್ವಶಾಸ್ತ್ರವನ್ನರಿತ 'ರುದ್ರ' ಮೊದಲಾದವರು ಭ್ರಷ್ಟರಾಗಿ ಪಾಪಭಾಗಿಗಳಾದರೆಂದು ಪುರಾಣಗಳಲ್ಲಿ ಹೇಳಲ್ಪಟ್ಟಿದೆ.

**ಜೋಇಯ ಅಪ್ಪೇಂ ಜಾಣಿಏಣ, ಜಗು ಜಾಣಿಯಉ ಹವೇಇ ।**
**ಅಪ್ಪಹಂ ಕೇರಇ ಭಾವಡಇ, ಬಿಂಬಿಉ ಜೇಣ ವಸೇಇ ॥ ೯೯ ॥**
"ಯೋಗಿನ್ ಆತ್ಮನಾ ಜ್ಞಾತೇನ ಜಗತ್ ಜ್ಞಾತಂ ಭವತಿ ।
ಆತ್ಮನಃ ಸಂಬಂಧಿನಿ ಭಾವೇ ಬಿಂಬಿತಂ ಯೇನ ವಸತಿ ॥ ೯೯ ॥"

**ಅನ್ವಯಾರ್ಥ:—ಜೇಣ**—ಯಾವ ಕಾರಣದಿಂದ **ಅಪ್ಪಹಂ ಕೇರಇ**—ಆತ್ಮನ ಸಂಬಂಧವಾದ **ಭಾವಡಇ**—ಭಾವ(ಕೇವಲಜ್ಞಾನ)ದಲ್ಲಿ **ಜಗು ಬಿಂಬಿಉ ವಸೇಇ**—ಜಗತ್ತು(ಲೋಕತ್ರಯವು) ಪ್ರತಿಬಿಂಬಿಸಲ್ಪಟ್ಟಿರುತ್ತದೋ ಆ ಕಾರಣದಿಂದ **ಜೋಇಯ**—ಎಲೈ ಯೋಗಿಯೇ! **ಅಪ್ಪೇಂ ಜಾಣಿಏಣ**—ತಿಳಿಯಲ್ಪಟ್ಟ ಆತ್ಮನಿಂದ ಅರ್ಥಾತ್ ಆತ್ಮನನ್ನು ತಿಳಿಯುವುದರಿಂದ **ಜಗು ಜಾಣಿಯಉ ಹವೇಇ**—ಜಗತ್ತು(ಲೋಕತ್ರಯವು) ತಿಳಿಯಲ್ಪಟ್ಟದ್ದಾಗಿ ಆಗುತ್ತದೆ ಅರ್ಥಾತ್ ತಿಳಿಯಲ್ಪಡುತ್ತದೆ.

**ಭಾವಾರ್ಥ:**—ವೀತರಾಗನಿರ್ವಿಕಲ್ಪಸ್ವಸಂವೇದನಜ್ಞಾನದಿಂದ ಪರಮಾತ್ಮತತ್ತ್ವವು ತಿಳಿಯಲ್ಪಡುತ್ತಿರಲು ಸಮಸ್ತ ದ್ವಾದಶಾಂಗಶಾಸ್ತ್ರವು ತಿಳಿಯಲ್ಪಡುತ್ತದೆ ಹೀಗೆಯೇ

ಹಿಂದೆ ರಾಘವ, ಪಾಂಡವ, ಭರತ, ಸಗರ ಮೊದಲಾದ ಮಹಾಪುರುಷರು ಜಿನದೀಕ್ಷೆಯನ್ನು ಸ್ವೀಕರಿಸಿ ದ್ವಾದಶಾಂಗಶಾಸ್ತ್ರವನ್ನು ಪಠಿಸಿ, ದ್ವಾದಶಾಂಗಾಧ್ಯಯನದ ಫಲವಾದ ನಿಶ್ಚಯರತ್ನತ್ರಯರೂಪಪರಮಾತ್ಮಧ್ಯಾನದಲ್ಲಿ ಆಸಕ್ತ(ಲೀನ)ರಾಗಿದ್ದರು ಆದುದರಿಂದ ವೀತರಾಗಸ್ವಸಂವೇದನಜ್ಞಾನದಿಂದ ನಿಜಾತ್ಮನನ್ನು ತಿಳಿಯುವುದರಿಂದ ಸರ್ವವೂ ತಿಳಿಯಲ್ಪಡುತ್ತದೆ ಅಥವಾ·— ನಿರ್ವಿಕಲ್ಪಸಮಾಧಿಯಿಂದ ಉತ್ಪನ್ನವಾದ ಪರಮಾನಂದಸುಖರಸಾಸ್ವಾದನೆಯನ್ನು ಹೊಂದಿರುವ ಜ್ಞಾನಿಯಾದ ಪುರುಷನು "ನನ್ನ ಸ್ವರೂಪವು ಬೇರೆಯಾದುದು ಮತ್ತು ದೇಹರಾಗಾದಿಗಳು ನನ್ನಿಂದ ಬೇರೆಯಾದುವುಗಳು ಅವು ನನ್ನ ಸಂಬಂಧಿಗಳಲ್ಲ" ಎಂದು ತಿಳಿಯುತ್ತಾನೆ. ಅತಏವ ಆತ್ಮನನ್ನು(ತನ್ನನ್ನು) ತಿಳಿಯುವುದರಿಂದ ಆತ್ಮಭಿನ್ನಗಳಾದ ಸಕಲಪದಾರ್ಥಗಳೂ ತಿಳಿಯಲ್ಪಡುತ್ತವೆ ಅಥವಾ — ಆತ್ಮನು ಶ್ರುತಜ್ಞಾನರೂಪವಾದ ವ್ಯಾಪ್ತಿಜ್ಞಾನದಿಂದ ಸಮಸ್ತ ಲೋಕಾಲೋಕಗಳನ್ನು ತಿಳಿಯುತ್ತಾನೆ. ಈ ಕಾರಣದಿಂದಲೂ ಆತ್ಮನನ್ನು ತಿಳಿಯುವುದರಿಂದ ಸರ್ವವೂ ತಿಳಿಯಲ್ಪಡುತ್ತದೆ. ಅಥವಾ:— ವೀತರಾಗನಿರ್ವಿಕಲ್ಪಸಮಾಧಿಯ ಬಲದಿಂದ ಕೇವಲಜ್ಞಾನವುಂಟಾಗುತ್ತಿರಲು ಸಮಸ್ತಲೋಕಾಲೋಕಸ್ವರೂಪವು ದರ್ಪಣ(ಕನ್ನಡಿ)ದಲ್ಲಿ ಪ್ರತಿಬಿಂಬಿಸಿದಂತೆ ಸ್ಪಷ್ಟವಾಗಿ ತಿಳಿಯಲ್ಪಡುತ್ತದೆ. ಆದುದರಿಂದ ಆತ್ಮನು ತಿಳಿಯಲ್ಪಡುತ್ತಿರಲು ಸರ್ವವೂ ತಿಳಿಯಲ್ಪಡುತ್ತದೆ ಎಂಬುದು ನಿಶ್ಚಯವಾಗಿರುತ್ತದೆ ಸಾರಾಂಶತಃ ಈ ನಾಲ್ಕುರೀತಿಯ ವ್ಯಾಖ್ಯಾನಗಳ ರಹಸ್ಯವನ್ನರಿತು ಬಾಹ್ಯಾಭ್ಯಂತರ-ಸರ್ವಪರಿಗ್ರಹಗಳನ್ನೂ ತೊರೆದು ಸರ್ವಥಾ ನಿಜಶುದ್ಧಾತ್ಮಭಾವನೆಯನ್ನೇ ಮಾಡಬೇಕು. ಹೀಗೆಯೇ ಶ್ರೀಕುಂದಕುಂದಾಚಾರ್ಯರು "ಸಮಯಸಾರ"ದಲ್ಲಿಯೂ ಹೇಳಿರುವರು —"**ಜೋ ಪಸ್ಸಇ ಅಪ್ಪಾಣಂ ಅಬದ್ಧಪುಟ್ಠಂ ಅಣಣ್ಣಮವಿಸೇಸಂ । ಅಪದೇಸಸುತ್ತಮಜ್ಝಂ ಪಸ್ಸಇ ಜಿಣಸಾಸಣಂ ಸವ್ವಂ ॥**" ಅರ್ಥಾತ್ ಯಾವಜೀವನು ಸರ್ವಕರ್ಮಬಂಧರಹಿತನೂ ನರನಾರಕಾದಿವಿಭಾವಪರ್ಯಾಯರಹಿತನೂ ಗುಣಸ್ಥಾನ ಮಾರ್ಗಣಸ್ಥಾನ ಜೀವಸಮಾಸ ಮೊದಲಾದ ಸರ್ವವಿಶೇಷ(ಭೇದ)ಗಳಿಂದ ಬಿಡಲ್ಪಟ್ಟವನೂ ಆದ ನಿಜಾತ್ಮನನ್ನು ನೋಡುತ್ತಾನೆಯೋ ಅಥವಾ ಸ್ವಸಂವೇದನಜ್ಞಾನದಿಂದ ತಿಳಿಯುತ್ತಾನೆಯೋ ಹಾಗೂ ಸ್ವಾತ್ಮಾನುಭವವನ್ನು ಪಡೆಯುತ್ತಾನೆಯೋ ಆತನು ಜಿನಶಾಸನದ ಸರ್ವರಹಸ್ಯವನ್ನು ತಿಳಿದವನಾಗುತ್ತಾನೆ ಹೀಗೆಂದು ಜಿನಸೂತ್ರ(ಜಿನಾಗಮ)ದಲ್ಲಿ ಹೇಳಲ್ಪಟ್ಟಿದೆ.

**ಅಪ್ಪಸಹಾವಿ ಪರಿಟ್ಠಿಯಹಂ, ಏವಲು ಹೋಇ ವಿಸೇಸು ।**
**ದೀಸಇ ಅಪ್ಪಸಹಾವಿ ಲಹು, ಲೋಯಾಲೋಉ ಅಸೇಸು ॥ ೧೦೦ ॥**

"ಆತ್ಮಸ್ವಭಾವೇ ಪ್ರತಿಷ್ಠಿತಾನಾಂ ಏಷ ಭವತಿ ವಿಶೇಷಃ ।
ದೃಶ್ಯತೇ ಆತ್ಮಸ್ವಭಾವೇ ಲಘು ಲೋಕಾಲೋಕಃ ಅಶೇಷಃ ॥ ೧೦೦ ॥"

**ಅನ್ವಯಾರ್ಥ:— ಅಪ್ಪಸಹಾವಿ**—ಆತ್ಮಸ್ವಭಾವದಲ್ಲಿ **ಪರಿಟ್ಠಿಯಹಂ**— ಪ್ರತಿಷ್ಠಿತ (ಲೀನ, ಆಸಕ್ತ)ರಾಗಿರುವ ಮನುಷ್ಯರಿಗೆ **ಅಪ್ಪಸಹಾವಿ**—ಆತ್ಮಸ್ವಭಾವದಲ್ಲಿ

**ಅಸೇಸ ಲೋಯಾಲೋಉ**— ಸಮಸ್ತಲೋಕಾಲೋಕವು **ಲಹು ದೀಸಇ**— ಶೀಘ್ರ ವಾಗಿ ಕಾಣಲ್ಪಡುತ್ತದೆ **ಏಹಉ ಹೋಇ ವಿಸೇಸು**—(ಆತ್ಮಸ್ವಭಾವದಲ್ಲಿ ಪ್ರತಿ ಷ್ಠಿತರಾದ ಪುರುಷರಲ್ಲಿ) ಇದೊಂದು ವಿಶೇಷವಿರುತ್ತದೆ ಇಲ್ಲಿ **"ದೀಸಇ ಅಪ್ಪ ಸಹಾಉ ಲಹು"** ಎಂದು ಪಾಠಾಂತರವಿರುತ್ತದೆ "ಆತ್ಮಸ್ವಭಾವವು ಶೀಘ್ರವಾಗಿ ಕಾಣಲ್ಪಡುತ್ತದೆ" ಎಂಬ ಇದರ ಅರ್ಥವಾಗಿದೆ ಹಾಗೂ ಆತ್ಮಸ್ವಭಾವವೇ ಮಾತ್ರ ವಲ್ಲ **"ಲೋಯಾಲೋಉ ಅಸೇಸು"** ಅರ್ಥಾತ್ ಸಮಸ್ತ ಲೋಕಾಲೋಕವೂ ಕಾಣಲ್ಪಡುತ್ತದೆ" ಎಂಬಭಿಪ್ರಾಯವು

**ಭಾವಾರ್ಥ:**— ಇಲ್ಲಿಯೂ ವಿಶೇಷವಾಗಿ ಮೊದಲಿನ ಸೂತ್ರಾರ್ಥದಲ್ಲಿ ಹೇಳಿ ರುವ ನಾಲ್ಕು ಪ್ರಕಾರವಾದ ವ್ಯಾಖ್ಯಾನ (ವಿವರಣೆ)ಗಳ ಅಭಿಪ್ರಾಯವನ್ನು ತಿಳಿಯ ಬೇಕು ಏಕೆಂದರೆ ಪೂರ್ವೋಕ್ತ ಈ ವ್ಯಾಖ್ಯಾನಗಳು ಪೂರ್ವಾಚಾರ್ಯಸಮ್ಮತಗಳಾ ಗಿರುತ್ತವೆ

**ಅಪ್ಪ ಪಯಾಸಇ ಅಪ್ಪ ಪರು, ಜಿಮು ಅಂಬರಿ ರವಿರಾಉ ।**
**ಜೋಇಯ ಏತ್ಥು ಮ ಭಂತಿ ಕರಿ, ಏಹಉ ವತ್ಥುಸಹಾಉ ॥ ೧೦೦ ॥**

"ಆತ್ಮಾ ಪ್ರಕಾಶಯತಿ ಆತ್ಮಾನಂ ಪರಂ ಯಥಾ ಅಂಬರೇ ರವಿರಾಗಃ ।
ಯೋಗಿನ್ ಅತ್ರ ಮಾ ಭ್ರಾಂತಿಂ ಕುರು ಏಷ ವಸ್ತುಸ್ವಭಾವಃ ॥ ೧೦೦ ॥'

**ಅನ್ವಯಾರ್ಥ:**— **ಅಂಬರಿ**–ಆಕಾಶದಲ್ಲಿ **ಜಿಮು ರವಿರಾಉ**— ಸೂರ್ಯನ ಪ್ರಕಾ ಶವು ಹೇಗೋ ಹಾಗೆ ಅರ್ಥಾತ್ ಸೂರ್ಯಪ್ರಕಾಶವು ತನ್ನನ್ನೂ ಇತರ (ಪರ)ಪದಾರ್ಥ ಗಳನ್ನೂ ಪ್ರಕಾಶಗೊಳಿಸುವಂತೆ **ಅಪ್ಪ**— ಆತ್ಮನು **ಅಪ್ಪ ಪರು ಪಯಾಸಇ** ತನ್ನನ್ನೂ ಪರಪದಾರ್ಥ(ಪರವಸ್ತು)ಗಳನ್ನೂ ಪ್ರಕಾಶಗೊಳಿಸುತ್ತಾನೆ ಅರ್ಥಾತ್ ತಿಳಿ ಯುತ್ತಾನೆ. **ಜೋಇಯ**— ಎಲೈ ಯೋಗಿಯೇ! **ಏತ್ಥು ಮ ಭಂತಿ ಕರಿ**— ಈ ವಿಷ ಯದಲ್ಲಿ ಭ್ರಾಂತಿಯನ್ನು ಮಾಡಬೇಡ. **ಏಹಉ ವತ್ಥುಸಹಾಉ**— ಇದು ವಸ್ತು ಸ್ವಭಾವವು

**ಭಾವಾರ್ಥ** — ಮೇಘರಹಿತವಾದ ನಿರ್ಮಲಾಕಾಶದಲ್ಲಿ ಸೂರ್ಯನ ಪ್ರಕಾಶವು ತನ್ನನ್ನೂ ಇತರ ವಸ್ತುಗಳನ್ನೂ ಪ್ರಕಾಶಗೊಳಿಸುವಂತೆ ವೀತರಾಗನಿರ್ವಿಕಲ್ಪಸಮಾಧಿ ರೂಪ-ಕಾರಣಸಮಯಸಾರದಲ್ಲಿ ಲೀನನಾಗಿ ಮೋಹರೂಪವಾದ ಮೇಘಸಮೂಹವನ್ನು ನಾಶಪಡಿಸಿ ಈ ಆತ್ಮನು ಮುನಿ-ಅವಸ್ಥೆಯಲ್ಲಿ ವೀತರಾಗಸ್ವಸಂವೇದನಜ್ಞಾನದಿಂದ ತನ್ನನ್ನೂ ಪರಪದಾರ್ಥಗಳನ್ನೂ ಅಂಶತಃ ಪ್ರಕಾಶಪಡಿಸುತ್ತಾನೆ (ತಿಳಿಯುತ್ತಾನೆ) ಅನಂತರ ಅರಹಂತ-ಅವಸ್ಥಾರೂಪವಾದ ಕಾರ್ಯಸಮಯಸಾರರೂಪವಾಗಿ ಪರಿಣಮಿಸಿ ಕೇವಲಜ್ಞಾನದಿಂದ ಆತ್ಮನನ್ನೂ(ತನ್ನನ್ನೂ)ಪರಪದಾರ್ಥಗಳನ್ನೂ ಸಮಸ್ತದ್ರವ್ಯಕ್ಷೇತ್ರ ಕಾಲಭೇದದಿಂದ ಸಂಪೂರ್ಣವಾಗಿ ಪ್ರಕಾಶಗೊಳಿಸುತ್ತಾನೆ ಇದು ಆತ್ಮವಸ್ತುವಿನ ಸ್ವಭಾವವಾಗಿರುತ್ತದೆ. ಇದರಲ್ಲಿ ಸಂದೇಹವಿಲ್ಲ. ಇಲ್ಲಿ ಕೇವಲಜ್ಞಾನ ಕೇವಲದರ್ಶನ

ಅನಂತಸುಖ ಮತ್ತು ಅನಂತವೀರ್ಯ ಈ ಅನಂತಚತುಷ್ಟಯದ ವ್ಯಕ್ತಿ(ಪ್ರಕಟ)ರೂಪವಾದ ಯಾವಕಾರ್ಯ ಸಮಯಸಾರವಿರುವುದೋ ಅದೇ ಉಪಾದೇಯವಾಗಿರುತ್ತದೆಂದಭಿಪ್ರಾಯವು

**ತಾರಾಯಣು ಜಲಿ ಬಿಂಬಿಯಉ, ಣಿಮ್ಮಲಿ ದೀಸಇ ಜೇಮ ।**
**ಅಪ್ಪಏ ಣಿಮ್ಮಲಿ ಬಿಂಬಿಯಉ, ಲೋಯಾಲೋಉ ವಿ ತೇಮ ॥೧೦೨॥**

"ತಾರಾಗಣಃ ಜಲೇ ಬಿಂಬಿತಃ ನಿರ್ಮಲೇ ದೃಶ್ಯತೇ ಯಥಾ ।
ಆತ್ಮನಿ ನಿರ್ಮಲೇ ಬಿಂಬಿತಂ ಲೋಕಾಲೋಕಮಪಿ ತಥಾ ॥ ೧೦೨ ॥"

**ಅನ್ವಯಾರ್ಥ:-ಜೇಮ**–ಹೇಗೆ **ತಾರಾಯಣು ಣಿಮ್ಮಲಿ ಜಲಿ ಬಿಂಬಿಯಉ**–ನಕ್ಷತ್ರಗಳ ಸಮೂಹವು ನಿರ್ಮಲವಾದ ನೀರಿನಲ್ಲಿ ಪ್ರತಿಬಿಂಬಿತವಾಗಿ **ದೀಸಇ**—ಸ್ಪಷ್ಟವಾಗಿ ಕಾಣುತ್ತದೆಯೋ **ತೇಮ**—ಹಾಗೆಯೇ **ಣಿಮ್ಮಲಿ ಅಪ್ಪಏ** – ಮಿಥ್ಯಾತ್ವರಾಗಾದಿವಿಕಲ್ಪರಹಿತನಾದ–ನಿರ್ಮಲ-ಆತ್ಮನಲ್ಲಿ **ಲೋಯಾಲೋಉ ವಿ**—ಸಮಸ್ತ ಲೋಕಾಲೋಕವು ಕೂಡ **ದೀಸಇ**—ಪ್ರತ್ಯಕ್ಷವಾಗಿ ಕಾಣಲ್ಪಡುತ್ತದೆ

**ಭಾವಾರ್ಥ:**–ಇಲ್ಲಿಯೂ ಮೊದಲಿನ ದೃಷ್ಟಾಂತಸೂತ್ರದ ವ್ಯಾಖ್ಯೆಯನ್ನೇ ವಿಶೇಷವಾಗಿ ತಿಳಿಯಬೇಕು. ಪೂರ್ವೋಕ್ತವಿಷಯವನ್ನು ದೃಢೀಕರಿಸುವುದಕ್ಕಾಗಿಯೇ ಈ ಸೂತ್ರವು ಹೇಳಲ್ಪಟ್ಟುದಾಗಿದೆ ವಸ್ತುತಃ ಸರ್ವಜ್ಞನೂ ಸರ್ವದರ್ಶಿಯೂ ಆದ ನಿರ್ಮಲಾತ್ಮ(ಶುದ್ಧಾತ್ಮ)ನೇ ಉಪಾದೇಯನಾಗಿರುತ್ತಾನೆಂಬುದು ತಾತ್ಪರ್ಯಾರ್ಥವು

**ಅಪ್ಪು ವಿ ಪರು ವಿ ವಿಯಾಣಿಯಇ, ಜೇ ಅಪ್ಪೇ ಮುಣಿಏಣ ।**
**ಸೋ ಣಿಯಅಪ್ಪಾ ಜಾಣಿ ತುಹುಂ, ಜೋಇಯ ಣಾಣಬಲೇಣ ॥ ೧೦೩ ॥**

"ಆತ್ಮಾಪಿ ಪರಃ ಅಪಿ ವಿಜ್ಞಾಯತೇ ಯೇನ ಆತ್ಮನಾ ವಿಜ್ಞಾತೇನ ।
ತಂ ನಿಜಾತ್ಮಾನಂ ಜಾನೀಹಿ ತ್ವಂ ಯೋಗಿನ್ ಜ್ಞಾನಬಲೇನ ॥ ೧೦೩ ॥"

**ಅನ್ವಯಾರ್ಥ:—ಜೋಇಯ**—ಯೋಗಿಯೇ! **ಮುಣಿಏಣ ಜೇ ಅಪ್ಪೇ**—ತಿಳಿಯಲ್ಪಟ್ಟ ಯಾವ ಆತ್ಮನಿಂದ ಅರ್ಥಾತ್ ಯಾವ ಆತ್ಮನನ್ನು ತಿಳಿಯುವುದರಿಂದ **ಅಪ್ಪು ಪರುವಿ**—ಆತ್ಮನೂ ಪರಪದಾರ್ಥವೂ **ವಿಯಾಣಿಯಇ**–ತಿಳಿಯಲ್ಪಡುತ್ತದೆಯೋ **ಸೋ ತುಹುಂ**—ಆತನನ್ನು ನೀನು **ಣಾಣಬಲೇಣ**—ಆತ್ಮಜ್ಞಾನದ ಬಲದಿಂದ **ಣಿಯ ಅಪ್ಪಾ ಜಾಣಿ**–ನಿಜಾತ್ಮನನ್ನಾಗಿ ತಿಳಿ. ಅಥವಾ, **ಸೋ ಣಿಯಪ್ಪಾ ಜಾಣಿ ತುಹುಂ**–ಆ ನಿಜಾತ್ಮನನ್ನು ನೀನು ತಿಳಿ.

**ಭಾವಾರ್ಥ:**—ರಾಗಾದಿವಿಕಲ್ಪಜಾಲರಹಿತನೂ ಸದಾನಂದೈಕಸ್ವಭಾವವುಳ್ಳವನೂ ಆದ ಯಾವ ಆತ್ಮನನ್ನು ತಿಳಿಯುವುದರಿಂದ ನಿಜಾತ್ಮನೂ ಸರ್ವಪರಪದಾರ್ಥಗಳೂ ತಿಳಿಯಲ್ಪಡುತ್ತವೋ ಆ ನಿಜಾತ್ಮನನ್ನು ನೀನು ವೀತರಾಗನಿರ್ವಿಕಲ್ಪಸ್ವಸಂವೇದನಜ್ಞಾನದಿಂದುಂಟಾದ ಪರಮಾನಂದಸುಖರಸಾಸ್ವಾದನದಿಂದ ತಿಳಿ ಅರ್ಥಾತ್ ತನ್ಮಯನಾಗಿ ಆತ್ಮಾನು

ಭವವನ್ನು ಹೊಂದುವವನಾಗು ಏಕೆಂದರೆ ಈ ಸ್ವಾತ್ಮಾನುಭವವೇ ಸಾರಭೂತವೂ ಉಪಾದೇಯವೂ ಆಗಿರುತ್ತದೆ. ಈ ಪ್ರಕಾರವಾಗಿ ಶ್ರೀಯೋಗೀಂದುದೇವರು ಶಿಷ್ಯನಾದ ಪ್ರಭಾಕರಭಟ್ಟನಿಗೆ ಉಪದೇಶವಿತ್ತರೆಂದು ತಾತ್ಪರ್ಯವು.

**ಣಾಣು ಪಯಾಸಹಿ ಪರಮು ಮುಹು, ಕಿಂ ಅಣ್ಣೇ ಬಹುಏಣ ।**
**ಜೇಣ ಣಿಯಪ್ಪಾ ಜಾಣಿಯಇ, ಸಾಮಿಯ ಎಕ್ಕಖಣೇಣ ॥ ೧೦೪ ॥**

"ಜ್ಞಾನಂ ಪ್ರಕಾಶಯ ಪರಮಂ ಮಮ ಕಿಂ ಅನ್ಯೇನ ಬಹುನಾ ।
ಯೇನ ನಿಜಾತ್ಮಾ ಜ್ಞಾಯತೇ ಸ್ವಾಮಿನ್ ಏಕಕ್ಷಣೇನ ॥ ೧೦೪ ॥"

**ಅನ್ವಯಾರ್ಥ:—ಸಾಮಿಯ**—ಸ್ವಾಮಿಯೇ! **ಜೇಣ**—ಯಾವ ಜ್ಞಾನದಿಂದ **ಎಕ್ಕಖಣೇಣ**—ಒಂದುಕ್ಷಣದಿಂದ(ಕ್ಷಣಮಾತ್ರದಲ್ಲಿ) **ಣಿಯಪ್ಪಾ ಜಾಣಿಯಇ**-ನಿಜಾತ್ಮನು(ತನ್ನಾತ್ಮನು) ತಿಳಿಯಲ್ಪಡುತ್ತಾನೆಯೋ, ಅಂತಹ **ಪರಮು ಣಾಣು**—ಪರಮ ಜ್ಞಾನವನ್ನು **ಮುಹು ಪಯಾಸಹಿ**—ನನಗೆ ಪ್ರಕಾಶಪಡಿಸು ಅರ್ಥಾತ್ ನನಗೆ ಜ್ಞಾನದ ಸ್ವರೂಪವನ್ನು ತಿಳಿಸಿರಿ. **ಕಿಂ ಅಣ್ಣೇ ಬಹುಏಣ**—ಇತರ ಅನೇಕವಿಕಲ್ಪಜಾಲಗಳಿಂದ ಏನು ಪ್ರಯೋಜನವು?

**ಭಾವಾರ್ಥ:**—ಪ್ರಭಾಕರ ಭಟ್ಟನು ಗುರುಗಳಾದ ಶ್ರೀಯೋಗೀಂದುದೇವರನ್ನು ಕುರಿತು ಹೀಗೆ ಪ್ರಾರ್ಥಿಸುತ್ತಾನೆ:—ಸ್ವಾಮಿಯೇ! ಯಾವ ವೀತರಾಗಸ್ವಸಂವೇದನ ಜ್ಞಾನದಿಂದ ಕ್ಷಣಮಾತ್ರದಿಂದಲೇ ಶುದ್ಧಬುದ್ಧೈಕಸ್ವಭಾವವುಳ್ಳ ನಿಜಾತ್ಮನು ತಿಳಿಯಲ್ಪಡುತ್ತಾನೆಯೋ ಆ ಪರಮಜ್ಞಾನದ ಸ್ವರೂಪವನ್ನೇ ನನಗೆ ಉಪದೇಶಿಸಿರಿ. ರಾಗಾದಿ ಭಾವಗಳನ್ನು ವೃದ್ಧಿಗೊಳಿಸುವ ಇತರ ವಿಕಲ್ಪಜಾಲದಿಂದೇನೂ ಪ್ರಯೋಜನವಿಲ್ಲ. ಇಲ್ಲಿ, ಮಿಥ್ಯಾತ್ವರಾಗಾದಿವಿಕಲ್ಪರಹಿತವೂ ನಿಜಶುದ್ಧಾತ್ಮಾನುಭವರೂಪವೂ ಆದ ಜ್ಞಾನವೇ ಉಪಾದೇಯವಾಗಿರುತ್ತದೆಂದು ತಾತ್ಪರ್ಯಾರ್ಥವು.

**ಅಪ್ಪಾ ಣಾಣು ಮುಣೇಹಿ ತುಹುಂ, ಜೋ ಜಾಣಇ ಅಪ್ಪಾಣು ।**
**ಜೀವಪಏಸಹಿ ತಿತ್ತಿಡಉ, ಣಾಣೇಂ ಗಯಣಪವಾಣು ॥ ೧೦೫ ॥**

"ಆತ್ಮಾನಂ ಜ್ಞಾನಂ ಮನ್ಯಸ್ವ ತ್ವಂ ಯಃ ಜಾನಾತಿ ಆತ್ಮಾನಮ್ ।
ಜೀವಪ್ರದೇಶೈಃ ತಾವನ್ಮಾತ್ರಂ ಜ್ಞಾನೇನ ಗಗನಪ್ರಮಾಣಮ್ ॥ ೧೦೫ ॥"

**ಅನ್ವಯಾರ್ಥ:—ತುಹುಂ**—ನೀನು **ಅಪ್ಪಾ**-ಆತ್ಮನನ್ನು **ಣಾಣು ಮುಣೇಹಿ**-ಜ್ಞಾನವನ್ನಾಗಿ ತಿಳಿ. **ಜೋ**—ಯಾವ ಜ್ಞಾನಸ್ವರೂಪನಾದ ಆತ್ಮನು **ಜೀವಪಏಸಹಿ**-ಜೀವಪ್ರದೇಶ (ತನ್ನಪ್ರದೇಶ)ಗಳಿಂದ **ತಿತ್ತಿಡಉ**—ತಾವನ್ಮಾತ್ರ (ಲೋಕಪ್ರಮಾಣ ಪ್ರದೇಶವುಳ್ಳವ)ನೂ, ಅಥವಾ **"ಜೀವಪಏಸಹಿಂ ದೇಹಸಮು"** ಎಂಬ ಪಾಠಾಂತರದಿಂದ ವ್ಯವಹಾರನಯದಿಂದ ಶರೀರಪ್ರಮಾಣವುಳ್ಳವನೂ **ಣಾಣೇಂ ಗಯಣಪವಾಣು**-ಜ್ಞಾನದಿಂದ ಆಕಾಶಪ್ರಮಾಣನೂ ಆದ **ಅಪ್ಪಾಣಂ**-ಆತ್ಮನನ್ನು **ಜಾಣಇ**-ತಿಳಿಯುತ್ತಾನೆ.

**ಭಾವಾರ್ಥ:**— ಶ್ರೀಯೋಗೀಂದುದೇವರು ಶಿಷ್ಯನ ಪ್ರಾರ್ಥನೆಯಂತೆ ಜ್ಞಾನ ಸ್ವರೂಪವನ್ನು ನಿರೂಪಿಸುತ್ತಾರೆ — ಶಿಷ್ಯನೇ! ಆತ್ಮ ಮತ್ತು ಜ್ಞಾನ ಇವುಗಳೊಳಗೆ ಭೇದವಿಲ್ಲದಿರುವುದರಿಂದ ನೀನು ಆತ್ಮನೇ ಜ್ಞಾನವೆಂದು ತಿಳಿ ಹೀಗೆ ಜ್ಞಾನಸ್ವರೂಪ ನಾದ ಆತ್ಮನು ನಿಶ್ಚಯನಯದಿಂದ ಮತಿ ಶ್ರುತ ಅವಧಿ ಮನಃಪರ್ಯಯ ಕೇವಲ ಎಂಬೀ ಐದು ಜ್ಞಾನಗಳಿಂದ ಅಭಿನ್ನ(ತತ್‌ಸ್ವರೂಪ)ನೂ ವ್ಯವಹಾರನಯದಿಂದ ಜ್ಞಾನಾಪೇಕ್ಷ ಯಿಂದ ರೂಪವನ್ನು ನೋಡುವುದರಲ್ಲಿ ಕಣ್ಣಿನಂತೆ ಅರ್ಥಾತ್ ನೇತ್ರೇಂದ್ರಿಯ (ಕಣ್ಣು)ವು ರೂಪೀಪದಾರ್ಥಗಳಲ್ಲಿ ತನ್ಮಯವಾಗದೆ ಅವುಗಳನ್ನು ನೋಡುವಂತೆ ಲೋಕಾಲೋಕ ವ್ಯಾಪಕನೂ (ಲೋಕಾಲೋಕಗಳನ್ನು ತನ್ಮಯನಾಗದೆ ತಿಳಿಯುವವನೂ) ನಿಶ್ಚಯನಯ ದಿಂದ ಲೋಕಮಾತ್ರ-ಅಸಂಖ್ಯಾತಪ್ರದೇಶವುಳ್ಳವನಾಗಿದ್ದರೂ ವ್ಯವಹಾರನಯದಿಂದ ಸಂಕೋಚವಿಸ್ತಾರಧರ್ಮವುಳ್ಳವನಾದುದರಿಂದ ತಾನು ಹೊಂದಿದ ಸ್ಥೂಲ-ಸೂಕ್ಷ್ಮ ಶರೀರಪ್ರಮಾಣವುಳ್ಳವನೂ ಆದ ಆತ್ಮನನ್ನು ಆಹಾರಭಯಮೈಥುನಪರಿಗ್ರಹಸಂಜ್ಞೆಗಳೇ ಮೊದಲಾದ ವಿಕಲ್ಪಗಳನ್ನು ತೊರೆದು ತಿಳಿಯುವುದರಿಂದ ಮತ್ತು ಜ್ಞಾನದಿಂದ ಅಭಿನ್ನ (ಜ್ಞಾನಮಯ)ನಾಗಿರುವುದರಿಂದ ಆತನೇ (ಆತ್ಮನೇ) ಜ್ಞಾನವೆಂದು ಹೇಳಲ್ಪಡುತ್ತಾನೆ. ಹೀಗೆ ಜ್ಞಾನಾಭಿನ್ನ ಅಥವಾ ಜ್ಞಾನಸ್ವರೂಪನಾದ ಆತ್ಮನೇ ಉಪಾದೇಯನಾಗಿರುತ್ತಾ ನೆಂದು ಭಾವವು ಗ್ರಂಥಾಂತರದಲ್ಲಿಯೂ ಹೀಗೆಯೇ ಹೇಳಲ್ಪಟ್ಟಿದೆ — "**ಅಭಿಣಿಸು ದೋಹಿಮಣಕೇವಲಂ ಚ ತಂ ಹೋದಿ ಏಗಮೇವ ಪದಂ । ಸೋ ಏಸೋ ಪರಮಟ್ಠೋ ಜಂ ಲಹಿದುಂ ಣಿವ್ವುದಿಂ ಲಹದಿ ॥**" ಅರ್ಥಾತ್ "ಮತಿಶ್ರುತಾ ವಧಿಮನಃಪರ್ಯಯಕೇವಲಜ್ಞಾನಗಳೆಂಬುದು ಒಬ್ಬ ಆತ್ಮನ ಸ್ವರೂಪವೇ ಆಗಿರುತ್ತದೆ. ಆತ್ಮನ ಹೊರತು ಈ ಜ್ಞಾನಗಳು ಇರಲಾರವು ಅಂತಹ ಆತ್ಮನೇ ಪರಮಾರ್ಥವು ಜೀವನು ಆ ಪರಮಾರ್ಥವನ್ನೇ ಪಡೆದು ನಿರ್ವಾಣವನ್ನೈದುವನು"

**ಅಪ್ಪಹಂ ಜೇ ವಿ ವಿಭಿಣ್ಣ ವಢ, ತೇ ವಿ ಹವಂತಿ ಣ ಣಾಣು ।**
**ತೇ ತುಹುಂ ತಿಣ್ಣಿ ವಿ ಪರಿಹರಿವಿ, ಣಿಯಮಿಂ ಅಪ್ಪ ವಿಯಾಣು ॥೧೦೬॥**

"ಆತ್ಮನಃ ಯೇ ಅಪಿ ವಿಭಿನ್ನಾಃ ವತ್ಸ ತೇಽಪಿ ಭವಂತಿ ನ ಜ್ಞಾನಮ್ ।
ತಾನ್ ತ್ವಂ ತ್ರೀಣ್ಯಪಿ ಪರಿಹೃತ್ಯ ನಿಯಮೇನ ಆತ್ಮಾನಂ ವಿಜಾನೀಹಿ ॥ ೧೦೬ ॥"

**ಅನ್ವಯಾರ್ಥ:**— **ವಢ**— ಎಲೈ ಶಿಷ್ಯನೇ **ಜೇ ವಿ**–ಯಾವ ಭಾವಗಳು **ಅಪ್ಪಹಂ ವಿಭಿಣ್ಣ**— ಆತ್ಮನಿಂದ ವಿಭಿನ್ನ(ಬೇರೆ)ಗಳಾಗಿರುತ್ತವೆಯೋ **ತೇ ವಿ**— ಆ ಭಾವಗಳೂ **ಹವಂತಿ ಣ ಣಾಣು**— ಜ್ಞಾನವಾಗಿರುವುದಿಲ್ಲ ಅರ್ಥಾತ್ ಜ್ಞಾನರಹಿತಜಡರೂಪಗಳಾ ಗಿರುತ್ತವೆ. **ತೇ ತಿಣ್ಣಿ ವಿ**— ಆ ಮೂರು ಭಾವ(ಧರ್ಮ ಅರ್ಥ ಕಾಮ)ಗಳನ್ನೂ **ಪರಿ ಹರಿವಿ**— ಬಿಟ್ಟು **ತುಹುಂ**—ನೀನು **ಣಿಯಮಿಂ**— ನಿಶ್ಚಯದಿಂದ **ಅಪ್ಪ ವಿಯಾಣು**— ಆತ್ಮನನ್ನು ತಿಳಿ.

**ಭಾವಾರ್ಥ:**— ಎಲೈ ಪ್ರಭಾಕರಭಟ್ಟನೇ! ಮುನಿರೂಪವಾದ ಧರ್ಮ, ಅರ್ಥ ರೂಪವಾದ ಸಂಸಾರದ ಪ್ರಯೋಜನ, ವಿಷಯಾಭಿಲಾಷಾರೂಪವಾದ ಕಾಮ ಇವು,

ಮೂರೂ ಆತ್ಮಭಿನ್ನವಾದುವುಗಳು. ಜ್ಞಾನಸ್ವರೂಪಗಳಲ್ಲ ಅತಏವ ನಿಶ್ಚಯನಯದಿಂದ ನಿರ್ಮಲಕೇವಲಜ್ಞಾನಸ್ವರೂಪ-ಪರಮಾತ್ಮಪದಾರ್ಥದಿಂದ ಸರ್ವಥಾ ಭಿನ್ನಗಳಾದ ಧರ್ಮಅರ್ಥಕಾಮಗಳೆಂಬ ಈ ಮೂರು ಪುರುಷಾರ್ಥಗಳನ್ನೂ ಬಿಟ್ಟು ವೀತರಾಗಸ್ವ ಸಂವೇದನ ಲಕ್ಷಣವುಳ್ಳ ಶುದ್ಧಾತ್ಮಾನುಭೂತಿರೂಪವಾದ ಜ್ಞಾನದಲ್ಲಿರುವವನಾಗಿ ಆತ್ಮ ತತ್ತ್ವವನ್ನು ನೀನು ನಿಶ್ಚಯದಿಂದ ತಿಳಿಯುವವನಾಗು

**ಅಪ್ಪಾ ಣಾಣಹಂ ಗಮ್ಮು ಪರ, ಣಾಣು ವಿಯಾಣಇ ಜೇಣ ।**
**ತಿಣ್ಣಿ ವಿ ಮಿಲ್ಲಿವಿ ಜಾಣಿ ತುಹುಂ, ಅಪ್ಪಾ ಣಾಣೇ ತೇಣ ॥ ೧೦೭ ॥**

"ಆತ್ಮಾ ಜ್ಞಾನಸ್ಯ ಗಮ್ಯಃ ಪರಃ ಜ್ಞಾನಂ ವಿಜಾನಾತಿ ಯೇನ ।
ತ್ರೀಣ್ಯಪಿ ಮುಕ್ತ್ವಾ ಜಾನೀಹಿ ತ್ವಂ ಆತ್ಮಾನಂ ಜ್ಞಾನೇನ ತೇನ ॥ ೧೦೭ ॥"

**ಅನ್ವಯಾರ್ಥ:—ಅಪ್ಪಾ**—ಆತ್ಮನು—**ಣಾಣಹಂ**—ಜ್ಞಾನಕ್ಕೆ **ಗಮ್ಮು ಪರ**—ನಿಶ್ಚಯವಾಗಿ ಗೋಚರನಾಗಿರುತ್ತಾನೆ ಅರ್ಥಾತ್ ಜ್ಞಾನದಿಂದ ತಿಳಿಯಲ್ಪಡುತ್ತಾನೆ. **ಜೇಣ**—ಯಾವ ಕಾರಣದಿಂದ **ಣಾಣು ವಿಯಾಣಇ**—ಜ್ಞಾನವು(ಆತ್ಮನನ್ನು)ತಿಳಿಯು ತ್ತದೆಯೋ **ತೇಣ**—ಆಕಾರಣದಿಂದ **ತುಹುಂ**—ನೀನು **ತಿಣ್ಣಿ ವಿ ಮಿಲ್ಲಿವಿ**—ಧರ್ಮ ಅರ್ಥಕಾಮಗಳೆಂಬೀ ಮೂರು ಭಾವಗಳನ್ನೂ ಬಿಟ್ಟು **ಣಾಣೇ**—ಜ್ಞಾನದಿಂದ **ಅಪ್ಪಾ ಜಾಣಿ**—ಆತ್ಮನನ್ನು ತಿಳಿ.

**ಭಾವಾರ್ಥ:**—ನಿಜಶುದ್ಧಾತ್ಮನು ಜ್ಞಾನಕ್ಕೆ ಮಾತ್ರವೇ ಗೋಚರನಾಗಿರುತ್ತಾನೆ ಏಕಂದರೆ, ಮತಿಜ್ಞಾನವೊದಲಾದೈದು ಭೇದಗಳಿಂದ ರಹಿತವೂ ಸಾಕ್ಷಾತ್ ಮೋಕ್ಷ ಕಾರಣವೂ ಆದ 'ಪರಮಪದ'ವು 'ಪರಮಾತ್ಮ' ಎಂದು ಹೇಳಲ್ಪಡುತ್ತದೆ ಪರಮಾತ್ಮನು ತದ್ರೂಪನಾಗಿರುವನು ಅರ್ಥಾತ್ ಪರಮಪದರೂಪನಾಗಿರುವನು. ಅಂತಹ ಆತ್ಮನನ್ನು ವೀತರಾಗಸ್ವಸಂವೇದನಜ್ಞಾನಗುಣದ ಹೊರತು ಎಂತಹ ಕಠಿನತಪಶ್ಚರಣಾದ್ಯನುಷ್ಠಾನ ಗಳನ್ನು ಮಾಡುವ ಮನುಷ್ಯರೂ ಪಡೆಯಲಾರರು ಅರ್ಥಾತ್ ತಿಳಿಯಲಾರರು ಅತ ಏವ ನೀನು ಜ್ಞಾನದಿಂದಲೇ ನಿಜಾತ್ಮಸ್ವರೂಪಾನುಭವವನ್ನು ಪಡೆಯುವವನಾಗು. ಹೀಗೆಯೇ ಶ್ರೀಕುಂದಕುಂದಾಚಾರ್ಯರು **"ಸಮಯಸಾರ"**ದಲ್ಲಿ **"ಣಾಣಗುಣೇಹಿಂ ವಿಹೀಣಾ ಏದಂ ತು ಪದಂ ಬಹೂ ವಿ ಣ ಲಹಂತಿ । ತಂ ಗಿಣ್ಹ ಸು ಪದಮೇದಂ ಜಇ ಇಚ್ಛಸಿ ದುಕ್ಖಪರಿಮೊಕ್ಖಂ ॥"** ಅಂದರೆ "ಸಮ್ಯಗ್ಜ್ಞಾನವೆಂಬ ನಿಜಗುಣ ದಿಂದ ಹೀನ(ರಹಿತ)ರಾದ ಪುರುಷರು ಈ ಬ್ರಹ್ಮಪದ(ಪರಮಪದ)ವನ್ನು ಬಹುಕಷ್ಟ ದಿಂದಲೂ ಪಡೆಯಲಾರರು. ಆದುದರಿಂದ ನೀನು ದುಃಖದ ಬಿಡುಗಡೆಯನ್ನೂ ಸಿದ್ಧ ಪದವನ್ನೂ ಹೊಂದಲಿಚ್ಛಿಸುವೆಯಾದರೆ ಆತ್ಮಜ್ಞಾನದಿಂದ ನಿಜಪದವನ್ನು ಹೊಂದು" ಎಂದು ಹೇಳಿರುವರು ಯಾವಾತನು ಧರ್ಮಾರ್ಥಕಾಮಾದಿ-ಸರ್ವಪರದ್ರವ್ಯಗಳ ಇಚ್ಛೆ ಯನ್ನು ತೊರೆದು ಸ್ವಶುದ್ಧಾತ್ಮಸುಖಾಮೃತತೃಪ್ತನಾಗುತ್ತಾನೆಯೋ ಆತನು ಜೈನ ಸಿದ್ಧಾಂತದಲ್ಲಿ ಅಪರಿಗ್ರಹ(ಪರಿಗ್ರಹರಹಿತ)ನೆಂದು ಹೇಳಲ್ಪಟ್ಟಿರುತ್ತಾನೆ ಮತ್ತು ಆತನೇ

ತ್ಮನನ್ನು ತಿಳಿಯುತ್ತಾನೆಂದು ಭಾವಾರ್ಥವು. "ಸಮಯಸಾರ"ದಲ್ಲಿಯೂ ಹೀಗೆಯೇ ಹೇಳಲ್ಪಟ್ಟಿದೆ—**"ಅಪರಿಗ್ಗಹೋ ಅಣಿಚ್ಛೋ ಭಣಿಓ ಣಾಣೀ ದು ಣೇಚ್ಛದೇ ಧಮ್ಮಂ। ಅಪರಿಗ್ಗಹೋ ದು ಧಮ್ಮಸ್ಸ ಜಾಣಗೋ ತೇಣ ಸೋ ಹೋದಿ॥"** ಅರ್ಥಾತ್ "ಯಾವನು ವ್ಯವಹಾರಧರ್ಮವನ್ನು ಸಹ ಇಚ್ಛಿಸುವುದಿಲ್ಲವೋ ಆತನು ಪರಿಗ್ರಹರಹಿತನೂ ಇಚ್ಛಾರಹಿತನೂ ಆದ ಜ್ಞಾನಿಯೆಂದು ಹೇಳಲ್ಪಟ್ಟಿರುತ್ತಾನೆ ಹೀಗೆ ಯಾವಾತನು ಧರ್ಮವನ್ನೂ ಇಚ್ಛಿಸುವುದಿಲ್ಲವೋ ಆತನು ಅರ್ಥಕಾಮಗಳನ್ನು ಹೇಗೆ ಇಚ್ಛಿಸುವನು? ಧರ್ಮದ ಪರಿಗ್ರಹವೂ ಇಲ್ಲದಿರುವವನಿಗೆ ಇತರ ಪರಿಗ್ರಹಗಳೆಲ್ಲಿ?" ಅತಏವ ಆತನು ಅಪರಿಗ್ರಹನಾಗಿದ್ದು ನಿಜಸ್ವರೂಪವನ್ನೇ ತಿಳಿಯುವವನಾಗಿರುತ್ತಾನೆಂದು ಭಾವವು.

**ಣಾಣಿಯ ಣಾಣಿಉ ಣಾಣಿಏಣ, ಣಾಣಿಉಂ ಜಾ ಣ ಮುಣೇಹಿ।**
**ತಾ ಅಣ್ಣಾಣಿಂ ಣಾಣಮಉಂ, ಕಿಂ ಪರ ಬಂಭು ಲಹೇಹಿ ॥ ೧೦೮ ॥**

"ಜ್ಞಾನಿನ್ ಜ್ಞಾನೀ ಜ್ಞಾನಿನಾ ಜ್ಞಾನಿನಂ ಯಾವತ್ ನ ಜಾನಾಸಿ।
ತಾವತ್ ಅಜ್ಞಾನೇನ ಜ್ಞಾನಮಯಂ ಕಿಂ ಪರಂ ಬ್ರಹ್ಮ ಲಭಸೇ ॥ ೧೦೮ ॥"

**ಅನ್ವಯಾರ್ಥ:—ಣಾಣಿಯ**—ಎಲೈ ಜ್ಞಾನಿಯೇ! **ಣಾಣಿಉ**—ಜ್ಞಾನವುಳ್ಳ ತನ್ನಾತ್ಮನು (ಅರ್ಥಾತ್ ನೀನು) **ಣಾಣಿಏಣ**—ಸಮ್ಯಗ್‌ಜ್ಞಾನಸ್ವರೂಪನಾದ ನಿಜಾತ್ಮನಿಂದ(ಅಥವಾ ಸಮ್ಯಗ್‌ಜ್ಞಾನದಿಂದ) **ಣಾಣಿಉಂ**—ಜ್ಞಾನಲಕ್ಷಣವುಳ್ಳ ಆತ್ಮನನ್ನು **ಜಾ ಣ ಮುಣೇಹಿ** – ಎಂದಿನವರೆಗೆ ತಿಳಿಯುವುದಿಲ್ಲವೋ **ತಾ**—ಅಂದಿನವರೆಗೆ **ಅಣ್ಣಾಣಿಂ**-ಅಜ್ಞಾನದಿಂದ(ಅಜ್ಞಾನಿಯಾಗಿರುವುದರಿಂದ) **ಣಾಣಮಉಂ**—ಜ್ಞಾನಮಯವಾದ **ಪರ ಬಂಭು**—ಪರಬ್ರಹ್ಮ ಅರ್ಥಾತ್ ಉತ್ಕೃಷ್ಟ ಬ್ರಹ್ಮ(ಆತ್ಮ)ಸ್ವಭಾವವನ್ನು **ಕಿಂ ಲಹೇಹಿ**-ಏನು ಪಡೆಯಬಲ್ಲೆಯೋ? ಅರ್ಥಾತ್ ಎಂದಿಗೂ ಪಡೆಯಲಾರೆ.

**ಭಾವಾರ್ಥ:**—ಎಂದಿನವರೆಗೆ ಈ ಜೀವನು ರಾಗಾದಿಸಮಸ್ತವಿಕಲ್ಪಗಳನ್ನು ತೊರೆದು ತನ್ನಲ್ಲಿರುವ ತನ್ನನ್ನು ತನಗಾಗಿ ತನ್ನಿಂದ ತಾನು ತಿಳಿಯುವುದಿಲ್ಲವೋ ಅಂದಿನವರೆಗೆ ಆತನು ಪರಮಬ್ರಹ್ಮವೆಂದು ಹೇಳಲ್ಪಡುವ ಪರಮಾತ್ಮನನ್ನು ತಿಳಿಯಲಾರನು. ವಸ್ತುತಃ ತನ್ನಾತ್ಮನನ್ನು ತಿಳಿಯುವವನೇ ಪರಮಾತ್ಮನನ್ನು ತಿಳಿಯಬಲ್ಲನೆಂದು ತಾತ್ಪರ್ಯವು.

**ಜೋಇಜ್ಜಇ ತಿಂ ಬಂಭು ಪರು, ಜಾಣಿಜ್ಜಇ ತಿಂ ಸೋಇ।**
**ಬಂಭು ಮುಣೇವಿಣು ಜೇಣ ಲಹು, ಗಮ್ಮಿಜ್ಜಇ ಪರಲೋಇ ॥ ೧೦೯ ॥**

"ದೃಶ್ಯತೇ ತೇನ ಬ್ರಹ್ಮಾ ಪರಃ ಜ್ಞಾಯತೇ ತೇನ ಸ ಏವ।
ಬ್ರಹ್ಮ ಮತ್ವಾ ತೇನ ಲಘು ಗಮ್ಯತೇ ಪರಲೋಕೇ ॥ ೧೦೯ ॥"

**ಅನ್ವಯಾರ್ಥ:—ತಿಂ**—ಸಮಸ್ತರಾಗಾದಿವಿಕಲ್ಪಜಾಲವನ್ನು ತೊರೆದು ಆತ್ಮಜ್ಞಾನಿಯಾದ ಆ ಪುರುಷನಿಂದ ಅಥವಾ ಆ (ರಾಗಾದಿವಿಕಲ್ಪಜಾಲವನ್ನು ಬಿಡುವುದರ)

ಕಾರಣದಿಂದ **ಬಂಭು ಪರು**— ಪರಬ್ರಹ್ಮ(ಉತ್ಕೃಷ್ಟನಾದ ಶುದ್ಧಾತ್ಮ)ನು ("ಪರ" ಎಂಬ ಪಾಠಾಂತರದಿಂದ)ನಿಶ್ಚಯದಿಂದ **ಜೋಇಜ್ಜಇ** – ಕಾಣಲ್ಪಡುತ್ತಾನೆ. **ತಿಂ – ಆ** ಪುರುಷನಿಂದ **ಸೋಇ**— ಆ ಶುದ್ಧಾತ್ಮನೇ **ಜಾಣಿಜ್ಜಇ**— ತಿಳಿಯಲ್ಪಡುತ್ತಾನೆ. **ಜೇಣ**— ಯಾವಕಾರಣದಿಂದ ಯಾವ ಆ ಪುರುಷನಿಂದ **ಬಂಭು ಮುಣೇವಿಣು**–ಬ್ರಹ್ಮ(ನಿರ್ದೋಷಿಯಾದ ಪರಮಾತ್ಮ)ನನ್ನು ತಿಳಿದು **ಪರಲೋಇ**— ಪರಲೋಕ(ಪರಮಾತ್ಮತತ್ತ್ವ)ದಲ್ಲಿ **ಲಹು ಗವಿಜ್ಜಇ**— ಶೀಘ್ರವಾಗಿ ಹೊಂದಲ್ಪಡುತ್ತದೆ ಅರ್ಥಾತ್ ಪರಮಾತ್ಮ ತತ್ತ್ವವು ಪಡೆಯಲ್ಪಡುತ್ತದೆ.

**ಭಾವಾರ್ಥ:**—ಯಾವ ಆತ್ಮನು ಶುದ್ಧನಿಶ್ಚಯನಯದಿಂದ, ಶಕ್ತಿರೂಪದಿಂದ ಕೇವಲ ಜ್ಞಾನದರ್ಶನಸ್ವಭಾವವುಳ್ಳ ಪರಮಾತ್ಮನಾಗಿರುವನೋ ಆತನು ಸೂಕ್ಷ್ಮ-ಏಕೇಂದ್ರಿಯ ಮೊದಲಾದ ಸಮಸ್ತ ಜೀವರುಗಳ ಶರೀರದಲ್ಲಿ ಪ್ರತ್ಯೇಕಪ್ರತ್ಯೇಕವಾಗಿರುವನು ಆತನೇ 'ಪರಮಬ್ರಹ್ಮನೆಂಮೂ ಪರಮವಿಷ್ಣುವೆಂದೂ ಪರಮಶಿವನೆಂದೂ ಹೇಳಲ್ಪಡುತ್ತಾನೆ. ಪರಮೇಶ್ವರ ಮತ್ತು ಜೀವ ಇವರೊಳಗೆ ಜಾತಿಭೇದವಿರುವುದಿಲ್ಲ. ಜೀವನು ಕರ್ಮಬದ್ಧನಾಗಿರುವ ತನಕ ಏಕೇಂದ್ರಿಯಾದಿಶರೀರಗಳನ್ನು ಪಡೆದು ಸಂಸಾರದಲ್ಲಿ ಭ್ರಮಿಸುತ್ತಿರುತ್ತಾನೆ ಆತನು ಸರ್ವಕರ್ಮಗಳಿಂದ ಮುಕ್ತನಾದೊಡನೆ 'ಸಿದ್ಧ'ನೆಂದು ಹೇಳಲ್ಪಡುತ್ತಾನೆ ಅರ್ಥಾತ್ ಪರಮಾತ್ಮನು ಸಂಸಾರಾವಸ್ಥೆಯಲ್ಲಿ ಶಕ್ತಿರೂಪದಿಂದಲೂ ಸಿದ್ಧಾವಸ್ಥೆಯಲ್ಲಿ ವ್ಯಕ್ತಿ(ಪ್ರಕಟ)ರೂಪದಿಂದಲೂ ಇರುತ್ತಾನೆ ಆದುದರಿಂದ ಈ ಆತ್ಮನೇ ಶಕ್ತಿರೂಪದಿಂದ ಪರಮಬ್ರಹ್ಮ ಪರಮವಿಷ್ಣು ಮತ್ತು ಪರಮಶಿವನಾಗಿರುತ್ತಾನೆ ಮತ್ತು ವ್ಯಕ್ತಿರೂಪದಿಂದ ಭಗವಾನ್ ಅರ್ಹತ್ಪರಮೇಷ್ಠಿಗಳು ಅಥವಾ ಮುಕ್ತಿಗತ-ಸಿದ್ಧಾತ್ಮರು ಪರಮಬ್ರಹ್ಮ ವಿಷ್ಣು ಶಿವರೆಂದು ಹೇಳಲ್ಪಡುತ್ತಾರೆ. ಇದರಿಂದ ಬೇರೆ ಕಲ್ಪಿಸಲ್ಪಟ್ಟ ಯಾವನೊಬ್ಬ ಜಗದ್ವ್ಯಾಪಕನಾದ ಪರಮಬ್ರಹ್ಮನಾಗಲೀ ವಿಷ್ಣುವಾಗಲೀ ಮತ್ತು ಶಿವನಾಗಲೀ ಇರುವುದಿಲ್ಲವೆಂದು ತಿಳಿಯಬೇಕು. ಅನಂತಸಿದ್ಧಾತ್ಮರು ವಿರಾಜಿಸುತ್ತಿರುವ ಲೋಕಾಗ್ರಭಾಗವೇ ಬ್ರಹ್ಮಲೋಕ, ವಿಷ್ಣುಲೋಕ ಅಥವಾ ಶಿವಲೋಕವಾಗಿರುತ್ತದಲ್ಲದೆ ಬೇರೊಂದುಬ್ರಹ್ಮಲೋಕವಾಗಲೀ, ವಿಷ್ಣುಲೋಕ-ಶಿವಲೋಕಗಳಾಗಲೀ ಇರುವುದಿಲ್ಲ. ಇಲ್ಲಿ ಸಾರಾಂಶವೇನೆಂದರೆ:— ಶಕ್ತಿರೂಪದಿಂದ ಪರಮಾತ್ಮನಾಗಿರುವ ಈ ಜೀವನೇ ಶುದ್ಧನಯದಿಂದ ಸಿದ್ಧಾತ್ಮನಾಗಿರುತ್ತಾನೆ. ಆದಕಾರಣ ಪರಮಬ್ರಹ್ಮಮೊದಲಾದುವು ಈ ಜೀವನ ಹೆಸರುಗಳೇ ಆಗಿರುತ್ತವೆ. ಹಾಗೂ ಬ್ರಹ್ಮಲೋಕಮೊದಲಾದುವು ನಿರ್ವಾಣಕ್ಷೇತ್ರ(ಮೋಕ್ಷಸ್ಥಾನ)ದ ಹೆಸರುಗಳೇ ಆಗಿರುತ್ತವಲ್ಲದೆ ಇತರ ಯಾವುದೊಂದು ವಿಶಿಷ್ಟ ಸ್ಥಾನದ ಹೆಸರುಗಳೂ ಅಲ್ಲವೆಂದು ತಿಳಿಯಬೇಕು.

**ಮುಣಿವರವಿಂದಹಂ ಹರಿಹರಹಂ, ಜೋ ಮಣಿ ಣಿವಸಇ ದೇಉ ।**
**ಪರಹಂ ಜಿ ಪರತರು ಣಾಣಮಉ, ಸೋ ವುಚ್ಚಇ ಪರಲೋಉ ॥೧೧೦॥**

"ಮುನಿವರವೃಂದಾನಾಂ ಹರಿಹರಾಣಾಂ ಯಃ ಮನಸಿ ನಿವಸತಿ ದೇವಃ ।
ಪರಸ್ಮಾತ್ ಅಪಿ ಪರತರಃ ಜ್ಞಾನಮಯಃ ಸ ಉಚ್ಯತೇ ಪರಲೋಕಃ ॥ ೧೧೦ ॥"

**ಅನ್ವಯಾರ್ಥ:—ಜೋ ದೇಉ**—ಪರಮ ಆರಾಧ್ಯನಾದ ಯಾವ ಆತ್ಮನು **ಮುಣಿವರವಿಂದಹಂ**—ಮುನಿಶ್ರೇಷ್ಠರ ಸಮೂಹಗಳ ಮತ್ತು **ಹರಿಹರಹಂ**—ಹರಿ (ವಿಷ್ಣು ಅಥವಾ ಇಂದ್ರ)ಹರರ **ಮಣಿ**—ಮನಸ್ಸಿನಲ್ಲಿ **ಣಿವಸಇ**—ವಾಸಮಾಡಿಕೊಂಡಿರುತ್ತಾನೆಯೋ **ಪರಹಂ ಜಿ ಪರತರು**—ಉತ್ಕೃಷ್ಟಕ್ಕಿಂತಲೂ ಉತ್ಕೃಷ್ಟತಮನೂ—**ಣಾಣಮಉ**—ಕೇವಲಜ್ಞಾನಮಯನೂ ಆದ **ಸೋ**-ಆ ಶುದ್ಧಾತ್ಮನು **ಪರಲೋಉ ವುಚ್ಚಇ**—'ಪರಲೋಕ'ವೆಂದು ಹೇಳಲ್ಪಡುತ್ತಾನೆ.

**ಭಾವಾರ್ಥ:**—ಇಲ್ಲಿ 'ಪರಲೋಕ'ಶಬ್ದದ ಅರ್ಥವು ಈ ರೀತಿಯಾಗಿದೆ—"**ಪರ ಉತ್ಕೃಷ್ಟೋ ವೀತರಾಗಚಿದಾನಂದೈಕಸ್ವಭಾವ ಆತ್ಮಾ ತಸ್ಯ ಲೋಕೋಽವ ಲೋಕನಂ ನಿರ್ವಿಕಲ್ಪಸಮಾಧೌವಾನುಭವನಮಿತಿ ಪರಲೋಕಃ । ಅಥವಾ ಲೋಕ್ಯಂತೇ ದೃಶ್ಯಂತೇ ಜೀವಾದಿಪದಾರ್ಥಾ ಯಸ್ಮಿನ್ ಪರಮಾತ್ಮಸ್ವರೂಪೇ ಯಸ್ಯ ಕೇವಲಜ್ಞಾನೇನ ವಾ ಸ ಭವತಿ ಲೋಕಃ, ಪರಶ್ಚಾಸೌ ಲೋಕಶ್ಚ ಪರ ಲೋಕಃ ॥**" ಅರ್ಥಾತ್ ಉತ್ಕೃಷ್ಟ-ವೀತರಾಗಚಿದಾನಂದೈಕಸ್ವಭಾವವುಳ್ಳ ಆತ್ಮನನ್ನು ನಿರ್ವಿಕಲ್ಪಸಮಾಧಿಯಲ್ಲಿ ನೋಡುವಿಕೆ(ಅಥವಾ ಅನುಭವಿಸುವಿಕೆ)ಯು "ಪರಲೋಕ"ವು ಅಥವಾ ಯಾವನ ಪರಮಾತ್ಮಸ್ವರೂಪದಲ್ಲಿ ಅಥವಾ ಕೇವಲಜ್ಞಾನದಲ್ಲಿ ಜೀವಾದಿಪದಾರ್ಥಗಳು ಕಾಣಲ್ಪಡುತ್ತವೆಯೋ ಆ ಪರಮಾತ್ಮನೇ "ಪರಲೋಕ"ವೆಂದು ಹೇಳಲ್ಪಡುತ್ತಾನೆ. ಅಥವಾ "**ವ್ಯವಹಾರೇಣ ಪುನಃ ಸ್ವರ್ಗಾಪವರ್ಗಲಕ್ಷಣಃ ಪರಲೋಕೋ ಭಣ್ಯತೇ.**"—ವ್ಯವಹಾರದಿಂದಲಾದರೋ ಸ್ವರ್ಗ-ಅಪವರ್ಗ(ಮೋಕ್ಷ)ಲಕ್ಷಣವುಳ್ಳುದು "ಪರಲೋಕ"ವೆಂದು ಹೇಳಲ್ಪಡುತ್ತದೆ. ಸ್ವರ್ಗಾಪವರ್ಗಗಳಿಗೆ ಆತ್ಮಧರ್ಮ(ಕೇವಲಿಗಳಿಂದ ಉಪದೇಶಿಸಲ್ಪಟ್ಟ ಧರ್ಮ)ವೇ ಕಾರಣವಾಗಿರುವುದರಿಂದ ಪರಮಾತ್ಮನೇ "ಪರಲೋಕವು." ಇಲ್ಲಿ "ಪರಲೋಕ"ವೆಂಬ ಹೆಸರುಳ್ಳ ಯಾವ ಪರಮಾತ್ಮನಿರುತ್ತಾನೋ ಆತನೇ ಉಪಾದೇಯನಾಗಿರುತ್ತಾನೆಂದು ತಾತ್ಪರ್ಯಾರ್ಥವು

**ಸೋ ಪರ ವುಚ್ಚಇ ಲೋಉ ಪರು, ಜಸು ಮಇ ತಿತ್ಥು ವಸೇಇ ।**
**ಜಹಿಂ ಮಇ ತಹಿಂ ಗಇ ಜೀವಹಂ ಜಿ, ಣಿಯಮೇಂ ಜೇಣ ಹವೇಇ ॥೧೧೧॥**

"ಸ ಪರಃ ಉಚ್ಯತೇ ಲೋಕಃ ಪರಃ ಯಸ್ಯ ಮತಿಃ ತತ್ರ ವಸತಿ ।
ಯತ್ರ ಮತಿಃ ತತ್ರ ಗತಿಃ ಜೀವಸ್ಯ ಏವ ನಿಯಮೇನ ಯೇನ ಭವತಿ ॥ ೧೧೧ ।"

**ಅನ್ವಯಾರ್ಥ:—ಜಸು ಮಇ**—ಯಾವ ಭವ್ಯಜೀವನ ಚಿತ್ತವು **ತಿತ್ಥು ವಸೇಇ** ಆ ನಿಜಪರಮಾತ್ಮಸ್ವರೂಪದಲ್ಲಿ ವಾಸಮಾಡುತ್ತದೋ ಅರ್ಥಾತ್ ವಿಷಯಕಷಾಯಾದಿ ವಿಕಲ್ಪಜಾಲವನ್ನು ಬಿಡುವುದರಿಂದ ಸ್ವಸಂವೇದನಸಂವಿತ್ತಿ(ಜ್ಞಾನ)ಸ್ವರೂಪದಿಂದ ಸ್ಥಿರವಾಗಿರುತ್ತದೋ **ಸೋ**—ಆ ಭವ್ಯಜೀವನು **ಪರ**-ನಿಶ್ಚಯದಿಂದ **ಪರು ಲೋಉ ವುಚ್ಚಇ** ಪರಲೋಕ ಅರ್ಥಾತ್ ಉತ್ಕೃಷ್ಟ-ಪುರುಷನೆಂದು ಹೇಳಲ್ಪಡುತ್ತಾನೆ. **ಜೇಣ**—ಯಾವ ಕಾರಣದಿಂದ (ಏಕೆಂದರೆ) **ಜಹಿಂ ಮಇ**—ಎಲ್ಲಿ ಬುದ್ಧಿಯಿರುವುದೋ **ತಹಿಂ ಜಿ**—

ಅಲ್ಲಿಯೇ **ಣಿಯಮೇಂ**— ನಿಯಮ(ನಿಶ್ಚಯ)ದಿಂದ **ಜೀವಹಂ ಗಇ**— ಜೀವನ ಗತಿಯು **ಹವೇಇ**— ಇರುತ್ತದೆ. ಅರ್ಥಾತ್ ಶುದ್ಧಾತ್ಮಸ್ವರೂಪದಲ್ಲಿ ಯಾವ ಜೀವನ ಬುದ್ಧಿಯು ಪ್ರವರ್ತಿಸುತ್ತದೋ ಆತನಿಗೆ ಅದೇಗತಿಯು ಉಂಟಾಗುತ್ತದೆ. ನಿಜವಸ್ತುವಿನಲ್ಲಿ ಮನಸ್ಸನ್ನು ಸ್ಥಿರಗೊಳಿಸಿರುವ ಜೀವರುಗಳಿಗೆ ನಿಜ-ಪದದ ಪ್ರಾಪ್ತಿಯಾಗುವುದರಲ್ಲಿ ಸಂದೇಹವಿಲ್ಲ

**ಭಾವಾರ್ಥ** –ಜೀವನು ಎಂದಿನತನಕ ಆರ್ತ-ರೌದ್ರಧ್ಯಾನಗಳಿಗೆ ಅಧೀನನಾಗಿರುವ ಕಾರಣದಿಂದ ಸ್ವಶುದ್ಧಾತ್ಮಭಾವನಾಚ್ಯುತನಾಗಿ ಪರಭಾವರೂಪದಿಂದ ಪರಿಣಮಿಸಿರುತ್ತಾನೋ ಅಂದಿನ ತನಕ ಆತನು ದೀರ್ಘಸಂಸಾರಿಯಾಗಿರುತ್ತಾನೆ ಪರಂತು ಆತನು ನಿಶ್ಚಯರತ್ನತ್ರಯಾತ್ಮಕವಾದ ಪರಮಾತ್ಮತತ್ತ್ವದ ಭಾವನೆಯಲ್ಲಿ ತಲ್ಲೀನನಾದುದಾದರೆ ನಿರ್ವಾಣವನ್ನು ಪಡೆಯುತ್ತಾನೆ. ಹೀಗೆಂದು ತಿಳಿದು ಸರ್ವರಾಗಾದಿವಿಕಲ್ಪಗಳನ್ನು ತೊರೆದು ನಿಜಾತ್ಮತತ್ತ್ವದಲ್ಲಿಯೇ ಭಾವನೆಯನ್ನು (ನಿಜಾತ್ಮತತ್ತ್ವಭಾವನೆಯನ್ನೇ) ಮಾಡಬೇಕೆಂದು ತಾತ್ಪರ್ಯವು.

**ಜಹಿಂ ಮಇ ತಹಿಂ ಗಇ ಜೀವ ತುಹುಂ, ಮರಣು ವಿ ಜೇಣ ಲಹೇಹಿ ।**
**ತೇಂ ಪರಬಂಭು ಮುಏವಿ ಮಇಂ, ಮಾ ಪರದವ್ವಿ ಕರೇಹಿ ॥ ೧೧೨ ॥**

"ಯತ್ರ ಮತಿಃ ತತ್ರ ಗತಿಃ ಜೀವ ತ್ವಂ ಮರಣಮಪಿ ಯೇನ ಲಭಸೇ ।
ತೇನ ಪರಬ್ರಹ್ಮ ಮುಕ್ತ್ವಾ ಮತಿಂ ಮಾ ಪರದ್ರವ್ಯೇ ಕಾರ್ಷೀಃ ॥ ೧೧೨ ॥

**ಅನ್ವಯಾರ್ಥಃ**— **ಜೀವ**— ಎಲೈ ಜೀವನೇ! **ಜಹಿಂ ಮಇ**— ಎಲ್ಲಿ (ಯಾವುದರಲ್ಲಿ) ಮತಿ(ಬುದ್ಧಿ, ಮನಸ್ಸು)ಯಿರುವುದೋ **ತಹಿಂ ಗಇ**— ಅಲ್ಲಿ ಗತಿಯುಂಟಾಗುವುದು **ಜೇಣ**— ಯಾವ ಕಾರಣದಿಂದ **ತುಹುಂ**— ನೀನು **ಮರಣು ವಿ**— ಮರಣವನ್ನೂ **ಲಹೇಹಿ**— ಹೊಂದುತ್ತಿ [ಜೀವನಿಗೆ ತನ್ನ ಬುದ್ಧಿ (ಶುಭಾಶುಭ ಪರಿಣಾಮ)ಗನುಸಾರವಾಗಿ ಜನ್ಮಮರಣರೂಪವಾದ ಗತಿಭ್ರಮಣೆ(ಸಂಸಾರ)ಯುಂಟಾಗುವುದೆಂದಭಿಪ್ರಾಯವು,] **ತೇಂ**— ಆ ಕಾರಣದಿಂದ **ಪರಬಂಭು ಮುಏವಿ**— ಪರಮಬ್ರಹ್ಮ (ನಿಜಶುದ್ಧಾತ್ಮತತ್ತ್ವ)ವನ್ನು ಬಿಟ್ಟು **ಪರದವ್ವಿ**— ದೇಹಸಂಗಾದಿಪರದ್ರವ್ಯದಲ್ಲಿ **ಮಇಂ ಮಾ ಕರೇಹಿ**— ಬುದ್ಧಿಯನ್ನು ಮಾಡಬೇಡ ಅರ್ಥಾತ್ ಮನಸ್ಸನ್ನಿಡಬೇಡ.

**ಭಾವಾರ್ಥಃ**– ಶುದ್ಧದ್ರವ್ಯಾರ್ಥಿಕನಯದಿಂದ ಅಗಾಧಜ್ಞಾನೈಕಸ್ವಭಾವವುಳ್ಳುದೂ ವೀತರಾಗಸದಾನಂದೈಕಸುಖಾಮೃತರಸರೂಪವಾಗಿ ಪರಿಣಮಿಸಿರುವುದೂ ಆದ ನಿಜಶುದ್ಧಾತ್ಮತತ್ತ್ವವನ್ನು ಬಿಟ್ಟು, ಇತರ ದೇಹಾದಿದ್ರವ್ಯಗಳಲ್ಲಿ ಮನಸ್ಸನ್ನಿಡಬಾರದೆಂದು ತಾತ್ಪರ್ಯವು.

**ಜಂ ಣಿಯದವ್ವಹಂ ಭಿಣ್ಣು ಜಡು, ತಂ ಪರದವ್ವು ವಿಯಾಣಿ ।**
**ಪುಗ್ಗಲು ಧಮ್ಮಾಧಮ್ಮು ಣಹು, ಕಾಲು ವಿ ಪಂಚಮು ಜಾಣಿ ॥ ೧೧೩ ॥**

"ಯತ್ ನಿಜದ್ರವ್ಯಾತ್ ಭಿನ್ನಂ ಜಡಂ ತತ್ ಪರದ್ರವ್ಯಂ ಜಾನೀಹಿ ।
ಪುದ್ಗಲಃ ಧರ್ಮಾಧರ್ಮಃ ನಭಃ ಕಾಲಂ ಅಪಿ ಪಂಚಮಂ ಜಾನೀಹಿ ॥ ೧೧೩ ॥"

**ಅನ್ವಯಾರ್ಥ:— ಜಂ**— ಯಾವುದು **ಣಿಯದವ್ವಹಂ**— ನಿಜದ್ರವ್ಯ(ಆತ್ಮಪದಾರ್ಥ)ದಿಂದ **ಭಿಣ್ಣು ಜಡು**— ಬೇರೆಯಾದುದೂ ಜಡ(ಅಚೇತನ)ವೂ ಆಗಿರುವುದೋ **ತಂ ಪರದವ್ವು ವಿಯಾಣಿ**—ಅದು ಪರದ್ರವ್ಯವೆಂದು ತಿಳಿ. **ಪುಗ್ಗಲು ಧಮ್ಮಾಧಮ್ಮು ಣಹು**— ಪುದ್ಗಲವೂ, ಧರ್ಮ-ಅಧರ್ಮಗಳೂ, ಆಕಾಶವೂ **ಕಾಲು ವಿ ಪಂಚಮು**-ಐದನೆಯದಾದ ಕಾಲವೂ ಇವುಗಳು (**ಪರದವ್ವು**— ಪರದ್ರವ್ಯಗಳೆಂದು) **ಜಾಣಿ**— ತಿಳಿ

**ಭಾವಾರ್ಥ:**— ಜೀವ ಪುದ್ಗಲ ಧರ್ಮ ಅಧರ್ಮ ಆಕಾಶ ಕಾಲ ಈ ಆರು ದ್ರವ್ಯಗಳಲ್ಲಿ ಜ್ಞಾನದರ್ಶನ(ಚೈತನ್ಯ)ರೂಪವಾದ ಅಸಾಧಾರಣ (ಇತರ ದ್ರವ್ಯಗಳಲ್ಲಿಲ್ಲದ) ಗುಣವುಳ್ಳದು ಜೀವದ್ರವ್ಯವು ಸ್ಪರ್ಶರಸಗಂಧವರ್ಣಗಳುಳ್ಳದು ಪುದ್ಗಲ ದ್ರವ್ಯವು. ಜೀವಪುದ್ಗಲಗಳ ಗಮನಕ್ಕೆ ಸಹಕಾರಿಯಾದುದು ಧರ್ಮದ್ರವ್ಯವು ಜೀವ ಪುದ್ಗಲಗಳ ಸ್ಥಿತಿಗೆ ಸಹಕಾರಿಯಾದುದು ಅಧರ್ಮದ್ರವ್ಯವು. ಜೀವಾದಿದ್ರವ್ಯಗಳಿಗೆ ಅವಕಾಶವನ್ನು ಕೊಡುವುದು ಆಕಾಶದ್ರವ್ಯವು ದ್ರವ್ಯಗಳ ಪರಿವರ್ತನೆಗೆ ಕಾರಣವಾದುದು ಕಾಲದ್ರವ್ಯವು. ಹೀಗಿದು ಆರು ದ್ರವ್ಯಗಳ ಸಾಮಾನ್ಯಲಕ್ಷಣವಾಗಿರುತ್ತದೆ ಈ ದ್ರವ್ಯಗಳಲ್ಲಿ ಜೀವನ (ಜೀವದ್ರವ್ಯದ) ಹೊರತು ಉಳಿದ ಐದು ದ್ರವ್ಯಗಳು ಜಡ (ಅಚೇತನ)ರೂಪಗಳಾಗಿರುವುದರಿಂದ ವಿಶುದ್ಧಜ್ಞಾನದರ್ಶನಮಯನಾದ ಜೀವನಿಂದ ಸರ್ವಥಾ ಭಿನ್ನವಾದುವುಗಳಾಗಿವೆ ಅರ್ಥಾತ್ ಪರಪದಾರ್ಥಗಳಾಗಿರುತ್ತವೆ ಹೀಗೆಯೇ ದ್ರವ್ಯಭಾವಕರ್ಮಗಳೂ ತಜ್ಜನಿತಶರೀರಾದಿಸರ್ವಪರಿಗ್ರಹಗಳೂ ಶುದ್ಧಾತ್ಮನಿಂದ ಸರ್ವಥಾ ಭಿನ್ನವಾದುವುಗಳಾಗಿವೆ. ಇಲ್ಲಿ ಆತ್ಮಪದಾರ್ಥವೊಂದೇ ಉಪಾದೇಯವೂ ಪರಪದಾರ್ಥಗಳೆಲ್ಲವೂ ತ್ಯಾಜ್ಯಗಳೂ ಆಗಿರುತ್ತವೆಂಬುದು ತಾತ್ಪರ್ಯಾರ್ಥವಾಗಿದೆ

**ಜಇ ಣಿವಿಸದ್ಧು ವಿ ಕು ವಿ ಕರಇ, ಪರಮಪ್ಪಇ ಅಣುರಾಉ ।**
**ಅಗ್ಗಿಕಣೀ ಜಿಮ ಕಟ್ಠಗಿರೀ, ಡಹಇ ಅಸೇಸು ವಿ ಪಾಉ ॥ ೧೧೪ ॥**

"ಯದಿ ನಿಮಿಷಾರ್ಧಮಪಿ ಕೋಽಪಿ ಕರೋತಿ ಪರಮಾತ್ಮನಿ ಅನುರಾಗಮ್ ।
ಅಗ್ನಿಕಣಿಕಾ ಯಥಾ ಕಾಷ್ಠಗಿರಿಂ ದಹತಿ ಅಶೇಷಮಪಿ ಪಾಪಮ್ ॥ ೧೧೪ ॥"

**ಅನ್ವಯಾರ್ಥ:— ಕು ವಿ**— ಯಾವನಾದರೊಬ್ಬನು **ಣಿವಿಸದ್ಧು ವಿ**— ನಿಮಿಷಾರ್ಧವಾದರೂ **ಪರಮಪ್ಪಇ**— ಪರಮಾತ್ಮನಲ್ಲಿ **ಅಣುರಾಉ**— ಅನುರಾಗ(ಪ್ರೀತಿ)ವನ್ನು **ಕರಇ ಜಇ**— ಮಾಡುತ್ತಾನಾದರೆ (ಮಾಡಿದುದಾದರೆ) ಆತನು **ಅಗ್ಗಿಕಣೀ**— ಬೆಂಕಿಯ ಕಣ(ಕಿಡಿ)ವು **ಕಟ್ಠಗಿರೀ ಜಿಮ**— ಕಟ್ಟಿಗೆಯ ಪರ್ವತವನ್ನು ಹೇಗೋ (ಹೇಗೆ ಸುಡುತ್ತದೋ) ಹಾಗೆ **ಅಸೇಸು ವಿ ಪಾವು**— ಸಮಸ್ತಪಾಪವನ್ನೂ **ಡಹಇ**— ಸುಡುತ್ತಾನೆ **ಅರ್ಥಾತ್ ನಾಶಪಡಿಸುತ್ತಾನೆ.**

**ಭಾವಾರ್ಥ:**— ಗಾಳಿಯಿಂದ ಉದ್ದೀಪ್ತವಾದ ಸಣ್ಣದೊಂದು ಬೆಂಕಿಯ ಕಣ ವಾವರೂ ಮರ(ಕಟ್ಟಿಗೆ)ದ ದೊಡ್ಡ ರಾಶಿಯನ್ನೇ ಭಸ್ಮಗೊಳಿಸುವಂತೆ ಋದ್ಧಿಪ್ರಾಪ್ತಿಯ ಮದ, ರಸವಾದಪ್ರವೀಣತೆಯ ಮದ, ಮತ್ತು ಕವಿತ್ವ, ವಾದಪಟುತ್ವ, ಗಮಕತ್ವ (ವಾಚನಪಟುತ್ವ)ಹಾಗೂ ವಾಗ್ಮಿತ್ವ(ವ್ಯಾಖ್ಯಾನಪ್ರವೀಣತೆ)ಗಳೆಂಬ ನಾಲ್ಕು ವಿಧದ ಶಬ್ದಮದ ಇವೇ ಮೊದಲಾದ ಸಮಸ್ತ ಮದ(ಗರ್ವ)ರೂಪವಾದ ವಿಕಲ್ಪಗಳ ತ್ಯಾಗ ವೆಂಬ ಮಹಾವಾತ(ದೊಡ್ಡಗಾಳಿ)ದಿಂದ ಪ್ರಜ್ವಲಿಸಲ್ಪಟ್ಟ ನಿಜಶುದ್ಧಾತ್ಮಧ್ಯಾನವೆಂಬ ಅಗ್ನಿಕಣವು ಅಂತರ್ಮುಹೂರ್ತದಲ್ಲಿ ಚಿರಸಂಚಿತವಾವಕರ್ಮಗಳೆಂಬ ಕಟ್ಟಿಗೆಯ ರಾಶಿ ಯನ್ನು ಭಸ್ಮಗೊಳಿಸುತ್ತದೆ ಅರ್ಥಾತ್ ಭವಭವಗಳಲ್ಲಿ ಸಂಚಿತವಾದ ಕರ್ಮಸಮೂಹ ವನ್ನು ನಿಮಿಷಾರ್ಧದಲ್ಲಿ ನಾಶಗೊಳಿಸುತ್ತದೆ ಈ ಪ್ರಕಾರವಾದ ಶುದ್ಧಾತ್ಮಧ್ಯಾನದ ಸಾಮರ್ಥ್ಯವನ್ನರಿತು ಆ ಧ್ಯಾನವನ್ನೇ ನಿರಂತರ ಭಾವಿಸಬೇಕೆಂದು ಭಾವವು.

**ಮೆಲ್ಲಿವಿ ಸಯಲ ಅವಕ್ಖಡೀ, ಜಿಯ ಣಿಚ್ಚಿಂತಉ ಹೋಇ ।**
**ಚಿತ್ತು ಣಿವೇಸಹಿ ಪರಮಪಏ, ದೇಉ ಣಿರಂಜಣು ಜೋಇ ॥ ೧೧೫ ॥**

"ಮುಕ್ತ್ವಾ ಸಕಲಾಂ ಚಿಂತಾಂ ಜೀವ ನಿಶ್ಚಿಂತಃ ಭೂತ್ವಾ ।
ಚಿತ್ತಂ ನಿವೇಶಯ ಪರಮಪದೇ ದೇವಂ ನಿರಂಜನಂ ಪಶ್ಯ ॥ ೧೧೫ ॥"

**ಅನ್ವಯಾರ್ಥ:— ಜಿಯ**— ಎಲೈ ಜೀವನೇ! **ಸಯಲ ಅವಕ್ಖಡೀ**—ಸಕಲಚಿಂತೆ ಯನ್ನು (ಸಮಸ್ತ ಚಿಂತೆಗಳನ್ನು) **ಮೆಲ್ಲಿವಿ**— ಬಿಟ್ಟು **ಣಿಚ್ಚಿಂತಉ ಹೋಇ**— ನಿಶ್ಚಿಂತ ನಾಗಿ **ಚಿತ್ತು**–ಮನಸ್ಸನ್ನು **ಪರಮಪಏ ಣಿವೇಸಹಿ**— ಪರಮಪದ(ನಿಜಪರಮಾತ್ಮಪದ) ದಲ್ಲಿ ಇರಿಸು **ದೇಉ ಣಿರಂಜಣು ಜೋಇ**–ನಿರಂಜನದೇವನನ್ನು ನೋಡು.

**ಭಾವಾರ್ಥ:**— ಎಲೈ ಜೀವನೇ! ತಾನು ನೋಡಿದ, ಕೇಳಿದ ಹಾಗೂ ಅನುಭವಿ ಸಿದ ಭೋಗಗಳ ಆಕಾಂಕ್ಷಾರೂಪವಾದ ಅಪಧ್ಯಾನವೇ ಮೊದಲಾದ ಸಮಸ್ತ ಚಿಂತೆ ಗಳನ್ನು ತೊರೆದು ನಿಶ್ಚಿಂತನಾಗಿ ಚಿತ್ತವನ್ನು ಪರಮಾತ್ಮಸ್ವರೂಪದಲ್ಲಿ ಸ್ಥಿರಗೊಳಿಸು. ಅನಂತರ ಸಮಸ್ತಭಾವಕರ್ಮ-ದ್ರವ್ಯ-ಕರ್ಮ–ನೋಕರ್ಮರೂಪವಾದ ಅಂಜನ (ಕಲಂಕ)ದಿಂದ ಬಿಡಲ್ಪಟ್ಟವನೂ ಪರಮಾರಾಧ್ಯನೂ ಆದ ನಿಜಶುದ್ಧಾತ್ಮನನ್ನು ಧ್ಯಾನಿಸು. ದುರ್ಗತಿಗೆ ಕಾರಣವಾದ ಆರ್ತರೌದ್ರರೂಪ ಅಪಧ್ಯಾನವನ್ನು ಬಿಟ್ಟು ನಿಜಶುದ್ಧಾತ್ಮ ಧ್ಯಾನದಲ್ಲಿ ಆಸಕ್ತನಾಗಬೇಕೆಂದು ಭಾವಾರ್ಥವು

**ಜಂ ಸಿವದಂಸಣಿ ಪರಮುಸುಹು, ಪಾವಹಿ ಝಾಣು ಕರಂತು ।**
**ತಂ ಸುಹು ಭುವಣಿ ವಿ ಅತ್ಥಿ ಣವಿ, ಮೆಲ್ಲಿವಿ ದೇಉ ಅಣಂತು ॥ ೧೧೬ ॥**

"ಯತ್ ಶಿವದರ್ಶನೇ ಪರಮಸುಖಂ ಪ್ರಾಪ್ನೋಷಿ ಧ್ಯಾನಂ ಕುರ್ವನ್ ।
ತತ್ ಸುಖಂ ಭುವನೇऽಪಿ ಅಸ್ತಿ ನೈವ ಮುಕ್ತ್ವಾ ದೇವಂ ಅನಂತಮ್ ॥ ೧೧೬ ॥"

**ಅನ್ವಯಾರ್ಥ:**— ಎಲೈ ಶಿಷ್ಯನೇ! ನೀನು **ಝಾಣು ಕರಂತು**— ಧ್ಯಾನವನ್ನು ಮಾಡುವವನಾಗಿ **ಸಿವದಂಸಣಿ**— ನಿಜಶುದ್ಧಾತ್ಮನ ಅವಲೋಕನ(ದರ್ಶನ)ದಲ್ಲಿ **ಜಂ**

**ಪರಮಸುಹು**— ಯಾವ ಪರಮಸುಖವನ್ನು **ಪಾವಹಿ**-ಹೊಂದುವಿಯೋ **ತಂ ಸುಹು**- ಆ ಪರಮಸುಖವು **ದೇಉ ಅಣಂತು ಮೆಲ್ಲಿವಿ**— ಪರಮಾರಾಧ್ಯವಾದ ಪರಮಾತ್ಮ ದ್ರವ್ಯದ ಹೊರತು **ಭುವಣಿ ವಿ**— ಲೋಕದಲ್ಲಿಯೇ ಅರ್ಥಾತ್ ಮೂರುಲೋಕಗಳ ಲ್ಲಿಯೂ **ಅತ್ಥಿ ಣವಿ**— ನಿಶ್ಚಯವಾಗಿಯೂ ಇರುವುದಿಲ್ಲ

**ಭಾವಾರ್ಥ:**— ಇಲ್ಲಿ ವಿಶುದ್ಧಜ್ಞಾನಸ್ವಭಾವವುಳ್ಳ ನಿಜಶುದ್ಧಾತ್ಮನೇ ಶಿವನಾಗಿರು ತ್ತಾನೆಂದು ಈ ಗಾಥೆಯಲ್ಲಿರುವ "ಸಿವ" ಶಬ್ದದಿಂದ ತಿಳಿಯಬೇಕು ವೀತರಾಗನಿರ್ವಿ ಕಲ್ಪಸಮಾಧಿಯ ಮೂಲಕ ಅಂತಹ ಶಿವ(ನಿಜಶುದ್ಧಾತ್ಮ)ನ ದರ್ಶನ ಅರ್ಥಾತ್ ಅನು ಭವದಿಂದ ವೀತರಾಗಪರಮಾಹ್ಲಾದರೂಪವಾದ ಯಾವ ಪರಮಸುಖವು ಲಭಿಸು ವುದೋ ಅಂತಹ ಸುಖವು ಅನಂತವಾದ ಅರ್ಥಾತ್ ಅನಂತಗುಣರೂಪವಾದ ಪರ ಮಾತ್ಮಪದಾರ್ಥದ(ಪರಮಾತ್ಮನ)ಹೊರತು ಮೂರುಲೋಕಗಳಲ್ಲಿ ಎಲ್ಲಿಯೂ ಇರ ಲಾರದು. ಅತಏವ ಶಿವನೆಂದು ಹೇಳಲ್ಪಡುವ ನಿಜಪರಮಾತ್ಮನೇ ರಾಗದ್ವೇಷ ಮೋಹಾದಿಗಳಿಂದ ರಹಿತವಾದ ಜೀವರುಗಳಿಂದ ಧ್ಯಾನಿಸಲ್ಪಟ್ಟವನಾಗಿ ಅನಾಕುಲತ್ವ ಲಕ್ಷಣವುಳ್ಳುದೂ ಅತೀಂದ್ರಿಯವೂ ಆದ ಪರಮಸುಖವನ್ನು ಕೊಡುತ್ತಾನಲ್ಲದೆ ಸುಖ ವನ್ನು ಕೊಡುವ ಬೇರೊಬ್ಬ ಶಿವನೆಂಬ ವ್ಯಕ್ತಿಯು ಇರುವುದಿಲ್ಲವೆಂದು ಭಾವವು

**ಜಂ ಮುಣಿ ಲಹಇ ಅಣಂತಸುಹು, ಣಿಯ-ಅಪ್ಪಾ ಝಾಯಂತು ।**
**ತಂ ಸುಹು ಇಂದುವಿಣವಿ ಲಹಇ, ದೇವಿಹಿಂ ಕೋಡಿ ರಮಂತು ॥ ೧೧೭ ॥**

"ಯತ್ ಮುನಿಃ ಲಭತೇ ಅನಂತಸುಖಂ ನಿಜಾತ್ಮಾನಂ ಧ್ಯಾಯನ್ ।
ತತ್ ಸುಖಂ ಇಂದ್ರೋಽಪಿ ನೈವ ಲಭತೇ ದೇವೀನಾಂ ಕೋಟಿಂ
ರಮ್ಯಮಾಣಃ ॥ ೧೧೭ ॥"

**ಅನ್ವಯಾರ್ಥ:**— **ಮುಣಿ**— ಮುನಿ(ಪರಮತಪಸ್ವಿ)ಯು **ಣಿಯ-ಅಪ್ಪಾ ಝಾಯಂತು**— ನಿಜಾತ್ಮನನ್ನು ಧ್ಯಾನಿಸುವವನಾಗಿ **ಜಂ ಅಣಂತಸುಹು**— ಯಾವ ಅನಂತ ಸುಖವನ್ನು **ಲಹಇ**— ಪಡೆಯುತ್ತಾನೆಯೋ **ತಂ ಸುಹು**-ಆಸುಖವನ್ನು **ಇಂದು ವಿ**- ಇಂದ್ರನೂ ಸಹ **ದೇವಿಹಿಂ ಕೋಡಿ ರಮಂತು**— ಕೋಟಿದೇವಿಯರೊಡನೆ ರಮಿಸುವ ವನಾಗಿ **ಣವಿ ಲಹಇ**— ನಿಶ್ಚಯವಾಗಿಯೂ ಪಡೆಯುವುದಿಲ್ಲ.

**ಭಾವಾರ್ಥ:**— ಬಾಹ್ಯಾಭ್ಯಂತರಪರಿಗ್ರಹರಹಿತನೂ ಸ್ವಶುದ್ಧಾತ್ಮತತ್ತ್ವಭಾವನೆ ಯಿಂದುಂಟಾದ ವೀತರಾಗಪರಮಾನಂದದಿಂದ ಕೂಡಿರುವವನೂ ಆದ ಮುನಿಯು ಯಾವ ಪರಮಸುಖವನ್ನು ಅನುಭವಿಸುತ್ತಾನೆಯೋ ಅಂತಹ ಸುಖವನ್ನು ದೇವೇಂ ದ್ರಾದಿಗಳೂ ಪಡೆಯಲಾರರೆಂದು ತಾತ್ಪರ್ಯವು. ಗ್ರಂಥಾಂತರದಲ್ಲಿಯೂ— **"ದಹ್ಯ ಮಾನೇ ಜಗತ್ಯಸ್ಮಿನ್ಮಹತಾ ಮೋಹವಹ್ನಿನಾ । ವಿಮುಕ್ತವಿಷಯಾಸಂಗಾಃ ಸುಖಾಯಂತೇ ತಪೋಧನಾಃ ॥"** ಅರ್ಥಾತ್ "ಮಹತ್ತರವಾದ ಮೋಹವೆಂಬ ಅಗ್ನಿಯಿಂದ ಸುಡಲ್ಪಡುತ್ತಿರುವ ಈ ಜಗತ್ತಿನಲ್ಲಿ ಸಮಸ್ತ ವಿಷಯಭೋಗಗಳ ಸಂಬಂಧ

ವನ್ನು ತೊರೆದವರಾದ ತಪಸ್ವಿ(ಮುನಿ)ಗಳೇ ವಸ್ತುತಃ ಸುಖಿಗಳಾಗಿರುವರು" ಅಂದರೆ ಪರಮತಪಸ್ವಿಗಳ ಹೊರತು ಇತರ ಎಲ್ಲಾ ಜೀವರು ದುಃಖಿಗಳಾಗಿರುವರು ಎಂದು ಹೇಳಲ್ಪಟ್ಟಿದೆ.

**ಅಪ್ಪಾದಂಸಣಿ ಜಿಣವರಹಂ, ಜಂ ಸುಹು ಹೋಇ ಅಣಂತು ।**
**ತಂ ಸುಹು ಲಹಇ ವಿರಾಉ ಜಿಉ, ಜಾಣಂತಉ ಸಿಉ ಸಂತು ॥ ೧೧೮ ॥**

"ಆತ್ಮದರ್ಶನೇ ಜಿನವರಾಣಾಂ ಯತ್ ಸುಖಂ ಭವತಿ ಅನಂತಮ್ ।
ತತ್ ಸುಖಂ ಲಭತೇ ವಿರಾಗಃ ಜೀವಃ ಜಾನನ್ ಶಿವಂ ಶಾಂತಮ್ ॥ ೧೧೮ ॥"

**ಅನ್ವಯಾರ್ಥ:— ಅಪ್ಪಾದಂಸಣಿ—** ನಿಜಶುದ್ಧಾತ್ಮನ ದರ್ಶನದಲ್ಲಿ (ಆತ್ಮಾನುಭವದಲ್ಲಿ) **ಜಂ ಸುಹು ಅಣಂತು—** ಯಾವ ಅನಂತಸುಖವು **ಜಿಣವರಹಂ ಹೋಇ—** ಜಿನೇಶ್ವರರಿಗೆ (ಮುನಿ ಅವಸ್ಥೆಯಲ್ಲಿ) ಉಂಟಾಗುತ್ತದೋ **ತಂ ಸುಹು—** ಆ ಸುಖವನ್ನು **ವಿರಾಉ ಜಿಉ—** ವೀತರಾಗಭಾವನಾಪರಿಣತನಾದ ಜೀವನು **ಸಿಉ ಸಂತು—** ಶಾಂತವಾದ ಅರ್ಥಾತ್ ರಾಗಾದಿವಿಭಾವರಹಿತವಾದ 'ಶಿವ' ಎಂದು ಹೇಳಲ್ಪಡುವ ನಿಜಶುದ್ಧಾತ್ಮಸ್ವರೂಪವನ್ನು **ಜಾಣಂತಉ—** ತಿಳಿಯುವವನಾಗಿ **ಲಹಇ—** ಪಡೆಯುತ್ತಾನೆ.

**ಭಾವಾರ್ಥ:—** ತೀರ್ಥಂಕರಪರಮದೇವರು ದೀಕ್ಷಾಕಾಲದಲ್ಲಿ ಸ್ವಶುದ್ಧಾತ್ಮಾನುಭವದಿಂದ ಯಾವ ನಿರ್ವಿಕಲ್ಪಸುಖವನ್ನು ಪಡೆಯುತ್ತಾರೋ ಅದೇ ಸುಖವನ್ನು ವೀತರಾಗನಿರ್ವಿಕಲ್ಪಸಮಾಧಿಮಗ್ನನಾದ ಜೀವ(ವಿರಕ್ತ-ಮುನಿ)ನು ಪಡೆಯುತ್ತಾನೆಂದು ಭಾವವು.

**ಜೋಇಯಣಿಯ ಮಣಿ ಣಿಮ್ಮಲಏ, ಪರ ದೀಸಇ ಸಿಉ ಸಂತು ।**
**ಅಂಬರಿ ಣಿಮ್ಮಲಿ ಘಣರಹಿಏ, ಭಾಣು ಜಿ ಜೇಮ ಫುರಂತು ॥ ೧೧೯ ॥**

"ಯೋಗಿನ್ ನಿಜಮನಸಿ ನಿರ್ಮಲೇ ಪರಂ ದೃಶ್ಯತೇ ಶಿವಃ ಶಾಂತಃ
ಅಂಬರೇ ನಿರ್ಮಲೇ ಘನರಹಿತೇ ಭಾನುಃ ಇವ ಯಥಾ ಸ್ಫುರನ್ ॥ ೧೧೯ ॥"

**ಅನ್ವಯಾರ್ಥ:— ಜೋಇಯ—** ಎಲೈ ಯೋಗಿಯೇ! **ಘಣರಹಿಏ ಣಿಮ್ಮಲಿ—** ಮೇಘರಹಿತವೂ ನಿರ್ಮಲವೂ ಆದ **ಅಂಬರಿ—** ಆಕಾಶದಲ್ಲಿ **ಫುರಂತು—** ಪ್ರಕಾಶಿಸುತ್ತಿರುವ **ಭಾಣು ಜಿ ಜೇಮ—** ಸೂರ್ಯನಂತೆ ಅಥವಾ ಸೂರ್ಯನು ಹೇಗೆ ಕಾಣಲ್ಪಡುತ್ತಾನೆಯೋ ಹಾಗೆಯೇ **ಣಿಮ್ಮಲಏ ಣಿಯಮಣಿ—** ನಿರ್ಮಲವಾದ ತನ್ನ ಮನಸ್ಸಿನಲ್ಲಿ **ಸಿಉ ಸಂತು—** ರಾಗಾದಿರಹಿತನಾದ ನಿಜಪರಮಾತ್ಮನು **ಪರ ದೀಸಇ—** ನಿಯಮದಿಂದ ಕಾಣಲ್ಪಡುತ್ತಾನೆ

**ಭಾವಾರ್ಥ:—** ಮೇಘಸಮೂಹವು ದೂರವಾಗುತ್ತಿರಲು ನಿರ್ಮಲಾಕಾಶದಲ್ಲಿ ದಿನಕರನು ಪ್ರಕಾಶಿಸುವಂತೆ ಕಾಮಕ್ರೋಧಾದಿವಿಕಲ್ಪರೂಪವಾದ ಮೇಘಸಮೂಹವು ನಾಶವಾಗುತ್ತಿರಲು ಜೀವನ ನಿರ್ಮಲಮನೋರೂಪವಾದ ಆಕಾಶದಲ್ಲಿ ಕೇವಲಜ್ಞಾನಾದಿ

ಅನಂತಗುಣರೂಪವಾದ ಕಿರಣಗಳಿಂದ ಯುಕ್ತನಾಗಿರುವ ನಿಜಶುದ್ಧಾತ್ಮನೆಂಬ ದಿನಕರನು ಪ್ರಕಾಶಿಸುತ್ತಾನೆಂದು ತಾತ್ಪರ್ಯಾರ್ಥವು

**ರಾಏಂ ರಂಗಿಏ ಹಿಯುವಡಏ, ದೇಉ ಣ ದೀಸಇ ಸಂತು ।**
**ದಪ್ಪಣಿ ಮಇಲಏ ಬಿಂಬು ಜಿಮ, ಏಹಉ ಜಾಣಿ ಣಿಭಂತು ॥ ೧೨೦ ॥**

"ರಾಗೇಣ ರಂಜಿತೇ ಹೃದಯೇ ದೇವಃ ನ ದೃಶ್ಯತೇ ಶಾಂತಃ ।
ದರ್ಪಣೇ ಮಲಿನೇ ಬಿಂಬಂ ಯಥಾ ಏತತ್ ಜಾನೀಹಿ ನಿರ್ಭ್ರಾಂತಮ್ ॥೧೨೦॥"

**ಅನ್ವಯಾರ್ಥ:— ರಾಏಂ ರಂಗಿಏ**—ರಾಗದಿಂದ ರಂಜಿತವಾದ (ರಾಗಾದಿಗಳಿಂದ ಮಲಿನವಾದ) **ಹಿಯುವಡಏ**— ಹೃದಯದಲ್ಲಿ **ಮಇಲಏ ದಪ್ಪಣಿ**— ಮಲಿನವಾದ ದರ್ಪಣದಲ್ಲಿ **ಬಿಂಬು ಜಿಮು**— ಪ್ರತಿಬಿಂಬವು ಹೇಗೋ (ಹೇಗೆ ಕಾಣಲ್ಪಡುವುದಿಲ್ಲವೋ) ಹಾಗೆಯೇ **ದೇಉ ಸಂತು**— ರಾಗಾದಿರಹಿತನಾದ ದೇವ(ಆತ್ಮ)ನು **ಣ ದೀಸಇ**— ಕಾಣಲ್ಪಡುವುದಿಲ್ಲ **ಏಹಉ ಜಾಣಿ ಣಿಭಂತು**— ಇದನ್ನು ಭ್ರಾಂತಿ (ಸಂದೇಹ)ಯಿಲ್ಲದೆ ತಿಳಿ

**ಭಾವಾರ್ಥ:**— ಸಹಸ್ರಕಿರಣಗಳಿಂದ ಪ್ರಕಾಶಮಾನನಾದ ಸೂರ್ಯನು ಆಕಾಶಮಧ್ಯದಲ್ಲಿರುತ್ತಿದ್ದರೂ ಆಕಾಶವು ಮೇಘಾಚ್ಛಾದಿತವಾಗಿರುವಾಗ ಆ ಸೂರ್ಯನು ಕಾಣಲ್ಪಡದಿರುವಂತೆ ಕೇವಲಜ್ಞಾನರೂಪವಾದ ಕಿರಣಗಳಿಂದ ಲೋಕಾಲೋಕಪ್ರಕಾಶಕನಾದ ನಿಜಶುದ್ಧಾತ್ಮನು ದೇಹಮಧ್ಯದಲ್ಲಿ ಶಕ್ತಿರೂಪದಿಂದಿರುತ್ತಿದ್ದರೂ ಕಾಮಕ್ರೋಧಾದಿವಿಕಲ್ಪಜಾಲದಿಂದಾವರಿಸಲ್ಪಟ್ಟಿರುವ ಹೃದಯದಲ್ಲಿ ಆತನು ಗೋಚರಿಸುವುದಿಲ್ಲವೆಂದು ಭಾವಾರ್ಥವು

**ಜಸು ಹರಿಣಚ್ಛೀ ಹಿಯುವಡಏ, ತಸು ಣವಿ ಬಂಭು ವಿಯಾರಿ ।**
**ಏಕ್ಕಹಿಂ ಕೇಮ ಸಮಂತಿ ವಢ, ಬೇ ಖಂಡಾ ಪಡಿಯಾರಿ ॥ ೧೨೧ ॥**

"ಯಸ್ಯ ಹರಿಣಾಕ್ಷೀ ಹೃದಯೇ ತಸ್ಯ ನೈವ ಬ್ರಹ್ಮ ವಿಚಾರಯ ।
ಏಕಸ್ಮಿನ್ ಕಥಂ ಸಮಾಯಾತೌ ವತ್ಸ ದ್ವೌ ಖಡ್ಗೌ ಪ್ರತ್ಯಾಕಾರೇ(?) ॥ ೧೨೧ ॥"

**ಅನ್ವಯಾರ್ಥ:— ವಢ**— ಎಲೈ ಶಿಷ್ಯನೇ! **ಜಸು ಹಿಯುವಡಏ**— ಯಾವ ಮನುಷ್ಯನ ಹೃದಯದಲ್ಲಿ **ಹರಿಣಚ್ಛೀ**— ಜಿಂಕೆಯಂತೆ ಚಂಚಲವಾದ ಕಣ್ಣುಗಳುಳ್ಳ ಸ್ತ್ರೀಯು (**ವಸಇ**— ವಾಸಮಾಡಿಕೊಂಡಿರುವಳೊ) **ತಸು**— ಆತನ ಹೃದಯದಲ್ಲಿ **ಬಂಭು ಣವಿ**— ಬ್ರಹ್ಮ(ನಿಜಶುದ್ಧಾತ್ಮ)ನು ಇರುವುದಿಲ್ಲ. ಏಕೆಂದರೆ **ಏಕ್ಕಹಿಂ ಪಡಿಯಾರಿ**— ಒಂದು ಕೋಶ(ಒರೆ)ದಲ್ಲಿ **ಬೇ ಖಂಡಾ**— ಎರಡು ಖಡ್ಗಗಳು **ಕೇಮ ಸಮಂತಿ**— ಹೇಗೆ ಹಿಡಿಯು(ಸೇರಿಕೊಳ್ಳು)ವುವು? ಅರ್ಥಾತ್ ಸೇರಲಾರವು. ಹೀಗೆಂದು **ವಿಯಾರಿ**— ಆಲೋಚಿಸು.

**ಭಾವಾರ್ಥ:**— ವೀತರಾಗನಿರ್ವಿಕಲ್ಪಪರಮಸಮಾಧಿಯಿಂದುಂಟಾಗುವ ಅನಾಕುಲತ್ವಲಕ್ಷಣವುಳ್ಳ ಪರಮಾನಂದಸುಖಾಮೃತಕ್ಕೆ ಪ್ರತಿಬಂಧಕಗಳೂ ಆಕುಲತೆಯನ್ನುಂಟು

ಮಾಡುವುವುಗಳೂ ಆದ, ಸ್ತ್ರೀರೂಪವನ್ನು ನೋಡುವಿಕೆ, ಸ್ತ್ರೀಚಿಂತನೆ ಮೊದಲಾದುವು ಗಳಿಂದುಂಟಾದ ಹಾವಭಾವವಿಲಾಸವಿಭ್ರಮಾದಿ ವಿಕಲ್ಪಜಾಲಗಳಿಂದ ಪರಿಪೂರ್ಣವಾದ ಹೃದಯದಲ್ಲಿ (ಮನಸ್ಸಿನಲ್ಲಿ) ಒಂದುಒರೆಯಲ್ಲಿ ಎರಡು ಖಡ್ಗಗಳು ಸೇರಲವಕಾಶವಿಲ್ಲ ದಿರುವಂತೆ ಪರಮಬ್ರಹ್ಮನೆಂದು ಹೇಳಲ್ಪಡುವ ನಿಜಶುದ್ಧಾತ್ಮನು ಸೇರಿರಲವಕಾಶವಿರು ವುದಿಲ್ಲ ಅರ್ಥಾತ್ ಒಂದೇ ಮನಸ್ಸಿನಲ್ಲಿ ವಿಷಯವಿಕಾರವೂ ಬ್ರಹ್ಮವಿಚಾರವೂ ಒಟ್ಟಿಗಿರ ಲಾರದು ವಿಷಯವಿಕಾರ, ಬ್ರಹ್ಮವಿಚಾರ ಇವೆರಡು ಪರಸ್ಪರ ವಿರುದ್ಧಗಳಾಗಿರುವುದ ರಿಂದ ವಿಷಯವಿಕಾರವಿರುವಲ್ಲಿ ಬ್ರಹ್ಮವಿಚಾರವೂ ಬ್ರಹ್ಮವಿಚಾರವಿರುವಲ್ಲಿ ವಿಷಯ ವಿಕಾರವೂ ಇರಲಾರದೆಂದಭಿಪ್ರಾಯವು ಹಾವಭಾವಾದಿಗಳ ಲಕ್ಷಣವು ಈ ರೀತಿಯಾಗಿ ಹೇಳಲ್ಪಟ್ಟಿದೆ —"**ಹಾವೋ ಮುಖವಿಕಾರಃ ಸ್ಯಾದ್ಭಾವಶ್ಚಿತ್ತೋತ್ಥ ಉಚ್ಯತೇ । ವಿಲಾಸೋ ನೇತ್ರಜೋ ಜ್ಞೇಯೋ ವಿಭ್ರಮೋ ಭ್ರೂಯುಗಾಂತಯೋಃ ॥**" "ಅರ್ಥಾತ್ ಮುಖದ ವಿಕಾರಕ್ಕೆ ಹಾವವೆಂದೂ ಮನಸ್ಸಿನಲ್ಲುಂಟಾಗುವ ವಿಕಾರಕ್ಕೆ ಭಾವವೆಂದೂ, ಕಣ್ಣಿನ(ನೋಟದ) ವಿಕಾರಕ್ಕೆ ವಿಲಾಸವೆಂದೂ, ಎರಡು ಹುಬ್ಬುಗಳ ವಿಕಾರಕ್ಕ ವಿಭ್ರಮವಂದೂ ಹೆಸರು," ಇವುಗಳೆಲ್ಲವೂ ಶೃಂಗಾರದಿಂದುಂಟಾಗುವ ವಿಕಾರ ಅಥವಾ ಚೇಷ್ಟೆಗಳಾಗಿರುತ್ತವೆ.

**ಣಿಯಮಣಿ ಣಿಮ್ಮಲಿ ಣಾಣಿಯಹಂ, ಣಿವಸಇ ದೇಉ ಅಣಾಯಿ ।**
**ಹಂಸಾ ಸರವರಿ ಲೀಣು ಜಿಮ, ಮಹು ಏಹಉ ಪಡಿಹಾಇ ॥ ೧೨೨ ॥**

"ನಿಜಮನಸಿ ನಿರ್ಮಲೇ ಜ್ಞಾನಿನಾಂ ನಿವಸತಿ ದೇವಃ ಅನಾದಿಃ ।
ಹಂಸಃ ಸರೋವರೇ ಲೀನಃ ಯಥಾ ಮಮ ಈದೃಶಃ ಪ್ರತಿಭಾತಿ ॥ ೧೨೨ ॥"

**ಅನ್ವಯಾರ್ಥ:**— **ಣಾಣಿಯಹಂ**— ಜ್ಞಾನಿಗಳ **ಣಿಮ್ಮಲಿ ಣಿಯಮಣಿ**— ನಿರ್ಮಲ(ರಾಗಾದಿಮಲರಹಿತ)ವಾದ ತಮ್ಮ ಮನಸ್ಸಿನಲ್ಲಿ **ದೇಉ ಅಣಾಇ**— ಆದಿರಹಿ ತನೂ ಪರಮಾರಾಧ್ಯನೂ ಆದ ಶುದ್ಧಾತ್ಮನು **ಸರವರಿ ಲೀಣು**— ಸರೋವರ(ಮಾನಸ ಸರೋವರ)ದಲ್ಲಿ ಲೀನವಾದ **ಹಂಸಾ ಜಿಮ**— ಹಂಸವು ಹೇಗೋ ಹಾಗೆ **ಣಿವಸಇ**— ವಾಸಮಾಡಿಕೊಂಡು ಇರುತ್ತಾನೆ **ಮಹು ಏಹಉ ಪಡಿಹಾಇ**— ಈ ಪ್ರಕಾರವಾಗಿ ನನಗೆ ಕಾಣುತ್ತದೆ. ಅಥವಾ "**ಏಹಉ**" ಎಂಬ ವಿಶೇಷಣದಿಂದ "ಈ ರೀತಿಯಾಗಿರುವ ಪರಮಾತ್ಮನು ನನಗೆ ಕಾಣುತ್ತಾನೆ" ಎಂದರ್ಥವು.

**ಭಾವಾರ್ಥ:**— ಮೊದಲಿನ ಸೂತ್ರದಲ್ಲಿ ಹೇಳಿರುವಂತೆ ಮನಸ್ಸಿಗೆ ಆಕುಲತೆ ಯನ್ನುಂಟುಮಾಡುವ ಸ್ತ್ರೀರೂಪಾವಲೋಕನ, ಸೇವನ, ಚಿಂತನಾದಿಗಳಿಂದುಂಟಾದ ರಾಗಾದಿಕಲ್ಲೋಲಮಾಲೆ(ತೆರೆಮಾಲೆ)ಗಳಿಂದ ರಹಿತವೂ ನಿಜಶುದ್ಧಾತ್ಮದ್ರವ್ಯದ ಸಮ್ಯಕ್ ಶ್ರದ್ಧಾನ ಮತ್ತು ಸ್ವಾಭಾವಿಕಜ್ಞಾನದಿಂದುಂಟಾದ ವೀತರಾಗಪರಮಸುಖಾಮೃತರಸ ರೂಪವಾದ ನಿರ್ಮಲಜಲದಿಂದ ಪೂರ್ಣವೂ (ತುಂಬಿದುದೂ) ಆದ ಜ್ಞಾನಿಗಳ ಮನ ಸ್ಸೆಂಬ ಮಾನಸಸರೋವರದಲ್ಲಿ ಹಂಸಪಕ್ಷಿಯಂತೆ ಪರಮಾತ್ಮನು ಲೀನನಾಗಿರುತ್ತಾನೆ.

ಹೀಗೆಂದು ಶ್ರೀ ಯೋಗೀಂದುದೇವರ ಅಭಿಪ್ರಾಯವಾಗಿದೆ ಎಂದು ಭಾವವು ಇಲ್ಲಿ ನಿರ್ಮಲಗುಣದ ಸಾದೃಶ್ಯದಿಂದ ಹಂಸದ ಉಪಮೆಯು ಕೂಡಲ್ಪಟ್ಟಿದೆ ಎಂದು ತಿಳಿಯಬೇಕು

**ದೇಉ ಣ ದೇಉಲೇ ಣವಿ ಸಿಲಏ, ಣವಿ ಲಿಪ್ಪಇ ಣವಿ ಚಿತ್ತಿ ।**
**ಅಖಉ ಣಿರಂಜಣು ಣಾಣಮಉ, ಸಿಉ ಸಂಠಿಉ ಸಮಚಿತ್ತಿ ॥ ೧೨೩ ॥**

ದೇವಃ ನ ದೇವಕುಲೇ ನೈವ ಶಿಲಾಯಾಂ ನೈವ ಲೇಪ್ಯೇ ನೈವ ಚಿತ್ರೇ ।
ಅಕ್ಷಯಃ ನಿರಂಜನಃ ಜ್ಞಾನಮಯಃ ಶಿವಃ ಸಂಸ್ಥಿತಃ ಸಮಚಿತ್ತೇ ॥ ೧೨೩ ॥

**ಅನ್ವಯಾರ್ಥ:— ದೇಉ**– ಆತ್ಮನೆಂಬ ದೇವ(ಪರಮಾರಾಧ್ಯ)ನು **ಣ ದೇಉಲೇ**– ದೇವಕುಲ(ದೇವಾಲಯ)ದಲ್ಲಿರುವುದಿಲ್ಲ **ಣವಿ ಸಿಲಏ**— ಶಿಲೆಯ ಪ್ರತಿಮೆಯಲ್ಲಿರುವುದಿಲ್ಲ **ಣವಿ ಲಿಪ್ಪಇ**— ಲೇಪ್ಯ(ಮಣ್ಣು ಮೊದಲಾದುವುಗಳನ್ನು ಲೇಪಿಸಿಮಾಡಿದ) ಪ್ರತಿಮೆಯಲ್ಲಿರುವುದಿಲ್ಲ **ಣವಿ ಚಿತ್ತಿ**— ಚಿತ್ರದಲ್ಲಿ ಅಂಕಿತವಾದ ಮೂರ್ತಿಯಲ್ಲಿಯೂ ಇರುವುದಿಲ್ಲ **ಅಖಉ**— ಅಕ್ಷಯ(ನಾಶರಹಿತ)ನೂ **ಣಿರಂಜಣು**— ಕರ್ಮಾಂಜನರಹಿತನೂ **ಣಾಣಮಉ**— ಕೇವಲಜ್ಞಾನಮಯನೂ ಆದ **ಸಿಉ**— ಶಿವನೆಂದು ಹೇಳಲ್ಪಡುವ ನಿಜಪರಮಾತ್ಮ ದೇವನು **ಸಂಠಿಉ ಸಮಚಿತ್ತಿ**— ಸಮಭಾವಪರಿಣತವಾದ ಮನಸ್ಸಿನಲ್ಲಿ ಇರುತ್ತಾನೆ.

**ಭಾವಾರ್ಥ:**— ವ್ಯವಹಾರನಯದಿಂದ ಧರ್ಮಪ್ರವೃತ್ತಿಗಾಗಿ ಸ್ಥಾಪನಾರೂಪದಿಂದ ಪೂರ್ವೋಕ್ತಲಕ್ಷಣವುಳ್ಳದೇವನು (ಅರಹಂತದೇವರು) ದೇವಾಲಯಾದಿಗಳಲ್ಲಿರುತ್ತಾನೆ. ಧಾತುಪಾಷಾಣಾದಿ ಪ್ರತಿಮೆಗಳಿಗೆ ದೇವರೆನ್ನುತ್ತಾರೆ ಆದರೂ ನಿಶ್ಚಯನಯದಿಂದ ಶತ್ರು-ಮಿತ್ರ, ಸುಖ-ದುಃಖ, ಜೀವಿತ-ಮರಣ, ಇವೇ ಮೊದಲಾದುವುಗಳಲ್ಲಿ ಸಮತಾರೂಪವೂ ವೀತರಾಗಸಹಜಾನಂದೈಕರೂಪಪರಮಾತ್ಮತತ್ತ್ವದ ಸಮ್ಯಕ್ ಶ್ರದ್ಧಾನಜ್ಞಾನಾನುಭೂತಿರೂಪವಾದ ಅಭೇದರತ್ನತ್ರಯದಲ್ಲಿ ಲೀನವೂ ಆದ ಜ್ಞಾನಿಗಳ ಸಮಚಿತ್ತದಲ್ಲಿ ಪರಮಾತ್ಮದೇವನಿರುತ್ತಾನೆಂದು ಭಾವವು ಸಮಚಿತ್ತಪರಿಣತರಾದ ಮುನಿಗಳ ಲಕ್ಷಣವು ಗ್ರಂಥಾಂತರದಲ್ಲಿ ಹೀಗೆ ಹೇಳಲ್ಪಟ್ಟಿದೆ —**"ಸಮಸತ್ತುಬಂಧುವಗ್ಗೋ ಸಮಸುಹದುಕ್ಖೋ ಪಸಂಸಣಿಂದಸಮೋ । ಸಮಲೋಹಕಂಚಣೋವಿ ಯ ಜೀವಿಯಮರಣೇ ಸಮೋ ಸಮಣೋ ॥"** ಇದರ ಅಭಿಪ್ರಾಯವೇನೆಂದರೆ—"ಶ್ರಮಣ (ಮುನಿ)ನು ಶತ್ರುಗಳಲ್ಲಿಯೂ ಬಂಧುಸಮೂಹದಲ್ಲಿಯೂ, ಸುಖದಲ್ಲಿಯೂ, ದುಃಖದಲ್ಲಿಯೂ, ಪ್ರಶಂಸೆಯಲ್ಲಿಯೂ ನಿಂದೆಯಲ್ಲಿಯೂ, ಲೋಹ(ಕಬ್ಬಿಣ)ದಲ್ಲಿಯೂ ಸುವರ್ಣದಲ್ಲಿಯೂ. ಜೀವಿತದಲ್ಲಿಯೂ ಮರಣದಲ್ಲಿಯೂ ಸಮತಾಭಾವ(ಸಮಚಿತ್ತ)ವುಳ್ಳವನಾಗಿರುತ್ತಾನೆ" ಅರ್ಥಾತ್ ಹೀಗೆ ಶತ್ರುಮಿತ್ರಾದಿಗಳಲ್ಲಿ ಸಮತಾಭಾವವುಳ್ಳವನೇ ಯಥಾರ್ಥಮುನಿಯಾಗಿರುತ್ತಾನೆಂದು ಭಾವವು.

ಹೀಗೆ ಮೂವತ್ತೊಂದು ಸೂತ್ರಗಳಿಂದ ಚೂಲಿಕಾಸ್ಥಲವು ಹೇಳಲ್ಪಟ್ಟಿತು ಅರ್ಥಾತ್ ಪ್ರಥಮಮಹಾಧಿಕಾರದ ಕೊನೆಯಭಾಗವು ಪೂರ್ತಿಗೊಳಿಸಲ್ಪಟ್ಟಿತು. ಮುಂದೆ ಎರಡು ಪ್ರಕ್ಷೇಪಕ-ದೋಹಕಗಳನ್ನು ಹೇಳುತ್ತಾರೆ—

**ಮಣು ಮಿಲಿಯಉ ಪರಮೇಸರಹಂ, ಪರಮೇಸರು ವಿ ಮಣಸ್ಸ ।**
**ಬೀಹಿ ವಿ ಸಮರಸಿಹೂವಾಹಂ, ಪುಜ್ಜ ಚಡಾವಉಂ ಕಸ್ಸ ॥ ೧೨೩*೨*॥**

"ಮನಃ ಮಿಲಿತಂ ಪರಮೇಶ್ವರಸ್ಯ ಪರಮೇಶ್ವರಃ ಅಪಿ ಮನಸಃ
ದ್ವಯೋರಪಿ ಸಮರಸೀಭೂತಯೋಃ ಪೂಜಾಂ ಸಮಾರೋಪಯಾಮಿ ಕಸ್ಯ ॥"

**ಅನ್ವಯಾರ್ಥ:— ಮಣು ಪರಮೇಸರಹಂ ಮಿಲಿಯಉ**— ಮನಸ್ಸು ಪರಮೇಶ್ವರನ (ಶುದ್ಧಾತ್ಮನ) ಸಂಬಂಧದಲ್ಲಿ (ಪರಮೇಶ್ವರನಲ್ಲಿ) ಸೇರಿತು ಅರ್ಥಾತ್ ಐಕ್ಯವಾಯಿತು. **ಪರಮೇಸರು ವಿ ಮಣಸ್ಸ**— ಪರಮೇಶ್ವರನೂ ಮನಸ್ಸಿನೊಡನೆ ಐಕ್ಯನಾದನು ಹೀಗೆ **ಸಮರಸಿಹೂವಾಹಂ**— ಸಮರಸೀಭೂತ (ಪರಸ್ಪರ ಏಕರೂಪ) ರಾದ **ಬೀಹಿ ವಿ**— ಇವರಿಬ್ಬರಲ್ಲಿ ಅರ್ಥಾತ್ ಪರಮೇಶ್ವರ ಮತ್ತು ಮನಸ್ಸು ಇವೆರಡರಲ್ಲಿ ಅಥವಾ, **ಬೀಹಿ ವಿ ಸಮರಸಿ ಹೂವಾಹಂ**— ಪರಮೇಶ್ವರಮನಸ್ಸುಗಳೆರಡೂ ಪರಸ್ಪರ ಏಕರೂಪವಾಗಿರುತ್ತಿರಲು **ಕಸ್ಸ**-ಯಾವನ (ಯಾವನಿಗೆ) **ಪುಜ್ಜ ಚಡಾವಉ**- ಪೂಜೆಯನ್ನು ಮಾಡುವೆನು? ಅರ್ಥಾತ್ ಯಾರನ್ನು ಪೂಜಿಸಲಿ? ನಿಶ್ಚಯನಯದಿಂದ ಯಾರನ್ನೂ ಪೂಜಿಸಬೇಕಾದುದಿಲ್ಲವೆಂದರ್ಥವು.

**ಭಾವಾರ್ಥ:**— ವ್ಯವಹಾರನಯದಿಂದ ಗೃಹಸ್ಥಾವಸ್ಥೆಯಲ್ಲಿ ವಿಷಯಕಷಾಯಾದಿಗಳಲ್ಲಿ (ದುರ್ಧ್ಯಾನದಲ್ಲಿ) ಪ್ರವರ್ತಿಸುವ ಮನಸ್ಸನ್ನು ತಡೆಯುವುದಕ್ಕಾಗಿಯೂ ಧರ್ಮಾಭಿವೃದ್ಧಿಗಾಗಿಯೂ ಭಗವಂತನ ಪೂಜೆ, ಅಭಿಷೇಕ ಮತ್ತು ದಾನಾದಿಕ್ರಿಯೆಗಳು ಮಾಡಲ್ಪಡುತ್ತವೆ ಆದರೆ ವೀತರಾಗನಿರ್ವಿಕಲ್ಪಸಮಾಧಿಯಲ್ಲಿಲೀನರಾದ ಪರಮಯೋಗಿಗಳಿಗೆ ಆ ಸಮಯದಲ್ಲಿ ಬಾಹ್ಯವ್ಯಾಪಾರವಿಲ್ಲದಿರುವುದರಿಂದ ದ್ರವ್ಯಪೂಜೆಯನ್ನು ಮಾಡಬೇಕಾದ ಪ್ರಸಂಗವೇ ಬರುವುದಿಲ್ಲ ಅರ್ಥಾತ್ ಅವರು ಭಾವಪೂಜೆಯಲ್ಲಿಯೇ ತನ್ಮಯರಾಗಿರುತ್ತಾರೆಂದು ಭಾವವು.

**ಜೇಣ ಣಿರಂಜಣಿ ಮಣು ಧರಿಉ, ವಿಸಯಕಸಾಯಹಿಂ ಜಂತು ।**
**ಮೊಕ್ಖಹಂ ಕಾರಣು ಏತ್ತಡಉ, ಅಣ್ಣು ಣ ತಂತು ಣ ಮಂತು ॥ ೧೨೩*೩ ॥**

"ಯೇನ ನಿರಂಜನೇ ಮನಃ ಧೃತಂ ವಿಷಯಕಷಾಯೇಷು ಗಚ್ಛತ್ ।
ಮೋಕ್ಷಸ್ಯ ಕಾರಣಂ ಏತಾವದೇವ ಅನ್ಯಃ ನ ತಂತ್ರಃ ನ ಮಂತ್ರಃ ॥"

**ಅನ್ವಯಾರ್ಥ:-ಜೇಣ**-ಯಾವ ಪುರುಷನಿಂದ **ವಿಸಯಕಸಾಯಹಿಂ ಜಂತು**- ವಿಷಯಕಷಾಯಗಳಲ್ಲಿ ಹೋಗುತ್ತಿರುವ (ಪ್ರವರ್ತಿಸುತ್ತಿರುವ) **ಮಣು**— ಮನಸ್ಸು **ಣಿರಂಜಣಿ**— ಕರ್ಮಾಂಜನರಹಿತನಾದ ಪರಮಾತ್ಮನಲ್ಲಿ **ಧರಿಉ**— ಧರಿಸಲ್ಪಟ್ಟಿದೆಯೋ ಅರ್ಥಾತ್ ಸ್ಥಿರವಾಗಿರಿಸಲ್ಪಟ್ಟಿದೆಯೋ **ಏತ್ತಡಉ**— ಇಷ್ಟೇ (ಇದೇ) **ಮೊಕ್ಖಹಂ ಕಾರಣಉ**— ಮೋಕ್ಷದ ಕಾರಣವು. **ಅಣ್ಣು ಣ ತಂತು**— ಬೇರೆ ಯಾವ ತಂತ್ರ

(ಶಾಸ್ತ್ರ, ಔಷಧ)ವೂ ಮೋಕ್ಷದ ಕಾರಣವಲ್ಲ ಅಥವಾ **ಅಣ್ಣು ಣ ಮಂತು**–ಬೇರಾವ ಮಂತ್ರ (ಮಂತ್ರಾಕ್ಷರ)ವೂ ಮೋಕ್ಷಕಾರಣವಾಗಿರುವುದಿಲ್ಲ.

**ಭಾವಾರ್ಥ:—** ನಿಕಟಸಂಸಾರಿಯಾದ ಯಾವ ಜೀವನು ಶುದ್ಧಾತ್ಮತತ್ತ್ವಭಾವನೆಗೆ ಪ್ರತಿಕೂಲಗಳಾದ ವಿಷಯಕಷಾಯಗಳಲ್ಲಿ ಪ್ರವರ್ತಿಸುವ ತನ್ನ ಮನಸ್ಸನ್ನು ವೀತರಾಗನಿರ್ವಿಕಲ್ಪಸ್ವಸಂವೇದನಜ್ಞಾನದ ಬಲದಿಂದ ವ್ಯಾವರ್ತಿಸಿ (ವಿಷಯಕಷಾಯಗಳಿಂದ ಹಿಂತಿರುಗಿಸಿ)ನಿಜಶುದ್ಧಾತ್ಮದ್ರವ್ಯದಲ್ಲಿ ಸ್ಥಾಪಿಸುವ(ಸ್ಥಿರಗೊಳಿಸು)ತ್ತಾನೆಯೋ ಆತನೇ ಮೋಕ್ಷವನ್ನು ಪಡೆಯುತ್ತಾನೆ. ಅಂತಹ ನಿಜಶುದ್ಧಾತ್ಮಧ್ಯಾನಿಯಹೊರತು ಇತರ ಮಂತ್ರತಂತ್ರಾದಿಗಳಲ್ಲಿ ಪ್ರವೀಣನಾದ ಯಾವನೊಬ್ಬನೂ ಮೋಕ್ಷವನ್ನು ಪಡೆಯಲಾರನೆಂದು ಭಾವವು

ಹೀಗೆ ಮೂರು ಪ್ರಕ್ಷೇಪಕಗಳ ಹೊರತು ಒಂದು-ನೂರಇಪ್ಪತ್ತಮೂರು ದೋಹಕಸೂತ್ರಗಳಿಂದ ಬಹಿರಾತ್ಮ ಅಂತರಾತ್ಮ ಪರಮಾತ್ಮರೆಂಬ ಮೂರು ವಿಧದ ಆತ್ಮರುಗಳ ಸ್ವರೂಪವು ಪ್ರತಿಪಾದಿಸಲ್ಪಟ್ಟಿತು

**ಶ್ರೀಮದ್ಯೋಗೀಂದುದೇವ**ವಿರಚಿತ-**ಪರಮಾತ್ಮಪ್ರಕಾಶದ**
ಚಂದ್ರರಾಜಬುಧೇಂದ್ರವಿರಚಿತ-ಅನ್ವಯಾರ್ಥಭಾವಾರ್ಥದೀಪಿಕಾ-
ಕರ್ಣಾಟಕವ್ಯಾಖ್ಯೆಯೊಳ್ **ಪ್ರಥಮಮಹಾಧಿಕಾರವು**
ಸಮಾಪ್ತವಾದುದು



# ದ್ವಿತೀಯ ಮಹಾಧಿಕಾರ

ದ್ವಿತೀಯಮಹಾಧಿಕಾರದಲ್ಲಿ ಮೋಕ್ಷ, ಮೋಕ್ಷಫಲ ಹಾಗೂ ಮೋಕ್ಷಮಾರ್ಗ ಇವುಗಳನ್ನು ಪ್ರತಿಪಾದಿಸುವ ಮುಖ್ಯತೆಯಿಂದ ಪ್ರಕ್ಷೇಪಕಗಳ ಹೊರತು ಇನ್ನೂರಹದಿನಾಲ್ಕು ದೋಹಕಸೂತ್ರಗಳನ್ನು ಹೇಳುತ್ತಾರೆ. ಈಗ ಪ್ರಥಮತಃ ಹತ್ತು ಸೂತ್ರಗಳಿಂದ ಮೋಕ್ಷಸ್ವರೂಪವನ್ನು ನಿರೂಪಿಸುತ್ತಾರೆ —

**ಸಿರಿಗುರು ಅಕ್ಖಹಿ ಮೊಕ್ಖು ಮಹು, ಮೊಕ್ಖಹಂ ಕಾರಣು ತತ್ಥು ।**
**ಮೊಕ್ಖಹಂ ಕೇರಉ ಅಣ್ಣು ಫಲು, ಜೇಂ ಜಾಣಉಂ ಪರಮತ್ಥು ॥ ೧ ॥**

"ಶ್ರೀಗುರೋ ಆಖ್ಯಾಹಿ ಮೋಕ್ಷಂ ಮಮ ಮೋಕ್ಷಸ್ಯ ಕಾರಣಂ ತಥ್ಯಮ್ ।
ಮೋಕ್ಷಸ್ಯ ಸಂಬಂಧಿ ಅನ್ಯತ್ ಫಲಂ ಯೇನ ಜಾನಾಮಿ ಪರಮಾರ್ಥಮ್ ॥ ೧ ॥"

**ಅನ್ವಯಾರ್ಥ:—ಸಿರಿಗುರು**—ಶ್ರೀ ಗುರುವರ್ಯರೇ! **ಮಹು**—ನನಗೆ **ಮೊಕ್ಖು**—ಮೋಕ್ಷವನ್ನೂ **ಮೊಕ್ಖಹಂ ತತ್ಥು ಕಾರಣು**—ಮೋಕ್ಷದ ನಿಜವಾದ(ಯಥಾರ್ಥವಾದ) ಕಾರಣವನ್ನೂ **ಅಣ್ಣು**—ಮತ್ತು **ಮೊಕ್ಖಹಂ ಕೇರಉ**—ಮೋಕ್ಷದ ಸಂಬಂಧವಾದ **ಫಲು**—ಫಲವನ್ನೂ **ಅಕ್ಖಹಿ**—ಹೇಳಿರಿ (ಉಪದೇಶಿಸಿರಿ)**ಜೇಂ**—ಯಾವುದರಿಂದ ಅರ್ಥಾತ್ ಯಾವ ತಮ್ಮ ಉಪದೇಶದಿಂದ ನಾನು **ಪರಮತ್ಥು ಜಾಣಉಂ**—ಪರಮಾರ್ಥವನ್ನು ತಿಳಿಯುತ್ತೇನೆ ಅಥವಾ ತಿಳಿಯುವೆನು

**ಭಾವಾರ್ಥ:**—ಪ್ರಭಾಕರಭಟ್ಟನು ಶ್ರೀಯೋಗೀಂದುದೇವರನ್ನು ಕುರಿತು "ಶ್ರೀ ಗುರುದೇವ! ನನಗೆ ಮೋಕ್ಷ, ಮೋಕ್ಷಫಲ, ಹಾಗೂ ಮೋಕ್ಷಕಾರಣ ಈ ಮೂರು ವಿಷಯಗಳನ್ನು ಉಪದೇಶಿಸಿರಿ. ಏಕೆಂದರೆ ತಮ್ಮ ಉಪದೇಶದಿಂದಲೇ ನಾನು ಪರಮಾರ್ಥವನ್ನು ತಿಳಿಯಬಲ್ಲೆನು" ಹೀಗೆಂದು ಪ್ರಾರ್ಥಿಸಿಕೊಂಡನೆಂದು ತಾತ್ಪರ್ಯವು.

**ಜೋಇಯ ಮೊಕ್ಖು ವಿ ಮೊಕ್ಖಫಲು, ಪುಚ್ಛಿಉ ಮೊಕ್ಖಹಂ ಹೇಉ ।**
**ಸೋ ಜಿಣಭಾಸಿಉ ಣಿಸುಣಿ ತುಹುಂ, ಜೇಣ ವಿಯಾಣಹಿ ಭೇಉ ॥ ೨ ॥**

"ಯೋಗಿನ್ ಮೋಕ್ಷೋಽಪಿ ಮೋಕ್ಷಫಲಂ ಪೃಷ್ಟಂ ಮೋಕ್ಷಸ್ಯ ಹೇತುಃ ।
ತತ್ ಜಿನಭಾಷಿತಂ ನಿಶೃಣು ತ್ವಂ ಯೇನ ವಿಜಾನಾಸಿ ಭೇದಮ್ ॥ ೨ ॥"

**ಅನ್ವಯಾರ್ಥ:—ಜೋಇಯ**—ಎಲೈ ಯೋಗಿಯೇ! ನಿನ್ನಿಂದ **ಮೊಕ್ಖು ವಿ ಮೊಕ್ಖಫಲು**—ಮೋಕ್ಷ ಮತ್ತು ಮೋಕ್ಷಫಲವೂ **ಮೊಕ್ಖಹಂ ಹೇಉ**—ಮೋಕ್ಷದ ಕಾರಣವೂ **ಪುಚ್ಛಿಉ**—ಕೇಳಲ್ಪಟ್ಟಿತು. **ಸೋ ಜಿಣಭಾಸಿಉ**—ಅದನ್ನು(ಆ ಮೂರನ್ನು) ಜಿನರು ಹೇಳಿದಂತೆ ಅರ್ಥಾತ್ ಜಿನಾಗಮಾನುಸಾರವಾಗಿ **ಣಿಸುಣಿ ತುಹುಂ**—ನೀನು ನಿಶ್ಚಯದಿಂದ ಕೇಳು" **ಜೇಣ**—ಯಾವುದರಿಂದ **ವಿಯಾಣಹಿ ಭೇಉ**—ಅವುಗಳ ಭೇದವನ್ನು ಚೆನ್ನಾಗಿ ತಿಳಿಯುತ್ತಿ.

**ಭಾವಾರ್ಥ:**—ಶ್ರೀಯೋಗೀಂದುದೇವರು ಶಿಷ್ಯನನ್ನು ಕುರಿತು ಹೇಳುತ್ತಾರೆ—ಶಿಷ್ಯನೇ, ನೀನು ಪ್ರಶ್ನೆ ಮಾಡಿದಂತೆ ಶುದ್ಧಾತ್ಮೋಪಲಬ್ಧಿರೂಪವಾದ ಮೋಕ್ಷವನ್ನೂ ಕೇವಲ ಜ್ಞಾನಾದಿ-ಅನಂತಚತುಷ್ಟಯದ ವ್ಯಕ್ತಿ(ಪ್ರಕಟ)ರೂಪವಾದ ಮೋಕ್ಷಫಲವನ್ನೂ ನಿಶ್ಚಯವ್ಯವಹಾರರತ್ನತ್ರಯರೂಪವಾದ ಮೋಕ್ಷಮಾರ್ಗ(ಮೋಕ್ಷದ ಕಾರಣ)ವನ್ನೂ ಜಿನಾಗಮಪ್ರಮಾಣದಿಂದ ನಿನಗೆ ಉಪದೇಶಿಸುವೆನು ಅದನ್ನು ನೀನು ಚೆನ್ನಾಗಿ ಕೇಳುವುದರಿಂದ ಸರ್ವಭೇದಗಳನ್ನೂ ನಿಶ್ಚಯವಾಗಿ ತಿಳಿಯುವೆ

**ಧಮ್ಮಹಂ ಅತ್ಥಹಂ ಕಾಮುಹಂ ವಿ, ಏಯುಹಂ ಸಯುಲಹಂ ಮೊಕ್ಖು ।**
**ಉತ್ತಮು ಪಭಣಹಿಂ ಣಾಣಿ ಜಿಯ, ಅಣ್ಣೇಂ ಜೇಣ ಣ ಸೊಕ್ಖು ॥ ೩ ॥**

"ಧರ್ಮಸ್ಯ ಅರ್ಥಸ್ಯ ಕಾಮಸ್ಯಾಪಿ ಏತೇಷಾಂ ಸಕಲಾನಾಂ ಮೋಕ್ಷಮ್ ।
ಉತ್ತಮಂ ಪ್ರಭಣಂತಿ ಜ್ಞಾನಿನಃ ಜೀವ ಅನ್ಯೇನ ಯೇನ ನ ಸೌಖ್ಯಮ್ ॥ ೩ ॥"

**ಅನ್ವಯಾರ್ಥ:**—**ಧಮ್ಮಹಂ ಅತ್ಥಹಂ ಕಾಮುಹಂ ವಿ**—ಧರ್ಮದ ಅರ್ಥದ ಮತ್ತು ಕಾಮದ **ಏಯುಹಂ ಸಯುಲಹಂ**—ಇವೆಲ್ಲವುಗಳ ಅಪೇಕ್ಷೆಯಿಂದ ಅರ್ಥಾತ್ ಇವೆಲ್ಲವುಗಳಿಗಿಂತ **ಮೊಕ್ಖು ಉತ್ತಮು**—ಮೋಕ್ಷವು ಉತ್ತಮವೆಂದು **ಣಾಣಿ**—ಜ್ಞಾನಿಗಳು **ಪಭಣಹಿಂ**—ವಿಶೇಷವಾಗಿ ಹೇಳುತ್ತಾರೆ **ಜಿಯ**—ಎಲೈ ಜೀವನೇ! **ಜೇಣ**—ಯಾವಕಾರಣದಿಂದ **ಅಣ್ಣೇಂ**—ಇತರ ಧರ್ಮ-ಅರ್ಥ-ಕಾಮಾದಿಗಳಿಂದ **ಣ ಸೊಕ್ಖು**—ಪರಮಸುಖವು ಇರುವುದಿಲ್ಲ

**ಭಾವಾರ್ಥ:**—ಇಲ್ಲಿ ಧರ್ಮವೆಂದರೆ ಪುಣ್ಯವೆಂದೂ ಅರ್ಥವೆಂದರೆ ಪುಣ್ಯದ ಫಲವಾದ ರಾಜ್ಯಾದಿಸಂಪತ್ತುಗಳೆಂದೂ ಕಾಮವೆಂದರೆ ರಾಜ್ಯದ ಮುಖ್ಯಫಲವಾದ ಸ್ತ್ರೀ ವಸ್ತ್ರ ಗಂಧ ಪುಷ್ಪಮಾಲೆ ಮೊದಲಾದ ಭೋಗಗಳೆಂದೂ ತಿಳಿಯಬೇಕು ಈ ಧರ್ಮಾರ್ಥಕಾಮಗಳಿಂದ ಕ್ಲೇಶರೂಪವಾದ ದುಃಖವೇ ಉಂಟಾಗುವುದಲ್ಲದೆ ಪರಮಸುಖವುಂಟಾಗುವುದಿಲ್ಲ ಅರ್ಥಾತ್ ಇವು ಮೂರೂ ವೀತರಾಗಪರಮಾನಂದಸುಖಾಮೃತರಸಾಸ್ವಾದನೆಗೆ ವಿಪರೀತಗಳಾಗಿದ್ದು ಆಕುಲತೆಯನ್ನುಂಟುಮಾಡುವವುಗಳಾಗಿರುತ್ತವೆ. ಅತಏವ ವೀತರಾಗಸ್ವಸಂವೇದನಜ್ಞಾನಿಗಳು ಧರ್ಮಾರ್ಥಕಾಮಗಳಿಗಿಂತ ಮೋಕ್ಷವೇ ಉತ್ತಮವಾದುದೆಂದು ಹೇಳುತ್ತಾರೆ.

**ಜಇ ಜಿಯ ಉತ್ತಮು ಹೋಇ ಣವಿ, ಏಯುಹಂ ಸಯುಲಹಂ ಸೋಇ ।**
**ತೋ ಕಿಂ ತಿಣ್ಣಿ ವಿ ಪರಿಹರವಿ, ಜಿಣ ವಚ್ಚಹಿಂ ಪರಲೋಇ ॥ ೪ ॥**

"ಯದಿ ಜೀವ ಉತ್ತಮೋ ಭವತಿ ನೈವ ಏತೇಭ್ಯಃ ಸಕಲೇಭ್ಯಃ ಸ ಏವ ।
ತತಃ ಕಿಂ ತ್ರೀಣ್ಯಪಿ ಪರಿಹೃತ್ಯ ಜಿನಾಃ ವ್ರಜಂತಿ ಪರಲೋಕೇ ॥ ೪ ॥"

**ಅನ್ವಯಾರ್ಥ:**—**ಜಿಯ**—ಜೀವನೇ! **ಜಇ**—ಒಂದುವೇಳೆ **ಏಯುಹಂ ಸಯುಲಹಂ**—ಈ ಎಲ್ಲವುಗಳಿಗಿಂತ **ಸೋಇ**—ಆ ಮೋಕ್ಷವೇ **ಉತ್ತಮು ಣವಿ ಹೋಇ**—ಉತ್ತಮವಾಗಿರುವುದಿಲ್ಲವಾದರೆ **ತೋ**—ಆಗ **ಜಿಣ**—ಜಿನರು (ಜಿನೇಂದ್ರದೇವರು)

**ತಿಣ್ಣಿ ವಿ ಪರಿಹರವಿ**—ಧರ್ಮಅರ್ಥಕಾಮ ಈ ಮೂರನ್ನೂ ಬಿಟ್ಟು **ಪರಲೋಇ ಕಿಂ ವಚ್ಛಹಿಂ**—ಪರಲೋಕದಲ್ಲಿ ಅರ್ಥಾತ್ ಮೋಕ್ಷಕ್ಕೆ ಏಕೆ ಹೋಗುತ್ತಾರೆ?

**ಭಾವಾರ್ಥಃ**—ಇಲ್ಲಿ **"ಪರಲೋಕ"** ಎಂಬುವದರ ಅರ್ಥವು ಈ ರೀತಿಯಾಗಿದೆ:- 'ಪರಃ' ಎಂದರೆ ಉತ್ಕೃಷ್ಟವೆಂದರ್ಥ ಮಿಥ್ಯಾತ್ವರಾಗಾದಿರಹಿತನೂ ಅನಂತಗುಣಸಹಿತನೂ ಆದ ಪರಮಾತ್ಮನೇ "ಪರ"ನಾಗಿರುವನು ವೀತರಾಗಪರಮಾನಂದಸಮರಸೀಭಾವರೂಪವಾದ ಪರಮಾತ್ಮಾನುಭೂತಿಯು "ಲೋಕ" ಎಂಬ ಶಬ್ದದಿಂದ ಹೇಳಲ್ಪಟ್ಟಿದೆ. ಹೀಗೆ ಪರಮಾತ್ಮಾನುಭೂತಿಯೇ "ಪರಲೋಕ"ವಾಗಿರುತ್ತದೆ. ಅಥವಾ ಪೂರ್ವೋಕ್ತಲಕ್ಷಣವುಳ್ಳ ಪರಮಾತ್ಮನೇ "ಪರಲೋಕ"ವು. ನಿಶ್ಚಯದಿಂದ ಮುಕ್ತಾತ್ಮನು ಪರಮಶಿವನೆಂದೂ ಪರಮಬ್ರಹ್ಮನೆಂದೂ ಪರಮವಿಷ್ಣುವೆಂದೂ ಹೇಳಲ್ಪಡುವುದರಿಂದ ಮುಕ್ತಾತ್ಮನಲೋಕ (ಮೋಕ್ಷ)ವೇ ಶಿವಲೋಕವೆಂದೂ ಬ್ರಹ್ಮಲೋಕವೆಂದೂ ವಿಷ್ಣುಲೋಕವೆಂದೂ ತಿಳಿಯಬೇಕು ಅರ್ಥಾತ್ ಮೋಕ್ಷವೇ ಶಿವಲೋಕ ಮೊದಲಾದ ಹೆಸರುಗಳುಳ್ಳುದಾಗಿರುತ್ತದಲ್ಲದೆ ಇತರ ಪರಕಲ್ಪಿತ-ಶಿವಲೋಕಾದಿಗಳಿರುವುದಿಲ್ಲವೆಂದು ತಾತ್ಪರ್ಯವು ಹೀಗೆ 'ಪರಲೋಕ'ವೆಂದು ಹೇಳಲ್ಪಡುವ ಪರಮಾತ್ಮನೇ ಉಪಾದೇಯನಾಗಿರುತ್ತಾನೆಂಬುದು ಭಾವಾರ್ಥವು.

**ಉತ್ತಮು ಸುಕ್ಖು ಣ ದೇಇ ಜಇ, ಉತ್ತಮು ಮುಕ್ಖು ಣ ಹೋಇ।**
**ತೋ ಕಿಂ ಇಚ್ಛಹಿಂ ಬಂಧಣಹಿಂ, ಬದ್ಧಾ ಪಸುಯ ವಿ ಸೋಇ ॥ ೫ ॥**

"ಉತ್ತಮಂ ಸುಖಂ ನ ದದಾತಿ ಯದಿ ಉತ್ತಮೋ ಮೋಕ್ಷೋ ನ ಭವತಿ।
ತತಃ ಕಿಂ ಇಚ್ಛಂತಿ ಬಂಧನೈಃ ಬದ್ಧಾಃ ಪಶವೋಽಪಿ ತಮೇವ ॥ ೫ ॥"

**ಅನ್ವಯಾರ್ಥಃ**—**ಮುಕ್ಖು**-ಮೋಕ್ಷವು **ಉತ್ತಮು ಸುಕ್ಖು**—ಉತ್ತಮವಾದ ಸುಖವನ್ನು **ಣ ದೇಇ ಜಇ**-ಕೊಡುವುದಿಲ್ಲವಾದರೆ, ಮತ್ತು **ಉತ್ತಮು ಣ ಹೋಇ**-ಆ ಮೋಕ್ಷವು ಉತ್ತಮವಾಗಿರುವುದಿಲ್ಲವಾದರೆ **ತೋ**—ಆಗ **ಬಂಧಣಹಿಂ ಬದ್ಧಾ**-ಬಂಧನಗಳಿಂದ ಬದ್ಧವಾದುವು (ಬಂಧಿಸಲ್ಪಟ್ಟುವು)ಗಳಾದ **ಪಸುಯ ವಿ**—ಪಶುಗಳೂ ಕೂಡ **ಸೋಇ**-ಆ ಮೋಕ್ಷ (ಬಿಡುಗಡೆ)ವನ್ನೇ **ಕಿಂ ಇಚ್ಛಹಿಂ**-ಏಕೆ ಇಚ್ಛಿಸುತ್ತವೆ?

**ಭಾವಾರ್ಥ**·—ಬಂಧನಕ್ಕೆ ಸಮಾನವಾದ ದುಃಖವು ಬೇರೊಂದಿಲ್ಲ. ಅಂತೆಯೇ ಬಿಡುಗಡೆಗೆ ಸಮಾನವಾದ ಸುಖವೂ ಇನ್ನೊಂದಿಲ್ಲ. ಬಂಧಿಸಲ್ಪಟ್ಟ ಪಶುಗಳೂ ಸಹ ಆ ಬಂಧನದಿಂದ ಬಿಡುಗಡೆಯನ್ನು ಹೊಂದಲಿಚ್ಛಿಸುತ್ತವೆ. ಏಕೆಂದರೆ ಅವುಗಳು ಬಂಧನದಿಂದ ದುಃಖವನ್ನೂ ಅದರ ಬಿಡುಗಡೆಯಿಂದ ಸುಖವನ್ನೂ ಹೊಂದುತ್ತವೆ. ಸಾಮಾನ್ಯ ಬಂಧನದ ವಿಷಯವು ಹೀಗಿರುತ್ತಿರಲು ಘೋರವಾದ ಕರ್ಮಬಂಧನದ ಅಭಾವದಿಂದ ಅರ್ಥಾತ್ ಬಿಡುಗಡೆ(ಮೋಕ್ಷ)ಯಿಂದ ಜೀವರುಗಳು ಪರಮಸುಖವನ್ನು ಪಡೆಯುವುದರಲ್ಲಿ ಆಶ್ಚರ್ಯವೇನು? ಆದುದರಿಂದ ಮೋಕ್ಷವು ಸುಖವನ್ನುಂಟುಮಾಡುವುದೂ ಉತ್ತಮವೂ ಆಗಿರುತ್ತದೆ. ಈ ಕಾರಣದಿಂದಲೇ ಜ್ಞಾನಿಗಳು ಕೇವಲಜ್ಞಾನಾದಿ

ಅನಂತಗುಣಮಯವೂ ಅನಂತಸುಖದ ಕಾರಣವೂ ಆದ ಮೋಕ್ಷವನ್ನು ವಿಶೇಷವಾಗಿ ಬಯಸುತ್ತಾರೆಂದು ಭಾವವು.

**ಅಣು ಜಇ ಜಗಹ ವಿ ಅಹಿಯಯರು, ಗುಣಗಣು ತಾಸು ಣ ಹೋಇ ।**
**ತೋ ತಇಲೋಉ ವಿ ಕಿಂ ಧರಇ, ಣಿಯಸಿರಉಪ್ಪರಿ ಸೋಇ ॥ ೬ ॥**

"ಅನ್ಯತ್ ಯದಿ ಜಗತೋಽಪಿ ಅಧಿಕತರಃ ಗುಣಗಣಃ ತಸ್ಯ ನ ಭವತಿ ।
ತತಃ ತ್ರಿಲೋಕೋಽಪಿ ಕಿಂ ಧರತಿ ನಿಜಶಿರೋಪರಿ ತಮೇವ ॥ ೬ ॥"

**ಅನ್ವಯಾರ್ಥ:**— **ಅಣು**—ಮತ್ತು **ಜಇ**—ಒಂದುವೇಳೆ **ತಾಸು**—ಆ ಮೋಕ್ಷಕ್ಕೆ (ಮೋಕ್ಷದಲ್ಲಿ) **ಜಗಹ ವಿ ಅಹಿಯಯರು**—ಜಗತ್ತಿಗಿಂತಲೂ ಅಧಿಕತರವಾದ **ಗುಣಗಣು ಣ ಹೋಇ**—ಗುಣಗಳ ಸಮೂಹವು ಇಲ್ಲದಿರುವುದಾದರೆ **ತೋ**—ಆ ಕಾರಣದಿಂದ **ತಇಲೋಉ ವಿ**—ಮೂರುಲೋಕವು ಕೂಡ **ಣಿಯಸಿರಉಪ್ಪರಿ**—ತನ್ನ ತಲೆಯಮೇಲೆ **ಸೋಇ**—ಆ ಮೋಕ್ಷವನ್ನೇ **ಕಿಂ ಧರಇ**—ಏಕೆ ಧರಿಸುತ್ತಿದೆ ಅರ್ಥಾತ್ ಏಕೆ ಹೊತ್ತುಕೊಂಡಿದೆ?

**ಭಾವಾರ್ಥ:**—ಮೋಕ್ಷವು ಲೋಕದ ಶಿಖರ (ಅಗ್ರಭಾಗ)ದಲ್ಲಿರುತ್ತದೆ. ಮೋಕ್ಷದಲ್ಲಿ ಲೋಕಕ್ಕಿಂತಲೂ ಬಹು ಅಧಿಕವಾದ ಗುಣಗಳಿರುವುದರಿಂದಲೇ ಲೋಕವು ಅದನ್ನು ತನ್ನ ತಲೆಯಮೇಲೆ ಧರಿಸಿ (ಹೊತ್ತು)ಕೊಂಡಿದೆ ವ್ಯವಹಾರದಲ್ಲಿಯೂ ಯಾವನಾದರೊಬ್ಬ ವ್ಯಕ್ತಿಯನ್ನು ಜನರು ತಲೆಯಮೇಲಿರಿಸಿಕೊಳ್ಳಬೇಕಾದರೆ ಆತನು ತಮಗಿಂತ (ಆ ಜನರಿಗಿಂತ) ಅಧಿಕಗುಣವುಳ್ಳವನಾಗಿರಲೇ ಬೇಕು. ಹಾಗೆಯೇ ಮೋಕ್ಷದಲ್ಲಿ ಮೂರು ಲೋಕಗಳಿಗಿಂತಲೂ ಅಧಿಕಗುಣವಿಲ್ಲವಾದರೆ ಲೋಕಗಳಾದರೂ ಅದನ್ನು ಹೇಗೆ ತಲೆಯಮೇಲಿರಿಸಿಕೊಂಡಾವು? ಅತ ಏವ ಮೋಕ್ಷವು ಕ್ಷಾಯಿಕಸಮ್ಯಕ್ತ್ವಾದಿ-ಅನಂತ-ಗುಣಗಳ ನಿಧಿಯಾಗಿರುತ್ತದೆ. ಹೀಗೆ ಮೋಕ್ಷದಲ್ಲಿ ಅನಂತಗುಣಗಳಿರುತ್ತವೆಂಬುದನ್ನು ಸಿದ್ಧವಡಿಸುವುದರಿಂದ ಇತರ ಭಿನ್ನ-ಭಿನ್ನ ಮತಗಳು ಖಂಡಿಸ (ನಿರಾಕರಿಸ)ಲ್ಪಡುತ್ತವೆ. ಹೇಗಂದರೆ.—**'ವೃದ್ಧವೈಶೇಷಿಕ'**ಮತೀಯರು ಬುದ್ಧಿ, ಸುಖ, ದುಃಖ, ಇಚ್ಛಾ, ದ್ವೇಷ, ಪ್ರಯತ್ನ, ಧರ್ಮ, ಅಧರ್ಮ ಮತ್ತು ಸಂಸ್ಕಾರ ಈ ಒಂಬತ್ತು ಗುಣಗಳ ಅಭಾವವೇ ಮೋಕ್ಷವೆಂದು ಹೇಳುತ್ತಾರೆ. ಆದರೆ ಮೋಕ್ಷದಲ್ಲಿ ಇಂದ್ರಿಯಜನಿತ-ಬುದ್ಧಿ (ಜ್ಞಾನ) ಮತ್ತು ಸುಖಗಳ ಅಭಾವವಿರುವುದಾದರೂ ಕೇವಲಬುದ್ಧಿ ಅರ್ಥಾತ್ ಕೇವಲಜ್ಞಾನ ಹಾಗೂ ಅತೀಂದ್ರಿಯಸುಖದ ಪರಿಪೂರ್ಣತೆಯಿರುತ್ತದೆ. ದುಃಖ, ಇಚ್ಛಾ, ದ್ವೇಷ ಮತ್ತು ಯತ್ನ ಈ ವಿಭಾವಗುಣಗಳ ಅಭಾವವೇ ಇರುತ್ತದೆ. ಧರ್ಮದಲ್ಲಿ ವ್ಯವಹಾರಧರ್ಮದ ಅಭಾವವಿರುತ್ತಿದ್ದರೂ ವಸ್ತುಸ್ವಭಾವರೂಪ-ಧರ್ಮವು ಇರುತ್ತದೆ. ಅಧರ್ಮದ ಅಭಾವವೆಂಬುದು ಉಚಿತವೇ ಆಗಿದೆ. ಸಂಸ್ಕಾರದಲ್ಲಿ ಪರದ್ರವ್ಯರೂಪಸಂಸ್ಕಾರದ ಸರ್ವಥಾ ಅಭಾವವಿರುವುದಾದರೂ ಸ್ವಭಾವಸಂಸ್ಕಾರವಂತೂ ಇದ್ದೇ ಇರುತ್ತದೆ. ಹೀಗೆ ನಿರ್ಗುಣವಾದಿಗಳ

ಮತವು ನಿರಾಕರಿಸಲ್ಪಡುತ್ತದೆ. **"ಸೌಗತ (ಬೌದ್ಧ)"**ರು ಪ್ರದೀಪನಿರ್ವಾಣದಂತೆ ಅರ್ಥಾತ್ ದೀಪವು ಆರಿದಮೇಲೆ ಅದರ ಅಭಾವವಿರುವಂತೆ ಜೀವನ **ಅಭಾವವೇ** ಮೋಕ್ಷವೆನ್ನುತ್ತಾರೆ ಆದರೆ ಜೀವನ ಅಭಾವವಾದರೆ ಅರ್ಥಾತ್ ಜೀವನೇ ಇಲ್ಲ ವೆಂದಾದರೆ ಮೋಕ್ಷವಾದರೂ ಯಾರಿಗುಂಟಾಗಬೇಕು? ಜೀವನ ಶುದ್ಧಾವಸ್ಥೆಯೇ ಮೋಕ್ಷವು. ಆದುದರಿಂದ ಜೀವನ ಅಭಾವವೆನ್ನುವುದು ವ್ಯರ್ಥವು. ಹೀಗೆ ಬೌದ್ಧ ಮತವು ನಿರಾಕರಿಸಲ್ಪಡುತ್ತದೆ **'ಸಾಂಖ್ಯ'**ಮತೀಯರು ಸುಪ್ತಾವಸ್ಥೆ (ನಿದ್ರಾವಸ್ಥೆ) ಯಂತೆ ಸುಖಜ್ಞಾನರಹಿತವಾದುದು ಮೋಕ್ಷವೆಂದು ತಿಳಿಯುತ್ತಾರೆ. ಅವರ **ಮಾನ್ಯ** ತೆಯೂ ನಿರಾಕರಿಸಲ್ಪಡುತ್ತದೆ. ಇನ್ನು ಮೋಕ್ಷವು ಲೋಕಾಗ್ರದಲ್ಲಿರುತ್ತದೆ **ಎಂಬುದ** ರಿಂದ "ಜೀವನು ಎಲ್ಲಿ ಮುಕ್ತನಾಗುತ್ತಾನೆಯೋ ಅಲ್ಲಿಯೇ ಇರುತ್ತಾನೆ" **ಅರ್ಥಾತ್** ಊರ್ಧ್ವಗಮನವನ್ನು ಮಾಡುವುದಿಲ್ಲವೆನ್ನುವ **'ಮಂಡಿಕ'** ಎಂಬ **'ನೈಯಾಯಿಕ'** ಮತವು ಖಂಡಿಸಲ್ಪಡುತ್ತದೆ ಲೋಕದಲ್ಲಿಯೂ ಕಾರಾಗೃಹದಲ್ಲಿ **ಬಂಧಿತನಾದ** ಮನುಷ್ಯನು ಬಂಧಮುಕ್ತನಾದೊಡನೆ ಅಲ್ಲಿ ನಿಲ್ಲದೆ ತನ್ನ ಸ್ಥಾನ (ಮನೆ)ವನ್ನು ಸೇರು ತ್ತಾನೆ ಅದರಂತೆಯೇ ಕರ್ಮಬಂಧನದಿಂದ ಮುಕ್ತನಾದ ಜೀವನು ಕೂಡಲೇ ತನ್ನ ಸ್ಥಾನ (ಮೋಕ್ಷ)ವನ್ನು ಪಡೆಯುತ್ತಾನೆ. ಈಪ್ರಕಾರವಾಗಿ ವಿಭಿನ್ನ ಮತಗಳು **ಖಂಡಿ** ಸಲ್ಪಡುತ್ತವೆ

**ಉತ್ತಮು ಸುಕ್ಖ ಣ ದೇಇ ಜಇ, ಉತ್ತಮು ಮುಕ್ಖು ಣ ಹೋಇ ।**
**ತೋ ಕಿಂ ಸಯಲು ವಿ ಕಾಲು ಜಿಯ, ಸಿದ್ಧ ವಿ ಸೇವಹಿಂ ಸೋಇ ॥ ೭ ॥**

"ಉತ್ತಮಂ ಸುಖಂ ನ ದದಾತಿ ಯದಿ ಉತ್ತಮಃ ಮೋಕ್ಷೋ ನ ಭವತಿ ।
ತತಃ ಕಿಂ ಸಕಲಮಪಿ ಕಾಲಂ ಜೀವ ಸಿದ್ಧಾ ಅಪಿ ಸೇವಂತೇ ತಮೇವ ॥ ೭ ॥"

**ಅನ್ವಯಾರ್ಥಃ**— **ಜಿಯ**— ಎಲೈ ಜೀವನೇ! **ಮುಕ್ಖು**— ಮೋಕ್ಷವು **ಉತ್ತಮು ಸುಕ್ಖ**— ಉತ್ತಮವಾದ ಸುಖವನ್ನು **ಣ ದೇಇ ಜಇ**— ಕೊಡುವುದಿಲ್ಲವಾದರೆ **ಮತ್ತು ಉತ್ತಮು ಣ ಹೋಇ ಜಇ**— ಮೋಕ್ಷವು ಉತ್ತಮವಾಗಿರುವುದಿಲ್ಲವಾದರೆ **ತೋ**— ಆಗ (ಆ ಕಾರಣದಿಂದ) **ಸಿದ್ಧವಿ**— ಸಿದ್ಧಪರಮೇಷ್ಠಿಗಳು ಸಹ **ಸೋಇ**— ಆ ಮೋಕ್ಷ ವನ್ನೇ **ಸಯಲು ವಿ ಕಾಲು**— ಸದಾಕಾಲವೂ **ಕಿಂ ಸೇವಹಿಂ**— ಏಕೆ ಸೇವಿಸುತ್ತಾರೆ?

**ಭಾವಾರ್ಥಃ**— ಮೋಕ್ಷವು ಅತೀಂದ್ರಿಯಪರಮಾಹ್ಲಾದರೂಪವೂ ಅವಿನಶ್ವರವೂ ಆದ ಸುಖವನ್ನು ಕೊಡುವುದಿಲ್ಲವಾದರೆ ಹಾಗೂ ಅದು ಉತ್ತಮವಾಗಿಲ್ಲವಾದರೆ ಉತ್ತಮಸ್ವಭಾವವುಳ್ಳವರೂ ಕೇವಲಜ್ಞಾನಾದಿಗುಣಸಹಿತರೂ ಆದ ಸಿದ್ಧಪರಮೇಷ್ಠಿ ಗಳೂ ಅದನ್ನೇ (ಮೋಕ್ಷವನ್ನೇ)ಸದಾಕಾಲವೂ ಏಕೆ ಸೇವಿಸುತ್ತಾರೆ? ಅರ್ಥಾತ್ ಇದ ರಿಂದಲೇ ಮೋಕ್ಷವು ಉತ್ತಮ ಸುಖವನ್ನು ಕೊಡುತ್ತದೆಂದೂ ಉತ್ತಮವಾಗಿರುತ್ತ ದೆಂದೂ ನಿಶ್ಚಿತವಾಗುತ್ತದೆ **"ಸಿದ್ಧಭಕ್ತಿ"**ಯಲ್ಲಿ ಸಿದ್ಧರ ಸುಖವನ್ನು ಹೀಗೆ ವರ್ಣಿಸಿ ದ್ದಾರೆ —

"ಆತ್ಮೋಪಾದಾನಸಿದ್ಧಂ ಸ್ವಯಮತಿಶಯವದ್ವೀತಬಾಧಂ ವಿಶಾಲಂ ।
ವೃದ್ಧಿಹ್ರಾಸವ್ಯಪೇತಂ ವಿಷಯವಿರಹಿತಂ ನಿಷ್ಪ್ರತಿದ್ವಂದ್ವಭಾವಮ್ ॥
ಅನ್ಯದ್ರವ್ಯಾನಪೇಕ್ಷಂ ನಿರುಪಮಮಮಿತಂ ಶಾಶ್ವತಂ ಸರ್ವಕಾಲಂ ।
ಉತ್ಕೃಷ್ಟಾನಂತಸಾರಂ ಪರಮಸುಖಮತಸ್ತಸ್ಯ ಸಿದ್ಧಸ್ಯ ಜಾತಮ್ ॥"

ಅರ್ಥಾತ್, "ಸುಖಕ್ಕೆ ತಾನೇ ಮುಖ್ಯಕಾರಣನಾಗಿರುವುದರಿಂದ ಸಿದ್ಧವಾದುದೂ ತಾನು ಪರಮಾತಿಶಯವನ್ನು ಹೊಂದಿರುವುದೂ ಬಾಧಾರಹಿತವೂ ಆತ್ಮನ ಸರ್ವ ಪ್ರದೇಶವ್ಯಾಪಿಯೂ ವೃದ್ಧಿಹಾನಿಗಳಿಲ್ಲದುದೂ ಸಾಂಸಾರಿಕಸುಖವನ್ನುಂಟುಮಾಡುವ ವಸ್ತುಗಳಿಂದುಂಟಾಗದಿರುವುದೂ ತನಗೆ ವಿರೋಧಿಯಾದ ವಸ್ತು(ದುಃಖ)ವಿಲ್ಲದಿರುವುದೂ ಸಾತಾವೇದನೀಯಾದಿಕರ್ಮ ಪುಷ್ಪಮಾಲೆ ಗಂಧ ಮೊದಲಾದ ಇತರಪದಾರ್ಥಗಳ ಅಪೇಕ್ಷೆಯಿಲ್ಲದೆ ತಾನೇ ಉಂಟಾಗುವುದೂ ಉಪಮೆಯಿಲ್ಲದುದೂ ಪರಿಮಿತಿಯಿಲ್ಲದುದೂ ನಿತ್ಯವೂ ಸರ್ವಕಾಲದಲ್ಲಿರುವುದೂ ಉತ್ಕೃಷ್ಟವೂ ಅನಂತವಾದ ಮಹಾತ್ಮ್ಯವುಳ್ಳುದೂ ದೇವೇಂದ್ರನೇ ಮೊದಲಾದವರ ಸುಖಕ್ಕಿಂತ ಅತಿಶಯವುಳ್ಳುದೂ ಆದ ಸುಖವು ಆ ಲೋಕಾಗ್ರ(ಮೋಕ್ಷ)ದಲ್ಲಿರುವ ಸಿದ್ಧಪರಮೇಷ್ಠಿಗಳಿಗೆ ಉಂಟಾದುದು" ಇಂತಹ ಮೋಕ್ಷಸುಖವೇ ಸರ್ವಥಾ ಉಪಾದೇಯವಾಗಿರುವುದರಿಂದ ಇಚ್ಛಿಸಲು ಯೋಗ್ಯವಾಗಿರುತ್ತದೆಂದೂ ಇತರ ಇಂದ್ರಿಯಜನಿತಸಾಂಸಾರಿಕಸುಖಗಳು ಸರ್ವಥಾ ಹೇಯವಾಗಿರುತ್ತವೆಂದೂ ಭಾವಾರ್ಥವು.

**ಹರಿಹರಬಂಭು ವಿ ಜಿಣವರ ವಿ, ಮುಣಿವರವಿಂದ ವಿ ಭವ್ವ ।**
**ಪರಮಣಿರಂಜಣಿ ಮಣು ಧರಿವಿ, ಮುಕ್ಖು ಜಿ ಝಾಯಹಿಂ ಸವ್ವ ॥ ೮ ॥**

"ಹರಿಹರಬ್ರಹ್ಮಾಣೋಽಪಿ ಜಿನವರಾ ಅಪಿ ಮುನಿವರವೃಂದಾನ್ಯಪಿ ಭವ್ಯಾಃ ।
ಪರಮನಿರಂಜನೇ ಮನಃ ಧೃತ್ವಾ ಮೋಕ್ಷಂ ಏವ ಧ್ಯಾಯಂತಿ ಸರ್ವೇ ॥ ೮ ॥"

**ಅನ್ವಯಾರ್ಥ:— ಹರಿಹರ ಬಂಭುವಿ**— ಹರಿಹರಬ್ರಹ್ಮರೂ **ಜಿಣವರ ವಿ**— ಜಿನೇಂದ್ರರು ಅಥವಾ ತೀರ್ಥಂಕರಪರಮದೇವರೂ **ಮುಣಿವರವಿಂದ ವಿ**— ಮುನೀಂದ್ರರ ಸಮೂಹಗಳೂ **ಭವ್ವ**— ಇತರ ಭವ್ಯಜೀವರೂ **ಸವ್ವ**— ಎಲ್ಲರೂ **ಪರಮಣಿರಂಜಣಿ**— ಪರಮನಿರಂಜನನಾದ ನಿಜಪರಮಾತ್ಮಸ್ವರೂಪದಲ್ಲಿ **ಮಣು ಧರಿವಿ**— ಮನಸ್ಸನ್ನಿಟ್ಟು (ಮನಸ್ಸನ್ನು ಸ್ಥಿರಗೊಳಿಸಿ) **ಮುಕ್ಖು ಜಿ ಝಾಯಹಿಂ**— ಮೋಕ್ಷವನ್ನೇ ಧ್ಯಾನಿಸುತ್ತಾರೆ.

**ಭಾವಾರ್ಥ:**— ತೀರ್ಥಂಕರಪರಮದೇವರು, ಹರಿಹರಬ್ರಹ್ಮಾದಿಗಳು ಮತ್ತು ಮುನಿಪುಂಗವರು ಮೊದಲಾದ ಮಹಾಪುರುಷರು ಹಾಗೂ ಸಮಸ್ತ ಭವ್ಯಜೀವರುಗಳು ತಮ್ಮ ಮನಸ್ಸನ್ನು ವಿಷಯಕಷಾಯಾದಿಗಳಿಂದ ಪರಾವರ್ತಿಸಿ (ಹಿಂತಿರುಗಿಸಿ) ಖ್ಯಾತಿ(ಪ್ರಸಿದ್ಧಿ) ಪೂಜಾ (ಮಹಿಮೆ, ಪೂಜ್ಯತೆ) ಲಾಭಮೊದಲಾದ ಸಮಸ್ತವಿಕಲ್ಪಗಳಿಲ್ಲದುದೂ ಶುದ್ಧಬುದ್ಧೈಕಸ್ವಭಾವವುಳ್ಳ ನಿಜಾತ್ಮದ್ರವ್ಯದ ಸಮ್ಯಕ್-ಶ್ರದ್ಧಾನಜ್ಞಾನಾಚರಣರೂಪವಾದ ಅಭೇದರತ್ನತ್ರಯಾತ್ಮಕನಿರ್ವಿಕಲ್ಪಸಮಾಧಿಯಿಂದುಂಟಾದ ವೀತರಾಗಸಹಜಾನಂದೈಕ

ಸುಖರಸಾನುಭವದಿಂದ ಪೂರ್ಣಕಲಶದಂತೆ ತುಂಬಿರುವುದೂ ಆದ ನಿಜಪರಮಾತ್ಮಧ್ಯಾನ ದಲ್ಲಿರುವವರಾಗಿ ಮೋಕ್ಷವನ್ನೇ ಧ್ಯಾನಿಸುತ್ತಾರೆ ಯದ್ಯಪಿ ವ್ಯವಹಾರನಯದಿಂದ ಪ್ರಥಮಾವಸ್ಥೆಯಲ್ಲಿ ವೀತರಾಗಸರ್ವಜ್ಞದೇವರ ಸ್ವರೂಪವೂ ಅವರ ನಾಮಮಂತ್ರಾಕ್ಷರಗಳೂ ವೀತರಾಗಾರಾಧಕರಾದ ಮಹಾಮುನಿಗಳೂ ಧ್ಯಾನಿಸಲು ಯೋಗ್ಯರಾಗಿರುವರಾದರೂ ವೀತರಾಗನಿರ್ವಿಕಲ್ಪತ್ರಿಗುಪ್ತಿರೂಪಪರಮಸಮಾಧಿಯ ಕಾಲದಲ್ಲಿ ಕೇವಲ ನಿಜಶುದ್ಧಾತ್ಮನೇ ಧ್ಯೇಯ(ಧ್ಯಾನಿಸಲುಯೋಗ್ಯ)ನಾಗಿರುತ್ತಾನೆಂದು ಭಾವವು.

**ತಿಹುಯಣಿ ಜೀವಹಂ ಅತ್ಥಿ ಣವಿ, ಸೋಕ್ಖಹಂ ಕಾರಣು ಕೋಇ ।**
**ಮುಕ್ಖು ಮುಏವಿಣು ಎಕ್ಕು ಪರ, ತೇಣವಿ ಚಿಂತಹಿ ಸೋಇ ॥ ೯ ॥**

"ತ್ರಿಭುವನೇ ಜೀವಾನಾಂ ಅಸ್ತಿ ನೈವ ಸುಖಸ್ಯ ಕಾರಣಂ ಕಿಮಪಿ ।
ಮೋಕ್ಷಂ ಮುಕ್ತ್ವಾ ಏಕಂ ಪರಂ ತೇನೈವ ಚಿಂತಯ ತಮೇವ ॥ ೯ ॥"

**ಅನ್ವಯಾರ್ಥ:**— **ತಿಹುಯಣಿ**— ತ್ರಿಭುವನ(ಮೂರುಲೋಕ)ದಲ್ಲಿ **ಜೀವಹಂ**— ಜೀವರುಗಳಿಗೆ **ಮುಕ್ಖು ಮುಏವಿಣು**— ಮೋಕ್ಷವನ್ನು ಬಿಟ್ಟು **ಸೋಕ್ಖಹಂ ಕಾರಣು**— ಸುಖಕ್ಕೆ ಕಾರಣವಾದ **ಕೋಇ**— ಯಾವುದೊಂದು ಪದಾರ್ಥವೂ **ಅತ್ಥಿ ಣವಿ**— ಇರುವುದೇ ಇಲ್ಲ **ತೇಣವಿ**— ಆ ಕಾರಣದಿಂದಲೇ **ಪರ ಎಕ್ಕು ಸೋಇ**— ಉತ್ಕೃಷ್ಟವಾದ ಆ ಮೋಕ್ಷವೊಂದನ್ನೇ ನಿಶ್ಚಯದಿಂದ **ಚಿಂತಹಿ**— ಚಿಂತಿಸು (ಧ್ಯಾನಿಸು)

**ಭಾವಾರ್ಥ:** - ಮೋಕ್ಷದ ಹೊರತು ಸುಖದ ಕಾರಣವು ಬೇರೊಂದಿಲ್ಲ. ಆತ್ಮಧ್ಯಾನದ ಹೊರತು ಮೋಕ್ಷವುಂಟಾಗಲಾರದು. ಆದುದರಿಂದ ವೀತರಾಗನಿರ್ವಿಕಲ್ಪಸಮಾಧಿಯಲ್ಲಿದ್ದು ನಿಜಶುದ್ಧಾತ್ಮಸ್ವರೂಪವನ್ನೇ ಧ್ಯಾನಿಸಬೇಕೆಂದು ತಾತ್ಪರ್ಯವು. ಇಲ್ಲಿ ಶಿಷ್ಯನು ಕೇಳುತ್ತಾನೆ —ಸ್ವಾಮಿಯೇ! ತಾವು ಅತೀಂದ್ರಿಯವಾದ ಮೋಕ್ಷಸುಖವನ್ನೇ ನಿರಂತರ ವರ್ಣಿಸುತ್ತಿದ್ದೀರಿ. ಆದರೆ ಜನರು ಕೇವಲ ಇಂದ್ರಿಯಸುಖವನ್ನೇ ಸುಖವೆಂದು ತಿಳಿಯುತ್ತಾರಲ್ಲದೆ ಅತೀಂದ್ರಿಯಸುಖವೇನೆಂಬುದನ್ನು ತಿಳಿಯುವುದಿಲ್ಲ. ಅದರ ರಹಸ್ಯವನ್ನು ಹೇಗೆ ತಿಳಿಯಲಿ? ಶ್ರೀಗುರುಗಳು ದೃಷ್ಟಾಂತಪೂರ್ವಕ ಹೀಗೆ ನಿರೂಪಿಸುತ್ತಾರೆ —ಪಂಚೇಂದ್ರಿಯವಿಷಯಭೋಗವಿರಕ್ತ(ರಹಿತ)ನೂ ನಿರಾಕುಲಚಿತ್ತನೂ ಆದ ಓರ್ವ ಮನುಷ್ಯನನ್ನು ಕುರಿತು "ನೀನು ಸುಖಿಯಾಗಿರುವೆಯೇ?" ಎಂದು ಕೇಳಿದರೆ ಆತನು ತಾನು ನಿಜವಾಗಿಯೂ ಸುಖಿಯಾಗಿದ್ದೇನೆಂದು ಹೇಳುವನು. ಆತನು ಹಾಗೆ ಸುಖಿಯಾಗಿರಲು ಕಾರಣವೇನು? ಏಕೆಂದರೆ ವಿಷಯಭೋಗರಹಿತನಾದ ಆತನಿಗೆ ಸ್ತ್ರೀಸೇವನಾದಿ ಸ್ಪರ್ಶನೇಂದ್ರಿಯವಿಷಯಸುಖವೂ ಭೋಜನಾದಿರಸನೇಂದ್ರಿಯವಿಷಯಸುಖವೂ ಉತ್ತಮಸುಗಂಧಪುಷ್ಪಮಾಲಾದಿಘ್ರಾಣೇಂದ್ರಿಯವಿಷಯಸುಖವೂ ದಿವ್ಯಸ್ತ್ರೀಸುಂದರರೂಪಾವಲೋಕನಾದಿನೇತ್ರೇಂದ್ರಿಯವಿಷಯಸುಖವೂ ಶ್ರವಣರಮಣೀಯಗೀತವಾದ್ಯಾದಿಶ್ರೋತ್ರೇಂದ್ರಿಯವಿಷಯಸುಖವೂ ಇರುವುದಿಲ್ಲ. ಆದುದರಿಂದ ಆತನು ಸುಖಿಯಾಗಿರಲು ಇಂದ್ರಿಯಾತೀತವಾದ ಆತ್ಮೋತ್ಥಸುಖವೇ ಕಾರಣವೆಂಬುದು ಸ್ಪಷ್ಟವಾಗಿ

ತ್ತದೆ. ವಸ್ತುತಃ ನಿರಾಕುಲತೆಯೇ ಸುಖವು. ಇಂದ್ರಿಯಜನಿತಸುಖವು ಆಕುಲತೆಯನ್ನೇ ಉಂಟುಮಾಡುವುದರಿಂದ ಅದು ಕೇವಲ ಸುಖಾಭಾಸ(ಸುಖದಂತೆ ತೋರುವುದು) ವಲ್ಲದೆ ನಿಜವಾದ ಸುಖವಲ್ಲ. ಇಂದ್ರಿಯವಿಷಯವನ್ನು ಏಕದೇಶವಾಗಿ ತೊರೆದವರೂ ಆತ್ಮೋತ್ಥಸುಖವನ್ನು ಪಡೆಯುತ್ತಾರೆ. ಸಮಸ್ತಪಂಚೇಂದ್ರಿಯವಿಷಯಗಳನ್ನೂ ಮನಸ್ಸಿನ ಸರ್ವವಿಕಲ್ಪಗಳನ್ನೂ ತೊರೆದ ಯೋಗಿಗಳು ವಿಶೇಷಸುಖವನ್ನು ಹೊಂದುವುದರಲ್ಲಾಶ್ಚರ್ಯವೇನು? ಇಂತಹ ಸುಖವು ಸ್ವಸಂವೇದನಜ್ಞಾನದಿಂದ ತಿಳಿಯಲ್ಪಡುತ್ತದೆ ಸಿದ್ಧಪರಮೇಷ್ಠಿಗಳಲ್ಲಿ ಭಾವಕರ್ಮ ದ್ರವ್ಯಕರ್ಮ ನೋಕರ್ಮಗಳೂ ವಿಷಯಪ್ರವೃತ್ತಿಯೂ ವಿಕಲ್ಪಜಾಲವೂ ಸರ್ವಥಾ ಇಲ್ಲದಿರುವುದರಿಂದ ಅವರಲ್ಲಿರುವ ಆತ್ಮಿಕ ಸುಖವು ಅನುಮಾನಗೋಚರವಾಗಿರುತ್ತದೆ ಅರ್ಥಾತ್ ಅನುಮಾನಪ್ರಮಾಣದಿಂದ ತಿಳಿಯಲ್ಪಡುತ್ತದೆ ಸಿದ್ಧರ ಸುಖವನ್ನು "ಸಿದ್ಧಭಕ್ತಿ"ಯಲ್ಲಿ ಹೀಗೆ ವರ್ಣಿಸಿದ್ದಾರೆ- **"ಅಇಸಯಮವ್ವಾಬಾಹಂ ಸೋಕ್ಖಮಣಂತಂ ಅಣೋವಮಂ ಪರಮಂ । ಇಂದಿಯವಿಸಯಾತೀದಂ ಅಪ್ಪತ್ತಂ ಅಚ್ಚವಂ ಚ ತೇ ಪತ್ತಾ॥"** ಅರ್ಥಾತ್ 'ಆ ಸಿದ್ಧಪರಮೇಷ್ಠಿಗಳು (ಸಿದ್ಧಾತ್ಮರು) ಅತಿಶಯವುಳ್ಳುದೂ ಬಾಧಾರಹಿತವೂ ಕೊನೆಯಿಲ್ಲದುದೂ ಉಪಮೆಯಿಲ್ಲದುದೂ ಉತ್ಕೃಷ್ಟವೂ ಇಂದ್ರಿಯವಿಷಯಗಳಿಂದ ರಹಿತವೂ ಮೊದಲು ಪಡೆಯಲ್ಪಡದುದೂ ಚ್ಯುತಿ(ನಾಶ)ವಿಲ್ಲದುದೂ ಆದ ಆತ್ಮೀಯ-ಸುಖವನ್ನು ಹೊಂದಿದವರಾಗಿರುತ್ತಾರೆ.' ಇದೇ ಅಭಿಪ್ರಾಯವನ್ನು "ಪ್ರವಚನಸಾರ"ದಲ್ಲಿಯೂ **"ಅಇಸಯಮಾದಸಮುತ್ಥಂ ವಿಸಯಾತೀದಂ ಅಣೋವಮಮಣಂತಂ ಅವುಚ್ಛಿಣ್ಣಂ ಚ ಸುಹಂ ಸುದ್ಧುವಓಗಪ್ಪಸಿದ್ಧಾಣಂ ॥"** ಅರ್ಥಾತ್ 'ಶುದ್ಧೋಪಯೋಗದಿಂದ ಪ್ರಸಿದ್ಧರಾದ ಸಿದ್ಧಪರಮೇಷ್ಠಿಗಳ ಸುಖವು ಅತಿಶಯವುಳ್ಳುದೂ ಆತ್ಮನಲ್ಲುಂಟಾದುದೂ ವಿಷಯಗಳಿಂದರಹಿತವೂ ಉಪಮೆಯಿಲ್ಲದುದೂ ಅನಂತವೂ ನಾಶವಿಲ್ಲದುದೂ ಆಗಿರುತ್ತದೆ' ಎಂದು ವ್ಯಕ್ತಗೊಳಿಸಿರುವರು. ಅತಏವ ಈ ಅತೀಂದ್ರಿಯಸುಖವೇ ಗ್ರಾಹ್ಯವಾದುದೆಂದಭಿಪ್ರಾಯವು.

**ಜೀವಹಂ ಸೋ ಪರ ಮೊಕ್ಖು ಮುಣಿ, ಜೋ ಪರಮಪ್ಪಯಲಾಹು ।**
**ಕಮ್ಮಕಲಂಕವಿಮುಕ್ಕಾಹಂ, ಣಾಣಿಯ ಬೊಲ್ಲಹಿಂ ಸಾಹೂ ॥ ೧೦ ॥**

"ಜೀವಾನಾಂ ತಂ ಪರಂ ಮೋಕ್ಷಂ ಮನ್ಯಸ್ವ ಯಃ ಪರಮಾತ್ಮಲಾಭಃ ।
ಕರ್ಮಕಲಂಕವಿಮುಕ್ತಾನಾಂ ಜ್ಞಾನಿನಃ ಬ್ರುವಂತಿ ಸಾಧವಃ ॥ ೧೦ ॥"

**ಅನ್ವಯಾರ್ಥ:— ಕಮ್ಮಕಲಂಕವಿಮುಕ್ಕಾಹಂ**— ಜ್ಞಾನಾವರಣಾದಿಕರ್ಮಗಳೆಂಬ ಕಲಂಕದಿಂದ ರಹಿತರಾದ **ಜೀವಹಂ**—ಜೀವರಿಗೆ **ಜೋ ಪರಮಪ್ಪಯಲಾಹು**—ಯಾವ ಪರಮಾತ್ಮನ(ಪರಮಾತ್ಮಸ್ವರೂಪದ) ಪ್ರಾಪ್ತಿಯುಂಟಾಗುವುದೋ **ಸೋ ಪರ ಮೊಕ್ಖು ಮುಣಿ**—ಅದನ್ನು ನಿಶ್ಚಯದಿಂದ ಮೋಕ್ಷವನ್ನಾಗಿ ತಿಳಿ. **ಹೀಗೆಂದು ಣಾಣಿಯ ಸಾಹೂ**—ವೀತರಾಗಸ್ವಸಂವೇದನಜ್ಞಾನಿಗಳಾದ ಸಾಧುಗಳು

ಅರ್ಥಾತ್ ರತ್ನತ್ರಯಯೋಗದಿಂದ ಮೋಕ್ಷವನ್ನು ಸಾಧಿಸುವವರಾದ ಮುನೀಂದ್ರರು **ಬೊಲ್ಲಹಿಂ** — ಹೇಳುತ್ತಾರೆ.

**ಭಾವಾರ್ಥ:**— ಪುತ್ರಕಲತ್ರಾದಿಪರವಸ್ತುಗಳಲ್ಲಿ ಮಮತ್ವವೇ ಮೊದಲಾದ ಸಮಸ್ತವಿಕಲ್ಪಗಳಿಂದ ರಹಿತವಾದ ಧ್ಯಾನದಬಲದಿಂದ ಭಾವಕರ್ಮದ್ರವ್ಯಕರ್ಮರೂಪ ವಾದ ಕಲಂಕದಿಂದ ರಹಿತರೂ ಭವ್ಯರೂ ಆದ ಜೀವರುಗಳಿಗೆ ಕೇವಲಜ್ಞಾನಾದ್ಯನಂತ ಗುಣವ್ಯಕ್ತಿರೂಪವೂ ಕಾರ್ಯಸಮಯಸಾರಭೂತವೂ ಆದ ಪರಮಾತ್ಮಸ್ವರೂಪದ ಪ್ರಾಪ್ತಿಯಾಗುವಿಕೆಯೇ ಮೋಕ್ಷವು. ಹೀಗೆಂದು ಜ್ಞಾನಿಗಳಾದ ಸಾಧುಗಳು ಹೇಳು ತ್ತಾರೆ ಮೋಕ್ಷವು ಪೂರ್ವೋಕ್ತ ಅನಂತಸುಖದ ಪ್ರಾಪ್ತಿಗೆ ಕಾರಣವಾಗಿರುವುದ ರಿಂದ (ಅಥವಾ ಅನಂತಸುಖಮಯವೇ ಆಗಿರುವುದರಿಂದ) ಉಪಾದೇಯವಾಗಿರುತ್ತ ದೆಂಬುದು ಭಾವಾರ್ಥವು

ಹೀಗೆ ಮೋಕ್ಷ–ಮೋಕ್ಷಫಲ–ಮೋಕ್ಷಮಾರ್ಗಾದಿನಿರೂಪಣಪರವಾದ ದ್ವಿತೀಯ ಮಹಾಧಿಕಾರದಲ್ಲಿ ಹತ್ತು ಸೂತ್ರಗಳಿಂದ ಮೋಕ್ಷಸ್ವರೂಪನಿರೂಪಣೆಯು ಮುಗಿದುದು.

ಇನ್ನು ಸ್ವತಂತ್ರಸೂತ್ರವೊಂದರಿಂದ ಅನಂತಚತುಷ್ಟಯರೂಪವಾದ ಮೋಕ್ಷಫಲ ವನ್ನು ಪ್ರತಿಪಾದಿಸುತ್ತಾರೆ.

**ದಂಸಣು ಣಾಣು ಅಣಂತಸುಹು, ಸಮುಉ ಣ ತುಟ್ಟಇ ಜಾಸು ।**
**ಸೋ ಪರ ಸಾಸಉ ಮೊಕ್ಖಫಲು, ಬಿಜ್ಜಉ ಅತ್ಥಿ ಣ ತಾಸು ॥ ೧೧ ॥**

"ದರ್ಶನಂ ಜ್ಞಾನಂ ಅನಂತಸುಖಂ ಸಮಯಂ ನ ತ್ರುಟ್ಯತಿ ಯಸ್ಯ ।
ತತ್ ಪರಂ ಶಾಶ್ವತಂ ಮೋಕ್ಷಫಲಂ ದ್ವಿತೀಯಂ ಅಸ್ತಿ ನ ತಸ್ಯ ॥ ೧೧ ॥"

**ಅನ್ವಯಾರ್ಥ:**— **ಜಾಸು**— ಯಾವ ಮೋಕ್ಷಪರ್ಯಾಯಧಾರಕನಾದ ಶುದ್ಧಾತ್ಮನ **ದಂಸಣು ಣಾಣು ಅಣಂತಸುಹು**— ಕೇವಲದರ್ಶನ ಕೇವಲಜ್ಞಾನ ಅನಂತಸುಖ ಮತ್ತು ಉಪಲಕ್ಷಣದಿಂದ ಅನಂತವೀರ್ಯ ಈ ಅನಂತಚತುಷ್ಟಯಮೊದಲಾದ ಅನಂತ ಗುಣಗಳ ಸಮೂಹವು **ಸಮುಉ ಣ ತುಟ್ಟಇ**— ಒಂದು ಸಮಯಮಾತ್ರವೂ ಗಲಿತ (ನಾಶ)ವಾಗುವುದಿಲ್ಲವೋ ಅರ್ಥಾತ್ ನಿರಂತರವೂ ಇರುತ್ತದೋ **ತಾಸು**– ಆ ಶುದ್ಧಾ ತ್ಮನ **ಸೋ ಪರ**— ಆ ಅನಂತಗುಣಸಮೂಹವೇ ನಿಶ್ಚಯದಿಂದ **ಸಾಸಉ ಮೊಕ್ಖ ಫಲು**– ಶಾಶ್ವತವಾದ ಮೋಕ್ಷಫಲವಾಗಿರುತ್ತದೆ **ಬಿಜ್ಜಉ ಣ ಅತ್ಥಿ**– ಇದರ ಹೊರತು ಎರಡನೆಯದೊಂದು ಮೋಕ್ಷಫಲವು ಇರುವುದಿಲ್ಲ

**ಭಾವಾರ್ಥ:**— ಅನಂತಜ್ಞಾನಾದಿಗುಣಗಳಸಮೂಹವೇ ಮೋಕ್ಷದ ಫಲವಾಗಿರು ತ್ತದೆಂದರಿತು ಆ ಗುಣಗಳ ಪ್ರಾಪ್ತಿಗಾಗಿ ರಾಗಾದಿವಿಭಾವಗಳನ್ನು ತೊರೆದು ನಿರಂತರ ಶುದ್ಧಾತ್ಮಭಾವನೆಯನ್ನೇ ಮಾಡುತ್ತಿರಬೇಕೆಂದು ತಾತ್ಪರ್ಯವು

ಮುಂದೆ ಹತ್ತೊಂಬತ್ತು ಸೂತ್ರಗಳವರೆಗೆ ನಿಶ್ಚಯವ್ಯವಹಾರಮೋಕ್ಷಮಾರ್ಗದ ವ್ಯಾಖ್ಯಾನವು ಮಾಡಲ್ಪಡುತ್ತದೆ.

**ಜೀವಹಂ ಮೊಕ್ಖಹಂ ಹೇಉ ವರು, ದಂಸಣು ಣಾಣು ಚರಿತ್ತು ।**
**ತೇ ಪುಣು ತಿಣ್ಣಿ ವಿ ಅಪ್ಪು ಮುಣಿ, ಣಿಚ್ಛಏಂ ಏಹಉ ಉತ್ತು ॥ ೧೨ ॥**

"ಜೀವಾನಾಂ ಮೋಕ್ಷಸ್ಯ ಹೇತುಃ ವರಂ ದರ್ಶನಂ ಜ್ಞಾನಂ ಚಾರಿತ್ರಮ್ ।
ತಾನಿ ಪುನಃ ತ್ರೀಣ್ಯಪಿ ಆತ್ಮಾನಂ ಮನ್ಯಸ್ವ ನಿಶ್ಚಯೇನ ಏವಂ ಉಕ್ತಮ್ ॥ ೧೨ ॥"

**ಅನ್ವಯಾರ್ಥ:— ಜೀವಹಂ ಮೊಕ್ಖಹಂ ಹೇಉ**— ಜೀವರುಗಳಿಗೆ ಮೋಕ್ಷದ ಕಾರಣವು **ವರು ದಂಸಣು ಣಾಣು ಚರಿತ್ತು**— ಉತ್ತಮವಾದ ದರ್ಶನ, ಜ್ಞಾನ ಮತ್ತು ಚಾರಿತ್ರವಾಗಿರುತ್ತದೆ **ತೇ ಪುಣು ತಿಣ್ಣಿ ವಿ**— ಮತ್ತು ಆ ಮೂರನ್ನೂ (ದರ್ಶನಜ್ಞಾನ ಚಾರಿತ್ರಗಳನ್ನು) **ಅಪ್ಪು ಮುಣಿ**— ಆತ್ಮನನ್ನಾಗಿ ತಿಳಿ **ಣಿಚ್ಛಏಂ ಏಹಉ ಉತ್ತು**- ನಿಶ್ಚಯನಯದಿಂದ ಹೀಗೆ ಹೇಳಲ್ಪಟ್ಟಿದೆ.

**ಭಾವಾರ್ಥ:**— ರತ್ನತ್ರಯವು ವ್ಯವಹಾರರತ್ನತ್ರಯ(ಭೇದರತ್ನತ್ರಯ)ವೆಂದೂ ನಿಶ್ಚಯರತ್ನತ್ರಯ(ಅಭೇದರತ್ನತ್ರಯ)ವೆಂದೂ ಎರಡುವಿಧವಾಗಿದೆ ವ್ಯವಹಾರರತ್ನ ತ್ರಯರೂಪ ಮೋಕ್ಷಮಾರ್ಗವು ನಿಶ್ಚಯರತ್ನತ್ರಯರೂಪಮೋಕ್ಷಮಾರ್ಗಕ್ಕೆ ಸಾಧಕವಾ ಗಿರುತ್ತದೆ ಹೀಗೆ ಇವೆರಡರಲ್ಲಿ ಸಾಧ್ಯಸಾಧಕಭಾವವಿರುತ್ತದೆ ಅರ್ಥಾತ್ ನಿಶ್ಚಯ ಮೋಕ್ಷಮಾರ್ಗವು ಸಾಧ್ಯವಾಗಿಯೂ ವ್ಯವಹಾರಮೋಕ್ಷಮಾರ್ಗವು ಸಾಧಕವಾಗಿಯೂ ಇರುತ್ತದೆ. ಸಾರಾಂಶತಃ ವ್ಯವಹಾರನಯದಿಂದ ಸಮ್ಯಗ್ದರ್ಶನಜ್ಞಾನಚಾರಿತ್ರಗಳು (ರತ್ನತ್ರಯವು) ಮೋಕ್ಷಕಾರಣ (ಮಾರ್ಗ)ಗಳಾಗಿರುತ್ತವೆ ಮತ್ತು ನಿಶ್ಚಯನಯದಿಂದ ರತ್ನತ್ರಯಮಯನಾದ ನಿಜಾತ್ಮನೇ ಮೋಕ್ಷಮಾರ್ಗವಾಗಿರುತ್ತಾನೆ. ಇದೇ ಆಶಯ ವನ್ನು ಶ್ರೀನೇಮಿಚಂದ್ರ ಸಿದ್ಧಾಂತಚಕ್ರವರ್ತಿಗಳು **"ದ್ರವ್ಯಸಂಗ್ರಹ"**ದಲ್ಲಿ— **"ಸಮ್ಮ ದ್ದಂಸಣಣಾಣಂ ಚರಣಂ ಮೊಕ್ಖಸ್ಸ ಕಾರಣಂ ಜಾಣೇ । ವವಹಾರಾ ಣಿಚ್ಛ ಯದೋ ತತ್ತಿಯಮಇಓ ಣಿಓಅಪ್ಪಾ ॥"** ಎಂಬ ವಚನದಿಂದ ಸ್ಪಷ್ಟಗೊಳಿಸಿರು ವರು ಅರ್ಥಾತ್ ಮೋಕ್ಷಕ್ಕೆ ರತ್ನತ್ರಯವು ವ್ಯವಹಾರಕಾರಣವೆಂದೂ ತನ್ಮಯನಾದ ನಿಜಶುದ್ಧಾತ್ಮನು ನಿಶ್ಚಯಕಾರಣನೆಂದೂ ಮುಖ್ಯಾಭಿಪ್ರಾಯವು

**ಪೆಚ್ಛಇ ಜಾಣಇ ಅಣುಚರಇ, ಅಪ್ಪಿಂ ಅಪ್ಪಉ ಜೋ ಜಿ ।**
**ದಂಸಣು ಣಾಣು ಚರಿತ್ತು ಜಿಉ, ಮೊಕ್ಖಹಂ ಕಾರಣು ಸೋ ಜಿ ॥ ೧೩ ॥**

"ಪಶ್ಯತಿ ಜಾನಾತಿ ಅನುಚರತಿ ಆತ್ಮನಾ ಆತ್ಮಾನಂ ಯ ಏವ ।
ದರ್ಶನಂ ಜ್ಞಾನಂ ಚಾರಿತ್ರಂ ಜೀವಃ ಮೋಕ್ಷಸ್ಯ ಕಾರಣಂ ಸ ಏವ ॥ ೧೩ ॥"

**ಅನ್ವಯಾರ್ಥ:— ಜೋ ಜಿ**— ಯಾವಜೀವನು **ಅಪ್ಪಿಂ ಅಪ್ಪಉ**— ತನ್ನಿಂದ ತನ್ನನ್ನು **ಪೆಚ್ಛಇ ಜಾಣಇ ಅಣುಚರಇ**— ನೋಡುತ್ತಾನೆಯೋ ತಿಳಿಯುತ್ತಾನೆಯೋ ಮತ್ತು ಆಚರಿಸುತ್ತಾನೆಯೋ **ದಂಸಣು ಣಾಣು ಚರಿತ್ತು**— ದರ್ಶನಜ್ಞಾನಚಾರಿತ್ರ(ರತ್ನ ತ್ರಯ)ರೂಪವಾಗಿ ಪರಿಣತನಾದ **ಸೋ ಜಿ ಜಿಉ**–ಆ ಜೀವನೇ **ಮೊಕ್ಖಹಂ ಕಾರಣು**– ಮೋಕ್ಷಕ್ಕೆ ಕಾರಣನಾಗಿರುತ್ತಾನೆ.

**ಭಾವಾರ್ಥ:**— ಯಾವ ಭವ್ಯಜೀವನು ತನ್ನಾತ್ಮನನ್ನು ತಾನು ನಿರ್ವಿಕಲ್ಪರೂಪ ದಿಂದ ನೋಡುತ್ತಾನೋ ಅಥವಾ ತತ್ತ್ವಾರ್ಥಶ್ರದ್ಧಾನದಲ್ಲಿ ಚಂಚಲತೆ ಮಲಿನತೆ ಶಿಥಿಲತೆಗಳನ್ನು ತೊರೆದು ಶುದ್ಧಾತ್ಮನೇ ಉಪಾದೇಯನಾಗಿರುತ್ತಾನೆಂಬ ದೃಢಶ್ರದ್ಧಾನ ವುಳ್ಳವನಾಗುತ್ತಾನೋ, ವೀತರಾಗಸ್ವಸಂವೇದನಜ್ಞಾನದಿಂದ ನಿಜಾತ್ಮನನ್ನು ತಿಳಿಯು ತ್ತಾನೋ ಹಾಗೂ ಸಮಸ್ತರಾಗಾದಿವಿಕಲ್ಪಗಳನ್ನು ತೊರೆದವನಾಗಿ ನಿಜಾತ್ಮಸ್ವರೂಪ ದಲ್ಲಿ ಸ್ಥಿರತೆಯನ್ನು ಪಡೆಯುತ್ತಾನೋ ಅಂತಹ ಜೀವನು ನಿಶ್ಚಯ-ರತ್ನತ್ರಯಮಯ (ರತ್ನತ್ರಯಪರಿಣತ)ನಾಗುತ್ತಾನೆ. ಹೀಗೆ ನಿಶ್ಚಯರತ್ನತ್ರಯಪರಿಣತನಾದ ಜೀವನೇ ನಿಶ್ಚಯದಿಂದ ಮೋಕ್ಷಕ್ಕೆ ಕಾರಣ(ನಿಶ್ಚಯಮೋಕ್ಷಮಾರ್ಗ)ನಾಗಿರುತ್ತಾನೆ. ಇಲ್ಲಿ ಶಿಷ್ಯನು ಪ್ರಶ್ನೆಮಾಡುತ್ತಾನೆ.— ಸ್ವಾಮಿಯೇ! ತತ್ತ್ವಾರ್ಥಶ್ರದ್ಧಾನರೂಪವಾದ ಸಮ್ಯ ಗ್ದರ್ಶನವು ಮೋಕ್ಷಮಾರ್ಗವೆಂಬುದರಲ್ಲಿ ಸಂದೇಹವಿಲ್ಲ. ಆದರೆ ಮೇಲಿನ ವಿವರಣೆ ಯಲ್ಲಿ ನೋಡುವಿಕೆಯು ದರ್ಶನವೆಂದು ತಮ್ಮಿಂದ ಹೇಳಲ್ಪಟ್ಟಿತು ನೋಡುವಿಕೆಯ ರೂಪವಾದ ಈ ದರ್ಶನವು ಹೇಗೆ ಮೋಕ್ಷಮಾರ್ಗವಾಗಬಲ್ಲುದು? ಏಕೆಂದರೆ ದರ್ಶ ನಕ್ಕೆ ನೋಡುವಿಕೆಯೆಂದು ಅರ್ಥಮಾಡಿದುದಾದರೆ ಅಭವ್ಯನೂ ನೋಡುತ್ತಾನೆ. ಅವನ ದರ್ಶನ(ನೋಡುವಿಕೆ)ವೂ ಮೋಕ್ಷಮಾರ್ಗವಾಗಬೇಕಾಗುವುದು. ಅಭವ್ಯನಿಗೆ ಮೋಕ್ಷ ಪ್ರಾಪ್ತಿಯಾಗುತ್ತದೆಂಬುದು ಆಗಮವಿರುದ್ಧವಾದುದು ಎಂದು. ಗುರುಗಳು ಉತ್ತರಿಸು ತ್ತಾರೆ·— ಅಭವ್ಯರಿಗೆ ಬಾಹ್ಯಪದಾರ್ಥಗಳ ದರ್ಶನ(ನೋಡುವಿಕೆ)ಮಾತ್ರವೇ ಉಂಟಾ ಗುತ್ತದಲ್ಲದೆ ಅಂತರಂಗಶುದ್ಧಾತ್ಮತತ್ತ್ವದ ದರ್ಶನವುಂಟಾಗುವುದಿಲ್ಲ ಏಕೆಂದರೆ ಅವ ರಲ್ಲಿ ಮಿಥ್ಯಾತ್ವಾದಿಸಪ್ತಪ್ರಕೃತಿಗಳ ಉಪಶಮ ಕ್ಷಯೋಪಶಮಕ್ಷಯಗಳಿರುವುದಿಲ್ಲ ಹಾಗೂ ಶುದ್ಧಾತ್ಮನೇ ಉಪಾದೇಯನಾಗಿರುತ್ತಾನೆಂಬ ಶ್ರದ್ಧಾನರೂಪವಾದ ಸಮ್ಯ ಗ್ದರ್ಶನವೂ ಅವರಲ್ಲಿರುವುದಿಲ್ಲ ಹಾಗೆಯೇ ಚಾರಿತ್ರಮೋಹದ ಉದಯವಿರುವುದ ರಿಂದ ವೀತರಾಗಚಾರಿತ್ರರೂಪವುಳ್ಳ ನಿರ್ವಿಕಲ್ಪಶುದ್ಧಾತ್ಮಸತ್ತಾವಲೋಕನವೂ ಅವ ರಲ್ಲುಂಟಾಗುವುದಿಲ್ಲ. ಅತಏವ ಅಭವ್ಯರಲ್ಲುಂಟಾಗುವ ಬಾಹ್ಯಪದಾರ್ಥದರ್ಶನವು ಮೋಕ್ಷಮಾರ್ಗವಾಗಿರುವುದಿಲ್ಲವೆಂದು ಭಾವವು ನಿಶ್ಚಯನಯದಿಂದ ಅಭೇದರತ್ನ ತ್ರಯಪರಿಣತನಾದ ನಿಜಶುದ್ಧಾತ್ಮನೇ ಮೋಕ್ಷಕಾರಣನಾಗಿರುತ್ತಾನೆಂಬೀ ವಿಷಯದಲ್ಲಿ **"ದ್ರವ್ಯಸಂಗ್ರಹ"**ದ ಪ್ರಮಾಣವು ಹೀಗಿರುತ್ತದೆ:— **"ರಯಣತ್ತಯಂ ಣ ವಟ್ಟಇ ಅಪ್ಪಾಣಂ ಮುಇತ್ತು ಅಣ್ಣದವಿಯಮ್ಹಿ । ತಮ್ಹಾ ತತ್ತಿಯಮಇಓ ಹೋದಿ ಹು ಮೊಕ್ಖಸ್ಸ ಕಾರಣಂ ಆದಾ ॥"** "ಅರ್ಥಾತ್" ರತ್ನತ್ರಯವು ಆತ್ಮನನ್ನು ಬಿಟ್ಟು ಇತರ ಪರವಸ್ತುವಿನಲ್ಲಿರುವುದಿಲ್ಲ. ಆದುದರಿಂದ ಆ ರತ್ನತ್ರಯಮಯ(ಸ್ವರೂಪ)ನಾದ ಆತ್ಮನು ನಿಶ್ಚಯವಾಗಿ ಮೋಕ್ಷಕ್ಕೆ ಕಾರಣನಾಗಿರುತ್ತಾನೆ.

**ಜಂ ಬೊಲ್ಲಇ ವವಹಾರಣಉ, ದಂಸಣು ಣಾಣು ಚರಿತ್ತು ।**
**ತಂ ಪರಿಯಾಣಹಿ ಜೀವ ತುಹುಂ, ಜೇಂ ಪರು ಹೋಹಿ ಪವಿತ್ತು ॥೧೪॥**

"ಯತ್ ಬ್ರೂತೇ ವ್ಯವಹಾರನಯಃ ದರ್ಶನಂ ಜ್ಞಾನಂ ಚಾರಿತ್ರಮ್ ।
ತತ್ ಪರಿಜಾನೀಹಿ ಜೀವ ತ್ವಂ ಯೇನ ಪರಃ ಭವಸಿ ಪವಿತ್ರಃ ॥ ೧೪ ॥"

**ಅನ್ವಯಾರ್ಥ:-ಜೀವ**-ಎಲೈ ಜೀವನೇ! **ವವಹಾರಣಉ**-ವ್ಯವಹಾರನಯವು **ಜಂ ದಂಸಣು ಣಾಣು ಚರಿತ್ತು**—ಯಾವ ದರ್ಶನ ಜ್ಞಾನ ಚಾರಿತ್ರರೂಪರತ್ನತ್ರಯ ವನ್ನು **ಬೊಲ್ಲಇ**—ಹೇಳುತ್ತದೆಯೋ **ತಂ**—ಅದನ್ನು **ತುಹುಂ ಪರಿಯಾಣಹಿ**— ನೀನು ಚೆನ್ನಾಗಿ ತಿಳಿ **ಜೇಂ ಪರು ಹೋಹಿ ಪವಿತ್ತು**—ಯಾವಕಾರಣದಿಂದ(ವ್ಯವ ಹಾರರತ್ನತ್ರಯವನ್ನು ತಿಳಿಯುವುದರಿಂದ) ಉತ್ಕೃಷ್ಟನೂ ಪವಿತ್ರನೂ ಆಗುತ್ತಿ

**ಭಾವಾರ್ಥ:**—ಜೀವನೇ! ನೀನು ತತ್ತ್ವಾರ್ಥಶ್ರದ್ಧಾನರೂಪಸಮ್ಯಗ್ದರ್ಶನ, ಶಾಸ್ತ್ರಜ್ಞಾನರೂಪಸಮ್ಯಗ್ಜ್ಞಾನ ಮತ್ತು ಅಶುಭಕ್ರಿಯೆಗಳ ನಿವೃತ್ತಿರೂಪಸಮ್ಯಕ್ಚಾರಿತ್ರ ಇವು ಮೂರು ನಿಶ್ಚಯಮೋಕ್ಷಮಾರ್ಗಕ್ಕೆ ಸಾಧಕವಾದ ವ್ಯವಹಾರಮೋಕ್ಷಮಾರ್ಗ ವೆಂದು ತಿಳಿ ಹೀಗೆ ತಿಳಿದು ಆರಾಧಿಸುವುದರಿಂದ ನೀನು ಪರಂಪರೆಯಿಂದ ಪವಿತ್ರ ಪರಮಾತ್ಮನಾಗುವೆ. ನಿರ್ವಿಕಲ್ಪವೂ ನಿಶ್ಚಯಮೋಕ್ಷಮಾರ್ಗವೂ ಆದ ನಿಶ್ಚಯರತ್ನ ತ್ರಯವು ಸಾಧ್ಯವಾಗಿಯೂ ಸವಿಕಲ್ಪವೂ ವ್ಯವಹಾರಮೋಕ್ಷಮಾರ್ಗವೂ ಆದ ವ್ಯವ ಹಾರರತ್ನತ್ರಯವು ಸಾಧನವಾಗಿಯೂ ಇರುತ್ತದೆ ಇಲ್ಲಿ ಸವಿಕಲ್ಪವು ನಿರ್ವಿಕಲ್ಪಕ್ಕೆ ಹೇಗೆ ಸಾಧನವಾಗುತ್ತದೆ ಅರ್ಥಾತ್ ವ್ಯವಹಾರರತ್ನತ್ರಯವು ನಿಶ್ಚಯರತ್ನತ್ರಯಕ್ಕೆ ಹೇಗೆ ಸಾಧನವಾಗುತ್ತದೆ? ಎಂಬ ಪ್ರಶ್ನೆಗೆ ಉತ್ತರವೇನೆಂದರೆ —ಅನಾದಿಕಾಲದಿಂದಲೂ ವಿಷಯಕಷಾಯಗಳಿಂದ ಮಲಿನನಾಗಿರುವ ಈ ಜೀವನು ವ್ಯವಹಾರಸಾಧನದ ಹೊರತು ಉಜ್ಜ್ವಲ(ಪರಿಶುದ್ಧ)ನಾಗಲಾರನು. ಮಲಿನವಸ್ತ್ರವನ್ನು ಶುದ್ಧೀಕರಿಸಿದನಂತರ ಅದಕ್ಕೆ ಕೊಟ್ಟ ಬಣ್ಣವು ಉಜ್ಜ್ವಲವೂ ಸ್ಥಿರವೂ ಆಗುವಂತೆ ಮಿಥ್ಯಾತ್ವ ಅವ್ರತ ಮತ್ತು ಕಷಾಯಾದಿಗಳು ಕ್ಷೀಣವಾಗುವುದರಿಂದ ಯಥಾರ್ಥದೇವಗುರುಶಾಸ್ತ್ರಗಳಲ್ಲಿ ಶ್ರದ್ಧೆ ಯನ್ನೂ ತತ್ತ್ವಜ್ಞಾನವನ್ನೂ ಅಶುಭಕ್ರಿಯಾನಿವೃತ್ತಿಯನ್ನೂ ಪಡೆದ ಜೀವನೇ ಅಧ್ಯಾತ್ಮ ಪ್ರವೃತ್ತಿಯಲ್ಲಿ ಅಧಿಕಾರಿಯಾಗುತ್ತಾನೆ. ಹೀಗೆ ನಿಶ್ಚಯರತ್ನತ್ರಯವು ಮೋಕ್ಷಕ್ಕೆ ಸಾಕ್ಷಾತ್ ಕಾರಣವೂ ವ್ಯವಹಾರರತ್ನತ್ರಯವು ಪರಂಪರಾಕಾರಣವೂ ಆಗಿರುತ್ತದೆ. ನಿಶ್ಚಯಮೋಕ್ಷಮಾರ್ಗವೂ ಸವಿಕಲ್ಪ-ನಿರ್ವಿಕಲ್ಪಭೇದದಿಂದ ಎರಡು ವಿಧವಾಗಿದೆ. "ನಾನು ಅನಂತಜ್ಞಾನಸ್ವರೂಪನು, ನಾನು ಶುದ್ಧನು, ನಾನು ಅದ್ವಿತೀಯನು" ಎಂದು ಮೊದಲಾದ ಚಿಂತನೆಯು ಸವಿಕಲ್ಪನಿಶ್ಚಯಮೋಕ್ಷಮಾರ್ಗವಾಗಿದೆ ಇದು ಸಾಧಕ ವೆನಿಸುತ್ತದೆ. ಯಾವುದೊಂದು ಚಿಂತನೆಯೂ, ವಚನವೂ ಚೇಷ್ಟೆಯೂ ಇಲ್ಲದ ನಿರ್ವಿಕಲ್ಪಸಮಾಧಿಯು ನಿರ್ವಿಕಲ್ಪನಿಶ್ಚಯಮೋಕ್ಷಮಾರ್ಗವಾಗಿರುತ್ತದೆ ಇದೇ ಆಶಯವನ್ನು **"ದ್ರವ್ಯಸಂಗ್ರಹ"**ದಲ್ಲಿ **"ಮಾಚಿಟ್ಠಹ ಮಾಜಂಪಹ ಮಾಚಿಂತಹ ಕಿಂ ವಿ ಜೇಣ ಹೋಇ ಥಿರೋ । ಅಪ್ಪಾ ಅಪ್ಪಮ್ಮಿ ರಓ ಇಣಮೇವ ಪರಂ ಹವೇ ಝಾಣಂ ॥"** ಎಂಬ ಗಾಥೆಯಿಂದ ವ್ಯಕ್ತಗೊಳಿಸಿರುವರು ಅರ್ಥಾತ್ "ಕರ್ಮಾಸ್ರವಕ್ಕೆ ಕಾರಣವಾದ ಕಾಯವ್ಯಾಪಾರ (ಕಾಯಚೇಷ್ಟೆ)ವನ್ನು ಮಾಡದಿರಿ, ಕರ್ಮಾಸ್ರವಕ್ಕೆ ಕಾರಣವಾದ ಮಾತುಗಳನ್ನಾಡದಿರಿ, ಕರ್ಮಬಂಧನಕ್ಕೆ ಕಾರಣವಾದ ಯಾವ ವಸ್ತುಗಳನ್ನೂ ಚಿಂತಿಸದಿರಿ, ಯಾವ ಧ್ಯಾನದಿಂದ ಆತ್ಮನು ಆತ್ಮನಲ್ಲಿ ಲೀನ

ನಾಗಿಯೂ ಸ್ಥಿರನಾಗಿಯೂ ಆಗುತ್ತಾನೋ ಇದೇ ಉತ್ಕೃಷ್ಟವಾದ ನಿರ್ವಿಕಲ್ಪವರಮ ಧ್ಯಾನವಾಗಿರುವುದು ಅಥವಾ ನಿರ್ವಿಕಲ್ಪನಿಶ್ಚಯಮೋಕ್ಷಮಾರ್ಗವಾಗಿರುವುದೆಂದಭಿ ಪ್ರಾಯವು ಹೀಗೆಯೇ **"ತತ್ತ್ವಸಾರ"**ದಲ್ಲಿಯೂ ಸವಿಕಲ್ಪ-ನಿರ್ವಿಕಲ್ಪನಿಶ್ಚಯ ಮೋಕ್ಷಮಾರ್ಗವನ್ನು ಹೀಗೆ ನಿರೂಪಿಸಿದ್ದಾರೆ—**"ಜಂ ಪುಣ ಸಗಯಂ ತಚ್ಚಂ ಸವಿಯಪ್ಪಂ ಹೋಇ ತಹ ಯ ಅವಿಯಪ್ಪಂ। ಸವಿಯಪ್ಪಂ ಸಾಸವಯಂ ಣಿರಾಸವಂ ವಿಗಯಸಂಕಪ್ಪಂ ॥"** ಅಂದರೆ ಆತ್ಮತತ್ತ್ವವೂ ಸವಿಕಲ್ಪ-ನಿರ್ವಿಕಲ್ಪ ಭೇದದಿಂದ ಎರಡು ವಿಧವಾಗಿರುತ್ತದೆ ಇವೆರಡರಲ್ಲಿ ಸವಿಕಲ್ಪವು ಆಸ್ರವಸಹಿತ ವಾಗಿಯೂ ನಿರ್ವಿಕಲ್ಪವು ಆಸ್ರವರಹಿತವಾಗಿಯೂ ಇರುತ್ತದೆ.

ಮುಂದೆ ಹದಿನಾಲ್ಕು ಸೂತ್ರಗಳಿಂದ ವ್ಯವಹಾರಮೋಕ್ಷಮಾರ್ಗದ ಮೊದಲ ಅಂಗ ವಾದ ವ್ಯವಹಾರಸಮ್ಯಕ್ತ್ವವನ್ನು ಪ್ರತಿವಾದಿಸುತ್ತಾರೆ.

**ದವ್ವಾಇ ಜಾಣಇ ಜಹಠಿಯಾಇಂ, ತಹ ಜಗಿ ಮಣ್ಣಇ ಜೋ ಜಿ।**
**ಅಪ್ಪಹಂ ಕೇರಉ ಭಾವುಡಉ, ಅವಿಚಲು ದಂಸಣು ಸೋ ಜಿ ॥ ೧೫ ॥**

"ದ್ರವ್ಯಾಣಿ ಜಾನಾತಿ ಯಥಾಸ್ಥಿತಾನಿ ತಥಾ ಜಗತಿ ಮನ್ಯತೇ ಯ ಏವ।
ಆತ್ಮನಃ ಸಂಬಂಧೀ ಭಾವಃ ಅವಿಚಲಃ ದರ್ಶನಂ ಸ ಏವ ॥ ೧೫ ॥"

**ಅನ್ವಯಾರ್ಥ:—ಜೋ ಜಿ**—ಯಾವುದು **ಜಗಿ**—ಲೋಕದಲ್ಲಿ **ದವ್ವಾಇಂ**—ದ್ರವ್ಯಗಳನ್ನು **ಜಹಠಿಯಾಇಂ**—ಇದ್ದಕ್ಕಿದ್ದಂತೆ (ಹೇಗಿರುತ್ತವೋ ಹಾಗೆ) **ಜಾಣಇ**—ತಿಳಿಯುವುದೋ **ಮಣ್ಣಇ**—ನಂಬುವುದೋ **ಅಪ್ಪಹಂ ಕೇರಉ**—ಆತ್ಮನ ಸಂಬಂಧವಾದ **ಅವಿಚಲು**—ಚಲಮಲಿನಾವಗಾಢದೋಷರಹಿತವಾದ (ನಿಶ್ಚಲವಾದ) **ಸೋ ಜಿ ಭಾವಡಉ**—ಆ ಭಾವವೇ **ದಂಸಣು**—ಸಮ್ಯಗ್ದರ್ಶನವು

**ಭಾವಾರ್ಥ:**—ಲೋಕದಲ್ಲಿ ಭರಿತವಾಗಿರುವ ಜೀವಾದಿ-ಷಡ್ದ್ರವ್ಯಗಳ ಸ್ವರೂಪವನ್ನು ಚೆನ್ನಾಗಿ ತಿಳಿದು ಅವುಗಳಲ್ಲಿ ದೃಢಶ್ರದ್ಧಾನ(ನಿಶ್ಚಲವಾದ ನಂಬಿಕೆ)ವನ್ನಿಡುವುದು ಸಮ್ಯಗ್ದರ್ಶನವು. ಸಮ್ಯಗ್ದರ್ಶನವು ಆತ್ಮನ ನಿಜಸ್ವಭಾವವಾಗಿರುತ್ತದೆ. ವೀತರಾಗ ನಿರ್ವಿಕಲ್ಪಸ್ವಸಂವೇದನಜ್ಞಾನ (ನಿಶ್ಚಯಸಮ್ಯಗ್ಜ್ಞಾನ)ದಿಂದ ಆತ್ಮತತ್ತ್ವವನ್ನರಿತು "ಸರ್ವದ್ರವ್ಯಗಳಲ್ಲಿ ನಿಜಾತ್ಮದ್ರವ್ಯವೊಂದೇ ಧ್ಯಾನಯೋಗ್ಯವಾಗಿರುತ್ತದೆ." ಎಂಬ ದೃಢ ಶ್ರದ್ಧಾನವು ನಿಶ್ಚಯಸಮ್ಯಗ್ದರ್ಶನವಾಗಿರುತ್ತದೆ. ನಿಶ್ಚಯಸಮ್ಯಗ್ದರ್ಶನಕ್ಕೆ ಪರಂಪರಾ ಕಾರಣವಾದ ದೇವಗುರುಶಾಸ್ತ್ರಗಳಲ್ಲಿ ನಂಬಿಕೆಯೂ ಷಡ್ದ್ರವ್ಯ ಸಪ್ತತತ್ತ್ವ ಮತ್ತು ನವಪದಾರ್ಥಗಳಲ್ಲಿ ದೃಢಶ್ರದ್ಧಾನವೂ ವ್ಯವಹಾರಸಮ್ಯಗ್ದರ್ಶನವಾಗಿರುತ್ತದೆ. *ದೇವ ಮೂಢ ಗುರುಮೂಢ ಮತ್ತು ಧರ್ಮಮೂಢ(ಲೋಕಮೂಢ)ಗಳೆಂಬ ಮೂರು ಮೂಢತೆಗಳೂ, ಜ್ಞಾನಮದ ಪೂಜಾಮದ ಕುಲಮದ ಜಾತಿಮದ ಬಲಮದ ಋದ್ಧಿಮದ

*** ಮೂಢತ್ರಯಂ ಮದಾಶ್ಚಾಷ್ಟೌ ತಥಾನಾಯತನಾನಿ ಷಟ್। ಅಷ್ಟೌ ಶಂಕಾದಯಶ್ಚೇತಿ ದೃಗ್ದೋಷಾಃ ಪಂಚವಿಂಶತಿಃ ॥**

ತಪೋಮದ ಶರೀರಮದಗಳೆಂಬ ಎಂಟು ಮದಗಳೂ, ಕುಗುರು ಕುದೇವ ಕುಧರ್ಮ ಮತ್ತು ಇವುಗಳ ಆರಾಧಕರ ಪ್ರಶಂಸಾರೂಪವಾದ ಆರು ಅನಾಯತನಗಳೂ, ಶಂಕಾ ಕಾಂಕ್ಷಾ ವಿಚಿಕಿತ್ಸಾ ಅನ್ಯದೃಷ್ಟಿಪ್ರಶಂಸಾ ಅನುಪಗೂಹನ ಅಸ್ಥಿತೀಕರಣ ಅವಾತ್ಸಲ್ಯ ಮತ್ತು ಅಪ್ರಭಾವನಾ ಎಂಬ ಎಂಟು ಶಂಕಾದಿದೋಷಗಳೂ ಹೀಗೆ ಇವು ವ್ಯವಹಾರ ಸಮ್ಯಗ್ದರ್ಶನಕ್ಕೆ ಇಪ್ಪತ್ತೈದು ಮಲ(ದೋಷ)ಗಳಾಗಿರುತ್ತವೆ ಈ ಇಪ್ಪತ್ತೈದು ದೋಷ ಗಳಿಂದ ರಹಿತವಾದುದೂ ಅಸ್ಥಿರಬುದ್ಧಿ ಪರಿಣಾಮಗಳ ಮಲಿನತೆ ಮತ್ತು ಶಿಥಿಲತೆಗಳಿಂದ ರಹಿತವಾದುದೂ ವ್ಯವಹಾರಸಮ್ಯಗ್ದರ್ಶನವಾಗಿರುತ್ತದೆಂದಭಿಪ್ರಾಯವು ಈ ಸಮ್ಯ ಗ್ದರ್ಶನವು ಸಕಲಾಭೀಷ್ಟಪ್ರದವಾದ ಚಿಂತಾಮಣಿಯಂತೆಯೂ ಕಾಮಧೇನುವಿನಂತೆಯೂ ಕಲ್ಪವೃಕ್ಷದಂತೆಯೂ ಇರುತ್ತದೆ ಅರ್ಥಾತ್ *ಯಾವಾತನ ಕೈಯಲ್ಲಿ ಚಿಂತಾಮಣಿಯೂ ಮನೆಯಲ್ಲಿ ಕಲ್ಪವೃಕ್ಷವೂ ಧನಾಗಾರದಲ್ಲಿ ಕಾಮಧೇನುವೂ ಇರುವುದೋ ಆತನು ಪ್ರಾರ್ಥಿಸ(ಇಚ್ಛಿಸ)ಬೇಕಾದ ಬೇರೆ ಪದಾರ್ಥವಾದರೂ ಯಾವುದಿರುವುದು? ಅತಏವ ಸಮ್ಯಗ್ದರ್ಶನವು ಚಿಂತಾಮಣಿ ಮೊದಲಾದುವುಗಳಂತೆ ಸರ್ವಅಭೀಷ್ಟಗಳನ್ನುಂಟುಮಾ ಡುವುದೆಂದು ತಿಳಿದು ಅದನ್ನೇ ಗ್ರಹಣೆಮಾಡಬೇಕೆಂದು ಮುಖ್ಯಾಭಿಪ್ರಾಯವು.

**ದವ್ವಹಂ ಜಾಣಹಿ ತಾಇಂ ಛಹ, ತಿಹುಯಣು ಭರಿಯಉ ಜೇಹಿಂ ।**
**ಆಇವಿಣಾಸವಿವಜ್ಜಿಯಹಿಂ, ಣಾಣಿಹಿ ಪಭಣಿಯಏಹಿಂ ॥ ೧೬ ॥**

"ದ್ರವ್ಯಾಣಿ ಜಾನೀಹಿ ತಾನಿ ಷಟ್ ತ್ರಿಭುವನಂ ಭೃತಂ ಯೈಃ ।
ಆದಿವಿನಾಶವಿವರ್ಜಿತೈಃ ಜ್ಞಾನಿಭಿಃ ಪ್ರಭಣಿತೈಃ ॥ ೧೬ ॥"

**ಅನ್ವಯಾರ್ಥ:— ಆಇವಿಣಾಸವಿವಜ್ಜಿಯಹಿಂ**— ಆದ್ಯಂತರಹಿತವಾದುವೂ **ಣಾಣಿಹಿ ಪಭಣಿಯಏಹಿಂ**–ಜ್ಞಾನಿಗಳಿಂದ ಚೆನ್ನಾಗಿ ಹೇಳಲ್ಪಟ್ಟವುಗಳೂ ಆದ **ಜೇಹಿಂ** ಯಾವ ದ್ರವ್ಯಗಳಿಂದ **ತಿಹುಯಣು ಭರಿಯಉ**— ತ್ರಿಭುವನ(ಮೂರ್ಲೋಕ)ವು ಧರಿಸ ಲ್ಪಟ್ಟಿದೆಯೋ (ಅಥವಾ ತುಂಬಲ್ಪಟ್ಟಿದೆಯೋ) **ತಾಇಂ ಛಹ ದವ್ವಹಂ**— ಆ ಆರು ದ್ರವ್ಯಗಳನ್ನು ನೀನು **ಜಾಣಹಿ**— ತಿಳಿ.

**ಭಾವಾರ್ಥ:**— "ಷಡ್ದ್ರವ್ಯಭರಿತೋ ಲೋಕಃ" ಎಂಬ ಆಗಮೋಕ್ತಿಯಂತೆ ಲೋಕವು ಜೀವದ್ರವ್ಯಮೊದಲಾದ ಆರು ದ್ರವ್ಯಗಳಿಂದ ತುಂಬಿರುತ್ತದೆ. ಈ ಅಪೇಕ್ಷೆ ಯಿಂದ ಲೋಕವು ಈ ದ್ರವ್ಯಗಳಿಂದಲೇ ಉಂಟಾದುದಾಗಿದೆ. ಅರ್ಥಾತ್ ಈ ಲೋಕಕ್ಕೆ ಯಾರೊಬ್ಬ ಸೃಷ್ಟಿಕರ್ತನಾಗಲಿ ರಕ್ಷಕನಾಗಲಿ ಅಥವಾ ನಾಶಕನಾಗಲಿ ಇರುವುದಿಲ್ಲ. ಷಡ್ದ್ರವ್ಯಗಳು ದ್ರವ್ಯಾರ್ಥಿಕನಯದಿಂದ ಆದ್ಯಂತರಹಿತವಾಗಿರುತ್ತವೆ. ಹಾಗೆಯೇ ಲೋಕವೂ ಅನಾದಿನಿಧನವಾಗಿರುತ್ತದೆ. ಯದ್ಯಪಿ ಈ ಆರು ದ್ರವ್ಯಗಳು ವ್ಯವಹಾರಸಮ್ಯಗ್ದರ್ಶನದ ವಿಷಯಗಳಾಗಿರುತ್ತವಾದರೂ ಶುದ್ಧನಿಶ್ಚಯನಯದಿಂದ

---

*ಹಸ್ತೇ ಚಿಂತಾಮಣಿರ್ಯಸ್ಯ ಗೃಹೇ ಯಸ್ಯ ಸುರದ್ರುಮಃ । ಕಾಮಧೇನುರ್ಧನೇ ಯಸ್ಯ ತಸ್ಯ ಕಾ ಪ್ರಾರ್ಥನಾ ಪರಾ ॥

ನಿತ್ಯಾನಂದಸ್ವಭಾವವುಳ್ಳ ನಿಜಶುದ್ಧಾತ್ಮನೇ ಶುದ್ಧಾತ್ಮಾನುಭೂತಿರೂಪವಾದ ವೀತರಾಗ ಸಮ್ಯಕ್ತ್ವದ ವಿಷಯವಾಗಿರುತ್ತಾನೆ.

**ಜೀಉ ಸಚೇಯಣು ದವ್ವ ಮುಣಿ, ಪಂಚ ಅಚೇಯಣ ಅಣ್ಣ ।**
**ಪೊಗ್ಗಲು ಧಮ್ಮಾಹಮ್ಮು ಣಹು, ಕಾಲೇಂ ಸಹಿಯಾ ಭಿಣ್ಣ ॥ ೧೭ ॥**

"ಜೀವಂ ಸಚೇತನಂ ದ್ರವ್ಯಂ ಮನ್ಯಸ್ವ ಪಂಚ ಅಚೇತನಾನಿ ಅನ್ಯಾನಿ ।
ಪುದ್ಗಲಃ ಧರ್ಮಾಧರ್ಮೌ ನಭಃ ಕಾಲೇನ ಸಹಿತಾನಿ ಭಿನ್ನಾನಿ ॥ ೧೭ ॥

**ಅನ್ವಯಾರ್ಥ:-ಜೀಉ ಸಚೇಯಣು ದವ್ವ**-ಜೀವನು ಸಚೇತನದ್ರವ್ಯವೆಂದೂ **ಅಣ್ಣ**— ಜೀವನಿಗಿಂತ ಬೇರೆಯಾದ (ಇತರ) **ಕಾಲೇಂ ಸಹಿಯಾ**— ಕಾಲದ್ರವ್ಯದಿಂದ ಕೂಡಿದ **ಪುಗ್ಗಲು ಧಮ್ಮಾಹಮ್ಮು ಣಹು**— ಪುದ್ಗಲವು ಧರ್ಮಾಧರ್ಮಗಳು ಮತ್ತು ಆಕಾಶವು **ಪಂಚ**— ಇವ್ವೈದು ದ್ರವ್ಯಗಳು **ಅಚೇಯಣ**— ಅಚೇತನದ್ರವ್ಯಗಳೆಂದೂ **ಭಿಣ್ಣ**— ತಮ್ಮತಮ್ಮ ಲಕ್ಷಣಗಳಿಂದ ಪರಸ್ಪರಭಿನ್ನವಾದುವುಗಳೆಂದೂ **ಮುಣಿ**— ತಿಳಿ.

**ಭಾವಾರ್ಥ:**— ಜೀವದ್ರವ್ಯವು ಸಚೇತನವಾಗಿದೆ ಇತರ ಪುದ್ಗಲಾದಿ ಐದು ಅಚೇತನದ್ರವ್ಯಗಳು ಕಾಲದ್ರವ್ಯದ ಹೊರತು ಉಳಿದ ಐದು ದ್ರವ್ಯಗಳು ಅಸ್ತಿಕಾಯ ಗಳಾಗಿರುತ್ತವೆ.

**ವಿಶೇಷಾರ್ಥ:**— ಸಮ್ಯಕ್ತ್ವವು ಸರಾಗಸಮ್ಯಕ್ತ್ವವೆಂದೂ ವೀತರಾಗಸಮ್ಯಕ್ತ್ವ ವೆಂದೂ ಎರಡು ಭೇದಗಳುಳ್ಳದಾಗಿದೆ ಶಾಂತಪರಿಣಾಮರೂಪವಾದ 'ಪ್ರಶಮ,' ಜಿನಧರ್ಮಾಸಕ್ತಿ ಹಾಗೂ ಸಂಸಾರದಲ್ಲಿ ಉದಾಸೀನಭಾವರೂಪವಾದ 'ಸಂವೇಗ,' ಜೀವದಯಾರೂಪವಾದ 'ಅನುಕಂಪಾ,' ದೇವಗುರುಶಾಸ್ತ್ರ ಹಾಗೂ ಷಡ್ದ್ರವ್ಯಗಳಲ್ಲಿ ಶ್ರದ್ಧಾರೂಪವಾದ 'ಆಸ್ತಿಕ್ಯ,' ಈ ನಾಲ್ಕು ಗುಣಗಳ ಅಭಿವ್ಯಕ್ತಿ(ಪ್ರಕಟ)ರೂಪವಾದುದು ಸರಾಗಸಮ್ಯಕ್ತ್ವವು. ಇದೇ ವ್ಯವಹಾರಸಮ್ಯಕ್ತ್ವವಾಗಿರುತ್ತದೆ. ವೀತರಾಗಚಾರಿತ್ರ ಮಯವೂ ನಿಜಶುದ್ಧಾತ್ಮಾನುಭೂತಿಲಕ್ಷಣವುಳ್ಳುದೂ ಆದ ನಿಶ್ಚಯಸಮ್ಯಕ್ತ್ವವೇ ವೀತ ರಾಗಸಮ್ಯಕ್ತ್ವವಾಗಿರುತ್ತದೆ. ಪ್ರಶ್ನೆ:—'ನಿಜಶುದ್ಧಾತ್ಮನೇ ಉಪಾದೇಯನಾಗಿರುತ್ತಾನೆ' ಎಂಬ ಶ್ರದ್ಧೆ (ರುಚಿ, ನಂಬಿಕೆ)ಯು ನಿಶ್ಚಯ-ಸಮ್ಯಕ್ತ್ವವಾಗಿರುತ್ತದೆಂದು ಹಿಂದೆ ಅನೇಕ ಬಾರಿ ಹೇಳಿರುವುದರಿಂದ ಇಲ್ಲಿ ಪುನಃ 'ವೀತರಾಗಚಾರಿತ್ರಮಯವಾಗಿರುವುದು ಅರ್ಥಾತ್ ವೀತರಾಗಚಾರಿತ್ರದೊಡನೆ ತನ್ಮಯವಾಗಿರುವುದು' ನಿಶ್ಚಯಸಮ್ಯಕ್ತ್ವವೆಂದು ಹೇಳುವ ಮಾತು ಪೂರ್ವಾಪರವಿರೋಧವಾಗಿದೆ. ಏಕೆಂದರೆ ಗೃಹಸ್ಥಾವಸ್ಥೆಯಲ್ಲಿ ತೀರ್ಥಂಕರಪರಮದೇವರು ಭರತಸಗರಾದಿ-ಚಕ್ರವರ್ತಿಗಳು ಹಾಗೂ ರಾಮ, ಪಾಂಡವರು ಮೊದಲಾದ ಮಹಾಪುರುಷರಲ್ಲಿ 'ನಿಜಶುದ್ಧಾತ್ಮನೇ ಉಪಾದೇಯನಾಗಿರುತ್ತಾನೆ' ಎಂಬ ಶ್ರದ್ಧಾರೂಪವಾದ ನಿಶ್ಚಯಸಮ್ಯಕ್ತ್ವವಿದ್ದಿತಾದರೂ ಅವರಲ್ಲಿ ವೀತರಾಗಚಾರಿತ್ರವಿರ ಲಿಲ್ಲ. ಒಂದುವೇಳೆ ಅವರಲ್ಲಿ ಆ ಸಮಯ (ಗೃಹಸ್ಥಾವಸ್ಥೆ)ದಲ್ಲಿ ವೀತರಾಗಚಾರಿತ್ರ ವಿರುತ್ತಿದ್ದರೆ ಅವರು ಹೇಗೆ ಗೃಹಸ್ಥರಾಗಿರುತ್ತಿದ್ದರು? ಅರ್ಥಾತ್ ಇದು ಪೂರ್ವಾಪರ

ವಿರೋಧವಾಗಿದೆ. ಉತ್ತರ— ತೀರ್ಥಂಕರರು ಹಾಗೂ ಭರತಸಗರಾದಿಗಳಂತಹ ಮಹಾ ಪುರುಷರಲ್ಲಿ ಶುದ್ಧಾತ್ಮನು ಉಪಾದೇಯನಾಗಿರುತ್ತಾನೆಂಬ ಭಾವನಾರೂಪವಾದ ನಿಶ್ಚಯ ಸಮ್ಯಕ್ತ್ವವೇನೋ ಇರುತ್ತದೆ ಆದರೆ ಚಾರಿತ್ರಮೋಹದ ಉದಯದಿಂದ ಸ್ಥಿರತೆಯಿರುವುದಿಲ್ಲ ವ್ರತಪ್ರತಿಜ್ಞಾಭಂಗದಕಾರಣದಿಂದ ಹಾಗೂ ಮಹಾವ್ರತವುಂಟಾಗುವ ವರೆಗೆ ಅವರು ಅಸಂಯಮಿಗಳು ಅಥವಾ ಅಸಂಯತರೆಂದು ಹೇಳಲ್ಪಡುತ್ತಾರೆ ಶುದ್ಧಾತ್ಮ ಸಂಬಂಧವಾದ ಅಖಂಡಭಾವನೆಯಿಂದ ಚ್ಯುತ(ರಹಿತ)ರಾದ ಭರತ ಸಗರ ರಾಘವ ಪಾಂಡವಾದಿಗಳು ನಿರ್ದೋಷಪರಮಾತ್ಮರಾದ ಅರ್ಹತ್ಪರಮೇಷ್ಠಿಗಳ ಮತ್ತು ಸಿದ್ಧಪರಮೇಷ್ಠಿಗಳ ಗುಣಸ್ತವನ ವಸ್ತುಸ್ತವನ ರೂಪಸ್ತವನಾದಿಗಳನ್ನು ಮಾಡುತ್ತಾರೆ ಮತ್ತು ಅವರ ಚರಿತಪುರಾಣಾದಿಗಳನ್ನು ಕೇಳುತ್ತಾರೆ ಅವರ ಆಜ್ಞಾರಾಧಕರಾದ ಆಚಾರ್ಯ ಉಪಾಧ್ಯಾಯ ಮತ್ತು ಸಾಧುಗಳಿಗೆ ಆಹಾರಾದಿದಾನಗಳನ್ನೂ ಪೂಜಾದಿಗಳನ್ನೂ ಮಾಡುತ್ತಾರೆ. ವಿಷಯಕಷಾಯಪ್ರವೃತ್ತಿರೂಪದುರ್ಧ್ಯಾನದಿಂದ ಮನಸ್ಸನ್ನು ತಡೆಯುವುದಕ್ಕಾಗಿ ಹಾಗೂ ಸಂಸಾರದ ಸ್ಥಿತಿಯನ್ನು ನಾಶಗೊಳಿಸುವುದಕ್ಕಾಗಿ ಇಂತಹ ಶುಭ ಕ್ರಿಯೆಗಳನ್ನು ಮಾಡುತ್ತಾರೆ. ಹೀಗೆ ಶುಭ-ರಾಗದ ಸಂಬಂಧದಿಂದ ಇವರು ಸರಾಗ ಸಮ್ಯಗ್ದೃಷ್ಟಿಗಳಾಗಿರುತ್ತಾರೆ. ಇವರ ಈ ಸಮ್ಯಕ್ತ್ವವು ಪರಂಪರೆಯಿಂದ ವೀತರಾಗ ಚಾರಿತ್ರಮಯವಾದ ನಿಶ್ಚಯಸಮ್ಯಕ್ತ್ವಕ್ಕೆ ಸಾಧಕವಾಗಿರುವುದರಿಂದ ನಿಶ್ಚಯಸಮ್ಯಕ್ತ್ವವೆಂದೂ ಹೇಳಲ್ಪಡುತ್ತದೆ. ಆದರೆ ವಸ್ತುತಃ ಗೃಹಸ್ಥಾವಸ್ಥೆಯಲ್ಲಿ ಸರಾಗಸಮ್ಯಕ್ತ್ವ ರೂಪವಾದ ವ್ಯವಹಾರಸಮ್ಯಕ್ತ್ವವೇ ಇರುತ್ತದೆಂದು ಭಾವವು.

**ಮುತ್ತಿವಿಹೂಣಉ ಣಾಣಮಉ, ಪರಮಾಣಂದಸಹಾಉ ।**
**ಣಿಯಮಿಂ ಜೋಇಯ ಅಪ್ಪು ಮುಣಿ, ಣಿಚ್ಚು ಣಿರಂಜಣು ಭಾಉ ॥೧೮॥**

"ಮೂರ್ತಿವಿಹೀನಃ ಜ್ಞಾನಮಯಃ ಪರಮಾನಂದಸ್ವಭಾವಃ ॥
ನಿಯಮೇನ ಯೋಗಿನ್ ಆತ್ಮಾನಂ ಮನ್ಯಸ್ವ ನಿತ್ಯಂ ನಿರಂಜನಂ ಭಾವಮ್ ॥೧೮॥"

**ಅನ್ವಯಾರ್ಥ:**— **ಜೋಇಯ**— ಎಲೈ ಯೋಗಿಯೇ! **ಣಿಯಮಿಂ**— ನಿಶ್ಚಯ ನಯದಿಂದ **ಮುತ್ತಿವಿಹೂಣಉ**— ಮೂರ್ತಿರಹಿತ(ಅಮೂರ್ತ)ನೂ **ಣಾಣಮಉ**— ಜ್ಞಾನಮಯನೂ **ಪರಮಾಣಂದಸಹಾಉ**— ಪರಮಾನಂದಸ್ವಭಾವವುಳ್ಳವನೂ **ಅದ ಅಪ್ಪು**— ಆತ್ಮನನ್ನು **ಣಿಚ್ಚು**— ನಿತ್ಯನಾದವನನ್ನಾಗಿಯೂ **ಣಿರಂಜಣು**— ನಿರಂಜನನನಾಗಿಯೂ **ಭಾಉ**— ವಿಶಿಷ್ಟಪದಾರ್ಥ (ಇತರದ್ರವ್ಯಗಳಿಂದ ವಿಲಕ್ಷಣಸ್ವರೂಪವುಳ್ಳ ದ್ರವ್ಯ) ವನ್ನಾಗಿಯೂ ನೀನು **ಮುಣಿ**— ತಿಳಿ,

**ಭಾವಾರ್ಥ:**— ಆತ್ಮನು (ಅಥವಾ ಜೀವದ್ರವ್ಯವು) ನಿಶ್ಚಯನಯದಿಂದ ಸ್ಪರ್ಶರಸ ಗಂಧವರ್ಣಗಳಿಂದ ರಹಿತನಾಗಿರುವುದರಿಂದ ಅಮೂರ್ತಿಯೂ ಲೋಕಾಲೋಕಪ್ರಕಾಶಕ ವಾದ ಕೇವಲಜ್ಞಾನಯುಕ್ತನಾಗಿರುವುದರಿಂದ ಜ್ಞಾನಮಯನೂ ವೀತರಾಗಪರಮಾನಂದೈಕರೂಪವಾದ ಸುಖಾಮೃತರಸಾಸ್ವಾದನದಿಂದ ಪರಮಾನಂದಸ್ವಭಾವವುಳ್ಳವನೂ

ಶುದ್ಧದ್ರವ್ಯಾರ್ಥಿಕನಯದಿಂದ ನಿತ್ಯ(ಅವಿನಾಶಿ)ನೂ ಮಿಥ್ಯಾತ್ವರಾಗಾದಿರೂಪವಾದ ಕಲಂಕ(ಅಂಜನ)ರಹಿತನಾಗಿರುವುದರಿಂದ ನಿರಂಜನನೂ ಇತರ ದ್ರವ್ಯಗಳಿಂದ ವಿಶಿಷ್ಟವಾದ ವಾದ ಸ್ವರೂಪವುಳ್ಳವನೂ ಆಗಿರುತ್ತಾನೆಂದು ಭಾವವು

**ಪುಗ್ಗಲು ಛವ್ವಿಹು ಮುತ್ತು ವಢ, ಇಯುರ ಅಮುತ್ತು ವಿಯಾಣಿ ।**
**ಧಮ್ಮಾಧಮ್ಮ ವಿ ಗಯುಠಿಯುಹಂ, ಕಾರಣು ಪಭಣಹಿಂ ಣಾಣಿ ॥ ೧೯ ॥**

"ಪುದ್ಗಲ ಷಡ್ವಿಧಃ ಮೂರ್ತಃ ವತ್ಸ ಇತರಾಣಿ ಅಮೂರ್ತಾಣಿ ವಿಜಾನೀಹಿ ।
ಧರ್ಮಾಧರ್ಮಮಪಿ ಗತಿಸ್ಥಿತ್ಯೋಃ ಕಾರಣಂ ಪ್ರಭಣಂತಿ ಜ್ಞಾನಿನಃ ॥ ೧೯ ॥"

**ಅನ್ವಯಾರ್ಥ:**— **ವಢ**— ಎಲೈ ಶಿಷ್ಯನೇ! **ಪುಗ್ಗಲು**–ಪುದ್ಗಲದ್ರವ್ಯವು **ಛವ್ವಿಹು**–ಆರು ವಿಧವುಳ್ಳದೆಂದೂ **ಮುತ್ತು**— ಮೂರ್ತವೆಂದೂ **ಇಯುರ**— ಇತರದ್ರವ್ಯಗಳು **ಅಮುತ್ತು**— ಅಮೂರ್ತಗಳಾಗಿರುತ್ತವೆಂದೂ **ವಿಯಾಣಿ**— ಚೆನ್ನಾಗಿ ತಿಳಿ. **ಧಮ್ಮಾಧಮ್ಮ ವಿ**— ಮತ್ತು ಧರ್ಮ ಅಧರ್ಮದ್ರವ್ಯಗಳು **ಗಯುಠಿಯುಹಂ**— ಗಮನ ಮತ್ತು ಸ್ಥಿತಿಗಳಿಗೆ **ಕಾರಣು**— ಸಹಾಯಕಕಾರಣಗಳಾಗಿರುತ್ತವೆಂದು **ಪಭಣಹಿಂ ಣಾಣಿ**— ಜ್ಞಾನಿಗಳು ಹೇಳುತ್ತಾರೆ

**ಭಾವಾರ್ಥ:**–ಪುದ್ಗಲದಲ್ಲಿ ಬಾದರಬಾದರ, ಬಾದರ, ಬಾದರಸೂಕ್ಷ್ಮ, ಸೂಕ್ಷ್ಮಬಾದರ, ಸೂಕ್ಷ್ಮ ಮತ್ತು ಸೂಕ್ಷ್ಮಸೂಕ್ಷ್ಮ ಹೀಗೆ ಆರು ಭೇದಗಳಿರುತ್ತವೆ. ಈ ಆರು ಭೇದಗಳನ್ನು ಗ್ರಂಥಾಂತರದಲ್ಲಿ ಹೀಗೆ ವಿವರಿಸಿದ್ದಾರೆ—"**ಪುಢವೀ ಜಲಂ ಚ ಛಾಯಾ ಚಉರಿಂದಿಯುವಿಸಯು ಕಮ್ಮಪಾಉಗ್ಗಾ । ಕಮ್ಮಾತೀದಾ ಏವಂ ಛಬ್ಭೇಯಾ ಪುಗ್ಗಲಾ ಹೊಂತಿ ॥**" ಅರ್ಥಾತ್ ಭೂಮಿ, ಕಲ್ಲು, ಕಟ್ಟಿಗೆ ತೃಣ (ಹುಲ್ಲು) ಮೊದಲಾದುವು ವಿಭಾಗಿಸಲ್ಪಟ್ಟರೆ ಪುನಃ ಸೇರಿಕೊಳ್ಳುವುದಿಲ್ಲವಾದುದರಿಂದ ಇವು "ಬಾದರಬಾದರ"ಗಳಾಗಿರುತ್ತವೆ ನೀರು, ಎಣ್ಣೆ, ತುಪ್ಪಮೊದಲಾದುವು ವಿಭಾಗಿಸಲ್ಪಟ್ಟರೂ ಪುನಃ ಸೇರಿಕೊಳ್ಳುವುದರಿಂದ "ಬಾದರ"ಗಳೆಂದು ಹೇಳಲ್ಪಡುತ್ತವೆ. ನೋಡಲಾಗುವ (ಬಾದರವಾದ) ಮತ್ತು ಗ್ರಹಣೆಮಾಡಲಾಗದ (ಸೂಕ್ಷ್ಮ) ನರಳು, ಬಿಸಿಲು, ಬೆಳದಿಂಗಳು ಮೊದಲಾದುವು "ಬಾದರಸೂಕ್ಷ್ಮ"ಗಳೆನಿಸುತ್ತವೆ ನೇತ್ರೇಂದ್ರಿಯ ವಿಷಯದ ಹೊರತು ಇತರ ಇಂದ್ರಿಯವಿಷಯಗಳಾದ ಸ್ಪರ್ಶ, ರಸ, ಗಂಧ ಮತ್ತು ಶಬ್ದಾದಿಗಳು ದೃಷ್ಟಿಗೋಚರವಾಗದವುಗಳಾಗಿದ್ದು ಗ್ರಹಣೆಗೆ ಯೋಗ್ಯಗಳಾಗಿರುವುದರಿಂದ "ಸೂಕ್ಷ್ಮಬಾದರ"ಗಳಾಗಿವೆ. ಕರ್ಮವರ್ಗಣೆಗಳು ಇಂದ್ರಿಯಗೋಚರವಾಗದಿರುವುದರಿಂದ ಅವು "ಸೂಕ್ಷ್ಮ"ಗಳಾಗಿರುತ್ತವೆ. ಅವಿಭಾಗಪ್ರತಿಚ್ಛೇದ(ವಿಭಾಗಿಸಲಾರದ, ಸೂಕ್ಷ್ಮ)ವುಳ್ಳ ಪರಮಾಣುವು "ಸೂಕ್ಷ್ಮಸೂಕ್ಷ್ಮ"ವೆಂದು ಹೇಳಲ್ಪಟ್ಟಿದೆ ಹೀಗೆ ಆರು ಭೇದಗಳುಳ್ಳ ಪುದ್ಗಲದ್ರವ್ಯವು ಸ್ಪರ್ಶ ರಸ ಗಂಧ ವರ್ಣಗಳಿಂದ ಕೂಡಿರುವುದರಿಂದ ಮೂರ್ತವಾಗಿರುತ್ತದೆ (ಸ್ಪರ್ಶಾದಿಗಳುಳ್ಳುದಕ್ಕೆ ಮೂರ್ತವೆಂದೂ ಅವುಗಳಿಲ್ಲದುದಕ್ಕೆ ಅಮೂರ್ತವೆಂದೂ ಹೆಸರು) ಮತ್ತು ಉಳಿದ ಐದು ದ್ರವ್ಯಗಳು ಅಮೂರ್ತ

ಗಳಾಗಿರುತ್ತವೆ. **"ತತ್ತ್ವಾರ್ಥಸೂತ್ರ"**ದಲ್ಲಿ **"ಗತಿಸ್ಥಿತ್ಯುಪಗ್ರಹೌ ಧರ್ಮಾಧರ್ಮಯೋರುಪಕಾರಃ"** ಎಂದು ಹೇಳಿರುವಂತೆ ಧರ್ಮದ್ರವ್ಯ ಅಧರ್ಮದ್ರವ್ಯಗಳು ಜೀವ ಪುದ್ಗಲಗಳ ಗತಿಸ್ಥಿತಿಗಳಿಗೆ ಸಹಕಾರಿಗಳಾಗಿರುತ್ತವೆ ಅರ್ಥಾತ್ *ನೀರು ಸಂಚರಿಸುವ ಮೀನುಗಳ ಸಂಚಾರಕ್ಕೆ ಸಹಾಯಕ (ಸಹಕಾರಿ)ವಾಗಿರುವಂತೆ ಧರ್ಮದ್ರವ್ಯವು ಗಮನೋದ್ಯುಕ್ತಗಳಾದ ಜೀವಪುದ್ಗಲಗಳ ಗಮನಕ್ಕೆ ಸಹಕಾರಿಯಾಗಿರುತ್ತದೆ ಮತ್ತು ವಿಶ್ರಮಿಸಲಿಚ್ಛಿಸುವ ಪಥಿಕ (ದಾರಿಗ)ನಿಗೆ ನೆರಳು ವಿಶ್ರಮಿಸಲು (ಕುಳಿತುಕೊಳ್ಳಲು) ಸಹಕಾರಿಯಾಗಿರುವಂತೆ ಅಧರ್ಮದ್ರವ್ಯವು ಸ್ಥಿತಿಯಲ್ಲಿ ಉದ್ಯುಕ್ತಗಳಾದ ಜೀವಗಳ ಮತ್ತು ಪುದ್ಗಲಗಳ ಸ್ಥಿತಿಗೆ ಸಹಕಾರಿಯಾಗಿರುತ್ತದೆ ಈ ಧರ್ಮಾಧರ್ಮದ್ರವ್ಯಗಳು ಜೀವಪುದ್ಗಲಗಳ ಗತಿಸ್ಥಿತಿಗಳಿಗೆ ಉದಾಸೀನಕಾರಣಗಳಾಗಿರುತ್ತವಲ್ಲದೆ ಉಪಾದಾನ ಕಾರಣಗಳಾಗಿರುವುದಿಲ್ಲ. ಯದ್ಯಪಿ ಜೀವನಿಗೆ ಮುಕ್ತಿಗಮನಕಾಲದಲ್ಲಿ 'ವಜ್ರವೃಷಭ ನಾರಾಚಸಂಹನನ'ರೂಪದಿಂದ ಪುದ್ಗಲದ್ರವ್ಯವು ಸಹಕಾರಿಕಾರಣವಾಗಿರುತ್ತದೆ ಏಕೆಂದರೆ ಆ ಸಂಹನನವಿಲ್ಲದೆ ಮುಕ್ತಿಯುಂಟಾಗುವುದಿಲ್ಲ ಆದರೂ ಧರ್ಮದ್ರವ್ಯವು ಆತನ ಗಮನಕ್ಕೆ ಸಹಕಾರಿಕಾರಣವಾಗಿರುತ್ತದೆ. ಏಕೆಂದರೆ ಧರ್ಮದ್ರವ್ಯವಿಲ್ಲದೆ ಜೀವನು ಸಿದ್ಧಲೋಕ (ಮೋಕ್ಷಸ್ಥಾನ)ಕ್ಕೆ ಹೋಗಲಾರನು. ಹೀಗೆಯೇ ಅಧರ್ಮದ್ರವ್ಯವೂ ಲೋಕಾಗ್ರದಲ್ಲಿರುವ ಮುಕ್ತಜೀವನ ಸ್ಥಿತಿಗೆ ಸಹಕಾರಿಕಾರಣವಾಗಿರುತ್ತದೆ. ಹೀಗೆಯೇ ಪುದ್ಗಲಮೊದಲಾದೈದು ದ್ರವ್ಯಗಳೂ ಜೀವನಿಗೆ ಸಹಕಾರಿ (ನಿಮಿತ್ತ) ಕಾರಣಗಳಾಗಿರುತ್ತವಲ್ಲದೆ ಉಪಾದಾನಕಾರಣಗಳಾಗಿರುವುದಿಲ್ಲವೆಂಬುದು ಸಾರಾಂಶವಾಗಿದೆ.

**ದವ್ವಾಇಂ ಸಯಲಾಇಂ †ವರಿ ಠಿಯಾಇಂ, ಣಿಯಮೇಂ ಜಾಸು ವಸಂತಿ ।**
**ತಂ ಣಹು ದವ್ವು ವಿಯಾಣಿ ತುಹುಂ, ಜಿಣವರ ಏಉ ಭಣಂತಿ ॥ ೨೦ ॥**

"ದ್ರವ್ಯಾಣಿ ಸಕಲಾನಿ ಉದರೇ ಸ್ಥಿತಾನಿ ನಿಯಮೇನ ಯಸ್ಯ ವಸಂತಿ ।
ತತ್ ನಭಃ ದ್ರವ್ಯಂ ವಿಜಾನೀಹಿ ತ್ವಂ ಜಿನವರಾಃ ಏತತ್ ಭಣಂತಿ ॥ ೨೦ ॥"

**ಅನ್ವಯಾರ್ಥ:**— **ಜಾಸು**— ಯಾವುದರ **†ವರಿ**— ಮಧ್ಯದಲ್ಲಿ (ಒಳಗೆ) **ಸಯಲಾಇಂ ದವ್ವಾಇಂ**— ಸಮಸ್ತ ದ್ರವ್ಯಗಳು **ಠಿಯಾಇಂ**— ಇರುವವುಗಳಾಗಿ **ಣಿಯಮೇಂ ವಸಂತಿ**— ನಿಶ್ಚಯದಿಂದ ಇರುತ್ತವೋ **ತಂ**— ಅದನ್ನು **ಣಹು ದವ್ವು**— ಆಕಾಶದ್ರವ್ಯವನ್ನಾಗಿ **ತುಹುಂ ವಿಯಾಣಿ**— ನೀನು ತಿಳಿ **ಜಿಣವರ ಏಉ ಭಣಂತಿ**— ಜಿನೋತ್ತಮರು ಹೀಗೆ ಹೇಳುತ್ತಾರೆ

---

*ಧರ್ಮದ್ರವ್ಯ.—"ಗಇಪರಿಣಯಾಣ ಧಮ್ಮೋ, ಪುಗ್ಗಲಜೀವಾಣ ಗಮಣಸಹಯಾರೀ ।
ತೋಯಂ ಜಹ ಮಚ್ಛಾಣಂ, ಅಚ್ಛಂತಾ ಣೇವ ಸೋ ಣೇಈ ॥ ೧೭ ॥
ಅಧರ್ಮದ್ರವ್ಯ —ಠಾಣಜುದಾಣ ಅಧಮ್ಮೋ, ಪುಗ್ಗಲಜೀವಾಣ ಠಾಣಸಹಯಾರೀ ।
ಛಾಯಾ ಜಹ ಪಹಿಯಾಣಂ, ಗಚ್ಛಂತಾ ಣೇವ ಸೋ ಧರಈ ॥ ೧೮ ॥"
—ದ್ರವ್ಯಸಂಗ್ರಹ

†"ಉವರಿ" ಎಂದು ಪಾಠಾಂತರವಿದೆ.

**ಭಾವಾರ್ಥ:**—*ಜೀವಾದಿದ್ರವ್ಯಗಳಿಗೆ ಅವಕಾಶ(ಸ್ಥಾನ)ವನ್ನು ಕೊಡುವುದು ಆಕಾಶದ್ರವ್ಯವಾಗಿದೆ ಅಥವಾ ಯಾವುದರ ಒಳಗೆ ಜೀವಾದಿದ್ರವ್ಯಗಳಿರುತ್ತವೋ ಅದೇ ಆಕಾಶದ್ರವ್ಯವು ಈ ಆಕಾಶದಲ್ಲಿ ಲೋಕಾಕಾಶ ಅಲೋಕಾಕಾಶವೆಂಬ ಎರಡು ಭೇದ ಗಳಿವೆ. ಲೋಕಾಕಾಶದಲ್ಲಿ ಸರ್ವದ್ರವ್ಯಗಳೂ ಆಧಾರ-ಆಧೇಯರೂಪದಿಂದಿರುತ್ತವೆ ಅರ್ಥಾತ್ ಲೋಕಾಕಾಶವು ದ್ರವ್ಯಗಳ ಇರುವಿಕೆಗೆ ಆಧಾರವಾಗಿಯೂ ದ್ರವ್ಯಗಳು ಆಧೇಯಗಳಾಗಿಯೂ ಇರುತ್ತವೆ ಹೀಗೆ ಎಲ್ಲ ದ್ರವ್ಯಗಳು ಆಕಾಶದಲ್ಲಿ ಪರಸ್ಪರ ಏಕ ಕ್ಷೇತ್ರಾವಗಾಹರೂಪದಿಂದಿರುತ್ತಿದ್ದರೂ ಅನಂತಸುಖಸ್ವರೂಪನಾದ ಪರಮಾತ್ಮನಿಂದ ಅತ್ಯಂತ ಭಿನ್ನವಾದುವುಗಳಾಗಿರುತ್ತವೆಂದು ತಾತ್ಪರ್ಯಾರ್ಥವು

**ಕಾಲು ಮುಣಿಜ್ಜಹಿ ದವ್ವು ತುಹುಂ, ವಟ್ಟಣಲಕ್ಖಣು ಏಉ ।**
**ರಯಣಹಂ ರಾಸಿ ವಿಭಿಣ್ಣ ಜಿಮು, ತಸು ಅಣುಯಹಂ ತಹ ಭೇಉ ॥ ೨೧ ॥**

"ಕಾಲಂ ಮನ್ಯಸ್ವ ದ್ರವ್ಯಂ ತ್ವಂ ವರ್ತನಾಲಕ್ಷಣಂ ಏತತ್ ।
ರತ್ನಾನಾಂ ರಾಶಿಃ ವಿಭಿನ್ನಃ ಯಥಾ ತಸ್ಯ ಅಣೂನಾಂ ತಥಾ ಭೇದಃ ॥ ೨೧ ॥"

**ಅನ್ವಯಾರ್ಥ:**–**ತುಹಂ**–ನೀನು **ವಟ್ಟಣಲಕ್ಖಣು**–ವರ್ತನಾಲಕ್ಷಣವುಳ್ಳ **ಏಉ**–ಈ ದ್ರವ್ಯವು **ಕಾಲುದವ್ವು ಮುಣಿಜ್ಜಹಿ**–ಕಾಲದ್ರವ್ಯವೆಂದು ತಿಳಿ. **ರಯಣಹಂ ರಾಸಿ**–ರತ್ನಗಳ ರಾಶಿಯು **ವಿಭಿಣ್ಣ ಜಿಮು**—ಹೇಗೆ ವಿಭಿನ್ನ (ಬೇರೆಬೇರೆಯಾಗಿ) ವಾಗಿರುತ್ತದೊ **ತಹ**–ಹಾಗೆ **ತಸು ಅಣುಯಹಂ**–ಆ ಕಾಲದ್ರವ್ಯದ ಅಣುಗಳ **ಭೇಉ**–ಭೇದವಿರುತ್ತದೆ ಅರ್ಥಾತ್ ಕಾಲಾಣುಗಳು ಒಂದಕ್ಕೊಂದು ಸೇರಿಕೊಂಡಿರದೆ ಬೇರೆಬೇರೆಯಾಗಿರುತ್ತವೆ

**ಭಾವಾರ್ಥ:**–ಕಾಲದ್ರವ್ಯವು ವ್ಯವಹಾರಕಾಲ–ನಿಶ್ಚಯಕಾಲರೂಪದಿಂದ ಎರಡು ಪ್ರಕಾರವಾಗಿದೆ ಜೀವಪುದ್ಗಲಗಳ ನೂತನ ಮತ್ತು ಪುರಾತನ ಅವಸ್ಥೆಗಳಿಗೆ ಕಾರಣ ವಾದುದು ವ್ಯವಹಾರಕಾಲವು. ಇದು ಸಮಯ ಘಟಿಕಾ ಮುಹೂರ್ತ ದಿವಸ ಪಕ್ಷ ಮಾಸ ಋತು ಅಯನ ವರ್ಷವೊದಲಾದ ಭೇದಗಳುಳ್ಳುದಾಗಿದೆ. ಈ ವ್ಯವಹಾರ ಕಾಲವನ್ನು ಪರಿಣಾಮ,ಕ್ರಿಯಾ,ಪರತ್ವ,ಅಪರತ್ವ ಈ ನಾಲ್ಕು ಸಾಧನಗಳಿಂದ ತಿಳಿಯ ಬಹುದಾಗಿದೆ. ಜೀವದ್ರವ್ಯ ಪುದ್ಗಲದ್ರವ್ಯಗಳಲ್ಲಿ ಉಂಟಾಗುವ ಪರ್ಯಾಯ ಅಥವಾ ಅವಸ್ಥೆಗಳಿಗೆ ಪರಿಣಾಮವೆಂದೂ ಚಲನ, ಗೋದೋಹನ (ಹಾಲುಕರೆಯುವಿಕೆ) ಪಾಕ ಮೊದಲಾದ ಕಾರ್ಯಗಳಿಗೆ ಕ್ರಿಯೆಯೆಂದೂ ದೂರಸಂಚಾರ ಸಮೀಪಸಂಚಾರ ಇವುಗಳಿಂ ದಾಗುವ ಕಾಲಭೇದಕ್ಕೆ ಪರತ್ವಾಪರತ್ವವೆಂದೂ ಹೆಸರು. ಹೀಗೆ ಹಳೆಯದು ಹೊಸದು ಗೋದೋಹನಕಾಲ ಪಾಕಕಾಲ ಶಯನಕಾಲ ವಿರಹಕಾಲ ದೂರಸಂಚಾರಕಾಲ ಇತ್ಯಾದಿ ಚಿಹ್ನೆಗಳಿಂದ ಸೂಚಿಸಲ್ಪಡುವ ಕಾಲವು ವ್ಯವಹಾರಕಾಲವೆಂದಭಿಪ್ರಾಯವು.

---

*ಆಕಾಶದ್ರವ್ಯಃ—"ಅವಗಾಸದಾಣಜೋಗ್ಗಂ, ಜೀವಾದೀಣಂ ವಿಯಾಣ ಆಯಾಸಂ ।
ಜೇಣ್ಹಂ ಲೋಯಾಯಾಸಂ, ಅಲೋಯಾಯಾಸಮಿದಿ ದುವಿಹಂ ॥ ೧೯ ॥"
—ದ್ರವ್ಯಸಂಗ್ರಹ.

ಕುಂಬಾರನ ಚಕ್ರವು ತಿರುಗುವುದಕ್ಕೆ ಸಹಕಾರಿಯಾದ ಕೆಳಗಿನ ಕಲ್ಲಿನಂತೆಯೂ ಚಳಿಗಾಲದಲ್ಲಿ ಅಧ್ಯಯನಮಾಡಲು ಸಹಕಾರಿಯಾದ ಬೆಂಕಿಯಂತೆಯೂ ತಾವಾಗಿಯೇ ಪರಿಣಮನ (ಅವಸ್ಥಾಂತರ)ವನ್ನು ಹೊಂದುವ ಜೀವಾದಿ— ಪದಾರ್ಥಗಳ ಪರಿಣಮನಕ್ಕೆ ಸಹಕಾರಿಯಾಗಿರುವಿಕೆಗೆ "ವರ್ತನಾ" ಎಂದು ಹೆಸರು. ಆ ವರ್ತನೆಯೇ ಲಕ್ಷಣವಾಗಿರುವುದು ನಿಶ್ಚಯಕಾಲವು. ಬೆಂಕಿ ಸೌದೆ ಮೊದಲಾದ ಸಹಕಾರಿಕಾರಣದಿಂದುಂಟಾದ ಅನ್ನರೂಪವಾದ ಪರ್ಯಾಯಕ್ಕೆ ಉಪಾದಾನಕಾರಣವಾದ ಅಕ್ಕಿಯಂತೆಯೂ ನರನಾರಕಾದಿಪರ್ಯಾಯಕ್ಕೆ ಉಪಾದಾನಕಾರಣವಾದ ಜೀವನಂತೆಯೂ ಸಮಯ ಘಟಿಕಾ ಮೊದಲಾದ ಪರ್ಯಾಯಗಳಿಗೆ ಉಪಾದಾನ ಕಾರಣವು ಅಣುದ್ರವ್ಯರೂಪವಾದ ನಿಶ್ಚಯ ಕಾಲವಾಗಿರುತ್ತದೆ. ಇದು ಅನಾದಿನಿಧನವೂ–ಅಮೂರ್ತವೂ ಆಗಿದೆ ಇಲ್ಲಿ "ಸಮಯ" ವೆಂದರೆ ಒಂದು ಪುದ್ಗಲಪರಮಾಣುವು ಅಂತಹ ಪರಮಾಣುವನ್ನು ದಾಂಟುವಕಾಲ ವೆಂದರ್ಥವು.

ರತ್ನಗಳು ರಾಶಿಯಾಗಿದ್ದರೂ ಒಂದರಲ್ಲೊಂದು ಸೇರಿಕೊಂಡಿರದೆ ಬೇರೆಬೇರೆಯಾಗಿರುವಂತೆ ಲೋಕಾಕಾಶದ ಪ್ರತಿಯೊಂದು 'ಪ್ರದೇಶ'ದಲ್ಲಿಯೂ ಒಂದೊಂದು ಕಾಲಾಣುವು (ಬೇರೆಬೇರೆಯಾಗಿ) ಇರುತ್ತದೆ. ಅಂತಹಕಾಲಾಣುಗಳು ಅಸಂಖ್ಯಾತಗಳಾಗಿವೆ. ಲೋಕಾಕಾಶದಲ್ಲಿ ಅಸಂಖ್ಯಾತಪ್ರದೇಶಗಳಿರುವುದರಿಂದ ಆ ಒಂದೊಂದು ಪ್ರದೇಶದಲ್ಲಿ ಒಂದೊಂದು ಕಾಲಾಣುವು ಇರುತ್ತದೆಂದಭಿಪ್ರಾಯ * ಇಲ್ಲಿ "ಪ್ರದೇಶ" ವೆಂದರೆ ಒಂದು ಪುದ್ಗಲಪರಮಾಣುವು ಅಡಕವಾಗುವಷ್ಟು ಸ್ಥಳವೆಂದರ್ಥವು

ಇಲ್ಲಿ ಸಮಯ ಘಟಿಕಾದಿಗಳನ್ನೇ ನಿಶ್ಚಯಕಾಲವನ್ನಾಗಿ ತಿಳಿಯುವುದರಲ್ಲಿ ದೋಷವೇನು? ಬೇರೊಂದು ನಿಶ್ಚಯಕಾಲವಿರುವುದೆಂದು ಏಕೆ ತಿಳಿಯಬೇಕು? ಎಂಬ ಪ್ರಶ್ನೆಗೆ ಉತ್ತರವಿದು:— ಸಮಯಾದಿಗಳು ಪರ್ಯಾಯಗಳಾಗಿವೆ ಏಕಂದರೆ ಅವು ವಿನಶ್ವರಗಳಾಗಿವೆ ಇದನ್ನೇ **"ಪಂಚಾಸ್ತಿಕಾಯ"ದಲ್ಲಿ. "ಸಮಓ ಉಪ್ಪಣ್ಣಪದ್ಧಂಸೀ"** ಅರ್ಥಾತ್ "ಸಮಯವು ಉತ್ಪತ್ತಿ ಪ್ರಧ್ವಂಸ(ವಿನಾಶ)ಗಳುಳ್ಳುದಾಗಿದೆ" ಎಂದು ಹೇಳಿದ್ದಾರೆ. ದ್ರವ್ಯದಹೊರತು ಪರ್ಯಾಯವಿರುವುದಿಲ್ಲ. ಹೀಗಿರಲು ಈ ಸಮಯಾದಿಗಳು ಯಾವ ದ್ರವ್ಯದಪರ್ಯಾಯಗಳು? ಪುದ್ಗಲದ್ರವ್ಯದ ಪರ್ಯಾಯಗಳಾಗಿರುವುದಾದರೆ ಪುದ್ಗಲ ಪರಮಾಣುಗಳ ಸಮೂಹದಿಂದುಂಟಾದ ಘಟಾದಿಗಳು ಮೂರ್ತಗಳಾಗಿರುವಂತೆ ಒಂದು ಅಣುವು ಇನ್ನೊಂದು ಅಣುವನ್ನು ಅತಿಕ್ರಮಿಸು (ದಾಂಟು)ವುದರಿಂದುಂಟಾದ ಸಮಯ, ಕಣ್ಣುಮುಚ್ಚಿತೆರೆಯುವುದರಿಂದುಂಟಾದ ನಿಮಿಷ, ಜಲಭಾಜನ (ಘಟಿಕಾಪಾತ್ರ) ಮತ್ತು

---

*** ಕಾಲದ್ರವ್ಯ.—"ದವ್ವಪರಿವಟ್ಟರೂವೋ, ಜೋ ಸೋ ಕಾಲೋ ಹವೇಇ ವವಹಾರೋ ।**
**ಪರಿಣಾಮಾದೀಲಕ್ಖೋ, ವಟ್ಟಣಲಕ್ಖೋ ಯ ಪರಮಟ್ಠೋ** ॥ ೨೧ ॥"

**"ಲೋಯಾಯಾಸಪದೇಸೇ, ಎಕ್ಕೆಕ್ಕೇ ಜೇ ಠಿಯಾ ಹು ಎಕ್ಕೆಕ್ಕಾ ।**
**ರಯಣಾಣಂ ರಾಸೀ ಇವ, ತೇ ಕಾಲಾಣೂ ಅಸಂಖದವ್ವಾಣಿ** ॥ ೨೨ ॥"

**—ದ್ರವ್ಯಸಂಗ್ರಹ.**

ಹಸ್ತಾದಿವ್ಯಾಪಾರದಿಂದುಂಟಾದ ಘಟಿಕಾ, ಸೂರ್ಯೋದಯದಿಂದುಂಟಾದ **ದಿವಸ** ಇತ್ಯಾದಿ ಕಾಲಪರ್ಯಾಯಗಳೆಲ್ಲವೂ ಮೂರ್ತಗಳಾಗಿ ದೃಷ್ಟಿಗೋಚರವಾಗಬೇಕಾಗು ವುವು ಆದರೆ ಸಮಯಾದಿಗಳು ಹಾಗೆ ಮೂರ್ತಗಳಾಗಿಯೂ ದೃಷ್ಟಿಗೋಚರವಾದವ ಗಳಾಗಿಯೂ ಇರುವುದಿಲ್ಲ. ಈ ಕಾರಣದಿಂದ ಸಮಯಾದಿಗಳು ಪುದ್ಗಲದ್ರವ್ಯದ ಪರ್ಯಾಯಗಳಾಗಿರುವುದಿಲ್ಲವೆಂದು ವ್ಯಕ್ತವಾಗುತ್ತದೆ. ಕಾಲದ ಸಮಯಾದಿಪರ್ಯಾಯ ಗಳು ಪುದ್ಗಲದ ನಿಮಿತ್ತದಿಂದುಂಟಾಗುವುದರಿಂದ ಸಮಯಾದಿಗಳಿಗೆ ಪುದ್ಗಲಪರ ಮಾಣುಗಳು ಬಹಿರಂಗಸಹಕಾರಿಕಾರಣ (ಅಥವಾ ನಿಮಿತ್ತಕಾರಣ) ಮಾತ್ರವಾಗಿರುತ್ತ ವಲ್ಲದೆ ಮೂಲಕಾರಣ(ಅಥವಾ ಉಪಾದಾನಕಾರಣ)ಗಳಾಗಿರುವುದಿಲ್ಲ. ಏಕೆಂದರೆ, ಅನ್ನಕ್ಕೆ ಉಪಾದಾನಕಾರಣವಾದ ಅಕ್ಕಿಯೇ ಅನ್ನವಾಗಿ(ಕಾರ್ಯವಾಗಿ)ಪರಿಣಮಿಸುವಂತೆ ಉಪಾದಾನಕಾರಣಕ್ಕನುಗುಣವಾಗಿಯೇ ಕಾರ್ಯವಾಗುತ್ತದೆ. ಅತಏವ ಸಮಯಾದಿ ಪರ್ಯಾಯಗಳಿಗೆ ಉಪಾದಾನಕಾರಣವೂ ಅಮೂರ್ತವೂ ಅವಿನಶ್ವರವೂ ಆದ ನಿಶ್ಚಯಕಾಲ ರೂಪವಾದ ಕಾಲದ್ರವ್ಯವು ಇರುತ್ತದೆಂಬುದು ಸ್ಪಷ್ಟವಾಗುತ್ತದೆ. ದ್ರವ್ಯವು ಅವಿನ ಶ್ವರವೂ ಪರ್ಯಾಯಗಳು ನಶ್ವರಗಳೂ ಆಗಿರುತ್ತವೆಂಬುದು ಆಗಮಪ್ರಸಿದ್ಧವಾಗಿದೆ.

**ಜೀಉ ವಿ ಪುಗ್ಗಲು ಕಾಲು ಜಿಯ, ಏ ಮೆಲ್ಲೇವಿಣು ದವ್ವ ।**
**ಇಯರ ಅಖಂಡ ವಿಯಾಣಿ ತುಹುಂ, ಅಪ್ಪಪಏಸಹಿ ಸವ್ವ ॥ ೨೨ ॥**

"ಜೀವೋಽಪಿ ಪುದ್ಗಲಃ ಕಾಲಃ ಜೀವ ಏತಾನಿ ಮುಕ್ತ್ವಾ ದ್ರವ್ಯಾಣಿ ।
ಇತರಾಣಿ ಅಖಂಡಾನಿ ವಿಜಾನೀಹಿ ತ್ವಂ ಆತ್ಮಪ್ರದೇಶೈಃ ಸರ್ವಾಣಿ ॥ ೨೨ ॥"

**ಅನ್ವಯಾರ್ಥ:**— **ಜಿಯ**— ಎಲೈ ಜೀವನೇ! **ತುಹುಂ**— ನೀನು **ಜೀಉ ವಿ ಪುಗ್ಗಲು ಕಾಲು**— ಜೀವ, ಪುದ್ಗಲ ಮತ್ತು ಕಾಲ **ಏ ದವ್ವ ಮೆಲ್ಲೇವಿಣು**— ಈ ದ್ರವ್ಯ ಗಳನ್ನು ಬಿಟ್ಟು **ಇಯರ ಸವ್ವ**— ಇತರ ಸರ್ವದ್ರವ್ಯಗಳು ಅರ್ಥಾತ್ ಧರ್ಮದ್ರವ್ಯ ಅಧರ್ಮದ್ರವ್ಯ ಆಕಾಶದ್ರವ್ಯ ಇವುಗಳು **ಅಪ್ಪಪಏಸಹಿ**— ಆತ್ಮ(ತಮ್ಮ ತಮ್ಮ) ಪ್ರದೇಶ ಗಳಿಂದ **ಅಖಂಡ ವಿಯಾಣಿ**— ಅಖಂಡ(ಏಕದ್ರವ್ಯ)ವಾದುವುಗಳೆಂದು ತಿಳಿ.

**ಭಾವಾರ್ಥ:**— ಜೀವದ್ರವ್ಯವು ಜೀವರುಗಳ ಪ್ರತ್ಯೇಕಪ್ರತ್ಯೇಕ ಗಣನೆಯಿಂದ ಅನಂತವಾಗಿರುತ್ತದೆ. ಪುದ್ಗಲದ್ರವ್ಯಗಳು ಜೀವದ ವ್ಯಕ್ತಿಂತ ಅನಂತಗುಣವಾಗಿವೆ. **ಕಾಲ** ದ್ರವ್ಯಾಣುಗಳು ಅಸಂಖ್ಯಾತವಿರುತ್ತವೆ ಧರ್ಮ ಅಧರ್ಮ ಆಕಾಶ ಇವು **ಮೂರು** ದ್ರವ್ಯಗಳನ್ನು ಒಂದೊಂದೇ ಅಖಂಡದ್ರವ್ಯಗಳಾಗಿವೆ. ಈ ಎಲ್ಲ ದ್ರವ್ಯಗಳು ತಮ್ಮ ತಮ್ಮ ಪ್ರದೇಶಗಳಿಂದ ಕೂಡಿರುತ್ತವೆ. ಅರ್ಥಾತ್ ಒಂದು ದ್ರವ್ಯವು ಇನ್ನೊಂದು ದ್ರವ್ಯದೊಡನೆ ಸೇರಿಕೊಂಡಿರುವುದಿಲ್ಲವೆಂದಭಿಪ್ರಾಯವು ಈ ಆರು ದ್ರವ್ಯಗಳಲ್ಲಿ ಜೀವದ್ರವ್ಯವೇ ಉಪಾದೇಯವಾಗಿರುತ್ತದೆ. ಯದ್ಯಪಿ ಶುದ್ಧನಿಶ್ಚಯನಯದಿಂದ ಶಕ್ತಿಯ **ಅಪೇಕ್ಷೆ** ಯಿಂದ ಎಲ್ಲಾ ಜೀವಗಳೂ ಉಪಾದೇಯಗಳಾಗಿದ್ದರೂ ವ್ಯಕ್ತಿಯ ಅಪೇಕ್ಷೆಯಿಂದ ಪಂಚಪರಮೇಷ್ಠಿಗಳೇ ಉಪಾದೇಯರಾಗಿರುವರು. ಅವರಲ್ಲಿಯೂ ವಿಶೇಷತಃ **ಅರ** ಹಂತರು ಮತ್ತು ಸಿದ್ಧರೂ ಅವರಿಬ್ಬರಲ್ಲಿಯೂ ಸಿದ್ಧಪರಮೇಷ್ಠಿಗಳೇ **ಉಪಾದೇಯ**

ಧಾಗಿರುತ್ತಾರೆ. ಆದರೆ ಪರಮಾರ್ಥದಿಂದ ಮಿಥ್ಯಾತ್ವರಾಗಾದಿವಿಭಾವಪರಿಣಾಮಗಳ ನಿವೃತ್ತಿಯ ಕಾಲದಲ್ಲಿ ಸ್ವಶುದ್ಧಾತ್ಮನೇ ಉಪಾದೇಯನಾಗಿರುತ್ತಾನೆಂದು ತಿಳಿಯಬೇಕು.

**ದವ್ವ ಚಯಾರಿ ವಿ ಇಯರ ಜಿಯ, ಗಮಣಾಗಮಣವಿಹೀಣ ।**
**ಜೀಉ ವಿ ಪುಗ್ಗಲು ಪರಿಹರಿವಿ, ಪಭಣಹಿಂ ಣಾಣಪವೀಣ ॥ ೨೩ ॥**

"ದ್ರವ್ಯಾಣಿ ಚತ್ವಾರಿ ಅಪಿ ಇತರಾಣಿ ಜೀವ ಗಮನಾಗಮನವಿಹೀನಾನಿ ।
ಜೀವಮಪಿ ಪುದ್ಗಲಂ ಪರಿಹೃತ್ಯ ಪ್ರಭಣಂತಿ ಜ್ಞಾನಪ್ರವೀಣಾಃ ॥ ೨೩ ॥"

**ಅನ್ವಯಾರ್ಥ:**— **ಜಿಯ**— ಎಲೈ ಜೀವನೇ! **ಜೀಉ ವಿ ಪುಗ್ಗಲು ಪರಿಹರಿವಿ** ಜೀವ-ದ್ರವ್ಯ ಮತ್ತು ಪುದ್ಗಲದ್ರವ್ಯ ಇವೆರಡನ್ನು ಬಿಟ್ಟು **ಇಯರ ಚಯಾರಿ ವಿ ದವ್ವ** — ಇತರ ನಾಲ್ಕು ದ್ರವ್ಯಗಳೂ ಅರ್ಥಾತ್ ಧರ್ಮಾಧರ್ಮಾಕಾಶಕಾಲಗಳು **ಗಮಣಾಗಮಣವಿಹೀಣ**— ಗಮನಾಗಮನರಹಿತ(ಚಲನೆಯಿಲ್ಲದ, ನಿಷ್ಕ್ರಿಯ)ವಾದವುಗಳೆಂದು **ಣಾಣಪವೀಣ**— ಜ್ಞಾನದಲ್ಲಿ ಪ್ರವೀಣರಾದವರು ಅರ್ಥಾತ್ ಭೇದಾಭೇದ ರತ್ನತ್ರಯಾರಾಧಕರಾದ ವಿವೇಕಿಗಳು ಅಥವಾ ಕೇವಲಿ-ಶ್ರುತಕೇವಲಿಗಳು **ಪಭಣಹಿಂ** — ಹೇಳುತ್ತಾರೆ.

**ಭಾವಾರ್ಥ:**— ಸಂಸಾರಾವಸ್ಥೆಯಲ್ಲಿ ಜೀವರ ಒಂದುಗತಿಯಿಂದ ಗತ್ಯಂತರ ಗಮನಕ್ಕೆ ಕರ್ಮನೋಕರ್ಮಪುದ್ಗಲಗಳು ಸಹಕಾರಿಕಾರಣಗಳಾಗಿವೆ. ಸಿದ್ಧರಲ್ಲಿ ಕರ್ಮ-ನೋಕರ್ಮಗಳಿಲ್ಲದಿರುವುದರಿಂದ ನಿಷ್ಕ್ರಿಯತ್ವವಿರುತ್ತದೆ. ಪುದ್ಗಲಸ್ಕಂಧಗಳ ಗತಿಗೆ ಕಾಲಾಣುರೂಪವಾದ ಕಾಲದ್ರವ್ಯವು ಬಹಿರಂಗನಿಮಿತ್ತ-ಕಾರಣವಾಗಿದೆ. ಅರ್ಥಾತ್ ನಿಶ್ಚಯಕಾಲದ ಪರ್ಯಾಯವಾದ ಸಮಯರೂಪವ್ಯವಹಾರಕಾಲದ ಉತ್ಪತ್ತಿಗೆ ಮಂದಗತಿಪರಿಣತವಾದ ಅವಿಭಾಗೀಪುದ್ಗಲಪರಮಾಣುವು ನಿಮಿತ್ತಕಾರಣವಾಗಿರುತ್ತದೆ ಮತ್ತು ಕಾಲದ್ರವ್ಯವು ಉಪಾದಾನಕಾರಣವಾಗಿರುತ್ತದೆ. ಹೀಗೆಯೇ ಪುದ್ಗಲ ಪರಮಾಣುವಿನ ಮಂದಗತಿಗಮನಕ್ಕೆ ಧರ್ಮದ್ರವ್ಯವು ಸಹಕಾರಿಕಾರಣವಾಗಿರುವುದಾದರೂ ಕಾಲಾಣುರೂಪವಾದ ನಿಶ್ಚಯಕಾಲದ್ರವ್ಯವೂ ಸಹಕಾರಿಕಾರಣವಾಗಿರುತ್ತದೆ. ಸಹಕಾರಿಕಾರಣಗಳು ಅನೇಕವಿರುತ್ತವೆ. ಹೇಗೆಂದರೆ, ಮೀನುಗಳ ಸಂಚಾರಕ್ಕೆ ಧರ್ಮದ್ರವ್ಯವು ಸಹಕಾರಿಯಾಗಿದ್ದರೂ, ನೀರೂ ಸಹಕಾರಿಯಾಗಿರುತ್ತದೆ. ಹಾಗೆಯೇ ಘಟದ ಉತ್ಪತ್ತಿಗೆ ಕುಂಬಾರನು ಸಹಕಾರಿಕಾರಣ(ನಿಮಿತ್ತಕಾರಣ)ನಾಗಿರುವಂತೆ ಚಕ್ರ ದಂಡಾದಿಗಳೂ ಸಹಕಾರಿಕಾರಣಗಳಾಗಿರುತ್ತವೆ, ಇತ್ಯಾದಿ ಅನೇಕದೃಷ್ಟಾಂತಗಳಿಂದ ಸಹಕಾರಿಕಾರಣಗಳು ಅನೇಕವಾಗಿರುತ್ತವೆಂಬುದನ್ನು ತಿಳಿಯಬಹುದು. ಆದರೆ ಉಪಾದಾನಕಾರಣವು ಮಾತ್ರ ಒಂದೇ ಆಗಿರುತ್ತದೆ ಅರ್ಥಾತ್ ಒಂದು ದ್ರವ್ಯದ ನಿಜ ಪರ್ಯಾಯಗಳಿಗೆ ಆ ದ್ರವ್ಯವೇ ಉಪಾದಾನಕಾರಣವಾಗಿರುತ್ತದೆ. ಮಣ್ಣಿನ ಘಟಕ್ಕೆ ಮಣ್ಣಿನಮುದ್ದೆಯೇ ಉಪಾದಾನಕಾರಣವಾಗಿರುವುದು ಇದಕ್ಕೆ ದೃಷ್ಟಾಂತವಾಗಿದೆ. ಆದಕಾರಣ ಜೀವಪುದ್ಗಲಗಳ ಗಮನಕ್ಕೆ ಸಹಕಾರಿಯಾದ ಧರ್ಮದ್ರವ್ಯವು ಇರುತ್ತಿದ್ದರೂ ಜೀವರ ಗತಿಗೆ ಕರ್ಮ-ನೋಕರ್ಮಪುದ್ಗಲಗಳೂ ಪುದ್ಗಲಗಳ ಗತಿಗೆ ಕಾಲದ್ರ

ವ್ಯವೂ ಸಹಕಾರಿಕಾರಣವಾಗಿರುತ್ತದೆಂದು ತಿಳಿಯಬೇಕು. ಶ್ರೀಕುಂದಕುಂದಾಚಾರ್ಯರೂ **"ಪಂಚಾಸ್ತಿಕಾಯ"**ದಲ್ಲಿ ಹೀಗೆ ಹೇಳಿದ್ದಾರೆ:—**"ಜೀವಾ ಪುಗ್ಗಲಕಾಯಾ ಸಹ ಸಕ್ಕಿರಿಯಾ ಹವಂತಿ ಣ ಯ ಸೇಸಾ। ಪುಗ್ಗಲಕರಣಾ ಜೀವಾ ಖಂದಾ ಖಲು ಕಾಲಕರಣೇಹಿಂ ॥"** ಅರ್ಥಾತ್ ಜೀವಪುದ್ಗಲದ್ರವ್ಯಗಳೆರಡು ಸಕ್ರಿಯ(ಹಲನ-ಚಲನಕ್ರಿಯೆಯುಳ್ಳವು)ಗಳು ಇತರ ನಾಲ್ಕು ದ್ರವ್ಯಗಳು ನಿಷ್ಕ್ರಿಯ(ಕ್ರಿಯಾರಹಿತ)ಗಳು. ಜೀವರ ಗತ್ಯಂತರಗಮನಕ್ಕೆ ಧರ್ಮದ್ರವ್ಯವು ಸಹಕಾರಿಯಾಗಿದ್ದರೂ ಮೀನುಗಳ ಗತಿಗೆ ನೀರಿನಂತೆ ಕರ್ಮಪುದ್ಗಲಗಳು ಕಾರಣಗಳಾಗಿವೆ ಹಾಗೂ ಪುದ್ಗಲದ ಗಮನಕ್ಕೆ ಕಾಲದ್ರವ್ಯವು ಸಹಕಾರಿಕಾರಣವಾಗಿರುತ್ತದೆಂದಭಿಪ್ರಾಯವು. ಇಲ್ಲಿ ನಿಶ್ಚಯನಯದಿಂದ ಗಮನಾಗಮನವಿಮುಕ್ತರಾದ ಸಿದ್ಧರ ಸ್ವರೂಪಕ್ಕೆ ಸಮಾನವಾದ ಸ್ವರೂಪವುಳ್ಳ ನಿಜಶುದ್ಧಾತ್ಮನೇ ಉಪಾದೇಯನಾಗಿರುತ್ತಾನೆಂದು ಭಾವಾರ್ಥವು. ನಿಶ್ಚಯನಯದಿಂದ ನಿಷ್ಕ್ರಿಯಜೀವನ ಲಕ್ಷಣವನ್ನು ಗ್ರಂಥಾಂತರದಲ್ಲಿ ಹೀಗೆ ಹೇಳಿದ್ದಾರೆ:—**"ಯಾವತ್ಕ್ರಿಯಾಃ ಪ್ರವರ್ತಂತೇ ತಾವದ್ ದ್ವೈತಸ್ಯ ಗೋಚರಃ। ಅದ್ವಯೇ ನಿಷ್ಕಲೇ ಪ್ರಾಪ್ತೇ ನಿಷ್ಕ್ರಿಯಸ್ಯ ಕುತಃ ಕ್ರಿಯಾ॥"** ಅರ್ಥಾತ್ ಎಂದಿನ ವರೆಗೆ ಜೀವನಲ್ಲಿ ಹಲನ ಚಲನ ಗತ್ಯಂತರಗಮನಾದಿ-ಕ್ರಿಯೆಗಳಿರುತ್ತವೋ ಅಂದಿನ ವರೆಗೆ ಆತನಲ್ಲಿ ಇತರ ದ್ರವ್ಯಗಳ(ಅಥವಾ ಶರೀರಾದಿಗಳ) ಸಂಬಂಧವಿರುತ್ತದೆ. ಆತನು ಇತರದ್ರವ್ಯಗಳ ಹಾಗೂ ಶರೀರದ ಸಂಬಂಧವನ್ನು ಬಿಡುತ್ತಿರಲು ನಿಷ್ಕ್ರಿಯನಾಗುತ್ತಾನೆ. ಆಗ ಆತನಲ್ಲಿ ಹಲನಚಲನಾದಿ ಕ್ರಿಯೆಗಳೆಲ್ಲಿಂದ? ಅಂದರೆ ಯಾವ ಕ್ರಿಯೆಗಳೂ ಇರುವುದಿಲ್ಲವೆಂದು ಭಾವವು.

**ಧಮ್ಮಾಧಮ್ಮಾ ವಿ ಎಕ್ಕ ಜಿಉ, ಏ ಜಿ ಅಸಂಖಪದೇಸ।**
**ಗಯಣು ಅಣಂತಪಏಸು ಮುಣಿ, ಬಹುವಿಹ ಪುಗ್ಗಲದೇಸ ॥ ೨೪ ॥**

"ಧರ್ಮಾಧರ್ಮೌ ಅಪಿ ಏಕಃ ಜೀವಃ ಏತಾನಿ ಏವ ಅಸಂಖ್ಯಪ್ರದೇಶಾನಿ।
ಗಗನಂ ಅನಂತಪ್ರದೇಶಂ ಮನ್ಯಸ್ವ ಬಹುವಿಧಾಃ ಪುದ್ಗಲದೇಶಾಃ ॥ ೨೪ ॥"

**ಅನ್ವಯಾರ್ಥ:—ಧಮ್ಮಾಧಮ್ಮಾ ವಿ ಎಕ್ಕ ಜಿಉ**-ಧರ್ಮದ್ರವ್ಯ ಅಧರ್ಮದ್ರವ್ಯಗಳೂ ಒಬ್ಬ ಜೀವನೂ **ಏ.ಜಿ ಅಸಂಖಪದೇಸ**—ಈ ಮೂರು ದ್ರವ್ಯಗಳು ಅಸಂಖ್ಯಾತಪ್ರದೇಶಗಳುಳ್ಳವುಗಳೆಂದೂ **ಗಯಣು ಅಣಂತಪಏಸು**-ಆಕಾಶದ್ರವ್ಯವು ಅನಂತಪ್ರದೇಶಗಳುಳ್ಳದೆಂದೂ **ಬಹುವಿಹ ಪುಗ್ಗಲದೇಸ**—ಪುದ್ಗಲದ್ರವ್ಯದ ಪ್ರದೇಶಗಳು ಅನೇಕಪ್ರಕಾರವಾದುವುಗಳೆಂದೂ ಅರ್ಥಾತ್ ಸಂಖ್ಯಾತ, ಅಸಂಖ್ಯಾತ ಹಾಗೂ ಅನಂತಪ್ರದೇಶಗಳಾಗಿರುತ್ತವೆಂದೂ **ಮುಣಿ**—ತಿಳಿ.

**ಭಾವಾರ್ಥ:**—ಅಖಂಡವಾದುವೂ ಲೋಕವ್ಯಾಪಿಗಳೂ ಆದ ಧರ್ಮ ಅಧರ್ಮದ್ರವ್ಯಗಳು ಅಸಂಖ್ಯಾತಪ್ರದೇಶಗಳುಳ್ಳವಾಗಿವೆ. ಅನಂತಜೀವರುಗಳಲ್ಲಿ ಪ್ರತಿಯೋರ್ವಜೀವನೂ ಅಸಂಖ್ಯಾತಪ್ರದೇಶಗಳುಳ್ಳವನಾಗಿರುತ್ತಾನೆ. ಅಖಂಡವಾದ ಆಕಾಶದ್ರವ್ಯವು ಅನಂತಪ್ರದೇಶಗಳುಳ್ಳದು. ಪುದ್ಗಲದ ಒಂದು ಪರಮಾಣುವು ಒಂದು ಪ್ರದೇಶ

ವುಳ್ಳುದು. ಪರಮಾಣುಗಳ ಸೇರುವಿಕೆಯಿಂದುಂಟಾದ ಅನೇಕ ಪ್ರಕಾರವಾದ ಪುದ್ಗಲ ಸ್ಕಂಧಗಳು ಅನೇಕಪ್ರಕಾರವಾದ ಪ್ರದೇಶಗಳುಳ್ಳುವಾಗಿರುತ್ತವೆ ಅರ್ಥಾತ್ ಸಂಖ್ಯಾತ ಅಸಂಖ್ಯಾತ ಹಾಗೂ ಅನಂತಪ್ರದೇಶವುಳ್ಳುವಾಗಿರುತ್ತವೆ ಪುದ್ಗಲದ್ರವ್ಯದ ಪ್ರದೇಶ ಗಳೆಂಬುದರಿಂದ ಪರಮಾಣುಗಳೆಂದು ತಿಳಿಯಬೇಕಲ್ಲದೆ ಕ್ಷೇತ್ರಪ್ರದೇಶಗಳೆಂದು ತಿಳಿಯ ಬಾರದು. ಏಕೆಂದರೆ ಪುದ್ಗಲದ್ರವ್ಯವು ಲೋಕಾಕಾಶದಲ್ಲಿ ಮಾತ್ರವೇ ಇರುತ್ತದೆ. ಅಲೋಕಾಕಾಶದಲ್ಲಿರುವುದಿಲ್ಲ. ಲೋಕಾಕಾಶವು ಅಸಂಖ್ಯಾತಪ್ರದೇಶವುಳ್ಳುದಾದುದ ರಿಂದ ಅದರಲ್ಲಿ ಅನಂತಕ್ಷೇತ್ರಪ್ರದೇಶಗಳಿರುವುದಿಲ್ಲ. ಆದಕಾರಣ ಅನಂತಪುದ್ಗಲ ಪರಮಾಣುಗಳು ಸೇರುವಲ್ಲಿ ಅನಂತಪ್ರದೇಶಗಳಿರುತ್ತವೆಂದು ತಿಳಿಯಬೇಕು ಇಲ್ಲಿ **"ಪುಗ್ಗಲು ತಿವಿಹು ಪಏಸು"** ಎಂದು ಪಾಠಾಂತರವಿರುವುದರಿಂದಲೂ ಪುದ್ಗಲದ್ರವ್ಯ ದಲ್ಲಿ ಸಂಖ್ಯಾತ ಅಸಂಖ್ಯಾತ ಅನಂತಪ್ರದೇಶದಿಂದ ಮೂರುವಿಧವಾದ ಪ್ರದೇಶಗಳು ಪರಮಾಣುಗಳ ಸಂಯೋಗದಿಂದಿರುತ್ತವೆಂದು ತಿಳಿಯಬೇಕು ಇಲ್ಲಿ ನಿಶ್ಚಯನಯ ದಿಂದ ದ್ರವ್ಯಕರ್ಮದ ಅಭಾವದಿಂದ ಅಮೂರ್ತಗಳೂ ಮಿಥ್ಯಾತ್ವರಾಗಾದಿಭಾವ ಕರ್ಮಾಭಾವದಿಂದ ಪರಿಶುದ್ಧಗಳೂ ಲೋಕಾಕಾಶಪ್ರಮಾಣದಿಂದ ಅಸಂಖ್ಯಾತಗಳೂ ಆದ ಯಾವ ಶುದ್ಧಾತ್ಮನ ಪ್ರದೇಶಗಳಿರುತ್ತವೋ ಆ ಶುದ್ಧಾತ್ಮನೇ ವೀತರಾಗನಿರ್ವಿಕಲ್ಪ ಸಮಾಧಿಪರಿಣತಿಯ ಕಾಲದಲ್ಲಿ ಸಾಕ್ಷಾದುಪಾದೇಯನಾಗಿರುತ್ತಾನೆಂದು ಭಾವಾರ್ಥವು.

**ಲೋಯಾಗಾಸು ಧರೇವಿ ಜಿಯ, ಕಹಿಯಉಇಂ ದವ್ವಇಂ ಜಾಇಂ ।**
**ಎಕ್ಕಹಿಂ ಮಿಲಿಯಉಇಂ ಇತ್ಥು ಜಗಿ, ಸಗುಣಹಿಂ ಣಿವಸಇಂ ತಾಇಂ**
**॥ ೨೫ ॥**

"ಲೋಕಾಕಾಶಂ ಧೃತ್ವಾ ಜೀವ ಕಥಿತಾನಿ ದ್ರವ್ಯಾಣಿ ಯಾನಿ ।
ಏಕತ್ವೇ ಮಿಲಿತಾನಿ ಅತ್ರ ಜಗತಿ ಸ್ವಗುಣೇಷು ನಿವಸಂತಿ ತಾನಿ ॥ ೨೫ ॥"

**ಅನ್ವಯಾರ್ಥ:**— **ಜಿಯ**— ಎಲೈ ಜೀವನೇ! **ಇತ್ಥು ಜಗಿ**— ಈ ಲೋಕದಲ್ಲಿ **ಜಾಇಂ ದವ್ವಇಂ**— ಯಾವ ಜೀವಾದಿದ್ರವ್ಯಗಳು **ಕಹಿಯಉಹಿಂ**— ಹೇಳಲ್ಪಟ್ಟಿವೆಯೋ **ತಾಇಂ**— ಅವುಗಳು **ಲೋಯಾಗಾಸು ಧರೇವಿ**— ಲೋಕಾಕಾಶವನ್ನು ಆಧರಿಸಿ [ಅಥವಾ ಲೋಕಾಕಾಶದ ಮರ್ಯಾದೆ (ಅವಧಿ)ಯಿಂದ] **ಎಕ್ಕಹಿಂ ಮಿಲಿಯಉಹಿಂ**— ಏಕತ್ವದಲ್ಲಿ ಸೇರಿದುವುಗಳಾಗಿ ಅರ್ಥಾತ್ ಏಕಕ್ಷೇತ್ರಾವಗಾಹಿಗಳಾಗಿ **ಸಗುಣಹಿಂ ಣಿವಸಇಂ**— ತಮ್ಮತಮ್ಮ ಗುಣಗಳಲ್ಲಿ ವಾಸಮಾಡುತ್ತಿವೆ ಅರ್ಥಾತ್ ಪರದ್ರವ್ಯ ದೊಡನೆ ಸೇರುವುದಿಲ್ಲ.

**ಭಾವಾರ್ಥ:**— ಪೂರ್ವೋಕ್ತ ಜೀವಾದಿದ್ರವ್ಯಗಳು ಉಪಚರಿತಾಸದ್ಭೂತವ್ಯವ ಹಾರನಯದಿಂದ ಲೋಕಾಕಾಶದಲ್ಲಿ ಆಧಾರಾಧೇಯಭಾವದಿಂದ (ಲೋಕಾಕಾಶವು ಆಧಾರವಾಗಿಯೂ ಜೀವಾದಿದ್ರವ್ಯಗಳು ಆಧೇಯಗಳಾಗಿಯೂ ಇರುತ್ತವೆ.) ಏಕ ಕ್ಷೇತ್ರಾವಗಾಹರೂಪದಿಂದಿರುತ್ತವಾದರೂ ಶುದ್ಧಪಾರಿಣಾಮಿಕಭಾವಗ್ರಾಹಕವಾದ ಶುದ್ಧ

ದ್ರವ್ಯಾರ್ಥಿಕನಯದಿಂದ ಪರದ್ರವ್ಯದೊಡನೆ ಸೇರಿಕೊಳ್ಳುವಿಕೆಯರೂಪವಾದ ಸಂಕರ ದೋಷವಿಲ್ಲದುವುಗಳಾಗಿ ತಮ್ಮತಮ್ಮ ಸಾಮಾನ್ಯ ಹಾಗೂ ವಿಶೇಷಗುಣಗಳಿಂದ ಕೂಡಿ ದುವುಗಳಾಗಿರುತ್ತವೆ ಅರ್ಥಾತ್ ದ್ರವ್ಯಗಳು ದ್ರವ್ಯಾಂತರರೂಪವನ್ನು ಹೊಂದುವು ದಿಲ್ಲವೆಂದೂ ತಮ್ಮ ಗುಣಗಳನ್ನು ಬಿಡುವುದಿಲ್ಲವೆಂದೂ ಭಾವವು

ಲೋಕವು ಅಸಂಖ್ಯಾತಪ್ರದೇಶಗಳುಳ್ಳುದೆಂದು ಪರಮಾಗಮದಲ್ಲಿ ಹೇಳಲ್ಪಟ್ಟಿದೆ. ಲೋಕದಲ್ಲಿ ಪ್ರತ್ಯೇಕವಾಗಿ ಅಸಂಖ್ಯಾತಪ್ರದೇಶಗಳುಳ್ಳ ಅನಂತಜೀವರುಗಳಿರುತ್ತಾರೆ. ಒಬ್ಬೊಬ್ಬ ಜೀವನಲ್ಲಿ ಕರ್ಮ-ನೋಕರ್ಮರೂಪದಿಂದ ಅನಂತಪುದ್ಗಲಪರಮಾಣುದ್ರವ್ಯ ಗಳಿರುತ್ತವೆ. ಅವುಗಳಿಗಿಂತ ಅನಂತಗುಣ ಇತರ ಪುದ್ಗಲದ್ರವ್ಯಗಳಿರುತ್ತವೆ. ಅವು ಗಳೆಲ್ಲವೂ ಅಸಂಖ್ಯಾತಪ್ರದೇಶವುಳ್ಳ ಲೋಕದಲ್ಲಿ ಹೇಗೆ ಅಡಕವಾಗು(ಸೇರಿಕೊಳ್ಳು) ತ್ತವೆ? ಎಂಬ ಶಂಕೆಗೆ ಸಮಾಧಾನವೇನೆಂದರೆ:—ಅವುಗಳು ಆಕಾಶದಲ್ಲಿರುವ ಅವ ಗಾಹನ(ಅವಕಾಶದಾನ)ಶಕ್ತಿಯಿಂದ ಅಡಕವಾಗುತ್ತವೆ ಅರ್ಥಾತ್ ಒಂದು ದೀಪದ ಪ್ರಕಾಶದಲ್ಲಿ ಅನೇಕ ದೀಪಗಳ ಪ್ರಕಾಶಗಳು ಸೇರಿಕೊಳ್ಳುವಂತೆಯೂ ಭಸ್ಮಘಟದಲ್ಲಿ ನೀರು ಅವಕಾಶವನ್ನು ಹೊಂದುವಂತೆಯೂ ಅಥವಾ ಒಂದು ಭೂಗೃಹದಲ್ಲಿ ಭೇರಿ ಘಂಟೆ ಶಂಖ ಮೊದಲಾದ ಅನೇಕ ವಾದ್ಯಗಳ ಶಬ್ದವು ಅಡಕವಾಗುವಂತೆಯೂ ಒಂದೇ ಲೋಕಾಕಾಶದಲ್ಲಿ ವಿಶಿಷ್ಟಅವಗಾಹನಶಕ್ತಿಯ ಯೋಗದಿಂದ ಅನಂತಜೀವರುಗಳೂ ಅನಂತಾನಂತ ಪುದ್ಗಲಗಳೂ ಅವಕಾಶವನ್ನು ಪಡೆಯುತ್ತವೆ. ಹೀಗೆ ಜೀವರಲ್ಲಿಯೂ ಪರಸ್ಪರ ಅವಗಾಹನಶಕ್ತಿಯಿರುತ್ತದೆ ಜೀವರ ಅವಗಾಹನಶಕ್ತಿಯ ಸ್ವರೂಪವು ಪರ ಮಾಗಮದಲ್ಲಿ ಹೀಗೆ ನಿರೂಪಿಸಲ್ಪಟ್ಟಿದೆ.—**"ಏಗಣಿಗೋದಸರೀರೇ ಜೀವಾ ದವ್ವಪ್ಪ ಮಾಣದೋ ದಿಟ್ಠಾ । ಸಿದ್ಧೇಹಿಂ ಅಣಂತಗುಣಾ ಸವ್ವೇಣ ವಿತೀದಕಾಲೇಣ ॥"** ಅರ್ಥಾತ್ ನಿಗೋದಜೀವನ ಶರೀರವು ಅಂಗುಲದ ಅಸಂಖ್ಯಾತಭಾಗವಾಗಿರುತ್ತದೆ. ಅಂತಹ ಒಂದು ನಿಗೋದಶರೀರದಲ್ಲಿ ಜೀವದ್ರವ್ಯದ ಪ್ರಮಾಣದಿಂದ ತೋರಿಸಲ್ಪಟ್ಟ(ಹೇಳ ಲ್ಪಟ್ಟಿರುವ) ಸಿದ್ಧಜೀವರಿಗಿಂತ ಅನಂತಗುಣ-ಜೀವಗಳು ಅವಗಾಹನಶಕ್ತಿಯಿಂದಿರುತ್ತವೆ. ಹೀಗೆ ಇಷ್ಟು ಸೂಕ್ಷ್ಮವಾದ ನಿಗೋದಶರೀರದಲ್ಲಿ ಅನಂತಜೀವಗಳು ಸಮಾವೇಶಹೊಂದಿ ರುತ್ತವೆಂದು ಹೇಳಿದಮೇಲೆ ಅಸಂಖ್ಯಾತಪ್ರದೇಶವುಳ್ಳ ಲೋಕಾಕಾಶದಲ್ಲಿ ಅನಂತ ಜೀವರುಗಳು ಅಡಕವಾಗಿರುವುದರಲ್ಲಿ ಆಶ್ಚರ್ಯವೇನು? ಹೀಗೆಯೇ ಪುದ್ಗಲಗಳ ಅವ ಗಾಹನಶಕ್ತಿಯ ಸ್ವರೂಪವೂ ಪರಮಾಗಮದಲ್ಲಿ ಹೇಳಲ್ಪಟ್ಟಿದೆ —**"ಓಗಾಢಗಾಢಣಿ ಚಿದೋ ಪುಗ್ಗಲಕಾಏಹಿಂ ಸವ್ವದೋ ಲೋಗೋ । ಸುಹಮೇಹಿಂ ಬಾದರೇಹಿಂ ಯಣಂತಾಣಂತೇಹಿಂ ವಿವಿಹೇಹಿಂ ॥"** ಅರ್ಥಾತ್ ಲೋಕವು ಸೂಕ್ಷ್ಮ ಸ್ಥೂಲ ಮೊದ ಲಾದ ಅನೇಕವಿಧವುಳ್ಳ(ವಿವಿಧ) ಅನಂತಾನಂತ-ಪುದ್ಗಲಕಾಯಗಳಿಂದ ನಿಬಿಡವಾಗಿ ತುಂಬಿ ಕೊಂಡಿರುತ್ತದೆಂದಭಿಪ್ರಾಯವು. ಯದ್ಯಪಿ ಜೀವಪುದ್ಗಲಗಳು ಏಕಕ್ಷೇತ್ರಾವಗಾಹದಿಂದಿ ರುತ್ತವಾದರೂ ಶುದ್ಧನಿಶ್ಚಯನಯದಿಂದ ಜೀವರು ತಮ್ಮ ಕೇವಲಜ್ಞಾನಾದ್ಯನಂತಗುಣ ಸ್ವರೂಪವನ್ನು ಬಿಡುವುದಿಲ್ಲ ಹಾಗೂ ಪುದ್ಗಲಗಳೂ ತಮ್ಮ ವರ್ಣಾದಿಸ್ವರೂಪವನ್ನು

ಬಿಡುವುದಿಲ್ಲ. ಹೀಗೆಯೇ ಇತರದ್ರವ್ಯಗಳೂ ತಮ್ಮತಮ್ಮ ಸ್ವರೂಪಗಳನ್ನು ಬಿಡುವುದಿಲ್ಲವೆಂದು ತಾತ್ಪರ್ಯಾರ್ಥವು.

**ಏಯಇಂ ದವ್ವಇಂ ದೇಹಿಯಹಂ,ಣಿಯಣಿಯಕಜ್ಜು ಜಣಂತಿ ।**
**ಚಉಗಇದುಕ್ಖ ಸಹಂತ ಜಿಯ,ತೇಂ ಸಂಸಾರು ಭಮಂತಿ ॥ ೨೬ ॥**

"ಏತಾನಿ ದ್ರವ್ಯಾಣಿ ದೇಹಿನಾಂ ನಿಜನಿಜಕಾರ್ಯಂ ಜನಯಂತಿ ।
ಚತುರ್ಗತಿದುಃಖಂ ಸಹಮಾನಾಃ ಜೀವಾಃ ತೇನ ಸಂಸಾರಂ ಭ್ರಮಂತಿ ॥ ೨೬ ॥"

**ಅನ್ವಯಾರ್ಥ:— ಏಯಇಂ ದವ್ವಇಂ**— ಈ ದ್ರವ್ಯಗಳು (ಜೀವದ್ರವ್ಯದ ಹೊರತು ಉಳಿದೈದು ದ್ರವ್ಯಗಳು) **ದೇಹಿಯಹಂ**— ಸಂಸಾರಿಜೀವರುಗಳಿಗೆ **ಣಿಯಣಿಯಕಜ್ಜು**- ತಮ್ಮತಮ್ಮ ಕಾರ್ಯವನ್ನು **ಜಣಂತಿ**— ಉಂಟುಮಾಡುತ್ತವೆ. **ತೇಂ**— ಆ ಕಾರಣದಿಂದ **ಜಿಯ**— ಜೀವರು **ಚಉಗಇದುಕ್ಖ ಸಹಂತ**— ನರಕಾದಿಚತುರ್ಗತಿಸಂಬಂಧವಾದ ದುಃಖವನ್ನು ಸಹಿಸುವವರಾಗಿ ಅರ್ಥಾತ್ ಅನುಭವಿಸುವವರಾಗಿ **ಸಂಸಾರು ಭಮಂತಿ**- ಸಂಸಾರದಲ್ಲಿ ಭ್ರಮಿಸುತ್ತಾರೆ

**ಭಾವಾರ್ಥ:**— ವ್ಯವಹಾರನಯದಿಂದ ಪುದ್ಗಲಾದಿ ಐದು ದ್ರವ್ಯಗಳು ಜೀವನಿಗೆ ಉಪಕಾರವನ್ನು ಮಾಡುತ್ತವೆ ಪುದ್ಗಲದ್ರವ್ಯವು ಆತ್ಮಜ್ಞಾನಕ್ಕೆ ವಿಪರೀತವಾದ ವಿಭಾವ ಪರಿಣಾಮವುಳ್ಳ ಅಜ್ಞಾನಿಜೀವನಿಗೆ ವ್ಯವಹಾರನಯದಿಂದ ಶರೀರ, ವಚನ, ಮನಸ್ಸು ಮತ್ತು ಶ್ವಾಸೋಚ್ಛ್ವಾಸ ಇವುಗಳನ್ನುಂಟುಮಾಡುತ್ತದೆ. ಹೇಗಂದರೆ ಮಿಥ್ಯಾತ್ವ ಅವ್ರತ ಕಷಾಯ ರಾಗ ದ್ವೇಷಾದಿ ವಿಭಾವಪರಿಣಾಮಗಳಿಂದ ಜೀವನಿಗೆ ಪುದ್ಗಲದ ಸಂಬಂಧ ವುಂಟಾಗುತ್ತದೆ ಮತ್ತು ಪುದ್ಗಲದ ಸಂಬಂಧದಿಂದ ಪೂರ್ವೋಕ್ತ ಶರೀರಾದಿಗಳುಂಟಾಗುತ್ತವೆ. ಹೀಗೆ [1]ಶರೀರವಚನಾದಿಗಳು ಪುದ್ಗಲಗಳ ಉಪಕಾರಗಳಾಗಿವೆ. [2]ಧರ್ಮದ್ರವ್ಯವು ಉಪಚರಿತಾಸದ್ಭೂತವ್ಯವಹಾರನಯದಿಂದ ಗತಿಗೆ(ಗಮನಕ್ಕೆ) ಸಹಕಾರಿಯಾಗಿರುತ್ತದೆ ಹಾಗೆಯೇ ಅಧರ್ಮದ್ರವ್ಯವು ಸ್ಥಿತಿಗೆ ಸಹಕಾರಿಯಾಗಿರುತ್ತದೆ ವ್ಯವಹಾರ ನಯದಿಂದ [3]ಆಕಾಶದ್ರವ್ಯವು ಅವಕಾಶವನ್ನು ಕೊಡುತ್ತದೆ. [4]ಕಾಲದ್ರವ್ಯವು ಶುಭಾಶುಭಪರಿಣಾಮಗಳಿಗೆ(ಭಾವದ ಶುಭಾಶುಭ-ಪರಿಣಮನಕ್ಕೆ) ಸಹಕಾರಿಯಾಗಿದೆ. ಹೀಗೆ ಇವ್ವೈದು ದ್ರವ್ಯಗಳೂ ಜೀವನಿಗೆ ಸಹಕಾರಿ(ಉಪಕಾರಿ)ಗಳಾಗಿವೆ. ಇವುಗಳ ಉಪಕಾರವನ್ನು ಪಡೆದು ಜೀವನು ನಿಶ್ಚಯವ್ಯವಹಾರರತ್ನತ್ರಯಭಾವನೆಯಿಲ್ಲದವನಾಗಿ ಚತುರ್ಗತಿ ಭ್ರಮಣರೂಪವಾದ ಸಂಸಾರದಲ್ಲಿ ಅನೇಕ ದುಃಖಗಳನ್ನನುಭವಿಸುತ್ತ ಭ್ರಮಿಸುತ್ತಿರುತ್ತಾನೆ.

---

(1) ಶರೀರವಾಙ್ಮನಃಪ್ರಾಣಾಪಾನಾಃ ಪುದ್ಗಲಾನಾಂ. (2) ಗತಿಸ್ಥಿತ್ಯುಪಗ್ರಹೌ ಧರ್ಮಾಧರ್ಮಯೋರುಪಕಾರಃ. (3) ಆಕಾಶಸ್ಯಾವಗಾಹಃ. (4) ವರ್ತನಾಪರಿಣಾಮಕ್ರಿಯಾಃ ಪರತ್ವಾಪರತ್ವೇ ಚ ಕಾಲಸ್ಯ.—ತತ್ತ್ವಾರ್ಥಸೂತ್ರ. ಅಧ್ಯಾಯ—೫.

**ದುಕ್ಖಹಂ ಕಾರಣು ಮುಣಿವಿ ಜಿಯ, ದವ್ವಹಂ ಏಹು ಸಹಾಉ ।**
**ಹೋಯವಿ ಮೊಕ್ಖಹಂ ಮಗ್ಗಿ ಲಹು, ಗಮ್ಮಿಜ್ಜಇ ಪರಲೋಉ ॥ ೨೭ ॥**

"ದುಃಖಸ್ಯ ಕಾರಣಂ ಮತ್ವಾ ಜೀವ ದ್ರವ್ಯಾಣಾಂ ಏತತ್ಸ್ವಭಾವಮ್ ।
ಭೂತ್ವಾ ಮೋಕ್ಷಸ್ಯ ಮಾರ್ಗೇ ಲಘು ಗಮ್ಯತೇ ಪರಲೋಕಃ ॥ ೨೭ ॥"

**ಅನ್ವಯಾರ್ಥ:—ಜಿಯ**—ಎಲೈ ಜೀವನೇ! **ದವ್ವಹಂ**·(ಜೀವನಿಂದ ಬೇರೆ ಯಾದ) ದ್ರವ್ಯಗಳ **ಏಹು ಸಹಾಉ**—ಈ ಸ್ವಭಾವವನ್ನು **ದುಕ್ಖಹಂ ಕಾರಣು**—ದುಃಖಕ್ಕೆ ಕಾರಣವನ್ನಾಗಿ **ಮುಣವಿ**—ತಿಳಿದು **ಮೊಕ್ಖಹಂ ಮಗ್ಗಿ ಹೋಯವಿ**—ಮೋಕ್ಷದ ಮಾರ್ಗದಲ್ಲಿ ಆಸಕ್ತನಾಗಿ ಅರ್ಥಾತ್ ಮೋಕ್ಷಮಾರ್ಗದಲ್ಲಾಸಕ್ತನಾಗುವುದ ರಿಂದ **ಲಹು ಪರಲೋಉ ಗಮ್ಮಿಜ್ಜಇ**—ಶೀಘ್ರವಾಗಿ ಪರಲೋಕ(ಮೋಕ್ಷ)ವು ಹೊಂದಲ್ಪಡುತ್ತದೆ.

**ಭಾವಾರ್ಥ:**—ಪೂರ್ವೋಕ್ತ ಪುದ್ಗಲ ಮೊದಲಾದೈದು ದ್ರವ್ಯಗಳ ಸಹಾಯ(ಉಪ ಕಾರ)ಗಳಾದ ಶರೀರ ಮನ ವಚನ ಶ್ವಾಸೋಚ್ಛ್ವಾಸಾದಿಗಳು ಆಕುಲತೆಯನ್ನುಂಟು ಮಾಡುವವುಗಳಾದುದರಿಂದ ದುಃಖಕ್ಕೆ ಕಾರಣಗಳಾಗಿರುತ್ತವೆ. ಹೀಗೆಂದು ತಿಳಿದು ಎಲೈಜೀವನೇ! ನೀನು ಭೇದಾಭೇದರತ್ನತ್ರಯರೂಪವಾದ ಮೋಕ್ಷಮಾರ್ಗದಲ್ಲಿ ದೃಢಾ ಸಕ್ತಿಯುಳ್ಳವನಾಗಿ ಶೀಘ್ರವಾಗಿ ಮೋಕ್ಷವನ್ನು ಪಡೆಯಬೇಕೆಂದು ಭಾವವು.

ಹೀಗೆ ವ್ಯವಹಾರನಯದಿಂದ ಜೀವದ್ರವ್ಯಾದಿಶ್ರದ್ಧಾನರೂಪವಾದ ಸಮ್ಯಗ್ದರ್ಶ ನವು ವರ್ಣಿಸಲ್ಪಟ್ಟಿತು ಮುಂದೆ ಸಮ್ಯಗ್ಜ್ಞಾನ ಮತ್ತು ಚಾರಿತ್ರ ಇವುಗಳನ್ನು ಪ್ರತಿಪಾದಿಸುತ್ತೇನೆಂದು ಒಂದು ಸೂತ್ರದಲ್ಲಿ ಸೂಚಿಸುತ್ತಾರೆ.

**ಣಿಯಮೇಂ ಕಹಿಯಉ ಏಹು ಮಇಂ, ವವಹಾರೇಣ ವಿ ದಿಟ್ಠಿ ।**
**ಏವಹಿಂ ಣಾಣು ಚರಿತ್ತು ಸುಣಿ, ಜೇಂ ಪಾವಹಿ ಪರಮೆಟ್ಠಿ ॥ ೨೮ ॥**

"ನಿಯಮೇನ ಕಥಿತಾ ಏಷಾ ಮಯಾ ವ್ಯವಹಾರೇಣಾಪಿ ದೃಷ್ಟಿಃ ।
ಇದಾನೀಂ ಜ್ಞಾನಂ ಚಾರಿತ್ರಂ ಶೃಣು ಯೇನ ಪ್ರಾಪ್ನೋಷಿ ಪರಮೇಷ್ಠಿನಮ್ ॥ ೨೮ ॥"

**ಅನ್ವಯಾರ್ಥ:—ಮಇಂ**—ನನ್ನಿಂದ **ವವಹಾರೇಣ**—ವ್ಯವಹಾರನಯದಿಂದ **ಏಹು ದಿಟ್ಠಿವಿ**—ಈ ಸಮ್ಯಗ್ದರ್ಶನವೂ **ಣಿಯಮೇಂ ಕಹಿಯಉ**—ನಿಶ್ಚಯವಾಗಿ (ಚೆನ್ನಾಗಿ) ಹೇಳಲ್ಪಟ್ಟಿತು. **ಏವಹಿಂ** ಈಗ **ಣಾಣು ಚರಿತ್ತು ಸುಣಿ**—ಜ್ಞಾನವನ್ನೂ ಚಾರಿತ್ರವನ್ನೂ ಕೇಳು **ಜೇಂ**—ಯಾವಕಾರಣದಿಂದ ಅರ್ಥಾತ್ ಜ್ಞಾನಚಾರಿತ್ರಗಳನ್ನು ಧರಿಸುವುದರಿಂದ **ಪರಮೆಟ್ಠಿ ಪಾವಹಿ**—ಸಿದ್ಧಪರಮೇಷ್ಠಿಪದವನ್ನು ಅರ್ಥಾತ್ ಮೋಕ್ಷ ವನ್ನು ಹೊಂದುವಿ.

**ಭಾವಾರ್ಥ:**—ವ್ಯವಹಾರಸಮ್ಯಗ್ದರ್ಶನಜ್ಞಾನಚಾರಿತ್ರರೂಪವಾದ ರತ್ನತ್ರಯವು ನಿಶ್ಚಯರತ್ನತ್ರಯಕ್ಕೆ ಸಾಧಕವಾಗಿರುವುದರಿಂದ ಮೋಕ್ಷಕ್ಕೆ ಪರಂಪರಾಕಾರಣವಾಗಿರು

ತ್ತದೆ. ಆದಕಾರಣ ಈ ರತ್ನತ್ರಯದ ಸ್ವರೂಪವನ್ನು ಚೆನ್ನಾಗಿ ತಿಳಿದು ಸ್ವೀಕರಿಸ ಬೇಕೆಂದು ಭಾವವು.

**ವಿಶೇಷಾರ್ಥ:**— ವ್ಯವಹಾರಸಮ್ಯಗ್ದರ್ಶನದ ವಿಷಯಗಳಾದ ಷಡ್ದ್ರವ್ಯಗಳ ಲಕ್ಷಣವು ಸಾರಾಂಶತಃ ಈ ರೀತಿಯಾಗಿದೆ—"**ಪರಿಣಾಮಿ ಜೀವ ಮುತ್ತಂ, ಸಪದೇಸಂ ಏಯುಖೆತ್ತ ಕಿರಿಯಾಯ್‌। ಣಿಚ್ಚಂ ಕಾರಣ ಕತ್ತಾ, ಸವ್ವಗದ ಮಿದರಂ ಹಿ ಯುಪವೇಸೋ ॥ ೧ ॥ ದೊಣ್ಣಿ ಯು ಏಯಂ ಏಯಂ, ಪಂಚ ತ್ತಿಯು ಏಯು ದುಣ್ಣಿ ಚಉರೋ ಯು। ಪಂಚಯು ಏಯಂ ಏಯಂ,ಏದೇಸಂ ಏಯು ಉತ್ತರಂ ಣೇಯಂ ॥ ೨ ॥**" ಅರ್ಥಾತ್ ಜೀವಪುದ್ಗಲಗಳೆರಡು ಪರಿಣಾಮಿ ದ್ರವ್ಯಗಳು. ಜೀವವೊಂದು ಚೇತನದ್ರವ್ಯವು. ಪುದ್ಗಲವೊಂದು ಮೂರ್ತದ್ರವ್ಯ ಜೀವ, ಪುದ್ಗಲ, ಧರ್ಮ, ಅಧರ್ಮ, ಆಕಾಶ ಇವೈದು ಪ್ರದೇಶಸಹಿತದ್ರವ್ಯಗಳು ಧರ್ಮ, ಅಧರ್ಮ, ಆಕಾಶ ಇವು ಮೂರು ಏಕಸಂಖ್ಯಾದ್ರವ್ಯಗಳು ಆಕಾಶದ್ರವ್ಯವೊಂದು ಕ್ಷೇತ್ರವುಳ್ಳ ದ್ರವ್ಯವು. ಜೀವಪುದ್ಗಲಗಳೆರಡು ಕ್ರಿಯಾಸಹಿತ(ಸಕ್ರಿಯ)ದ್ರವ್ಯಗಳು ಧರ್ಮ, ಅಧರ್ಮ, ಆಕಾಶ, ಕಾಲ ಇವುನಾಲ್ಕು ನಿತ್ಯದ್ರವ್ಯಗಳು ಪುದ್ಗಲ, ಧರ್ಮ, ಅಧರ್ಮ, ಆಕಾಶ, ಕಾಲ ಇವು ಐದು ಕಾರಣದ್ರವ್ಯಗಳು ಜೀವದ್ರವ್ಯವೊಂದು ಕರ್ತೃ ದ್ರವ್ಯವು ಆಕಾಶದ್ರವ್ಯವೊಂದು ಸರ್ವವ್ಯಾಪಕವಾಗಿದೆ ಈ ಆರುದ್ರವ್ಯಗಳೂ ಒಂದ ರಲ್ಲೊಂದು ಪ್ರವೇಶಿಸದಿರುವುವು.

**ವಿವರಣೆ:**— ಜೀವಪುದ್ಗಲಗಳಲ್ಲಿ ಸ್ವಭಾವವಿಭಾವಪರಿಣಾಮಗಳಿರುವುದರಿಂದ ಅವೆರಡು "ಪರಿಣಾಮಿ"ಗಳು. ಇತರನಾಲ್ಕು ದ್ರವ್ಯಗಳಲ್ಲಿ ಜೀವಪುದ್ಗಲಗಳಂತೆ ವಿಭಾವವ್ಯಂಜನಪರ್ಯಾಯವಿಲ್ಲದಿರುವುದರಿಂದ ಮುಖ್ಯತಃ ಅವು ಅಪರಿಣಾಮಿಗಳು ಜೀವನು ಶುದ್ಧನಿಶ್ಚಯನಯದಿಂದ ವಿಶುದ್ಧಜ್ಞಾನದರ್ಶನರೂಪವಾದ ಶುದ್ಧಚೈತನ್ಯ ಮಯನಾಗಿರುವುದರಿಂದಲೂ ವ್ಯವಹಾರನಯದಿಂದ ಕರ್ಮೋದಯಜನಿತಗಳಾದ ಇಂದ್ರಿಯ, ಬಲ, ಆಯು, ಶ್ವಾಸೋಚ್ಛ್ವಾಸ ಈ ನಾಲ್ಕು ದ್ರವ್ಯಪ್ರಾಣಗಳಿಂದ (ಅಥವಾ ಇಂದ್ರಿಯಗಳೈದು, ಬಲಗಳುಮೂರು, ಆಯುಷ್ಯ ಮತ್ತು ಶ್ವಾಸೋಚ್ಛ್ವಾಸ ಹೀಗೆ ಹತ್ತು ಪ್ರಾಣಗಳಿಂದ)ಜೀವಿಸುವುದರಿಂದಲೂ "ಜೀವನೆಂದು ಹೇಳಲ್ಪಡುತ್ತಾನೆ. ಇಲ್ಲಿ 'ಜೀವ' ಎಂಬ ಶಬ್ದಕ್ಕೆ ಜೀವಿಸುತ್ತಾನೆ, ಜೀವಿಸುವನು, ಅಥವಾ ಹಿಂದೆ ಜೀವಿಸಿ ದ್ದನು ಎಂದರ್ಥವು. ಇತರ ಪುದ್ಗಲಾದಿದ್ರವ್ಯಗಳು ಅಜೀವ(ಅಥವಾಅಚೇತನ)ಗಳಾ ಗಿವೆ. ಪುದ್ಗಲದ್ರವ್ಯವು ಸ್ಪರ್ಶ, ರಸ, ಗಂಧ, ವರ್ಣಗಳಿಂದ ಕೂಡಿರುವುದರಿಂದ "ಮೂರ್ತ"ವು. ಜೀವದ್ರವ್ಯವು ಅನುಪಚರಿತಾಸದ್ಭೂತವ್ಯವಹಾರನಯದಿಂದ ಮೂರ್ತ ವಾಗಿರುವುದಾದರೂ ಶುದ್ಧನಿಶ್ಚಯನಯದಿಂದ ಅಮೂರ್ತವು. ಹೀಗೆಯೇ ಇತರೆ ಧರ್ಮಾಧರ್ಮಾದಿದ್ರವ್ಯಗಳೂ ಅಮೂರ್ತಗಳಾಗಿವೆ. ಕಾಲದ್ರವ್ಯದ ಹೊರತು ಇತರ ಐದು ದ್ರವ್ಯಗಳು ಬಹುಪ್ರದೇಶಗಳುಳ್ಳುವುವಾದುದರಿಂದ ಅಸ್ತಿಕಾಯಗಳೆಂದೂ 'ಸಪ್ರ ದೇಶ'ದ್ರವ್ಯಗಳೆಂದೂ ಹೇಳಲ್ಪಡುತ್ತವೆ. ಕಾಲದ್ರವ್ಯದಲ್ಲಿ ಬಹುಪ್ರದೇಶಿತ್ವರೂಪವಾದ

ಕಾಯತ್ವವಿಲ್ಲದಿರುವುದರಿಂದ ಅದು ಅಪ್ರದೇಶಿಯು. ದ್ರವ್ಯಾರ್ಥಿಕನಯದಿಂದ ಧರ್ಮ, ಅಧರ್ಮ ಮತ್ತು ಆಕಾಶ ಇವುಮೂರು ಅಖಂಡಗಳಾಗಿರುವುದರಿಂದ "ಏಕಸಂಖ್ಯಾ" ದ್ರವ್ಯಗಳು ಜೀವದ್ರವ್ಯಗಳು ಅನಂತಗಳೂ, ಪುದ್ಗಲದ್ರವ್ಯಗಳು ಅನಂತಾನಂತಗಳೂ ಕಾಲದ್ರವ್ಯಗಳು ಅಸಂಖ್ಯಾತಗಳೂ ಆಗಿರುವುದರಿಂದ ಅವು ಅನೇಕದ್ರವ್ಯಗಳಾಗಿವೆ. ಸರ್ವದ್ರವ್ಯಗಳಿಗೆ ಅವಕಾಶವನ್ನು ಕೊಡುವ ಸಾಮರ್ಥ್ಯವುಳ್ಳುದರಿಂದ ಆಕಾಶವೊಂದು "ಸಕ್ಷೇತ್ರ"ದ್ರವ್ಯವು ಇತರ ಐದು ದ್ರವ್ಯಗಳು ಅಕ್ಷೇತ್ರದ್ರವ್ಯಗಳು ಜೀವಪುದ್ಗಲ ದ್ರವ್ಯಗಳೆರಡರಲ್ಲಿ ಕ್ಷೇತ್ರದಿಂದ ಕ್ಷೇತ್ರಾಂತರಗಮನರೂಪ ಹಲನಚಲನಕ್ರಿಯೆಯಿರುವುದ ರಿಂದ ಅವು "ಕ್ರಿಯಾಸಹಿತ"ಗಳು ಇತರದ್ರವ್ಯಗಳಲ್ಲಿ ಈ ಕ್ರಿಯೆಯು ಇಲ್ಲದಕಾರಣ ಅವು ನಿಷ್ಕ್ರಿಯಗಳು [ಶುದ್ಧಜೀವ(ಸಿದ್ಧಾತ್ಮ)ರು ಮಾತ್ರ ನಿಷ್ಕ್ರಿಯರಾಗಿರುತ್ತಾ ರೆಂದು ಹಿಂದೆ ಹೇಳಲ್ಪಟ್ಟಿದೆ] ದ್ರವ್ಯಾರ್ಥಿಕನಯಾಪೇಕ್ಷೆಯಿಂದ ಎಲ್ಲ ದ್ರವ್ಯಗಳೂ ನಿತ್ಯಗಳಾಗಿವೆ ಮತ್ತು ಅರ್ಥಪರ್ಯಾಯ ಅಥವಾ ಷಡ್ಗುಣಹಾನಿವೃದ್ಧಿರೂಪಸ್ವಭಾವ ಪರ್ಯಾಯದಿಂದ ಎಲ್ಲವೂ ಅನಿತ್ಯಗಳು ಆದರೂ ವಿಭಾವವ್ಯಂಜನಪರ್ಯಾಯವು ಜೀವ ಪುದ್ಗಲಗಳಲ್ಲಿರುವುದರಿಂದ ಅವೆರಡು ಅನಿತ್ಯಗಳೆಂದೂ ಇತರ ನಾಲ್ಕು ದ್ರವ್ಯಗಳು ಮುಖ್ಯತಃ ವಿಭಾವವ್ಯಂಜನಪರ್ಯಾಯರಹಿತಗಳಾಗಿರುವ ಕಾರಣದಿಂದ "ನಿತ್ಯ"ಗಳೆಂದೂ ಹೇಳಲ್ಪಟ್ಟಿವೆ ವ್ಯವಹಾರನಯದಿಂದ ಜೀವನಿಗೆ ಪುದ್ಗಲವು ಶರೀರವಾಙ್ಮನಃಪ್ರಾಣಾ ಪಾನಾದಿಕಾರ್ಯಗಳನ್ನೂ, ಧರ್ಮಾಧರ್ಮಗಳು ಗತಿಸ್ಥಿತ್ಯವಗ್ರಹಗಳನ್ನೂ, ಆಕಾಶವು ಅವಗಾಹ(ಅವಕಾಶ)ವನ್ನೂ, ಕಾಲವು ವರ್ತನಾರೂಪಕಾರ್ಯವನ್ನೂ ಉಂಟುಮಾಡುವು ವಾದುದರಿಂದ ಇವೈದು "ಕಾರಣ"ದ್ರವ್ಯಗಳು ಜೀವದ್ರವ್ಯವು ಯದ್ಯಪಿ ಗುರುಶಿಷ್ಯಾದಿ ರೂಪದಿಂದ ಪರಸ್ಪರೋಪಗ್ರಹವುಳ್ಳುದಾಗಿದ್ದರೂ ಅರ್ಥಾತ್ ಪರಸ್ಪರ ಉಪಕಾರ ರೂಪವಾದ ಕಾರ್ಯವನ್ನು ಮಾಡುವುದಾದರೂ ಪುದ್ಗಲಾದಿ ದ್ರವ್ಯಗಳಿಗೆ ಯಾವ ಉಪ ಕಾರವನ್ನೂ ಮಾಡದಿರುವುದರಿಂದ ಅಕಾರಣದ್ರವ್ಯವೆನಿಸುತ್ತದೆ. ಶುದ್ಧಪಾರಿಣಾಮಿಕ ಪರಮಭಾವಗ್ರಾಹಕವಾದ ಶುದ್ಧದ್ರವ್ಯಾರ್ಥಿಕನಯದಿಂದ ಜೀವನು ಯದ್ಯಪಿ ದ್ರವ್ಯ ಭಾವರೂಪವಾದ ಬಂಧಮೋಕ್ಷಗಳಿಗೂ ಪುಣ್ಯಪಾಪಘಟಪಟಾದಿಗಳೂ ಕರ್ತನಲ್ಲ ವಾದರೂ ಅಶುದ್ಧನಿಶ್ಚಯನಯದಿಂದ ಶುಭಾಶುಭಯೋಗಪರಿಣತನಾಗಿ ಪುಣ್ಯಪಾಪ ಬಂಧಗಳಿಗೆ ಕರ್ತನೂ ಆ ಪುಣ್ಯಪಾಪಗಳ ಫಲವನ್ನನುಭವಿಸುವವನೂ ಆಗಿರುತ್ತಾನೆ. ಹೀಗೆಯೇ ವಿಶುದ್ಧಜ್ಞಾನದರ್ಶನಸ್ವಭಾವವುಳ್ಳ ನಿಜಶುಧ್ಧಾತ್ಮದ್ರವ್ಯದ ಸಮ್ಯಕ್‌ಶ್ರದ್ಧಾನ ಜ್ಞಾನಾನುಷ್ಠಾನರೂಪ-ಶುದ್ಧೋಪಯೋಗಪರಿಣತನಾಗಿ ಮೋಕ್ಷಕ್ಕೆ ಕರ್ತನೂ ಅದರ ಫಲವಾದ ಅನಂತಸುಖವನ್ನನುಭವಿಸುವನೂ ಆಗಿರುತ್ತಾನೆ ಈ ಕಾರಣದಿಂದ ಜೀವನು"ಕರ್ತ"ನೂ ಭೋಕ್ತನೂ ಆಗಿರುವನು. ಶುಭಾಶುಭಶುದ್ಧಪರಿಣಾಮಗಳ ಪರಿ ಣಮನವೇ ಕರ್ತೃತ್ವವೆಂದು ಸರ್ವತ್ರ ತಿಳಿಯಬೇಕು. ಪುದ್ಗಲಾದಿದ್ರವ್ಯಗಳು ತಮ್ಮತಮ್ಮ ಪರಿಣಾಮರೂಪದಿಂದ ಪರಿಣಮಿಸುವುದೇ ಅವುಗಳ ಕರ್ತೃತ್ವವು. ಆದರೆ ಅವುಗಳಲ್ಲಿ ಪುಣ್ಯಪಾಪಾದಿಗಳ ಕರ್ತೃತ್ವವಿರುವುದಿಲ್ಲ. ಲೋಕಾಲೋಕವ್ಯಾಪಕತ್ವಾಪೇಕ್ಷೆಯಿಂದ

ಆಕಾಶದ್ರವ್ಯವೊಂದೇ "ಸರ್ವಗತ"ವಾಗಿದೆ ಧರ್ಮಾಧರ್ಮದ್ರವ್ಯಗಳು ಲೋಕದಲ್ಲಿ ಮಾತ್ರ ವ್ಯಾಪಿಸಿರುತ್ತವೆ ಜೀವದ್ರವ್ಯವು ಏಕಜೀವಾಪೇಕ್ಷೆಯಿಂದ ಲೋಕಪೂರಣ ರೂಪ-ಕೇವಲಸಮುದ್ಘಾತದಲ್ಲಿ ಲೋಕವ್ಯಾಪಿಯಾಗಿರುತ್ತದೆ ಹಾಗೂ ನಾನಾಜೀವಾ ಪೇಕ್ಷೆಯಿಂದಲೂ ಲೋಕಗತವಾಗಿರುತ್ತದೆ. ಪುದ್ಗಲದ್ರವ್ಯವು ಲೋಕಪ್ರಮಾಣ-ಮಹಾ ಸ್ಕಂಧದ ಅಪೇಕ್ಷೆಯಿಂದ ಲೋಕವ್ಯಾಪಿಯಾಗಿದೆ ಇತರ ಪುದ್ಗಲಾಪೇಕ್ಷೆಯಿಂದ ಲೋಕವ್ಯಾಪಕವಾಗಿರುವುದಿಲ್ಲ ಕಾಲದ್ರವ್ಯವು ಏಕಕಾಲಾಣುದ್ರವ್ಯಾಪೇಕ್ಷೆಯಿಂದ ಲೋಕವ್ಯಾಪಿಯಾಗಿರುವುದಿಲ್ಲ ಆದರೆ ಲೋಕಪ್ರದೇಶಪ್ರಮಾಣ-ನಾನಾಕಾಲಾಣುಗಳ ವಿವಕ್ಷೆಯಿಂದ ಲೋಕವ್ಯಾಪಕವಾಗಿರುತ್ತದೆ ಹೀಗೆ ಆಕಾಶದ್ರವ್ಯದ ಹೊರತು ಉಳಿ ದೈದು ದ್ರವ್ಯಗಳು ಲೋಕಾಪೇಕ್ಷೆಯಿಂದ ಸರ್ವಗತಗಳೆಂದು ಹೇಳಬಹುದಾದರೂ ಲೋಕಾಲೋಕಾಪೇಕ್ಷೆಯಿಂದ ವಸ್ತುತಃ ಆಕಾಶವೊಂದೇ ಸರ್ವಗತವು. ಇಲ್ಲಿ ಕೇವಲಜ್ಞಾನವು ಲೋಕಾಲೋಕವ್ಯಾಪಕವಾದುದರಿಂದ ಜ್ಞಾನಾಪೇಕ್ಷೆಯಿಂದ ಜೀವನೂ ಸರ್ವಗತನಾಗಿರುತ್ತಾನೆಂಬ ವಿಶೇಷತೆಯನ್ನು ತಿಳಿಯಬೇಕು ಈ ಎಲ್ಲ ದ್ರವ್ಯಗಳೂ ವ್ಯವಹಾರನಯದಿಂದ ಏಕಕ್ಷೇತ್ರಾವಗಾಹಿಗಳಾಗಿರುತ್ತಿದ್ದರೂ ನಿಶ್ಚಯನಯದಿಂದ ಚೇತನವೊದಲಾದ ತಮ್ಮತಮ್ಮ ಸ್ವರೂಪಗಳನ್ನು ಬಿಡದಿರುತ್ತವೆ ಇದನ್ನೇ "**ಪಂಚಾಸ್ತಿಕಾಯ**"ದಲ್ಲಿ ಹೀಗೆ ಹೇಳಿದ್ದಾರೆ—"**ಅಣ್ಣೋಣ್ಣಂ ಪವಿಸಂತಾ ದಿಂತಾ ಓಗಾಸ ಮಣ್ಣಮಣ್ಣಸ್ಸ । ಮೇಲಂತಾ ವಿ ಯ ಣಿಚ್ಚಂ ಸಗಸಬ್ಭಾವಂ ಣ ವಿಜಹಂತಿ ॥**" ಅರ್ಥಾತ್ ಪೂರ್ವೋಕ್ತಗಳಾದ ಆರು ದ್ರವ್ಯಗಳು "ಅನ್ಯೋನ್ಯಾನುಪ್ರವೇಶದಿಂದಿರು ವುವೂ ಅನ್ಯೋನ್ಯಾವಕಾಶವನ್ನು ಕೊಡುವುವೂ ಪರಸ್ಪರಸೇರಿರುವುವೂ ಆಗಿದ್ದರೂ ತಮ್ಮತಮ್ಮ ಸ್ವಭಾವವನ್ನು ಬಿಡುವುದಿಲ್ಲವು." ಹೀಗೆ ವ್ಯವಹಾರ-ಸಮ್ಯಕ್ತ್ವಕ್ಕ ವಿಷಯ ಭೂತಗಳಾದ ಷಡ್ದ್ರವ್ಯಗಳಲ್ಲಿ ವೀತರಾಗಚಿದಾನಂದೈಕಸ್ವರೂಪವೂ ಶುಭಾಶುಭ ಮನೋವಾಕ್ಕಾಯವ್ಯಾಪಾರರಹಿತವೂ ಆದ ನಿಜಶುದ್ಧಾತ್ಮದ್ರವ್ಯವೇ ಉಪಾದೇಯವಾ ಗಿರುತ್ತದೆಂದು ತಾತ್ಪರ್ಯವು.

ಈ ಪ್ರಕಾರವಾಗಿ ಹತ್ತೊಂಬತ್ತು ಸೂತ್ರಗಳಿಂದ ನಿಶ್ಚಯವ್ಯವಹಾರಮೋಕ್ಷಮಾರ್ಗ ವನ್ನು ನಿರೂಪಿಸುವಲ್ಲಿ, ಹದಿನಾಲ್ಕು ಸೂತ್ರಗಳಿಂದ ವ್ಯವಹಾರಸಮ್ಯಕ್ತ್ವದ ವ್ಯಾಖ್ಯಾನವು ಮುಗಿದುದು.

ಮುಂದೆ ಸಂಶಯವಿಪರ್ಯಯಾನಧ್ಯವಸಾಯರಹಿತವಾದ ಸಮ್ಯಗ್ಜ್ಞಾನದ ಸ್ವರೂಪ ವನ್ನು ಪ್ರತಿಪಾದಿಸುತ್ತಾರೆ:—

**ಜಂ ಜಹ ಥಕ್ಕಉ ದವ್ವು ಜಿಯ, ತಂ ತಹ ಜಾಣಇ ಜೋ ಜಿ ।**
**ಅಪ್ಪಹಂ ಕೇರಉ ಭಾವಡಉ, ಣಾಣು ಮುಣಿಜ್ಜಹಿ ಸೋ ಜಿ ॥ ೨೯ ॥**

"ಯತ್ ಯಥಾಸ್ಥಿತಂ ದ್ರವ್ಯಂ ಜೀವ ತತ್ ತಥಾ ಜಾನಾತಿ ಯ ಏವ ।
ಆತ್ಮನಃ ಸಂಬಂಧೀ ಭಾವಃ ಜ್ಞಾನಂ ಮನ್ಯಸ್ವ ಸ ಏವ ॥ ೨೯ ॥"

**ಅನ್ವಯಾರ್ಥ:—ಜಿಯ—**ಎಲೈ ಜೀವನೇ! **ಜಂ ದವ್ವು ಜಹ ಥಕ್ಕಉ—** ಯಾವ ದ್ರವ್ಯವು ಹೇಗೆ ಇರುವುದೋ ಅರ್ಥಾತ್ ಅನಾದಿಕಾಲದಿಂದ ದ್ರವ್ಯಗಳು ಯಾವ ಸ್ವರೂಪದಲ್ಲಿರುವುವೋ **ತಂ ತಹ ಜಿ—** ಅದನ್ನು ಹಾಗೆಯೇ ಅರ್ಥಾತ್ ಆ ದ್ರವ್ಯಗಳನ್ನು ಇದ್ದಕ್ಕಿದ್ದಂತೆ ಸಂಶಯಾದಿಗಳಿಲ್ಲದೆ **ಜೋ ಜಾಣಇ—**ಯಾವು ತಿಳಿಯುತ್ತದೋ **ಅಪ್ಪಹಂ ಕೇರಉ—**ಆತ್ಮನ ಸಂಬಂಧವಾದ **ಸೋ ಜಿ ಭಾವಡಉ—**ಆ ಭಾವವೇ (ನಿಜಸ್ವರೂಪವೇ) **ಣಾಣು ಮುಣಿಜ್ಜಹಿ—**ಜ್ಞಾನವೆಂದು ತಿಳಿ.

**ಭಾವಾರ್ಥ:—** ವೀತರಾಗ-ಸರ್ವಜ್ಞದೇವರು ಪ್ರತಿಪಾದಿಸಿರುವ ವಸ್ತುಸ್ವರೂಪವು ಸತ್ಯವಾದುದೋ? ಇತರ ಮತೀಯರು ಪ್ರತಿಪಾದಿಸಿರುವ ವಸ್ತುಸ್ವರೂಪ (ಜೀವಾದಿ ಪದಾರ್ಥಗಳ ಸ್ವರೂಪ)ವು ಸತ್ಯವಾದುದೋ? ಎಂದು ವಿಚಾರಮಾಡುವಂತಹ ಜ್ಞಾನಕ್ಕೆ "ಸಂಶಯ"ವೆಂದು ಹೆಸರು ಹಗ್ಗವನ್ನು ನೋಡಿ ಸರ್ಪವೆಂದೂ ಮುತ್ತಿನ ಚಿಪ್ಪನ್ನು ನೋಡಿ ಬೆಳ್ಳಿಯೆಂದೂ ತಿಳಿಯುವಂತಹ (ವಿಪರೀತವಾಗಿ ತಿಳಿಯುವ) ಜ್ಞಾನಕ್ಕೆ "ವಿಪರ್ಯಯ"ಜ್ಞಾನವೆಂದು ಹೆಸರು. ನಡೆವಾಗ ಕಾಲಿಗೆ ಹುಲ್ಲು ತಗುಲಿತೋ ಎಂಬೀ ರೀತಿಯಾದ ಅನಿಶ್ಚಿತಜ್ಞಾನಕ್ಕೆ ವಿಮೋಹ ಅಥವಾ "ಅನಧ್ಯವಸಾಯ"ಜ್ಞಾನವೆಂದು ಹೆಸರು. ಇವು ಮೂರೂ ಮಿಥ್ಯಾಜ್ಞಾನಗಳಾಗಿವೆ. ಈ ಜ್ಞಾನಾಕಾರಗಳಿಂದ ರಹಿತವೂ ಪ್ರದೀಪದಂತೆ ತನ್ನನ್ನೂ ಪರಪದಾರ್ಥಗಳನ್ನೂ ಯಥಾಸ್ಥಿತವಾಗಿ (ಇದ್ದಕ್ಕಿದ್ದಂತೆ) ಪ್ರಕಾಶಪಡಿಸುವುದೂ (ತಿಳಿಯುವುದೂ) ಆದ ಆತ್ಮಭಾವಕ್ಕೆ ಸಮ್ಯಗ್ಜ್ಞಾನವೆಂದು ಹೆಸರು. ಇದು ವಸ್ತುವಿನ ವಿಶೇಷಾಕಾರವನ್ನು ತಿಳಿಯುವುದರಿಂದ ಇದಕ್ಕೆ ಸವಿಕಲ್ಪನಿಶ್ಚಯಜ್ಞಾನವೆಂದೂ ಹೆಸರುಂಟು. ವ್ಯವಹಾರನಯದಿಂದ ಸವಿಕಲ್ಪಾವಸ್ಥೆಯಲ್ಲಿ ತತ್ತ್ವವಿಚಾರದ ಸಮಯ ತನ್ನನ್ನೂ ಪರಪದಾರ್ಥಗಳನ್ನೂ ತಿಳಿಯುವುದು ಜ್ಞಾನವಾಗಿದೆ. ನಿಶ್ಚಯನಯದಿಂದ ವೀತರಾಗನಿರ್ವಿಕಲ್ಪಸಮಾಧಿಯ ಕಾಲದಲ್ಲಿ ಪರಪದಾರ್ಥಗಳ ಜ್ಞಾನವು ಮುಖ್ಯವಲ್ಲ. ಆದಕಾರಣ ಕೇವಲ ಸ್ವಸಂವೇದನಜ್ಞಾನವೇ ನಿಶ್ಚಯಸಮ್ಯಗ್ಜ್ಞಾನವಾಗಿರುತ್ತದೆ. ಇಲ್ಲಿ ವ್ಯವಹಾರಸಮ್ಯಗ್ಜ್ಞಾನವು ಪರಂಪರೆಯಿಂದ ಮೋಕ್ಷಕ್ಕೆ ಕಾರಣವಾಗಿದೆ ಮತ್ತು ನಿಶ್ಚಯಸಮ್ಯಗ್ಜ್ಞಾನವು ಸಾಕ್ಷಾತ್ ಮೋಕ್ಷಕಾರಣವಾಗಿದೆ ಎಂದು ತಿಳಿಯಬೇಕು.

ಮುಂದೆ ಸಮ್ಯಕ್ಚಾರಿತ್ರವನ್ನು ಪ್ರತಿಪಾದಿಸುತ್ತಾರೆ—

**ಜಾಣವಿ ಮಣ್ಣವಿ ಅಪ್ಪು ಪರು, ಜೋ ಪರಭಾಉ ಚಏಇ ।**
**ಸೋ ಣಿಉ ಸುದ್ಧಉ ಭಾವಡಉ, ಣಾಣಿಹಿಂ ಚರಣು ಹವೇಇ ॥ ೩೦ ॥**

"ಜ್ಞಾತ್ವಾ ಮತ್ವಾ ಆತ್ಮಾನಂ ಪರಂ ಯಃ ಪರಭಾವಂ ತ್ಯಜತಿ ।
ಸ ನಿಜಃ ಶುದ್ಧಃ ಭಾವಃ ಜ್ಞಾನಿನಾಂ ಚರಣಂ ಭವತಿ ॥ ೩೦ ॥"

**ಅನ್ವಯಾರ್ಥ:—** ಸಮ್ಯಗ್ಜ್ಞಾನದಿಂದ **ಅಪ್ಪು ಪರು ಜಾಣವಿ—** ತನ್ನನ್ನು ಮತ್ತು ಪರದ್ರವ್ಯವನ್ನು ತಿಳಿದು **ಮಣ್ಣವಿ—** ಸಮ್ಯಗ್ದರ್ಶನದಿಂದ ಶ್ರದ್ಧೆಯಿಟ್ಟು **ಜೋ—** ಯಾವುದು **ಪರಭಾಉ ಚಏಇ—** ಪರಭಾವವನ್ನು ತ್ಯಜಿಸುವುದೋ **ಸೋ ಣಿಉ**

**ಸುದ್ಧಉ ಭಾವಡಉ**— ಆತ್ಮನ ಆ ನಿಜಶುದ್ಧಭಾವವು **ಣಾಣೆಹಿಂ ಚರಣಂ ಹವೇಣ್ಣ**- ಸಮ್ಯಗ್ಜ್ಞಾನಿಗಳ ಚಾರಿತ್ರವಾಗುತ್ತದೆ.

**ಭಾವಾರ್ಥ:**—ವೀತರಾಗಸಹಜಾನಂದೈಕಸ್ವಭಾವವುಳ್ಳ ನಿಜಾತ್ಮದ್ರವ್ಯ(ಸ್ವದ್ರವ್ಯ) ವನ್ನೂ ತದ್ವಿಪರೀತವಾದ ಪರದ್ರವ್ಯವನ್ನು ಸಂಶಯಾದಿರಹಿತವಾದ ಸಮ್ಯಗ್ಜ್ಞಾನದಿಂದ ಮೊದಲು ತಿಳಿದು, ಶಂಕಾದಿದೋಷರಹಿತವಾದ ಸಮ್ಯಗ್ದರ್ಶನದಿಂದ ಆ ಸ್ವಪರದ್ರವ್ಯ ಗಳಲ್ಲಿ ನಂಬಿಕೆಯನ್ನಿಟ್ಟು ಮಾಯಾಶಲ್ಯ, ನಿದಾನಶಲ್ಯಮೊದಲಾದ ಸಮಸ್ತಚಿಂತೆಗಳನ್ನು ಬಿಡುವುದರಿಂದ ಯಾವ ಪುರುಷನು ನಿಜಶುದ್ಧಾತ್ಮಸ್ವರೂಪದಲ್ಲಿ ಪರಮಾನಂದಸುಖರಸಾ ಸ್ವಾದದಿಂದ ತೃಪ್ತನಾಗಿರುತ್ತಾನೋ ಆ ಪುರುಷನೇ ಅಭೇದನಯದಿಂದ ನಿಶ್ಚಯಚಾರಿತ್ರ ವಾಗಿರುತ್ತಾನೆಂದು ಭಾವಾರ್ಥವು.

ಈ ಪ್ರಕಾರವಾಗಿ ಮೋಕ್ಷ, ಮೋಕ್ಷಫಲ-ಮೋಕ್ಷಮಾರ್ಗಪ್ರತಿಪಾದಕದ್ವಿತೀಯ ಮಹಾಧಿಕಾರದಲ್ಲಿ ನಿಶ್ಚಯವ್ಯವಹಾರಮೋಕ್ಷಮಾರ್ಗಪ್ರತಿಪಾದನೆಯ ಮುಖ್ಯತೆಯಿಂದ ಮೂರುಸೂತ್ರಗಳು, ವ್ಯವಹಾರಸಮ್ಯಕ್ತ್ವದ ನಿರೂಪಣೆಯ ಮುಖ್ಯತೆಯಿಂದ ಹದಿನಾಲ್ಕು ಸೂತ್ರಗಳು, ಸಮ್ಯಗ್ಜ್ಞಾನ--ಚಾರಿತ್ರಗಳ ಪ್ರತಿಪಾದನೆಯ ಮುಖ್ಯತೆಯಿಂದ ಸೂತ್ರ ಗಳೆರಡು, ಇಂತು ಸಮುದಾಯದಿಂದ ಹತ್ತೊಂಬತ್ತು ಸೂತ್ರಗಳು ಹೇಳಲ್ಪಟ್ಟವು.

ಇನ್ನುಮುಂದೆ ಅಭೇದರತ್ನತ್ರಯವ್ಯಾಖ್ಯಾನದ ಮುಖ್ಯತೆಯಿಂದ ಎಂಟು ಸೂತ್ರ ಗಳು ಹೇಳಲ್ಪಡುತ್ತವೆ—

**ಜೋ ಭತ್ತಉ ರಯಣತ್ತಯಹಂ, ತಸು ಮುಣಿ ಲಕ್ಖಣು ಏಉ ।**
**ಅಪ್ಪಾ ಮಿಲ್ಲಿವಿ ಗುಣಣಿಲಉ, ತಾಸು ವಿ ಅಣ್ಣು ಣ ಝೇಉ ॥ ೩೧ ॥**

"ಯಃ ಭಕ್ತಃ ರತ್ನತ್ರಯಸ್ಯ ತಸ್ಯ ಮನ್ಯಸ್ವ ಲಕ್ಷಣಂ ಏತತ್ ।
ಆತ್ಮಾನಂ ಮುಕ್ತ್ವಾ ಗುಣನಿಲಯಂ ತಸ್ಯ ಅಪಿ ಅನ್ಯತ್ ನ ಧ್ಯೇಯಮ್ ॥ ೩೧ ॥"

**ಅನ್ವಯಾರ್ಥ:—ಜೋ ರಯಣತ್ತಯಹಂ ಭತ್ತಉ**—ಯಾವನು ರತ್ನ ತ್ರಯದ ಭಕ್ತ(ಆರಾಧಕ)ನಾಗಿರುವನೋ **ತಸು ಲಕ್ಖಣು ಏಉ ಮುಣಿ**—ಅವನ ಲಕ್ಷಣವಿದೆಂದು ತಿಳಿ. **ಗುಣಣಿಲಉ ಅಪ್ಪಾ ಮಿಲ್ಲಿವಿ**—ಗುಣನಿಲಯ (ಗುಣಗಳ ವಾಸಸ್ಥಾನ)ನಾದ ಆತ್ಮನನ್ನು ಬಿಟ್ಟು **ತಾಸು ವಿ**—ಆತನಿಗಾದರೂ **ಅಣ್ಣು ಣ ಝೇಉ**—ಬೇರೆ ಧ್ಯೇಯಪದಾರ್ಥವು ಇರುವುದಿಲ್ಲ. ಅರ್ಥಾತ್ ಶುದ್ಧನಿಶ್ಚಯನಯ ದಿಂದ ಆತ್ಮನೇ ಧ್ಯೇಯನಾಗಿರುತ್ತಾನೆ.

**ಭಾವಾರ್ಥ:**—ವೀತರಾಗಸರ್ವಜ್ಞೋಪದಿಷ್ಟವಾದ ಷಡ್ದ್ರವ್ಯ, ಪಂಚಾಸ್ತಿಕಾಯ, ಸಪ್ತತತ್ತ್ವ, ನವಪದಾರ್ಥ ಇವುಗಳಲ್ಲಿ ಶ್ರದ್ಧಾನರೂಪವಾದ ಸಮ್ಯಗ್ದರ್ಶನವೂ ಇವು ಗಳನ್ನು ಯಥಾಸ್ಥಿತವಾಗಿ ತಿಳಿಯುವಿಕೆಯರೂಪವಾದ ಸಮ್ಯಗ್ಜ್ಞಾನವೂ, ಹಿಂಸಾದಿ ಪಂಚಪಾಪಗಳ ತ್ಯಾಗ ಮತ್ತು ವ್ರತಶೀಲಾದಿಗಳಪಾಲನರೂಪವಾದ ಸಮ್ಯಕ್ಚಾರಿತ್ರವೂ ವ್ಯವಹಾರರತ್ನತ್ರಯ ಅಥವಾ ಭೇದರತ್ನತ್ರಯವಾಗಿದೆ. ಈ ಭೇದರತ್ನತ್ರಯದ ಪ್ರಭಾವ

ಬಂದ ನಿಶ್ಚಯ— ಅಭೇದರತ್ನತ್ರಯದ ಪ್ರಾಪ್ತಿಯಾಗುವುದರಿಂದ ಮುಕ್ತಿಗೆ ಪರಂಪರಾ ಕಾರಣವಾದ ಈ ರತ್ನತ್ರಯವು ಆರಾಧ್ಯವಾಗಿದೆ. ನಿಜಶುದ್ಧಾತ್ಮತತ್ತ್ವದ ಸಮ್ಯಕ್ ಶ್ರದ್ಧಾನಜ್ಞಾನಾನುಚರಣರೂಪವಾದುದು ನಿಶ್ಚಯರತ್ನತ್ರಯವೆಂದು ಹಿಂದೆ ವಿವರಿಸಲ್ಪಟ್ಟಿದೆ ಭೇದಾಭೇದರತ್ನತ್ರಯಾರಾಧಕನು ಸವಿಕಲ್ಪಾವಸ್ಥೆಯಲ್ಲಿ ಮನಸ್ಸಿನ ಸ್ಥಿರತೆಗಾಗಿ ದೇವೇಂದ್ರತ್ವ ಚಕ್ರವರ್ತಿತ್ವಮೊದಲಾದ ವಿಭೂತಿಗೆ ಕಾರಣವೂ ಪರಂಪರೆಯಿಂದ ಶುದ್ಧಾತ್ಮತತ್ತ್ವದ ಪ್ರಾಪ್ತಿಗೆ ಕಾರಣವೂ ಆದ ಪಂಚಪರಮೇಷ್ಠಿಗಳ ಸ್ತವನವನ್ನು ಮಾಡುತ್ತಾನೆ. ಹೀಗೆ ಭವ್ಯಜೀವನು ಪ್ರಥಮಾವಸ್ಥೆಯಲ್ಲಿ ವಚನದಿಂದ ಪಂಚಪರಮೇಷ್ಠಿಗಳ ವಸ್ತುಸ್ತವನ, ರೂಪಸ್ತವನ, ಗುಣಸ್ತವನಾದಿಗಳನ್ನು ಮಾಡುವುದೂ, ಮನಸ್ಸಿನಿಂದ ಅವರ ನಾಮಾಕ್ಷರರೂಪಾದಿಗಳನ್ನು ಧ್ಯಾನಿಸುವುದೂ ಯುಕ್ತವಾಗಿದೆ. ಆದರೂ ಪೂರ್ವೋಕ್ತ ನಿಶ್ಚಯರತ್ನತ್ರಯದ ಪ್ರಾಪ್ತಿಯ ಕಾಲದಲ್ಲಿ (ನಿರ್ವಿಕಲ್ಪಾವಸ್ಥೆಯಲ್ಲಿ) ಕೇವಲಜ್ಞಾನಾದ್ಯನಂತಗುಣಪರಿಣತನಾದ ನಿಜಶುದ್ಧಾತ್ಮನೇ ಧ್ಯೇಯನಾಗಿರುತ್ತಾನೆಂದು ತಾತ್ಪರ್ಯವು.

**ಜೇ ರಯಣತ್ತಉ ಣಿಮ್ಮಲಉ, ಣಾಣಿಯ ಅಪ್ಪು ಭಣಂತಿ ।**
**ತೇ ಆರಾಹಯ ಸಿವಪಯಹಂ, ಣಿಯಅಪ್ಪಾ ಝಾಯಂತಿ॥ ೩೨ ॥**

"ಯೇ ರತ್ನತ್ರಯಂ ನಿರ್ಮಲಂ ಜ್ಞಾನಿನಃ ಆತ್ಮಾನಂ ಭಣಂತಿ ।
ತೇ ಆರಾಧಕಾಃ ಶಿವಪದಸ್ಯ ನಿಜಾತ್ಮಾನಂ ಧ್ಯಾಯಂತಿ ॥ ೩೨ ॥"

**ಅನ್ವಯಾರ್ಥ:— ಜೇ ಣಾಣಿಯ**— ಯಾವ ಕೆಲವು ಜ್ಞಾನಿಗಳು **ರಯಣತ್ತಉ ಣಿಮ್ಮಲಉ**– ರಾಗಾದಿದೋಷರಹಿತವಾದ– ನಿರ್ಮಲರತ್ನತ್ರಯವನ್ನು **ಅಪ್ಪು ಭಣಂತಿ**— ಆತ್ಮನನ್ನಾಗಿ ಹೇಳುತ್ತಾರೊ(ಅಥವಾ ತಿಳಿಯುತ್ತಾರೋ) **ಸಿವಪದಹಂ**— ಶಿವಪದ (ಮೋಕ್ಷ)ದ **ತೇ ಆರಾಹಯ**— ಆರಾಧಕರಾದ ಆ ಆತ್ಮಜ್ಞಾನಿಗಳು **ಣಿಯ ಅಪ್ಪಾ ಝಾಯಂತಿ**— ನಿಜಾತ್ಮನನ್ನು ಧ್ಯಾನಿಸುತ್ತಾರೆ.

**ಭಾವಾರ್ಥ:**— ವೀತರಾಗಸ್ವಸಂವೇದನಜ್ಞಾನಿಗಳಾದ ಕೆಲವರು ಅಭೇದನಯದಿಂದ ಆತ್ಮನೇ ನಿಶ್ಚಯರತ್ನತ್ರಯವೆಂದು ತಿಳಿದು ಮೋಕ್ಷಾರಾಧಕರಾಗಿ ನಿಶ್ಚಯನಯದಿಂದ ವಿಶುದ್ಧಜ್ಞಾನದರ್ಶನಮಯವಾದ ನಿಜಶುದ್ಧಾತ್ಮಸ್ವರೂಪವನ್ನೇ ಧ್ಯಾನಿಸುತ್ತಾರೆಂದು ಅಭಿಪ್ರಾಯವು.

**ಅಪ್ಪಾ ಗುಣಮಉ ಣಿಮ್ಮಲಉ, ಅಣುದಿಣು ಜೇ ಝಾಯಂತಿ ।**
**ತೇ ಪರ ಣಿಯಮೇಂ ಪರಮಮುಣಿ, ಲಹು ಣಿವ್ವಾಣು ಲಹಂತಿ ॥ ೩೩ ॥**

"ಆತ್ಮಾನಂ ಗುಣಮಯಂ ನಿರ್ಮಲಂ ಅನುದಿನಂ ಯೇ ಧ್ಯಾಯಂತಿ ।
ತೇ ಪರಂ ನಿಯಮೇನ ಪರಮಮುನಯಃ ಲಘು ನಿರ್ವಾಣಂ ಲಭಂತೇ ॥ ೩೩ ॥"

**ಅನ್ವಯಾರ್ಥ:— ಜೇ**— ಯಾವ ಪುರುಷರು **ಗುಣಮಉ**— ಕೇವಲಜ್ಞಾನಾದ್ಯನಂತಗುಣಮಯನೂ **ಣಿಮ್ಮಲಉ**— ಕರ್ಮಮಲರಹಿತನೂ ಆದ **ಅಪ್ಪಾ**— ಆತ್ಮನನ್ನು **ಅಣುದಿಣು ಝಾಯಂತಿ**— ನಿರಂತರ ಧ್ಯಾನಿಸುತ್ತಾರೋ **ತೇ ಪರ ಪರಮಮುಣಿ**—

ಆ ಪರಮಮುನಿಗಳೇ **ಣಿಯಮೇಂ**— ನಿಶ್ಚಯದಿಂದ **ಲಹು ಣಿವ್ವಾಣಂ ಲಹಂತಿ**— ಬೇಗನೆ ನಿರ್ವಾಣ(ಮೋಕ್ಷ)ವನ್ನು ಹೊಂದುತ್ತಾರೆ.

**ಭಾವಾರ್ಥ:**— ಸರ್ವವಿಕಲ್ಪಗಳನ್ನು ತೊರೆದು ಸ್ವಶುದ್ಧಾತ್ಮನನ್ನೇ ನಿರಂತರ ಧ್ಯಾಸಿಸುತ್ತಿರುವ ಮಹಾಮುನಿಗಳು ಶೀಘ್ರವೇ ಮುಕ್ತಿಯನ್ನೈದುವರೆಂದು ಭಾವವು. "**ಚಾರಿತ್ರಸಾರ**" ಮೊದಲಾದ ಗ್ರಂಥಗಳಲ್ಲಿ "ದ್ರವ್ಯಪರಮಾಣುವನ್ನೂ ಭಾವಪರಮಾಣುವನ್ನೂ ಧ್ಯಾನಿಸುವವರಾಗಿ ಕೇವಲಜ್ಞಾನವನ್ನು ಪಡೆಯುತ್ತಾರೆ" ಎಂದು ಹೇಳುವಲ್ಲಿ ದ್ರವ್ಯಪರಮಾಣುವೆಂದರೆ ಆತ್ಮದ್ರವ್ಯದ ಸೂಕ್ಷ್ಮತ್ವವೆಂದೂ ಭಾವಪರಮಾಣುವೆಂದರೆ ಆತ್ಮಭಾವದ ಸೂಕ್ಷ್ಮತೆಯೆಂದೂ ತಿಳಿಯಬೇಕು ಏಕೆಂದರೆ ಇಲ್ಲಿ ಆತ್ಮದ್ರವ್ಯವೇ ಮುಖ್ಯವಲ್ಲದೆ ಪುದ್ಗಲದ್ರವ್ಯವು ಮುಖ್ಯವಲ್ಲ. ಇದನ್ನೇ ತತ್ತ್ವಾರ್ಥಸೂತ್ರದ "**ಸರ್ವಾರ್ಥಸಿದ್ಧಿ**" ಟೀಕೆಯಲ್ಲಿ—"**ದ್ರವ್ಯಪರಮಾಣುಶಬ್ದೇನ ದ್ರವ್ಯಸೂಕ್ಷ್ಮತ್ವಂ ಭಾವಪರಮಾಣುಶಬ್ದೇನ ಭಾವಸೂಕ್ಷ್ಮತ್ವಂ**" ಎಂದು ಹೇಳಿದ್ದಾರೆ ಅತಏವ ದ್ರವ್ಯಶಬ್ದದಿಂದ ಆತ್ಮದ್ರವ್ಯವೆಂದೂ ಪರಮಾಣುಶಬ್ದದಿಂದ ಸೂಕ್ಷ್ಮತ್ವವೆಂದೂ ತಿಳಿಯಬೇಕು. ಆತ್ಮದ್ರವ್ಯವು ಇಂದ್ರಿಯ ಮನೋವಿಕಲ್ಪಾತೀತವೂ ನಿರ್ವಿಕಲ್ಪಸಮಾಧಿಗಮ್ಯವೂ ಆಗಿರುವುದರಿಂದ ಸೂಕ್ಷ್ಮವಾಗಿರುತ್ತದೆ. ಹಾಗೆಯೇ ಸ್ವಸಂವೇದನಪರಿಣಾಮರೂಪಭಾವವು ಪಂಚೇಂದ್ರಿಯಮನೋವಿಷಯಾತೀತವೂ ವೀತರಾಗನಿರ್ವಿಕಲ್ಪಸಮರಸೀಭಾವವಿಷಯವೂ ಆಗಿರುವುದರಿಂದ ಸೂಕ್ಷ್ಮವಾಗಿರುತ್ತದೆ. ಹೀಗೆ ನಿಜಶುದ್ಧಾತ್ಮಧ್ಯಾನದಿಂದಲೇ ಮೋಕ್ಷವುಂಟಾಗುವುದೆಂಬ ವಿಷಯವನ್ನು "**ಶ್ರೀಪೂಜ್ಯಪಾದಸ್ವಾಮಿಗಳು**" ಸಮಾಧಿಶತಕಾದಿಗ್ರಂಥಗಳಲ್ಲಿ ವ್ಯಕ್ತಗೊಳಿಸಿದ್ದಾರೆ—"**ಆತ್ಮಾನಮಾತ್ಮಾ ಆತ್ಮನ್ಯೇವಾತ್ಮನಾಸೌ ಕ್ಷಣಮುಪಜನಯನ್ ಸ ಸ್ವಯಂಭೂಃ ಪ್ರವೃತ್ತಃ**" ಅರ್ಥಾತ್ ಈ ಆತ್ಮನು ತನ್ನಸ್ವರೂಪವನ್ನು ತನ್ನಸ್ವರೂಪದಲ್ಲೇ ತನ್ನಸ್ವರೂಪದಿಂದ ಪ್ರತಿಕ್ಷಣದಲ್ಲಿ ಮಗ್ನವನ್ನಾಗಿ ಮಾಡುವವನಾಗಿ ಪರಾಪೇಕ್ಷೆಯಿಲ್ಲದೆ ತಾನೇ ಮೋಕ್ಷಮಾರ್ಗವನ್ನು ತಿಳಿದು ಅನುಷ್ಠಿಸಿ ಅನಂತಜ್ಞಾನಾದಿರೂಪದಿಂದ ಪ್ರಾದುರ್ಭವಿಸಿದನು ಅಂದರೆ ಸ್ವಯಂಭುವಾದನು ಎಂದಭಿಪ್ರಾಯವು.

ಸಿದ್ಧಾಂತದಲ್ಲಿ ಪ್ರತಿಪಾದಿಸಿರುವ ಶುಕ್ಲಧ್ಯಾನದ ನಲುವತ್ತೆರಡು ವಿಕಲ್ಪ(ಭೇದ)ಗಳು ಕೇವಲ ಗೌಣರೂಪವಾಗಿರುವುವೆಂದು ತಿಳಿಯಬೇಕು ಯದ್ಯಪಿ ಪ್ರಥಮಔಪಶಮಿಕ ಸಮ್ಯಕ್ತ್ವವನ್ನು ಗ್ರಹಣಮಾಡುವ ಕಾಲದಲ್ಲಿ ಜೀವನು ಪರಮಾಗಮಪ್ರಸಿದ್ಧವಾದ ಅಧಃಕರಣಾದಿವಿಕಲ್ಪಗಳನ್ನು ಮಾಡುತ್ತಾನಾದರೂ ಅವುಗಳನ್ನು ಈಹಾವೃತ್ತಿಯಿಂದ (ಇಚ್ಛಾಪೂರ್ವಕ) ಮಾಡುವುದಿಲ್ಲ. ಅವು ಸಹಜವಾಗಿಯೇ ಉಂಟಾಗುತ್ತವೆ. ಅದರಂತೆಯೇ ಶುಕ್ಲಧ್ಯಾನದ ಭೇದಗಳೂ ಅನಿಚ್ಛಾಪೂರ್ವಕ-ಸಹಜವಾಗಿ ಉಂಟಾಗುವುದರಿಂದ ಅವು ಗೌಣವಾಗಿರುತ್ತವೆ ಅರ್ಥಾತ್ ಮುಖ್ಯವಲ್ಲವೆಂದು ತಿಳಿಯಬೇಕು. ಈ ಪ್ರಕಾರವಾಗಿ ಪ್ರಾಥಮಿಕಾವಸ್ಥೆಯಲ್ಲಿ ಚಿತ್ತವನ್ನು ಸ್ಥಿರಗೊಳಿಸುವುದಕ್ಕಾಗಿ ಮತ್ತು ವಿಷಯಕಷಾಯಾದಿರೂಪದುರ್ಧ್ಯಾನವನ್ನು ತಡೆಯುವುದಕ್ಕಾಗಿ ಮುಕ್ತಿಗೆ ಪರಂಪರಾ ಕಾರಣರಾದ ಅರ್ಹದಾದಿ-ಪಂಚಪರಮೇಷ್ಠಿಗಳನ್ನು ಧ್ಯಾನಿಸಬೇಕು. ಆಮೇಲೆ ಚಿತ್ತವು

ಸ್ಥಿರವಾಗುತ್ತಿರಲು ಮುಕ್ತಿಗೆ ಸಾಕ್ಷಾತ್ಕಾರಣವಾದ ನಿಜಶುದ್ಧಾತ್ಮತತ್ತ್ವವನ್ನೇ ಧ್ಯಾನಿಸ ಬೇಕು. ಹೀಗೆ ಸಾಧ್ಯಸಾಧಕಭಾವವನ್ನರಿತು ಧ್ಯೇಯಪದಾರ್ಥದ ವಿಷಯದಲ್ಲಿ ವಿವಾದ ವನ್ನು ಮಾಡಬಾರದೆಂದು ಭಾವವು.

**ಸಯುಲಪಯತ್ಥಹಂ ಜಂ ಗಹಣು, ಜೀವಹಂ ಅಗ್ಗಿಮು ಹೋಇ ।**
**ವತ್ಥುವಿಸೇಸವಿವಜ್ಜಿಯಉ, ತಂ ಣಿಯದಂಸಣು ಜೋಇ ॥ ೩೪ ॥**

"ಸಕಲಪದಾರ್ಥಾನಾಂ ಯತ್ ಗ್ರಹಣಂ ಜೀವಾನಾಂ ಅಗ್ರಿಮಂ ಭವತಿ ।
ವಸ್ತುವಿಶೇಷವಿವರ್ಜಿತಂ ತತ್ ನಿಜದರ್ಶನಂ ಪಶ್ಯ ॥ ೩೪ ॥"

**ಅನ್ವಯಾರ್ಥ:–ಜೀವಹಂ**–ಜೀವರಿಗೆ **ಸಯುಲಪಯತ್ಥಹಂ**–ಸಕಲಪದಾರ್ಥ ಗಳ **ಜಂ ಗಹಣು**—ಯಾವ ಗ್ರಹಣೆ (ಸಾಮಾನ್ಯ ಅವಲೋಕನ)ಯು **ವತ್ಥುವಿಸೇಸ ವಿವಜ್ಜಿಯಉ**—ವಸ್ತುವಿಶೇಷ(ಇದು ಬಿಳಿದು, ಇದು ಕಪ್ಪು ಇತ್ಯಾದಿ ಭೇದ)ರಹಿತ ವಾಗಿ **ಅಗ್ಗಿಮು ಹೋಇ**—ಜ್ಞಾನಕ್ಕಿಂತ ಮೊದಲು ಉಂಟಾಗುತ್ತದೋ **ತಂ ಣಿಯ ದಂಸಣು**—ಆ ನಿಜದರ್ಶನ (ಆತ್ಮನಸಂಬಂಧವಾದ ದರ್ಶನ)ವನ್ನು **ಜೋಇ**–ನೋಡು ಅರ್ಥಾತ್ ತಿಳಿ

**ಭಾವಾರ್ಥ:**— ಇಲ್ಲಿ ನಿರ್ವಿಕಲ್ಪಸತ್ತಾವಲೋಕನರೂಪವಾದ ದರ್ಶನವನ್ನು ಹೇಳುತ್ತಾರೆ —ಜ್ಞಾನಕ್ಕೆ ವಿಷಯವಾದ ವಸ್ತುವಿನ "ಇದು ಬಿಳೀಬಣ್ಣದ್ದು, ಇದು ಕರೀ ಬಣ್ಣದ್ದು, ಇದು ಘಟ, ಇದು ದೊಡ್ಡದು, ಇದು ಚಿಕ್ಕದು" ಇತ್ಯಾದಿ ವಿಶೇಷರೂಪವನ್ನು ಬಿಟ್ಟು ಕೇವಲ ಆ ವಸ್ತುವಿನ ಅಸ್ತಿತ್ವವನ್ನು ವಿಕಲ್ಪರಹಿತವಾಗಿ (ಸಾಮಾನ್ಯವಾಗಿ) ತಿಳಿಯುವ ಆತ್ಮಗುಣಕ್ಕೆ ದರ್ಶನವೆಂದು ಹೆಸರು * ಇದು ಜ್ಞಾನದ ಪೂರ್ವಾವಸ್ಥೆ ಯೆಂದಾದರೂ ನಿರ್ವಿಕಲ್ಪಜ್ಞಾನವೆಂದಾದರೂ ಹೇಳಬಹುದು ದರ್ಶನವುಂಟಾದ ಉತ್ತ ರಕ್ಷಣದಲ್ಲೇ ಜ್ಞಾನವುಂಟಾಗುವುದು ನಿಜಾತ್ಮಾವಲೋಕನರೂಪವಾದ ದರ್ಶನವು ಮೋಕ್ಷಕಾರಣವಾಗಿರುತ್ತದೆಂದು ಹಿಂದೆ ಹೇಳಲ್ಪಟ್ಟಿದೆ. ಪುನಃ ಇಲ್ಲಿ ಸಾಮಾನ್ಯ ಸತ್ತಾವಲೋಕನವು ದರ್ಶನವೆಂದು ಹೇಳಲ್ಪಟ್ಟಿತು ಈ ದರ್ಶನವು ಮಿಥ್ಯಾದೃಷ್ಟಿ ಗಳಿಗೂ ಉಂಟಾಗುವುದರಿಂದ ಅವರಿಗೂ ಮೋಕ್ಷವುಂಟಾಗಬಹುದಲ್ಲವೇ? ಎಂಬ ಶಂಕೆಗೆ ಸಮಾಧಾನವಿದು:—ದರ್ಶನದಲ್ಲಿ ಚಕ್ಷುದರ್ಶನ, ಅಚಕ್ಷುದರ್ಶನ, ಅವಧಿ ದರ್ಶನ ಮತ್ತು ಕೇವಲದರ್ಶನವೆಂದು ನಾಲ್ಕು ಭೇದಗಳಿವೆ ಈ ನಾಲ್ಕರಲ್ಲಿ ಮಾನಸಿಕ ಅಚಕ್ಷುದರ್ಶನವು ಆತ್ಮಗ್ರಾಹಕವಾಗಿರುತ್ತದೆ. ಇದೇ ಆತ್ಮದರ್ಶನವು. ಮಿಥ್ಯಾದೃಷ್ಟಿಗಳಲ್ಲಿ ಮಿಥ್ಯಾತ್ವಾದಿ ಸಪ್ತಪ್ರಕೃತಿಗಳ ಉಪಶಮ ಕ್ಷಯೋಪಶಮ ಹಾಗೂ ಕ್ಷಯದಿಂದುಂಟಾದ ತತ್ತ್ವಾರ್ಥಶ್ರದ್ಧಾನರೂಪವಾದ ಸಮ್ಯಕ್ತ್ವವೂ ಶುದ್ಧಾತ್ಮ

---

*"ಜಂ ಸಾಮಣ್ಣಂ ಗಹಣಂ, ಭಾವಾಣಂ ಣೇವ ಕಟ್ಟುಮಾಯಾರಂ ।
ಅವಿಸೇಸಿದೂಣ ಅಟ್ಠೇ, ದಂಸಣಮಿದಿ ಭಣ್ಣಏ ಸಮಯೇ ॥ ೪೩ ॥"

—ದ್ರವ್ಯಸಂಗ್ರಹ.

ತತ್ತ್ವವೇ ಉಪಾದೇಯವಾಗಿರುತ್ತದೆಂಬ ಶ್ರದ್ಧಾನವೂ ಇಲ್ಲದಿರುವುದರಿಂದ ಅವರಿಗೆ ಆತ್ಮದರ್ಶನವುಂಟಾಗುವುದಿಲ್ಲ. ಅತಏವ ಮೋಕ್ಷವೂ ಉಂಟಾಗುವುದಿಲ್ಲವೆಂದು ತಾತ್ಪರ್ಯವು.

**ದಸಂಣಪುವ್ವ ಹವೇಇ ಫುಡು, ಜಂ ಜೀವಹಂ ವಿಣ್ಣಾಣು ।**
**ವತ್ಥುವಿಸೇಸು ಮುಣಂತು ಜಿಯು, ತಂ ಮುಣಿ ಅವಿಚಲು ಣಾಣು ॥೩೫॥**

"ದರ್ಶನಪೂರ್ವಂ ಭವತಿ ಸ್ಫುಟಂ ಯತ್ ಜೀವಾನಾಂ ವಿಜ್ಞಾನಮ್ ।
ವಸ್ತುವಿಶೇಷಂ ಜಾನನ್ ಜೀವ ತತ್ ಮನ್ಯಸ್ವ ಅವಿಚಲಂ ಜ್ಞಾನಮ್ ॥ ೩೫ ॥"

**ಅನ್ವಯಾರ್ಥ:**—**ಜಿಯು**— ಎಲೈ ಜೀವನೇ! **ಜೀವಹಂ**— ಜೀವರುಗಳಿಗೆ **ಜಂ ವಿಣ್ಣಾಣು**— ಯಾವ ವಿಜ್ಞಾನವು **ಫುಡು**— ನಿಶ್ಚಯವಾಗಿ **ದಂಸಣಪುವ್ವ**— ದರ್ಶನ ಪೂರ್ವಕವಾಗಿ **ಹವೇಇ**— ಆಗುತ್ತದೋ **ವತ್ಥುವಿಸೇಸು ಮುಣಂತು**— ವಸ್ತುವಿನ ವಿಶೇಷತೆಯನ್ನು ತಿಳಿಯುವ **ತಂ ಣಾಣು**— ಆ ಜ್ಞಾನವನ್ನು **ಅವಿಚಲು ಮುಣಿ**— ಅವಿಚಲ ಅರ್ಥಾತ್ ಸಂಶಯವಿಪರ್ಯಯಾನಧ್ಯವಸಾಯರಹಿತವಾದುದನ್ನಾಗಿ ತಿಳಿ.

**ಭಾವಾರ್ಥ:**—ದರ್ಶನವು ನಿರ್ವಿಕಲ್ಪಕವಾಗಿಯೂ ಜ್ಞಾನವು ಸವಿಕಲ್ಪಕವಾಗಿಯೂ ಇರುತ್ತದೆ ಆದಕಾರಣ ದರ್ಶನವು ವಸ್ತುಸಾಮಾನ್ಯಗ್ರಾಹಕವೂ ಜ್ಞಾನವು ವಸ್ತುವಿಶೇಷಗ್ರಾಹಕವೂ ಆಗಿರುತ್ತದೆ. *ಜ್ಞಾನದರ್ಶನಾವರಣಕರ್ಮಗಳಿಗೆ ಛದ್ಮವೆಂದು ಸಂಜ್ಞೆಯಿದೆ. ಆ ಕರ್ಮಬದ್ಧರಾಗಿರುವವರಿಗೆ ಛದ್ಮಸ್ಥರೆಂದು ಹೆಸರು ಅಂತಹ ಛದ್ಮಸ್ಥರಿಗೆ ಉಂಟಾಗುವ ಜ್ಞಾನವು ಸಾಮಾನ್ಯಗ್ರಾಹಕವಾದ ದರ್ಶನಪೂರ್ವಕವಾಗಿಯೇ ಉಂಟಾಗುತ್ತದೆ ಅರ್ಥಾತ್ ಮೊದಲು ದರ್ಶನವುಂಟಾಗಿ ಆ ಮೇಲೆ ಜ್ಞಾನವುಂಟಾಗುತ್ತದೆ. ಜ್ಞಾನದರ್ಶನಾವರಣಕರ್ಮರಹಿತರಾದ ಕೇವಲಿಗಳಿಗಾದರೋ ಸೂರ್ಯನನ್ನು ಆವರಿಸಿದ ಮೇಘವು ದೂರವಾದಮೇಲೆ ಬಿಸಿಲೂ ಬೆಳಕೂ ಒಂದೇ ಕಾಲದಲ್ಲಿ ಆವಿರ್ಭವಿಸುವಂತೆ ದರ್ಶನಜ್ಞಾನಗಳೆರಡೂ ಅರ್ಥಾತ್ ಕೇವಲದರ್ಶನ ಕೇವಲಜ್ಞಾನಗಳೆರಡೂ ಏಕಕಾಲದಲ್ಲಿ(ಜತೆಯಲ್ಲಿ) ಉಂಟಾಗುತ್ತವೆ. ದರ್ಶನಪೂರ್ವಕವಾದ ಈ ವ್ಯವಹಾರಜ್ಞಾನವು ಶುದ್ಧಾತ್ಮಭಾವನೆಯನ್ನು ನಿರೂಪಿಸುವ ಸಮಯ ಪ್ರಸ್ತುತವಾಗಿಲ್ಲವಾದರೂ ಮಾನಸಿಕ ನಿರ್ವಿಕಲ್ಪದರ್ಶನವು ನಿಶ್ಚಯಸಮ್ಯಕ್ತ್ವಚಾರಿತ್ರಗಳ ಬಲದಿಂದ ಭವ್ಯಜೀವನಿಗೆ ನಿರ್ವಿಕಲ್ಪನಿಜಶುದ್ಧಾತ್ಮಾನುಭೂತಿಧ್ಯಾನದಿಂದ ಸಹಕಾರಿಕಾರಣವಾಗುತ್ತದೆ.

**ದುಕ್ಖು ವಿ ಸುಕ್ಖು ಸಹಂತು ಜಿಯು, ಣಾಣಿಉ ಝಾಣಣಿಲೀಣು ।**
**ಕಮ್ಮಹಂ ಣಿಜ್ಜರಹೇಉ ತಉ, ವುಚ್ಚಇ ಸಂಗವಿಹೀಣು ॥ ೩೬ ॥**

---

* "ದಂಸಣಪುವ್ವಂ ಣಾಣಂ, ಛದುಮತ್ಥಾಣಂ ಣ ದೊಣ್ಣಿ ಉವಜೋಗಾಇ ।
ಜುಗವಂ ಜಮ್ಹಾ ಕೇವಲಿ, ಣಾಹೇ ಜುಗವಂ ತು ತೇ ದೋವಿ ॥ ೪೪ ॥"

—ದ್ರವ್ಯಸಂಗ್ರಹ

"ದುಃಖಮಪಿ ಸುಖಂ ಸಹಮಾನಃ ಜೀವ ಜ್ಞಾನೀ ಧ್ಯಾನನಿಲೀನಃ ।
ಕರ್ಮಣಃ ನಿರ್ಜರಾಹೇತುಃ ತಪಃ ಉಚ್ಯತೇ ಸಂಗವಿಹೀನಃ ॥ ೩೬ ॥"

**ಅನ್ವಯಾರ್ಥ:**— **ಜಿಯ**— ಎಲೈ ಜೀವನೇ! **ದುಕ್ಖ್ವಿ ಸುಕ್ಖ್**—ದುಃಖವನ್ನೂ ಸುಖವನ್ನೂ **ಸಹಂತು**— ಸಮಭಾವದಿಂದ ಸಹಿಸುವ **ಣಾಣಿಉ**— ವೀತರಾಗಸ್ವಸಂವೇದನಜ್ಞಾನಿಯು **ಝಾಣಣಿಲೀಣು**— ಆತ್ಮಧ್ಯಾನದಲ್ಲಿ ಲೀನನಾಗಿ **ಕಮ್ಮಹಂ ಣಿಜ್ಜರಹೇಉ**— ಶುಭಾಶುಭಾಕರ್ಮಗಳ ನಿರ್ಜರೆಗೆ ಕಾರಣನೆಂದೂ **ಸಂಗವಿಹೀಣು**— ಬಾಹ್ಯಾಭ್ಯಂತರಪರಿಗ್ರಹರಹಿತನಾದ ಆ ಜ್ಞಾನಿಯೇ **ತಉ ವುಚ್ಚಇ**— ತಪಸ್ಸೆಂದೂ (ತಪೋರೂಪನೆಂದು) ಹೇಳಲ್ಪಡುತ್ತಾನೆ.

**ಭಾವಾರ್ಥ:**— ಸುಖದುಃಖ, ಜೀವನಮರಣಾದಿಗಳಲ್ಲಿ ಸಮತಾಭಾವದಿಂದಿರುವ ವೀತರಾಗಸ್ವಸಂವೇದನಜ್ಞಾನಿಯಾದ ಪುರುಷನು ವೀತರಾಗಚಿದಾನಂದೈಕಧ್ಯಾನಪರಿಣತನಾಗಿ ಅಭೇದವಿವಕ್ಷೆಯಿಂದ ಕರ್ಮಗಳ ನಿರ್ಜರೆ(ಏಕದೇಶಕ್ಷಯ)ಗೆ ಕಾರಣನಾಗುತ್ತಾನೆ ಮತ್ತು ಬಾಹ್ಯಾಭ್ಯಂತರಪರಿಗ್ರಹರಹಿತನಾಗಿ ಪರದ್ರವ್ಯೇಚ್ಛಾನಿರೋಧರೂಪ-ಬಾಹ್ಯಾಭ್ಯಂತರತಪೋಮಯನಾಗುತ್ತಾನೆ. **"ತತ್ತ್ವಾರ್ಥಸೂತ್ರ"**ದಲ್ಲಿ "ಉತ್ತಮಸಂಹನನಸ್ಯೈಕಾಗ್ರಚಿಂತಾನಿರೋಧೋ ಧ್ಯಾನಮ್" ಅರ್ಥಾತ್ ಉತ್ತಮಸಂಹನನವುಳ್ಳವನ ಏಕಾಗ್ರಚಿಂತಾನಿರೋಧವು ಧ್ಯಾನವೆಂದು ಧ್ಯಾನದ ಲಕ್ಷಣವನ್ನು ಹೇಳಿದ್ದಾರೆ. ಈ ಧ್ಯಾನದಿಂದ ಕರ್ಮಗಳ ನಿರ್ಜರೆಯಾಗುವುದೆಂದು ಹೇಳಲ್ಪಟ್ಟಿತು. ಆದರೆ ಉತ್ತಮಸಂಹನನವಿಲ್ಲದವರಿಗೆ ಧ್ಯಾನವು ಹೇಗೆ ಸಿದ್ಧಿಸುತ್ತದೆ? ಎಂಬ ಪ್ರಶ್ನೆಗೆ ಉತ್ತರವೇನಂದರೆ-ಧ್ಯಾನವು ಉತ್ತಮಸಂಹನನವುಳ್ಳವರಿಗುಂಟಾಗುವುದೆಂದು ಹೇಳಿದುದು ಶುಕ್ಲಧ್ಯಾನದ ಅಪೇಕ್ಷೆಯಿಂದಾಗಿದೆ ಶುಕ್ಲಧ್ಯಾನದ "ಪೃಥಕ್ತ್ವವಿತರ್ಕವಿಚಾರ"ವೆಂಬ ಮೊದಲ ಭೇದವು ಉಪಶಮಶ್ರೇಣಿಯಲ್ಲಾದರೆ ಎಂಟನೆಯ ಅಪೂರ್ವಕರಣಗುಣಸ್ಥಾನ ಮೊದಲುಗೊಂಡು ಹನ್ನೊಂದನೆಯ ಉಪಶಾಂತಕಷಾಯ-ಗುಣಸ್ಥಾನದ ವರೆಗೆ ನಾಲ್ಕು ಗುಣಸ್ಥಾನವರ್ತಿಗಳಲ್ಲಿ ತರತಮಭಾವದಿಂದುಂಟಾಗುವುದು ಕ್ಷಪಕಶ್ರೇಣಿಯಲ್ಲಾದರೆ ಎಂಟನೆಯ ಅಪೂರ್ವಕರಣಗುಣಸ್ಥಾನ ಮೊದಲುಗೊಂಡು ಹತ್ತನೆಯ ಸೂಕ್ಷ್ಮಸಾಂಪರಾಯಗುಣಸ್ಥಾನದ ವರೆಗೆ ಮೂರು ಗುಣಸ್ಥಾನವರ್ತಿಗಳಲ್ಲಿ ತರತಮಭಾವದಿಂದುಂಟಾಗುವುದು-ಪೂರ್ವೋಕ್ತ ಶ್ರೇಣಿಗಳೆರಡರಲ್ಲಿ ಮೊದಲನೆಯ ಉಪಶಮಶ್ರೇಣಿಯು ವಜ್ರವೃಷಭನಾರಾಚಸಂಹನನ, ವಜ್ರನಾರಾಚಸಂಹನನ ಮತ್ತು ನಾರಾಚಸಂಹನನ ಈ ಮೂರು ಸಂಹನನವುಳ್ಳವರಿಗೆ ಉಂಟಾಗುತ್ತದೆ. ಎರಡನೆಯ ಕ್ಷಪಕಶ್ರೇಣಿಯು ವಜ್ರವೃಷಭನಾರಾಚಸಂಹನನವುಳ್ಳವರಿಗೆ ಮಾತ್ರವೇ ಉಂಟಾಗುತ್ತದೆ. ಕ್ಷಪಕಶ್ರೇಣಿಯಲ್ಲಿ ಹನ್ನೆರಡನೆಯ ಗುಣಸ್ಥಾನವರ್ತಿಗೆ ಎರಡನೆಯ ಶುಕ್ಲಧ್ಯಾನವುಂಟಾಗುತ್ತದೆ. ಇದರ ಪ್ರಭಾವದಿಂದ ಕೇವಲಜ್ಞಾನವು ಪ್ರಕಟವಾಗುತ್ತದೆ ಹಾಗೂ ಅದೇ ಭವದಲ್ಲಿ ಮೋಕ್ಷವುಂಟಾಗುತ್ತದೆ. ಆದಕಾರಣ ಶುಕ್ಲಧ್ಯಾನದ ಅಪೇಕ್ಷೆಯಿಂದ ಉತ್ತಮಸಂಹನನವನ್ನು ಹೇಳಿದುದಾಗಿದೆ.

ಅಪೂರ್ವಕರಣಗುಣಸ್ಥಾನದಿಂದ ಕೆಳಗಿನ ಗುಣಸ್ಥಾನಗಳಲ್ಲಿ ಧರ್ಮಧ್ಯಾನವು ನಿಷೇಧಿಸಲ್ಪಟ್ಟಿರುವುದಿಲ್ಲ ಅರ್ಥಾತ್ ಧರ್ಮಧ್ಯಾನವು ನಾಲ್ಕನೆಯ ಅವಿರತಸಮ್ಯಗ್ದೃಷ್ಟಿ ಗುಣಸ್ಥಾನ ಮೊದಲುಗೊಂಡು ಹನ್ನೊಂದನೆಯದಾದ ಉಪಶಾಂತಕಷಾಯಗುಣಸ್ಥಾನದ ವರೆಗೆ ಎಂಟು ಗುಣಸ್ಥಾನವರ್ತಿಗಳಲ್ಲಿ ತರತಮಭಾವದಿಂದುಂಟಾಗಬಹುದು ಎಂಟ ನೆಯ ಗುಣಸ್ಥಾನದಿಂದ ಕೆಳಗಿನ ಗುಣಸ್ಥಾನವರ್ತಿಗಳಲ್ಲಿ ಶುಕ್ಲಧ್ಯಾನವುಂಟಾಗುವು ದಿಲ್ಲ. ಶ್ರೇಣಿಯ ಕೆಳಗೆ ಧರ್ಮಧ್ಯಾನವೇ ಉಂಟಾಗುತ್ತದೆ ಈ ಧರ್ಮಧ್ಯಾನವು ಆರುವಿಧದ ಸಂಹನನವುಳ್ಳವರಿಗೂ ಉಂಟಾಗುತ್ತದೆ. ಅರ್ಥಾತ್ ಯಾವ ಸಂಹನನ ದಲ್ಲಿಯೂ ಧರ್ಮಧ್ಯಾನವನ್ನು ನಿಷೇಧಿಸಿರುವುದಿಲ್ಲ ಇದೇ ಆಶಯವನ್ನು **"ತತ್ವಾನು ಶಾಸನ"**ವೆಂಬ ಧ್ಯಾನಗ್ರಂಥದಲ್ಲಿ—**"ಯತ್ಪುನರ್ವಜ್ರಕಾಯಸ್ಯ, ಧ್ಯಾನಮಿತ್ಯಾ ಗಮೋ ವಚಃ। ಶ್ರೇಣ್ಯೋರ್ಧ್ಯಾನಂ ಪ್ರತೀತ್ಯೋಕ್ತಂ, ತನ್ನಾಧಸ್ತಾನ್ನಿಷೇಧ ಕಮ್ ॥"** ಅರ್ಥಾತ್ "ವಜ್ರಕಾಯನಿಗೆ ಧ್ಯಾನಸಿದ್ಧಿಯಾಗುವುದೆಂಬ ಆಗಮವಚನ ವಾದರೋ ಉಪಶಮ-ಕ್ಷಪಕಶ್ರೇಣಿಗಳೆರಡರಲ್ಲಿ ಉಂಟಾಗುವ ಶುಕ್ಲಧ್ಯಾನವನ್ನು ಕುರಿತಾಗಿ ಹೇಳಿದುದಾಗಿದೆ. ಅದು ಶ್ರೇಣಿಗಳ ಕೆಳಗಿನ ಗುಣಸ್ಥಾನವರ್ತಿಗಳಿಗುಂಟಾ ಗುವ ಧರ್ಮಧ್ಯಾನಕ್ಕೆ ನಿಷೇಧಕವಾಗಿರುವುದಿಲ್ಲ" ಎಂದು ಸ್ಪಷ್ಟಪಡಿಸಿರುವರು. ಅತ ಏವ ಧರ್ಮಧ್ಯಾನವನ್ನು ಯಾವಸಂಹನನವುಳ್ಳವರೂ ಮಾಡಬಹುದೆಂದಭಿಪ್ರಾಯವು ಇದೇ ಪ್ರಕಾರವಾಗಿ ಈ ಕಾಲದಲ್ಲಿ ರಾಗದ್ವೇಷಾಭಾವರೂಪವಾದ ಯಥಾಖ್ಯಾತ ಚಾರಿತ್ರವೆಂಬ ಸ್ವರೂಪಾಚರಣ (ನಿಶ್ಚಯಚಾರಿತ್ರ)ವು ಉಂಟಾಗುವುದಿಲ್ಲವಾದುದರಿಂದ ಇತರ ಚಾರಿತ್ರಗಳನ್ನಾಚರಿಸಬೇಕೆಂದು ಆಚಾರ್ಯರು ಆಜ್ಞಾಪಿಸಿದ್ದಾರೆ—**"ಚರಿತಾರೋ ನ ಸಂತ್ಯದ್ಯ,ಯಥಾಖ್ಯಾತಸ್ಯ ಸಂಪ್ರತಿ ತತ್ಕಿಮನ್ಯೇ ಯಥಾಶಕ್ತಿಮಾಚರಂತು ತಪಸ್ವಿನಃ ॥"** "ಇಂದಿನಕಾಲದಲ್ಲಿ (ಪಂಚಮಕಾಲದಲ್ಲಿ, ಭರತಕ್ಷೇತ್ರದಲ್ಲಿ)ಯಥಾ ಖ್ಯಾತಚಾರಿತ್ರವನ್ನಾಚರಿಸುವವರು ಇರುವುದಿಲ್ಲ ಆದರೇನಾಯಿತು? ತಪಸ್ವಿಗಳು ಯಥಾಶಕ್ತಿಯಾಗಿ ಇತರ ಚಾರಿತ್ರಗಳನ್ನಾಚರಿಸಲಿ" ಇಲ್ಲಿ ಶ್ರೀಕುಂದಕುಂದಾಚಾರ್ಯರ **"ಮೋಕ್ಷಪ್ರಾಭೃತ"**ದ ಈ ಸ್ಪಷ್ಟೀಕರಣವು ವಿಶೇಷತಃ ಗ್ರಾಹ್ಯವಾಗಿದೆ—**"ಅಜ್ಜ ವಿ ತಿರಯಣಸುದ್ಧಾ, ಅಪ್ಪಾ ಝಾಊಣ ಲಹಹಿಂ ಇಂದತ್ತಂ। ಲೋಯಂತಿಯ ದೇವತ್ತಂ, ತತ್ಥ ಚುದಾ ಣಿವ್ವುದಿಂ ಜಂತಿ ॥"** ಅಂದರೆ ಈ ಪಂಚಮಕಾಲದಲ್ಲಿಯೂ ಮನವಚನಕಾಯಗಳ ಪರಿಶುದ್ಧತೆಯುಳ್ಳ ಜೀವರು ಆತ್ಮನನ್ನು ಧ್ಯಾನಿಸಿ ಇಂದ್ರಪದವಿ ಯನ್ನು ಪಡೆಯುತ್ತಾರೆ. ಅಥವಾ ಲೌಕಾಂತಿಕದೇವತ್ವವನ್ನು ಪಡೆಯುತ್ತಾರೆ ಮತ್ತು ಅಲ್ಲಿಂದ ಚ್ಯುತರಾಗಿ ಮನುಷ್ಯಭವವನ್ನು ತಾಳಿ ಮೋಕ್ಷವನ್ನೈದುತ್ತಾರೆ.

ಈ ಕಾಲದಲ್ಲಿ ಸಾಮಾಯಿಕ, ಛೇದೋಪಸ್ಥಾಪನಾ, ಪರಿಹಾರವಿಶುದ್ಧಿ, ಸೂಕ್ಷ್ಮ ಸಾಂಪರಾಯ, ಯಥಾಖ್ಯಾತಗಳೆಂಬ ಚಾರಿತ್ರದ ಈ ಐದುಭೇದಗಳಲ್ಲಿ ಮೊದಲಿನ ಎರಡು (ಸಾಮಾಯಿಕ ಮತ್ತು ಛೇದೋಪಸ್ಥಾಪನಾ) ಚಾರಿತ್ರಗಳುಂಟಾಗುತ್ತವೆ. ಮುಂದಿನ ಚಾರಿತ್ರಗಳುಂಟಾಗುವುದಿಲ್ಲ. ಹೀಗೆಯೇ ಆರುಸಂಹನನಗಳಲ್ಲಿ ಮೊದಲಿನ ಮೂರು

ಸಂಹನನಗಳು ಈ ಕಾಲದಲ್ಲಿರುವುದಿಲ್ಲ. ಮುಂದಿನ ಅರ್ಧನಾರಾಚಸಂಹನನ, ಕೀಲಕ ಸಂಹನನ, ಅಸಂಪ್ರಾಪ್ತಸೃಪಾಟಿಕಾಸಂಹನನ ಈ ಮೂರು ಸಂಹನನಗಳಿರುತ್ತವೆ. **ಹೀಗೆ** ಈ ಕಾಲದಲ್ಲಿ ಉತ್ತಮಸಂಹನನವೂ ಯಥಾಖ್ಯಾತಚಾರಿತ್ರವೂ ಇರುವುದಿಲ್ಲವಾದರೂ ಇತರ ಸಂಹನನವುಳ್ಳ ಜೀವರು ತಮ್ಮ ಶಕ್ತಿಗನುಸಾರವಾಗಿ ಇತರ ಚಾರಿತ್ರಗಳನ್ನು ಪಾಲಿಸುವವರಾಗಿ ಸಂಸಾರಸ್ಥಿತಿಚ್ಛೇದಕಾರಣವೂ ಪರಂಪರೆಯಿಂದ ಮೋಕ್ಷಕಾರಣವೂ ಆದ ಧರ್ಮಧ್ಯಾನವನ್ನಾಚರಿಸಬೇಕೆಂದು ಮುಖ್ಯಾಭಿಪ್ರಾಯವು.

**ಬಿಣ್ಣಿ ವಿ ಜೇಣ ಸಹಂತು ಮುಣಿ, ಮಣಿ ಸಮಭಾಉ ಕರೇಇ ।**
**ಪುಣ್ಣಹಂ ಪಾವಹಂ ತೇಣ ಜಿಯ, ಸಂವರಹೇಉ ಹವೇಇ ॥ ೩೭ ॥**

"ದ್ವೇ ಅಪಿ ಯೇನ ಸಹಮಾನಃ ಮುನಿಃ ಮನಸಿ ಸಮಭಾವಂ ಕರೋತಿ ।
ಪುಣ್ಯಸ್ಯ ಪಾಪಸ್ಯ ತೇನ ಜೀವ ಸಂವರಹೇತುಃ ಭವತಿ ॥ ೩೭ ॥"

**ಅನ್ವಯಾರ್ಥ:**— **ಜಿಯ**— ಎಲೈ ಜೀವನೇ! **ಜೇಣ**— ಆವಕಾರಣದಿಂದ **ಬಿಣ್ಣಿ ವಿ ಸಹಂತು** ಸುಖದುಃಖಗಳೆರಡನ್ನೂ ಸಹಿಸುವ **ಮುಣಿ**— ಸ್ವಸಂವೇದನಜ್ಞಾನಿಯು **ಮಣಿ**— ಮನಸ್ಸಿನಲ್ಲಿ **ಸಮಭಾಉ ಕರೇಇ**— ರಾಗದ್ವೇಷ-ಮೋಹರಹಿತವಾದ ಸಮಭಾವ(ಪರಿಣಾಮ)ವನ್ನು ಮಾಡುತ್ತಾನೋ **ತೇಣ**— ಆಕಾರಣದಿಂದ ಆ ಮುನಿಯು **ಪುಣ್ಣಹಂ ಪಾವಹಂ**— ಪುಣ್ಯಪಾಪಗಳೆರಡರ **ಸಂವರಹೇಉ ಹವೇಇ**— ಸಂವರೆಗೆ ಕಾರಣನಾಗುತ್ತಾನೆ.

**ಭಾವಾರ್ಥ:**— ಕರ್ಮೋದಯದಿಂದ ಸುಖದುಃಖಾದಿಗಳುಂಟಾದರೂ ಸ್ವಸಂವೇದನಪ್ರತ್ಯಕ್ಷಜ್ಞಾನಿಯಾದ ಯಾವ ಮುನೀಂದ್ರನು ಅವಿಕ್ಷಿಪ್ತ(ರಾಗಾದಿರಹಿತ)ವಾದ ತನ್ನ ಮನಸ್ಸಿನಲ್ಲಿ ವಿಶುದ್ಧಜ್ಞಾನದರ್ಶನರೂಪವಾದ ನಿಜಶುದ್ಧಸ್ವರೂಪವನ್ನು ಅರ್ಥಾತ್ ನಿಜಶುದ್ಧಾತ್ಮಭಾವನೆಯನ್ನು ಬಿಡುವುದಿಲ್ಲವೋ ಆತನೇ ಅಭೇದನಯದಿಂದ ದ್ರವ್ಯಭಾವರೂಪಪುಣ್ಯಪಾಪಕರ್ಮಗಳ ಸಂವರೆ(ಆಸ್ರವನಿರೋಧ)ಗೆ ಕಾರಣನಾಗುತ್ತಾನೆ.

**ಅಚ್ಛಇ ಜಿತ್ತಿಉ ಕಾಲು ಮುಣಿ, ಅಪ್ಪಸರೂವಿ ಣಿಲೀಣು ।**
**ಸಂವರಣಿಜ್ಜರ ಜಾಣಿ ತುಹುಂ, ಸಯಲವಿಯಪ್ಪವಿಹೀಣು ॥ ೩೮ ॥**

"ತಿಷ್ಠತಿ ಯಾವಂತಂ ಕಾಲಂ ಮುನಿಃ ಆತ್ಮಸ್ವರೂಪೇ ನಿಲೀನಃ ।
ಸಂವರನಿರ್ಜರಾಂ ಜಾನೀಹಿ ತ್ವಂ ಸಕಲವಿಕಲ್ಪವಿಹೀನಮ್ ॥ ೩೮ ॥"

**ಅನ್ವಯಾರ್ಥ:**— **ಮುಣಿ**— ಮುನಿಯು **ಜಿತ್ತಿಉ ಕಾಲು**— ಎಷ್ಟುಕಾಲದವರೆಗೆ **ಅಪ್ಪಸರೂವಿ ಣಿಲೀಣು ಅಚ್ಛಇ**— ಆತ್ಮಸ್ವರೂಪದಲ್ಲಿ ನಿಶ್ಚಯದಿಂದ **ಲೀನ** (ತನ್ಮಯ, ಐಕ್ಯ)ನಾಗಿರುತ್ತಾನೋ ಅಷ್ಟುಕಾಲದಲ್ಲಿ **ಸಯಲವಿಯಪ್ಪವಿಹೀಣು**— ಸಕಲವಿಕಲ್ಪರಹಿತನಾದ ಆ ಮುನಿಯನ್ನು **ತುಹುಂ**— ನೀನು **ಸಂವರಣಿಜ್ಜರ ಜಾಣಿ**— ಸಂವರನಿರ್ಜರಾಸ್ವರೂಪನನ್ನಾಗಿ ತಿಳಿ.

**ಭಾವಾರ್ಥ:—** ನಿಜಶುದ್ಧಾತ್ಮಸ್ವರೂಪದಲ್ಲಿ ವೀತರಾಗನಿತ್ಯಾನಂದೈಕಪರಮಸಮ ರಸೀಭಾವದಿಂದ ಪರಿಣತನೂ ಖ್ಯಾತಿಪೂಜಾಲಾಭಾದಿಸಮಸ್ತವಿಕಲ್ಪಜಾಲರಹಿತನೂ ಆದ ತಪಸ್ವಿಯು ಅಭೇದನಯದಿಂದ ಸಂವರನಿರ್ಜರಾಸ್ವರೂಪನಾಗಿರುತ್ತಾನೆ, ಪೂರ್ವೋಕ್ತ ಎರಡುಸೂತ್ರಗಳ ವ್ಯಾಖ್ಯಾನವನ್ನೇ ಇಲ್ಲಿಯೂ ವಿಶೇಷತಃ ತಿಳಿಯಬೇಕು ಏಕೆಂದರೆ ಈ ಸೂತ್ರವು ಪೂರ್ವೋಕ್ತ ಸಂವರನಿರ್ಜರೆಗಳ ವ್ಯಾಖ್ಯಾನದ ಉಪಸಂಹಾರರೂಪವಾಗಿದೆ

ಈ ಪ್ರಕಾರವಾಗಿ ದ್ವಿತೀಯಮಹಾಧಿಕಾರಮಧ್ಯದಲ್ಲಿ ಎಂಟು ಸೂತ್ರಗಳಿಂದ ಅಭೇದರತ್ನತ್ರಯವ್ಯಾಖ್ಯಾನವು ಮುಗಿದುದು.

ಇನ್ನು ಹದಿನಾಲ್ಕು ಸೂತ್ರಗಳವರೆಗೆ ಪರಮೋಪಶಮಭಾವದ ಮುಖ್ಯತೆಯಿಂದ ವ್ಯಾಖ್ಯಾನವನ್ನು ಮಾಡುತ್ತಾರೆ:—

**ಕಮ್ಮು ಪುರಕ್ಕಿಉ ಸೋ ಖವಇ, ಅಹಿಣವ ಪೇಸು ಣ ದೇಇ ।**
**ಸಂಗು ಮುಏವಿಣು ಜೋ ಸಯಲು, ಉವಸಮಭಾಉ ಕರೇಇ ॥ ೩೯ ॥**

"ಕರ್ಮ ಪುರಾಕೃತಂ ನ ಕ್ಷಪಯತಿ ಅಭಿನವಂ ಪ್ರವೇಶಂ ನ ದದಾತಿ ।
ಸಂಗಂ ಮುಕ್ತ್ವಾ ಯಃ ಸಕಲಂ ಉಪಶಮಭಾವಂ ಕರೋತಿ ॥ ೩೯ ॥"

**ಅನ್ವಯಾರ್ಥ:— ಜೋ**—ಯಾವ ವೀತರಾಗಸ್ವಸಂವೇದನಜ್ಞಾನಿಯು **ಸಯಲು, ಸಂಗು ಮುಏವಿಣು**—ಸಮಸ್ತ ಬಾಹ್ಯಾಭ್ಯಂತರಪರಿಗ್ರಹಗಳನ್ನು ಬಿಟ್ಟು **ಉವಸಮ ಭಾಉ ಕರೇಇ**—ಉಪಶಮಭಾವವನ್ನು ಅರ್ಥಾತ್ ಜೀವಿತ ಮರಣ, ಲಾಭ ಅಲಾಭ, ಸುಖ ದುಃಖ, ಶತ್ರುಮಿತ್ರಾದಿಗಳಲ್ಲಿ ಸಮತಾಪರಿಣಾಮವನ್ನು ಮಾಡು ತ್ತಾನೋ (ಹೊಂದುತ್ತಾನೋ) **ಸೋ**—ಅವನು **ಪುರಕ್ಕಿಉ ಕಮ್ಮು**—ಪೂರ್ವೋಪಾ ರ್ಜಿತಕರ್ಮವನ್ನು **ಖವಇ**—ಕ್ಷಯಗೊಳಿಸು(ನಾಶಪಡಿಸು)ತ್ತಾನೆ ಮತ್ತು **ಅಹಿಣವ ಪೇಸು ಣ ದೇಇ**—ನವೀನಕರ್ಮಕ್ಕೆ ಪ್ರವೇಶವನ್ನು ಕೊಡುವುದಿಲ್ಲ ಅರ್ಥಾತ್ ನವೀನ ಕರ್ಮಾಸ್ರವವನ್ನು ನಿರೋಧಿಸುತ್ತಾನೆ.

**ಭಾವಾರ್ಥ:**—ಯಾವ ಮುನಿಯು ಸಕಲಪರಿಗ್ರಹಗಳನ್ನು ತೊರೆದು ಸರ್ವಶಾಸ್ತ್ರ ಗಳ ರಹಸ್ಯವನ್ನು ತಿಳಿದವನಾಗಿ ವೀತರಾಗಪರಮಾನಂದೈಕಸುಖರಸಾಸ್ವಾದರೂಪವಾದ ಸಮಭಾವವನ್ನು ತಾಳುತ್ತಾನೋ ಆ ಮುನಿಯು ಪೂರ್ವಬದ್ಧಕರ್ಮಗಳ ಕ್ಷಯವನ್ನೂ ನವೀನಕರ್ಮಗಳ ಸಂವರೆಯನ್ನೂ ಮಾಡುತ್ತಾನೆಂದು ಭಾವವು ಹೀಗೆಯೇ "ಪದ್ಮ ನಂದಿಪಂಚವಿಂಶತಿ"ಯಲ್ಲಿ:—**"ಸಾಮ್ಯಮೇವಾದರಾದ್ಭಾವ್ಯಂ ಕಿಮನ್ಯೈರ್ಗ್ರಂಥ ವಿಸ್ತರೈಃ। ಪ್ರಕ್ರಿಯಾಮಾತ್ರಮೇವೇದಂ ವಾಙ್ಮಯಂ ವಿಶ್ವಮಸ್ಯ ಹಿ ॥"** "ಸಾಮ್ಯ (ಸಮಭಾವ)ವನ್ನೇ ಆದರದಿಂದ ಭಾವಿಸಬೇಕು. ಇತರ ಗ್ರಂಥವಿಸ್ತಾರಗಳಿಂದ ಅರ್ಥಾತ್ ವಿಸ್ತಾರವಾದ ಗ್ರಂಥಗಳ ಆಲೋಢನೆಯಿಂದೇನು ಪ್ರಯೋಜನವು? ಏಕೆಂದರೆ ಸಮಸ್ತ ವಾಙ್ಮಯ(ದ್ವಾದಶಾಂಗಾದಿ ಶಾಸ್ತ್ರಗಳು)ವು ಈ ಸಮಭಾವದ ಪ್ರಕ್ರಿಯೆ (ವ್ಯಾಖ್ಯೆ, ಟೀಕೆ)ಯೇ ಆಗಿರುತ್ತದೆ" ಎಂದು ಹೇಳಲ್ಪಟ್ಟಿದೆ.

**ದಂಸಣಾ ಣಾಣಾ ಚರಿತ್ತ್ತ ತಸ್ಸ, ಜೋ ಸಮಭಾಉ ಕರೇಇ ।**
**ಇಯರಹಂ ಎಕ್ಕ ವಿ ಅತ್ಥಿ ಣವಿ, ಜಿಣವರು ಏಉ ಭಣೇಇ ॥ ೪೦ ॥**

"ದರ್ಶನಂ ಜ್ಞಾನಂ ಚಾರಿತ್ರಂ ತಸ್ಯ ಯಃ ಸಮಭಾವಂ ಕರೋತಿ ।
ಇತರಸ್ಯ ಏಕಮಪಿ ಅಸ್ತಿ ನೈವ ಜಿನವರಃ ಏವಂ ಭಣತಿ ॥ ೪೦ ॥"

**ಅನ್ವಯಾರ್ಥ:**— **ಜೋ**— ಯಾವ ಯತಿಯು **ಸಮಭಾಉ ಕರೇಇ**— ಸಮಭಾವವನ್ನು ಮಾಡುತ್ತಾನೋ (ಹೊಂದುತ್ತಾನೋ) **ತಸು**— ಅವನಿಗೆ **ದಂಸಣಾ ಣಾಣಾ ಚರಿತ್ತು**— ಸಮ್ಯಗ್ದರ್ಶನ ಸಮ್ಯಗ್ಜ್ಞಾನ ಸಮ್ಯಕ್ಚಾರಿತ್ರಗಳು ನಿಶ್ಚಯವಾಗಿ ಉಂಟಾಗುತ್ತವೆ **ಇಯರಹಂ**— ಇತರ ಜೀವನಿಗೆ ಅರ್ಥಾತ್ ಸಮಭಾವರಹಿತನಾದ ಜೀವನಿಗೆ **ಎಕ್ಕ ವಿ**— ಪೂರ್ವೋಕ್ತರತ್ನತ್ರಯಗಳಲ್ಲಿ ಒಂದೂ ಸಹ **ಅತ್ಥಿ ಣವಿ**— ಇರುವುದೇ ಇಲ್ಲ (ಉಂಟಾಗುವುದೇ ಇಲ್ಲ) **ಏಉ**— ಹೀಗೆ **ಜಿಣವರು ಭಣೇಇ**— ಜಿನೇಂದ್ರರು ಹೇಳುತ್ತಾರೆ

**ಭಾವಾರ್ಥ:**— ಸಮಭಾವವನ್ನು ಧರಿಸಿರುವ ಜೀವನಿಗೆ ಮಾತ್ರ ನಿಶ್ಚಯಸಮ್ಯಗ್ದರ್ಶನಜ್ಞಾನಚಾರಿತ್ರಗಳುಂಟಾಗುತ್ತವೆ. ಹಾಗೆ ವೀತರಾಗಪರಮಸಾಮಾಯಿಕಭಾವನೆಗೆ ಅನುಕೂಲವಾದ ನಿರ್ದೋಷಪರಮಾತ್ಮನ ಯಥಾರ್ಥಶ್ರದ್ಧಾನಜ್ಞಾನಾನುಚರಣರೂಪವಾದ ಅಖಂಡಭಾವವನ್ನು ಪಡೆದಿರುವ ಜೀವನಿಗೆ ಮಾತ್ರ ನಿರ್ವಿಕಲ್ಪಸಮಾಧಿಯು ಸಿದ್ಧಿಸುವುದು. ಅತಏವ ಪರಮಸಮಾಧಿಗೆ ಸಮಭಾವವು ಪ್ರಧಾನಕಾರಣವಾಗಿರುತ್ತದೆಂದು ಭಾವವು.

**ಜಾಂವಇ ಣಾಣಿಉ ಉವಸಮಇ, ತಾಮಇ ಸಂಜದು ಹೋಇ ।**
**ಹೋಇ ಕಸಾಯಹಂ ವಸಿಗಯಉ, ಜೀಉ ಅಸಂಜದು ಸೋಇ ॥ ೪೧ ॥**

"ಯಾವತ್ ಜ್ಞಾನೀ ಉಪಶಾಮ್ಯತಿ ತಾವತ್ ಸಂಯತೋ ಭವತಿ ।
ಭವತಿ ಕಷಾಯಾಣಾಂ ವಶೇ ಗತಃ ಜೀವಃ ಅಸಂಯತಃ ಸ ಏವ ॥ ೪೧ ॥"

**ಅನ್ವಯಾರ್ಥ:**— **ಣಾಣಿಉ ಜೀಉ**— ಜ್ಞಾನಿಯಾದ ಜೀವನು **ಜಾಂವಇ**— ಯಾವಾಗ ಅಥವಾ ಎಂದಿನವರೆಗೆ **ಉವಸಮಇ**— ಉಪಶಮ (ಶಾಂತ) ಭಾವದಲ್ಲಿರುತ್ತಾನೋ **ತಾಮಇ**— ಆಗ ಅಥವಾ ಅಂದಿನತನಕ **ಸಂಜದು ಹೋಇ**— ಸಂಯತ ಅಥವಾ ಸಂಯಮಿಯಾಗಿರುತ್ತಾನೆ. ಮತ್ತು **ಕಸಾಯಹಂ ವಸಿಗಯಉ**— ಕ್ರೋಧಾದಿಕಷಾಯಗಳಿಗೆ ಅಧೀನನಾದ **ಸೋಇ**— ಆ ಜೀವನೇ **ಅಸಂಜದು ಹೋಇ**— ಅಸಂಯತ ಅಥವಾ ಅಸಂಯಮಿಯಾಗುತ್ತಾನೆ.

**ಭಾವಾರ್ಥ:**— ಜ್ಞಾನಿಯಾದ ಜೀವನು ಅನಾಕುಲತ್ವಲಕ್ಷಣವುಳ್ಳ ಸ್ವಶುದ್ಧಾತ್ಮಭಾವನೆಯಿಂದುಂಟಾದ ಪಾರಮಾರ್ಥಿಕಸುಖಕ್ಕನುಕೂಲವಾದ ಪರಮಉಪಶಮಭಾವವನ್ನು ಹೊಂದಿದಾಗ ಸಂಯತನಾಗಿಯೂ ತದ್ವಿಪರೀತವಾದ ಆಕುಲತೆಯನ್ನುಂಟುಮಾಡುವ ಕಾಮಕ್ರೋಧಾದಿಗಳಿಗೆ ವಶೀಭೂತನಾದಾಗ ಅಸಂಯತನಾಗಿಯೂ ಇರುತ್ತಾನೆಂದು ತಾತ್ಪರ್ಯವು. ಈ ಅಭಿಪ್ರಾಯವನ್ನೇ ಗ್ರಂಥಾಂತರದಲ್ಲಿ:— "**ಅಕಸಾಯಂ**

**ತು ಚರಿತ್ತಂ, ಕಸಾಯುವಸಗದೋ ಅಸಂಜದೋ ಹೋದಿ। ಉವಸಮುಣ್ಣ ಜಮ್ಹಿ ಕಾಲೇ ತಕ್ಕಾಲೇ ಸಂಜದೋ ಹೋದಿ॥"** ಅರ್ಥಾತ್ "ಕಷಾಯದ ಅಭಾವವೇ ಚಾರಿತ್ರವು ಆದುದರಿಂದ ಕಷಾಯವಶೀಭೂತನಾದ ಜೀವನು ಅಸಂಯತನಾಗಿರುತ್ತಾನೆ ಮತ್ತು ಯಾವ ಕಾಲದಲ್ಲಾತನು ಕಷಾಯುಗಳನ್ನು ಶಾಂತಗೊಳಿಸುತ್ತಾನೋ ಅರ್ಥಾತ್ ಉಪಶಮಭಾವವನ್ನು ತಾಳುತ್ತಾನೋ ಆಗ ಸಂಯಮಿಯಾಗಿರುತ್ತಾನೆ."

**ಜೇಣ ಕಸಾಯು ಹವಂತಿ ಮಣಿ, ಸೋ ಜಿಯು ಮಿಲ್ಲಹಿ ಮೋಹು।**
**ಮೋಹಕಸಾಯುವಿವಜ್ಜಿಯಉ, ಪರ ಪಾವಹಿ ಸಮಬೋಹು ॥ ೪೨ ॥**

"ಯೇನ ಕಷಾಯಾ ಭವಂತಿ ಮನಸಿ ತಂ ಜೀವ ಮುಂಚ ಮೋಹಮ್।
ಮೋಹಕಷಾಯವಿವರ್ಜಿತಃ ಪರಂ ಪ್ರಾಪ್ನೋಷಿ ಸಮಬೋಧಮ್ ॥ ೪೨ ॥"

**ಅನ್ವಯಾರ್ಥ.—ಜಿಯು**—ಎಲೈ ಜೀವನೇ! **ಜೇಣ**—ಯಾವ ಮೋಹದಿಂದ ಅಥವಾ ಮೋಹವನ್ನುಂಟುಮಾಡುವ ವಸ್ತುವಿನ ನಿಮಿತ್ತದಿಂದ **ಮಣಿ**—ಮನಸ್ಸಿನಲ್ಲಿ **ಕಸಾಯು ಹವಂತಿ**—ಕ್ರೋಧಾದಿಕಷಾಯಗಳುಂಟಾಗುತ್ತವೋ **ಸೋ ಮೋಹು**—ಆ ಮೋಹವನ್ನು ಅಥವಾ ಮೋಹಕ್ಕೆ ನಿಮಿತ್ತವಾದ ಪದಾರ್ಥ(ವಸ್ತು)ವನ್ನು **ಮಿಲ್ಲಿಹಿ** ಬಿಡು. ಹಾಗೆ, **ಮೋಹಕಸಾಯುವಿವಜ್ಜಿಯಉ**—ಮೋಹಕಷಾಯುಗಳಿಂದ ರಹಿತನಾದ ನೀನು **ಪರ**—ನಿಯಮದಿಂದ **ಸಮಬೋಹು ಪಾವಹಿ**—ಸಮಬೋಧವನ್ನು ಅರ್ಥಾತ್ ರಾಗದ್ವೇಷರಹಿತಜ್ಞಾನವನ್ನು ಪಡೆಯುವೆ.

**ಭಾವಾರ್ಥ:**—ಜೀವನೇ! ನೀನು ನಿರ್ಮೋಹನಿಜಶುದ್ಧಾತ್ಮಧ್ಯಾನದಿಂದ ಕೂಡಿದವನಾಗಿ ಮೋಹವನ್ನು ಬಿಡು ಏಕಂದರೆ, ಮೋಹದಿಂದ ಅಥವಾ ಮೋಹವನ್ನುಂಟುಮಾಡುವ ವಸ್ತುಗಳಿಂದ ಕಷಾಯರಹಿತವಾದ ಪರಮಾತ್ಮಸ್ವಭಾವವನ್ನು ಕೆಡಿಸುವ ಕ್ರೋಧಾದಿಕಷಾಯಗಳುಂಟಾಗುತ್ತವೆ. ಇದರಿಂದ ಸಂಸಾರಭ್ರಮಣೆಯುಂಟಾಗುತ್ತದೆ. ಆದಕಾರಣ ನೀನು ಮೋಹವನ್ನು ಬಿಟ್ಟುದುದಾದರೆ ಮೋಹಕಷಾಯರಹಿತನಾಗಿ ನಿಶ್ಚಯವಾಗಿ ರಾಗಾದಿರಹಿತವಾದ ನಿರ್ಮಲಜ್ಞಾನವನ್ನು ಪಡೆಯುವೆ. ಇದನ್ನು ಗ್ರಂಥಾಂತರದಲ್ಲಿ ಹೀಗೆ ಹೇಳಿದ್ದಾರೆ:—**"ತಂ ವತ್ಥುಂ ಮುತ್ತವ್ವಂ, ಜಂ ಪಡಿ ಉಪ್ಪಜ್ಜಏ ಕಸಾಯುಗ್ಗೀ। ತಂ ವತ್ಥುಮಲ್ಲಿಎಜ್ಜೋ ಜತ್ಥುವಸಮ್ಮೋ ಕಸಾಯಾಣಂ॥"** ಅಂದರೆ, ಯಾವ ವಸ್ತುವಿನಿಂದ ಕಷಾಯರೂಪವಾದ ಅಗ್ನಿಯು ಉತ್ಪನ್ನವಾಗುವುದೋ ಆ ವಸ್ತುವನ್ನು ಬಿಡತಕ್ಕುದು, ಹಾಗೂ ಯಾವ ವಸ್ತುವಿನಿಂದ ಕಷಾಯುಗಳು ಶಾಂತವಾಗುವುವೋ ಆ ವಸ್ತುವನ್ನಂಗೀಕರಿಸತಕ್ಕುದು ಅರ್ಥಾತ್ ಸರ್ವಇಂದ್ರಿಯವಿಷಯ-ಸಾಮಗ್ರಿಗಳು ಮಿಥ್ಯಾದೃಷ್ಟಿಗಳ ಹಾಗೂ ಪಾಪಾಚರಣೆಯುಳ್ಳವರ ಸಂಸರ್ಗ ಇವೇ ಮೊದಲಾದುವುಗಳಿಂದ ಮೋಹಕಷಾಯುಗಳು ಪ್ರಾದುರ್ಭವಿಸುತ್ತವೆ. ಆದಕಾರಣ ಅವುಗಳನ್ನು ಬಿಡಬೇಕು ಮತ್ತು ಸತ್ಸಂಗತಿಮೊದಲಾದ ಶುಭಕಾರಣಗಳಿಂದ ಕಷಾಯು

ಗಳು ಉಪಶಮ(ಶಾಂತ)ವಾಗುತ್ತವೆ. ಆದಕಾರಣ ಸತ್ಸಂಗತಿಮೊದಲಾದುವುಗಳನ್ನು ಪಡೆಯಬೇಕೆಂದು ತಾತ್ಪರ್ಯವು.

**ತತ್ತಾತತ್ತು ಮುಣೇವಿ ಮಣಿ, ಜೇ ಥಕ್ಕಾ ಸಮಭಾವಿ ।**
**ತೇ ಪರ ಸುಹಿಯಾ ಇತ್ಥು ಜಗಿ, ಜಹಂ ರಇ ಅಪ್ಪಸಹಾವಿ ॥ ೪೩ ॥**

"ತತ್ತ್ವಾತತ್ತ್ವಂ ಮತ್ವಾ ಮನಸಿ ಯೇ ಸ್ಥಿತಾಃ ಸಮಭಾವೇ ।
ತೇ ಪರಂ ಸುಖಿನಃ ಅತ್ರ ಜಗತಿ ಯೇಷಾಂ ರತಿಃ ಆತ್ಮಸ್ವಭಾವೇ ॥ ೪೩ ॥"

**ಅನ್ವಯಾರ್ಥ:—ಜೇ—** ವೀತರಾಗಸ್ವಸಂವೇದನಪ್ರತ್ಯಕ್ಷಜ್ಞಾನಿಗಳಾದ ಯಾವ ಜೀವರು **ಮಣಿ—** ಮನಸ್ಸಿನಲ್ಲಿ **ತತ್ತಾತತ್ತು ಮುಣೇವಿ—** ತತ್ತ್ವ-ಅತತ್ತ್ವಗಳನ್ನು ಅರ್ಥಾತ್ ಆತ್ಮತತ್ತ್ವರೂಪವಾದ ಅಂತಸ್ತತ್ತ್ವವನ್ನು ಮತ್ತು ರಾಗಾದಿನಕಲವಿಭಾವ ರೂಪವಾದ ಅತತ್ತ್ವ ಅಥವಾ ಬಹಿಸ್ತತ್ತ್ವವನ್ನು ತಿಳಿದು **ಥಕ್ಕಾ ಸಮಭಾವಿ—** ಪರಮೋಪಶಮಪರಿಣಾಮದಲ್ಲಿರುವರೋ ಮತ್ತು **ಅಪ್ಪಸಹಾವಿ**–ನಿಜಶುದ್ಧಾತ್ಮಸ್ವಭಾವ ದಲ್ಲಿ **ಜಹಂ ರಇ—** ಯಾವ ಜ್ಞಾನಿಗಳ ರತಿ (ಆಸಕ್ತಿ)ಯಿರುವುದೋ **ತೇ ಪರ—** ಆ ಜೀವರುಗಳೇ **ಇತ್ಥು ಜಗಿ—** ಈ ಜಗತ್ತಿನಲ್ಲಿ **ಸುಹಿಯಾ—** ಸುಖಿಗಳು

**ಭಾವಾರ್ಥ:—** ಹಿಂದೆ ಪ್ರಕರಣಾಂತರದಲ್ಲಿ ವಿವರಿಸಿರುವಂತೆ ವ್ಯವಹಾರನಿಶ್ಚಯ ನಯಗಳಿಂದ ನಿಜಶುದ್ಧಾತ್ಮದ್ರವ್ಯದ ಸ್ವರೂಪವನ್ನೂ ತದ್ವಿಲಕ್ಷಣವಾದ ಪುದ್ಗಲಾದಿ ಪರ ದ್ರವ್ಯಗಳ ಸ್ವರೂಪವನ್ನೂ ಚೆನ್ನಾಗಿ ತಿಳಿದು ಮಿಥ್ಯಾತ್ವರಾಗಾದಿಸಮಸ್ತವಿಕಲ್ಪಗಳನ್ನು ತೊರೆದವರಾಗಿ ವೀತರಾಗಚಿದಾನಂದೈಕಸ್ವಭಾವವುಳ್ಳ ಸ್ವಶುದ್ಧಾತ್ಮತತ್ತ್ವದಲ್ಲಿ ಲೀನ ರಾದ ಪರಮಯೋಗಿಗಳೇ ಧನ್ಯರು. ವಸ್ತುತಃ ಅವರೇ ಸುಖಿಗಳು

**ಬಿಣ್ಣಿ ವಿ ದೋಸ ಹವಂತಿ ತಸು, ಜೋ ಸಮಭಾಉ ಕರೇಇ ।**
**ಬಂಧು ಜಿ ಣಿಹಣಇ ಅಪ್ಪಣಉ, ಅಣು ಜಗು ಗಹಿಲು ಕರೇಇ ॥ ೪೪ ॥**

"ದ್ವೌ ಅಪಿ ದೋಷೌ ಭವತಃ ತಸ್ಯ ಯಃ ಸಮಭಾವಂ ಕರೋತಿ ।
ಬಂಧಂ ಏವ ನಿಹಂತಿ ಆತ್ಮೀಯಂ ಅನ್ಯತ್ ಜಗತ್ ಗ್ರಹಿಲಂ ಕರೋತಿ ॥ ೪೪ ॥"

**ಅನ್ವಯಾರ್ಥ:—ಜೋ—** ಯಾವ ಸಾಧುವು **ಸಮಭಾಉ ಕರೇಇ—** ರಾಗ ದ್ವೇಷತ್ಯಾಗರೂಪವಾದ ಸಮಭಾವವನ್ನು ಮಾಡುತ್ತಾನೋ (ಹೊಂದುತ್ತಾನೋ) **ತಸು—** ಆ ಸಾಧುವಿಗೆ **ಬೆಣ್ಣಿ ವಿ ದೋಸ ಹವಂತಿ**—(ಮುಂದೆ ಹೇಳುವ)ಈ ಎರಡು ದೋಷಗಳೂ ಉಂಟಾಗುತ್ತವೆ. ಆತನು **ಅಪ್ಪಣಉ ಬಂಧು ಜಿ ಣಿಹಣಇ—** ತನ್ನ ಬಂಧವನ್ನೇ ನಾಶಗೊಳಿಸುತ್ತಾನೆ **ಅಣು**–ಮತ್ತು **ಜಗು ಗಹಿಲು ಕರೇಇ**–ಜಗತ್ತನ್ನು (ಜಗತ್ತಿನ ಜನರನ್ನು) ಪಿಶಾಚಸಮಾನವನ್ನಾಗಿ ಅಥವಾ ಹುಚ್ಚುಹಿಡಿದುದನ್ನಾಗಿ ಮಾಡುತ್ತಾನೆ. ಹೀಗೆ ಇವೆರಡು ದೋಷಗಳೆಂದರ್ಥವು.

**ಭಾವಾರ್ಥ:**— ಈ ದೋಹಕವು ನಿಂದಾಸ್ತುತಿರೂಪವಾಗಿದೆ ಪ್ರಾಕೃತಭಾಷೆಯಲ್ಲಿ "ಬಂಧು" ಎಂಬ ಶಬ್ದಕ್ಕೆ "ಬಂಧ" ಅಥವಾ "ಬಂಧು" ಎಂಬ ಎರಡು ಅರ್ಥಗಳಿರುತ್ತವೆ. ಇಲ್ಲಿ "ಬಂಧ" ಎಂಬುದರಿಂದ ಜ್ಞಾನಾವರಣಾದಿಕರ್ಮಬಂಧವೆಂದೂ "ಬಂಧು" ಎಂಬುದರಿಂದ ಲೋಕವ್ಯವಹಾರದಲ್ಲಿ ಹೇಳುವ "ಬಂಧು"ವೆಂದೂ ಎರಡು ಅರ್ಥಗಳನ್ನು ಕಲ್ಪಿಸಬಹುದಾಗಿದೆ. ಹೀಗೆ "**ಬಂಧು ಜಿ ಣಿಹಣಇ**" ಎಂಬುದಕ್ಕೆ ಬಂಧುವನ್ನು ನಾಶಗೊಳಿಸುತ್ತಾನೆ (ಕೊಲ್ಲುತ್ತಾನೆ) ಎಂದು ಅರ್ಥಕಲ್ಪಿಸಿದರೆ ಬಂಧುಹತ್ಯೆಯು ಮಹಾಪಾತಕವಾದುದರಿಂದ ಬಂಧುಘಾತಿಯು ಲೋಕದಲ್ಲಿ ನಿಂದ್ಯನಾಗಿರುತ್ತಾನೆ ಅತ ಏವ ಈ ವಚನವು ನಿಂದಾರೂಪವಾಗಿದೆ ಕರ್ಮಬಂಧವೆಂಬ ಅರ್ಥದಿಂದ ಕರ್ಮಬಂಧವನ್ನೇ ನಾಶಗೊಳಿಸುತ್ತಾನೆಂದು ಹೇಳಿದುದಾದರೆ ಕರ್ಮಬಂಧವನ್ನು ನಾಶಗೊಳಿಸುವುದು ಪ್ರಶಂಸನೀಯವಾದುದರಿಂದ ಈ ವಚನವು ಸ್ತುತಿರೂಪವಾಗಿದೆ ಹೀಗೆಯೇ ವಸ್ತ್ರವನ್ನು ತೊರೆದು ನಗ್ನತೆಯನ್ನು ಧರಿಸುವುದು ಲೋಕದೃಷ್ಟಿ(ಜನಸಾಮಾನ್ಯರ, ಅಜ್ಞಾನಿಗಳ ದೃಷ್ಟಿ)ಯಿಂದ ಹುಚ್ಚುತನವಾಗಿದೆ. ಈ ಕಾರಣದಿಂದ ಸ್ವತಃ ನಗ್ನ(ದಿಗಂಬರ)ನಾಗಿ ತನ್ನ ಉಪದೇಶದಿಂದ ಜನತೆಯನ್ನು ನಗ್ನವನ್ನಾಗಿಸುವುದು ಲೌಕಿಕದೃಷ್ಟಿಯಿಂದ ನಿಂದಾಜನಕವಾದುದರಿಂದ ದೋಷವಾಗಿದೆ. ಆದರೆ ಬಾಹ್ಯಾಭ್ಯಂತರಪರಿಗ್ರಹಗಳನ್ನು ತೊರೆದು ಸಮತಾ ಭಾವಧಾರಕನಾದ ದಿಗಂಬರ-ಯೋಗಿಯು ತನ್ನ ಸದುಪದೇಶದಿಂದ ಲೋಕದ ಜನರ ಅಜ್ಞಾನವನ್ನು ತೊಲಗಿಸಿ ಅವರನ್ನೂ ತನ್ನಂತೆಯೇ ಸರ್ವಸಂಗಪರಿತ್ಯಾಗಿ(ದಿಗಂಬರ)ಗಳನ್ನಾಗಿ ಮಾಡುವುದು ಅನಶ್ವರ-ಆತ್ಮೀಯಸುಖಸಾಧಕವಾಗಿರುವುದರಿಂದ ಯಥಾರ್ಥದೃಷ್ಟಿಯಿಂದ ಪ್ರಶಂಸನೀಯಕಾರ್ಯವಾಗಿದೆ. ಆದಕಾರಣ ವಸ್ತುತಃ ಇದು ಗುಣವೇ ಅಲ್ಲದೆ ದೋಷವಲ್ಲ ಸಾರಾಂಶವೇನಂದರೆ, ಅಜ್ಞಾನಿಜನರಿಗೆ ಜ್ಞಾನಿಗಳು ಹುಚ್ಚರಂತೆ ಕಾಣುತ್ತಾರೆ. ಹಾಗೆಯೇ ಜ್ಞಾನಿಗಳಿಗೆ ಅಜ್ಞಾನಿಗಳು ಹುಚ್ಚರಂತೆ ಕಾಣುತ್ತಾರ ಅಜ್ಞಾನಿಗಳು ಜ್ಞಾನಿಗಳಿಂದ ವಿಮುಖರಾಗಿರುವುದೂ ಜ್ಞಾನಿಗಳು ಅಜ್ಞಾನಿ-ಜಗತ್ತಿನಿಂದ ವಿಮುಖರಾಗಿರುವುದೂ ಇದಕ್ಕೆ ಕಾರಣವಾಗಿದೆ. ಈ ಪ್ರಕಾರವಾಗಿ ಈ ದೋಹಕಾರ್ಥದಲ್ಲಿ ನಿಂದಾರೂಪವಾದ ಸ್ತುತಿಯನ್ನು ತಿಳಿಯಬೇಕು.

**ಅಣ್ಣು ವಿ ದೋಸು ಹವೇಇ ತಸು, ಜೋ ಸಮಭಾಉ ಕರೇಇ ।**
**ಸತ್ತು ವಿ ಮಿಲ್ಲಿವಿ ಅಪ್ಪಣಉ, ಪರಹಂ ಣಿಲೀಣು ಹವೇಇ ॥ ೪೫ ॥**

"ಅನ್ಯಃ ಅಪಿ ದೋಷೋ ಭವತಿ ತಸ್ಯ ಯಃ ಸಮಭಾವಂ ಕರೋತಿ ।
ಶತ್ರುಮಪಿ ಮುಕ್ತ್ವಾ ಆತ್ಮೀಯಂ ಪರಸ್ಯ ನಿಲೀನಃ ಭವತಿ ॥ ೪೫ ॥"

**ಅನ್ವಯಾರ್ಥ:**— **ಜೋ**— ಯಾವನು **ಸಮಭಾಉ ಕರೇಇ**— ಸಮಭಾವವನ್ನು ಮಾಡುತ್ತಾನೋ (ಹೊಂದುತ್ತಾನೋ) **ತಸು**— ಅವನಿಗೆ **ಅಣ್ಣು ವಿ ದೋಸು**— ಬೇರೊಂದು ದೋಷವೂ **ಹವೇಇ**— ಉಂಟಾಗುತ್ತದೆ. ಅವನು **ಅಪ್ಪಣಉ**— ತನ್ನ ಅಧೀನನಾದ **ಸತ್ತು ವಿ ಮಿಲ್ಲವಿ**— (ಕರ್ಮರೂಪವಾದ) ಶತ್ರುವನ್ನೂ ಬಿಟ್ಟು **ಪರಹಂ ಣಿಲೀಣು**

**ಹವೇಇ**— ಶತ್ರುವಿಗೆ ಅಧೀನನಾಗುವನು ಅಥವಾ ಪರಮಾತ್ಮನನ್ನು ಆಶ್ರಯಿಸುತ್ತಾನೆ.

**ಭಾವಾರ್ಥ:**—ಯಾವ ತಪೋಧನನಾದ ಯೋಗಿಯು ರಾಗಾದಿರಹಿತನಾಗಿ ನಿಜ ಪರಮಾತ್ಮಭಾವನೆಯನ್ನು ಮಾಡುತ್ತಿರುತ್ತಾನೋ ಆತನಲ್ಲಿ ಯಾವುದೊಂದು ದೋಷವೂ ಇರಲಾರದು ಆತನು ಸರ್ವಥಾ ಪ್ರಶಂಸನೀಯನಾಗಿರುವನು. ಆದರೆ ಇಲ್ಲಿ ಶ್ಲೇಷಾರ್ಥದ ಬಲದಿಂದ ನಿಂದಾಸ್ತುತಿಯನ್ನು ಮಾಡಿರುವರು ಸಮಭಾವಧಾರಕನಾದ ಸಾಧುವು ಕರ್ಮರೂಪವಾದ ಶತ್ರುವನ್ನು ಬಿಟ್ಟು "ಪರ" ಎಂದರೆ ಪರಮಾತ್ಮನ ಆಶ್ರಯವನ್ನು ಪಡೆಯುತ್ತಾನೆಂದರ್ಥವು. ಆದರೆ "ಪರ" ಶಬ್ದಕ್ಕೆ ಶತ್ರುವೆಂದೂ ಅರ್ಥವಿರುವುದರಿಂದ ಲೋಕವ್ಯವಹಾರದಲ್ಲಿ ತನ್ನ ಅಧೀನನಾದ ಶತ್ರುವನ್ನು ಬಿಟ್ಟು ತಾನು ಶತ್ರುವಿನ ಅಧೀನನಾಗುವುದು ನಿಂದಾಜನಕವಾಗಿದೆ ಆದುದರಿಂದ ಇದೊಂದು ದೋಷವೆಂದು (ಶಬ್ದಶ್ಲೇಷದಿಂದ) ಹೇಳಿದುದಾಗಿದೆ.

**ಅಣ್ಣು ವಿ ದೋಸು ಹವೇಇ ತಸು, ಜೋ ಸಮಭಾಉ ಕರೇಇ ।**
**ವಿಯಲು ಹವೇವಿಣು ಇಕ್ಕಲಉ, ಉಪ್ಪರಿ ಜಗಹಂ ಚಡೇಇ ॥ ೪೬ ॥**

"ಅನ್ಯಃ ಅಪಿ ದೋಷಃ ಭವತಿ ತಸ್ಯ ಯಃ ಸಮಭಾವಂ ಕರೋತಿ ।
ವಿಕಲಃ ಭೂತ್ವಾ ಏಕಾಕೀ ಉಪರಿ ಜಗತಃ ಆರೋಹತಿ ॥ ೪೬ ॥"

**ಅನ್ವಯಾರ್ಥ:** — **ಜೋ**— ಆಪ ಮಹಾಮುನಿಯು **ಸಮಭಾಉ ಕರೇಇ**— ಸಮತಾಭಾವವನ್ನು ಧರಿಸುತ್ತಾನೋ **ತಸು**— ಅವನಿಗೆ **ಅಣ್ಣುವಿ ದೋಸು ಹವೇಇ**— ಮತ್ತೊಂದು ದೋಷವೂ ಉಂಟಾಗುತ್ತದೆ. ಏನಂದರೆ ಆತನು **ವಿಯಲು ಹವೇವಿಣು**— ಶರೀರರಹಿತನಾಗಿ ಅಥವಾ ಬುದ್ಧಿ ಧನಾದಿಗಳಿಂದ ಭ್ರಷ್ಟನಾಗಿ **ಇಕ್ಕಲಉ**— ಏಕಾಕಿ (ಒಬ್ಬಂಟಿಗ)ಯಾಗಿ **ಜಗಹಂ ಉಪ್ಪರಿ**— ಲೋಕದ ಮೇಲ್ಭಾಗ(ಶಿಖರ)ದಲ್ಲಿ ಅಥವಾ ಜನರ ಮೇಲೆ **ಚಡೇಇ**— ಹತ್ತುತ್ತಾನೆ(ಏರುತ್ತಾನೆ).

**ಭಾವಾರ್ಥ:**—ರಾಗಾದಿವಿಕಲ್ಪರಹಿತವೂ ಪರಮೋಪಶಮರೂಪವೂ ಆದ ನಿಜ ಶುದ್ಧಾತ್ಮಭಾವನೆಯಲ್ಲಿ ಲೀನನಾದ ಮಹಾಮುನಿಯು 'ಕಲ' ಅರ್ಥಾತ್ ಶರೀರದಿಂದ ರಹಿತ(ವಿಕಲ)ನಾಗಿ ಲೋಕಾಗ್ರಭಾಗದಲ್ಲಿ (ಮೋಕ್ಷದಲ್ಲಿ) ವಿರಾಜಿಸುತ್ತಾನೆ. ಆದ ಕಾರಣ ಆ ಮಹಾಮುನಿಯು ಸ್ತುತ್ಯನಾಗಿರುತ್ತಾನೆ. ಆದರೆ ಶ್ಲೇಷಾರ್ಥವುಳ್ಳ "ವಿಕಲ" ಶಬ್ದದಿಂದ ಧನಾದಿಗಳಿಂದ ಹಾಗೂ ಬುದ್ಧಿಯಿಂದ ವಿಕಲ (ಭ್ರಷ್ಟ)ನಾದ ಮನುಷ್ಯನು ಏಕಾಕಿಯಾಗಿ ಜನರ ಮೇಲೆ (ಚಿತ್ತವೈಕಲ್ಯದಿಂದ) ಏರಿಬರುತ್ತಾನೆ ಇದು ನಿಂದಾಜನಕವಾಗಿದೆ. ಹೀಗೆ ಇಲ್ಲಿಯೂ ಶ್ಲೇಷಾರ್ಥದಿಂದ ನಿಂದಾರೂಪವಾದ ಸ್ತುತಿಯನ್ನು ತಿಳಿಯಬೇಕು. ಮುಂದೆ ಒಂದು ಪ್ರಕ್ಷೇಪಕ ದೋಹೆಯನ್ನು ಹೇಳುತ್ತಾರೆ.

**ಜಾ ಣಿಸಿ ಸಯಲಹಂ ದೇಹಿಯಹಂ, ಜೊಗ್ಗಿಉ ತಹಿಂ ಜಗ್ಗೇಇ ।**
**ಜಹಿಂ ಪುಣು ಜಗ್ಗಇ ಸಯಲು ಜಗು, ಸಾ ಣಿಸಿ ಮುಣಿವಿ ಸುವೇಇ॥೪೬*೧॥**

*೧ ಪ್ರಕ್ಷೇಪಕ.

"ಯಾ ನಿಶಾ ಸಕಲಾನಾಂ ದೇಹಿನಾಂ ಯೋಗೀ ತಸ್ಯಾಂ ಜಾಗರ್ತಿ ।
ಯತ್ರ ಪುನಃ ಜಾಗರ್ತಿ ಸಕಲಂ ಜಗತ್ ತಾಂ ನಿಶಾಂ ಮತ್ವಾ ಸ್ವಪಿತಿ ॥ ೪೬*೧ ॥

**ಅನ್ವಯಾರ್ಥ:-ಜಾ**-ಆವುದು **ಸಯಲಹಂ ದೇಹಿಯಹಂ**-ಸಮಸ್ತ ಸಂಸಾರಿ ಜೀವರುಗಳಿಗೆ **ಣಿಸಿ**-ರಾತ್ರಿಯೋ **ತಹಿಂ**—ಅದರಲ್ಲಿ **ಜೊಗ್ಗಿಉ**-ಪರಮಯೋಗಿಯು **ಜಗ್ಗೇಇ**-ಜಾಗೃತ (ಎಚ್ಚರಿಕೆಯಿಂದಿರುವವ)ನಾಗಿರುತ್ತಾನೆ. **ಪುಣು**-ಮತ್ತು **ಜಹಿಂ**-ಆವುದರಲ್ಲಿ **ಸಯಲು ಜಗು**—ಸಮಸ್ತ ಲೋಕವು **ಜಗ್ಗಇ**—ಎಚ್ಚರವಾಗಿರುತ್ತದೋ **ಸಾ**—ಅದನ್ನು **ಣಿಸಿ ಮುಣಿವಿ**—ರಾತ್ರಿಯೆಂದು ತಿಳಿದು **ಸುವೇಇ**—ನಿದ್ರಿಸುತ್ತಾನೆ ಹೀಗಿದು ಸಾಮಾನ್ಯ ಅರ್ಥವು.

**ಭಾವಾರ್ಥ:**—ಇಲ್ಲಿ ರಾತ್ರಿ ಮತ್ತು ಎಚ್ಚರನಿದ್ರೆಗಳ ಅಂತರರ್ಥವು ಹೀಗಿರುತ್ತದೆ-—ಸ್ವಶುದ್ಧಾತ್ಮಜ್ಞಾನರಹಿತರಾದ ಸಂಸಾರಿಜೀವರುಗಳು ಮಿಥ್ಯಾತ್ವರಾಗಾದಿರೂಪವಾದಅಂಧಕಾರ(ಕತ್ತಲೆ)ದಿಂದ ಕೂಡಿದವರಾಗಿರುವುದರಿಂದ ಅವರಿಗೆ ವೀತರಾಗಸಹಜಾನಂದೈಕಮಯವಾದ ಶುದ್ಧಾತ್ಮಾವಸ್ಥೆಯು ರಾತ್ರಿಯಂತೆ ಕಾಣುತ್ತದೆ ಆದರೆ ಪರಮಯೋಗಿಯು ತನ್ನ ವೀತರಾಗನಿರ್ವಿಕಲ್ಪಸ್ವಸಂವೇದನಜ್ಞಾನರೂಪವಾದ ರತ್ನದೀಪದ ಪ್ರಕಾಶದಿಂದ ಮಿಥ್ಯಾತ್ವರಾಗಾದಿವಿಕಲ್ಪರೂಪವಾದ ಅಂಧಕಾರವನ್ನು ದೂರ (ನಾಶ)ಗೊಳಿಸಿ ತಾನು ಸ್ವಶುದ್ಧಾತ್ಮಾನುಭವದಲ್ಲಿ ಜಾಗೃತನಾಗಿರುತ್ತಾನೆ. ಹೀಗೆಯೇ ಶುದ್ಧಾತ್ಮಜ್ಞಾನರಹಿತರೂ ಶುಭಾಶುಭಮನೋವಾಕ್ಕಾಯವ್ಯಾಪಾರವುಳ್ಳವರೂ ಆದ ಜಗತ್ತಿನ ಸಕಲಸಂಸಾರಿಜೀವರು ಪರಮಾತ್ಮತತ್ತ್ವಭಾವನೆಯಿಂದ ಪರಾಙ್ಮುಖರಾಗಿ ವಿಷಯಕಷಾಯರೂಪವಾದ ಪ್ರಪಂಚದ ಹೋರಾಟದಲ್ಲಿಯೇ ಎಚ್ಚರವುಳ್ಳವ(ಆಸಕ್ತ)ರಾಗಿರುತ್ತಾರೆ. ಮಹಾಯೋಗಿಗಳಾದರೋ ವಿಷಯಕಷಾಯಮಯವಾದೀ ಪ್ರಪಂಚವನ್ನು ರಾತ್ರಿಯನ್ನಾಗಿ ಭಾವಿಸಿ ಅರ್ಥಾತ್ ಪ್ರಪಂಚದ ಕಡಗೆ ಲಕ್ಷ್ಯವೀಯದೆ ಮನೋಗುಪ್ತಿ ವಚನಗುಪ್ತಿ ಕಾಯಗುಪ್ತಿಗಳಲ್ಲಿ ಸ್ಥಿರತೆಯುಳ್ಳವರಾಗಿ ವೀತರಾಗನಿರ್ವಿಕಲ್ಪಪರಮಸಮಾಧಿರೂಪವಾದ "ಯೋಗನಿದ್ರೆ"ಯಲ್ಲಿ ಮಗ್ನರಾಗಿರುತ್ತಾರೆ ಬಾಹ್ಯವಿಷಯಗಳಲ್ಲಿ "ಶಯನ" ಅರ್ಥಾತ್ ಪರಾಙ್ಮುಖತೆಯೇ ಉಪಶಮಭಾವವೆಂದಭಿಪ್ರಾಯವು. ಸಾರಾಂಶತಃ ಪರಮೋಪಶಮಭಾವಧಾರಕನಾದ ಯೋಗಿಗೆ ಆತ್ಮಸ್ವರೂಪವೇ ಗಮ್ಯವಾಗಿರುತ್ತದಲ್ಲದೆ ಪ್ರಪಂಚವು ಗಮ್ಯವಾಗಿರುವುದಿಲ್ಲವೆಂದೂ ಮಿಥ್ಯಾದೃಷ್ಟಿಗಳಾದ ಅಜ್ಞಾನಿಜೀವರಿಗೆ ವಿಷಯಕಷಾಯಮಯವಾದ ಪ್ರಪಂಚವೇ ಗಮ್ಯವಾಗಿರುತ್ತದಲ್ಲದೆ ಆತ್ಮಸ್ವರೂಪವು ಗಮ್ಯವಾಗಿರುವುದಿಲ್ಲವೆಂದೂ ಭಾವವು.

**ಣಾಣಿ ಮುಎಪ್ಪಿಣು ಭಾಉ ಸಮು, ಕಿತ್ಥು ವಿ ಜಾಇ ಣ ರಾಉ ।**
**ಜೇಣ ಲಹೇಸಇ ಣಾಣಮಉ, ತೇಣ ಜಿ ಅಪ್ಪಸಹಾಉ ॥ ೪೭ ॥**

"ಜ್ಞಾನೀ ಮುಕ್ತ್ವಾ ಭಾವಂ ಶಮಂ ಕ್ವಾಪಿ ಯಾತಿ ನ ರಾಗಮ್ ।
ಯೇನ ಲಭಿಷ್ಯತಿ ಜ್ಞಾನಮಯಂ ತೇನ ಏವ ಆತ್ಮಸ್ವಭಾವಮ್ ॥ ೪೭ ॥"

**ಅನ್ವಯಾರ್ಥ:— ಣಾಣಿ—** ನಿಜಪರಪದಾರ್ಥಗಳ ಭೇದವನ್ನು ತಿಳಿದಿರುವ(ಭೇದ ಜ್ಞಾನಿಯಾದ) ಸಾಧುವು **ಜೇಣ—** ಯಾವಕಾರಣದಿಂದ **ಸಮು ಭಾಉ ಮುಏಪ್ಪಿಣು —** ಸಮಭಾವವನ್ನು ಬಿಟ್ಟು ಅರ್ಥಾತ್ ಸಮಭಾವದ ಹೊರತು **ಕಿತ್ಥು ವಿ—** ಎಲ್ಲಿಯೂ-ಯಾವ ಬಹಿರ್ವಿಷಯದಲ್ಲಿಯೂ **ಜಾಇ ಣ ರಾಉ—** ರಾಗ(ಪ್ರೀತಿ-ಆಸಕ್ತಿ)ವನ್ನು ಹೊಂದುವುದಿಲ್ಲವೋ **ತೇಣ ಜಿ—** ಆಕಾರಣದಿಂದಲೇ **ಣಾಣಮಉ ಅಪ್ಪಸಹಾಉ—** ಕೇವಲಜ್ಞಾನಮಯವಾದ ಹಾಗೂ ಕೇವಲಜ್ಞಾನಾಂತರ್ಗತವಾದ ಅನಂತಗುಣಗಳುಳ್ಳ ನಿರ್ದೋಷಪರಮಾತ್ಮಸ್ವಭಾವವನ್ನು **ಲಹೇಸಇ**— ಭವಿಷ್ಯದಲ್ಲಿ ಹೊಂದುವನು.

**ಭಾವಾರ್ಥ**-ಭೇದಜ್ಞಾನಿಯಾದ ಸಾಧುವು ಪಂಚೇಂದ್ರಿಯವಿಷಯಾಭಿಲಾಷಾರಹಿತವೂ ಶುದ್ಧಾತ್ಮಾನುಭೂತಿರೂಪವೂ ಆದ ಉಪಶಮಭಾವ ಅಥವಾ ಸಮಭಾವದ ಹೊರತು ಇತರ ಬಹಿರ್ವಿಷಯಗಳಲ್ಲಿ ಆಸಕ್ತನಾಗುವುದಿಲ್ಲ ಈ ಕಾರಣದಿಂದ ಆತನು ಮುಂದೆ ಅವಶ್ಯವಾಗಿ ನಿರ್ವಾಣ(ಶುದ್ಧಾತ್ಮಲಾಭ)ವನ್ನು ಹೊಂದುವನು. ಅತಏವ ಸಮಭಾವದ ಹೊರತು ಶುದ್ಧಾತ್ಮಲಾಭವಾಗದೆಂದಭಿಪ್ರಾಯವು ಇಲ್ಲಿ ಸಮಭಾವ ಅಥವಾ ಉಪಶಮಭಾವವೆಂದರೆ ಪಂಚೇಂದ್ರಿಯವಿಷಯಾಭಿಲಾಷೆಯಿಂದ ರಹಿತವೂ ವೀತರಾಗಪರಮಾನಂದಸಹಿತವೂ ಆದ ನಿರ್ವಿಕಲ್ಪ-ನಿಜಭಾವವೆಂದರ್ಥವು.

**ಭಣಇ ಭಣಾವಇ ಣವಿ ಥುಣಇ, ಣಿಂದಇ ಣಾಣಿ ಣ ಕೋಇ ।**
**ಸಿದ್ಧಿಹಿ ಕಾರಣು ಭಾಉ ಸಮು, ಜಾಣಂತಉ ಪರ ಸೋಇ ॥ ೪೮ ॥**

"ಭಣತಿ ಭಾಣಯತಿ ನೈವ ಸ್ತೌತಿ ನಿಂದತಿ ಜ್ಞಾನೀ ನ ಕಮಪಿ ।
ಸಿದ್ಧೇಃ ಕಾರಣಂ ಭಾವಂ ಸಮಂ ಜಾನನ್ ಪರಂ ತಮೇವ ॥ ೪೮ ॥"

**ಅನ್ವಯಾರ್ಥ:— ಣಾಣಿ—** ಜ್ಞಾನಿಯಾದ ಸಾಧುವು **ಸೋಇ ಸಮುಭಾಉ**-ಆ ಸಮಭಾವವನ್ನೇ **ಪರ ಸಿದ್ಧಿಹಿ ಕಾರಣು—** ನಿಶ್ಚಯದಿಂದ ಸಿದ್ಧಿ (ಸ್ವಾತ್ಮೋಪಲಬ್ಧಿ)ಗೆ ಕಾರಣವನ್ನಾಗಿ **ಜಾಣಂತಉ—** ತಿಳಿಯುವವನಾಗಿ **ಕೋಇ—** ಯಾರನ್ನೂ **ಣ ಭಣಇ—** ಮಾತನಾಡುವುದಿಲ್ಲ ಅಥವಾ ಶಿಷ್ಯನಾಗಿ ಯಾರಿಂದಲೂ ಅಧ್ಯಯನಮಾಡುವುದಿಲ್ಲ **ಣವಿ ಭಣಾವಇ—** ಯಾರನ್ನೂ ಮಾತನಾಡುವಂತೆ ಪ್ರೇರೇಪಿಸುವುದಿಲ್ಲ. ಅಥವಾ ಗುರುವಾಗಿ ಯಾರನ್ನೂ ಅಧ್ಯಯನಮಾಡಿಸುವುದಿಲ್ಲ (ಓದಿಸುವುದಿಲ್ಲ) **ಣವಿ ಥುಣಇ ಣಿಂದಇ—** ಯಾರನ್ನೂ ಸ್ತೋತ್ರಮಾಡುವುದಿಲ್ಲ (ಪ್ರಶಂಸಿಸುವುದಿಲ್ಲ) ಮತ್ತು ಯಾರನ್ನೂ ನಿಂದಿಸುವುದಿಲ್ಲ

**ಭಾವಾರ್ಥ:—** ಪರಮೋಪೇಕ್ಷಾಸಂಯಮ ಅರ್ಥಾತ್ ತ್ರಿಗುಪ್ತಿಯಲ್ಲಿ ಸ್ಥಿರತಾರೂಪ-ಪರಮ-ಸಮಾಧಿಯ ಭಾವನಾರೂಪವೂ ವಿಶುದ್ಧಜ್ಞಾನದರ್ಶನಮಯವಾದ ನಿಜ ಶುದ್ಧಾತ್ಮತತ್ತ್ವದ ಸಮ್ಯಕ್-ಶ್ರದ್ಧಾನಜ್ಞಾನಾನುಭೂತಿ-ಲಕ್ಷಣವುಳ್ಳುದೂ ಸಾಕ್ಷಾನ್ಮೋಕ್ಷಕಾರಣವೂ ಆದ ಕಾರಣಸಮಯಸಾರವನ್ನು ಚೆನ್ನಾಗಿ ತಿಳಿದು ರಾಗದ್ವೇಷ ರಹಿತ ಪರಮಸಮಭಾವಧಾರಕನಾಗಿರುವ ಯೋಗಿಯು ಇತರರನ್ನು ಕುರಿತು ಮಾತ

ನಾಡುವುದಿಲ್ಲ, ಮಾತನಾಡಿಸುವುದಿಲ್ಲ, ಹೊಗಳುವುದಿಲ್ಲ ಹಾಗೂ ನಿಂದಿಸುವುದಿಲ್ಲ. ಆತನಿಗೆ ಶತ್ರು, ಮಿತ್ರ, ಸುಖದುಃಖಾದಿಗಳೆಲ್ಲವೂ ಸಮಾನವಾಗಿರುತ್ತವೆ ಹಾಗೂ ಆತನು ಕೇವಲ ಆತ್ಮತತ್ತ್ವಭಾವನೆಯಲ್ಲೇ ಲೀನನಾಗಿ ಪ್ರಾಪಂಚಿಕವಿಷಯದಲ್ಲಿ ಉದಾಸೀನನಾಗಿರುತ್ತಾನೆಂದು ಭಾವವು.

**ಗಂಥಹಂ ಉಪ್ಪರಿ ಪರಮಮುಣೀ, ದೇಸು ವಿ ಕರಇ ಣ ರಾಉ ।**
**ಗಂಥಹಂ ಜೇಣ ವಿಯಾಣಿಯಉ, ಭಿಣ್ಣಉ ಅಪ್ಪಸಹಾಉ ॥ ೪೯ ॥**

"ಗ್ರಂಥಸ್ಯ ಉಪರಿ ಪರಮಮುನಿಃ ದ್ವೇಷಮಪಿ ಕರೋತಿ ನ ರಾಗಮ್ ।
ಗ್ರಂಥಾತ್ ಯೇನ ವಿಜ್ಞಾತಃ ಭಿನ್ನಃ ಆತ್ಮಸ್ವಭಾವಃ ॥ ೪೯ ॥"

**ಅನ್ವಯಾರ್ಥ:— ಜೇಣ** — ಯಾವ ಮುನಿಯಿಂದ **ಅಪ್ಪಸಹಾಉ** — ಆತ್ಮಸ್ವಭಾವವು **ಗಂಥಹಂ** — ಬಾಹ್ಯಾಭ್ಯಂತರಪರಿಗ್ರಹದ ದೆಸೆಯಿಂದ ಅಥವಾ ಗ್ರಂಥ (ಶಾಸ್ತ್ರ) ದಿಂದುಂಟಾವ ಜ್ಞಾನದಿಂದ **ಬಿಣ್ಣಉ ವಿಯಾಣಿಯಉ** — ಭಿನ್ನ (ಬೇರೆ)ವಾದುದೆಂದು ತಿಳಿಯಲ್ಪಟ್ಟಿದೆಯೋ ಅಂತಹ **ಪರಮಮುಣೀ**– ಪರಮತಪಸ್ವಿಯು **ಗಂಥಹಂ ಉಪ್ಪರಿ**– ಪರಿಗ್ರಹದ ಮೇಲೆ ಅಥವಾ ಗ್ರಂಥರಚನಾರೂಪವಾದ ಶಾಸ್ತ್ರದ ಮೇಲೆ **ದೇಸು ವಿ ಕರಇ ಣ ರಾಉ** — ದ್ವೇಷವನ್ನು ಮಾಡುವುದಿಲ್ಲ, ರಾಗವನ್ನೂ ಮಾಡುವುದಿಲ್ಲ.

**ಭಾವಾರ್ಥ:**— ಮಿಥ್ಯಾತ್ವ, ಸ್ತ್ರೀವೇದ, ಪುಂವೇದ, ನಪುಂಸಕವೇದ, ಹಾಸ್ಯ, ರತಿ, ಅರತಿ, ಶೋಕ, ಭಯ, ಜುಗುಪ್ಸಾ, ಕ್ರೋಧ, ಮಾನ, ಮಾಯಾ, ಲೋಭ ಇವು ಹದಿನಾಲ್ಕು ಅಂತರಂಗ ಪರಿಗ್ರಹಗಳು. ಕ್ಷೇತ್ರ, ವಾಸ್ತು, ಹಿರಣ್ಯ, ಸುವರ್ಣ, ಧನ, ಧಾನ್ಯ, ದಾಸೀ, ದಾಸ, ಕುಪ್ಯ, ಭಾಂಡ ಇವು ಹತ್ತು ಬಾಹ್ಯಪರಿಗ್ರಹಗಳು ಹೀಗೆ ಬಾಹ್ಯಾಭ್ಯಂತರರೂಪದಿಂದ ಇಪ್ಪತ್ತನಾಲ್ಕು ವಿಧವಾದ ಪರಿಗ್ರಹಗಳನ್ನು ಜಗತ್ತ್ರಯಕಾಲತ್ರಯಗಳಲ್ಲಿ ಮನವಚನಕಾಯ–ಕೃತಕಾರಿತಾನುಮೋದನಗಳಿಂದ ಬಿಟ್ಟಿರುವವನೂ ವೀತರಾಗಪರಮಸಮಾಧಿಯಲ್ಲಿ ಮಗ್ನನೂ ಆದ ನಿರ್ಗ್ರಂಥಪರಮಯೋಗಿಯು ಪೂರ್ವೋಕ್ತಬಾಹ್ಯಾಂಭ್ಯತರಪರಿಗ್ರಹಗಳಿಂದ ಸರ್ವಥಾ ಭಿನ್ನವಾದ ಆತ್ಮಸ್ವರೂಪವನ್ನು ತಿಳಿದವನಾಗಿ ಪರಿಗ್ರಹಗಳ ಮೇಲೆ ರಾಗದ್ವೇಷಗಳನ್ನು ಮಾಡುವುದಿಲ್ಲ. ಈ ವ್ಯಾಖ್ಯಾನವು ಪೂರ್ವೋಕ್ತಗುಣವುಳ್ಳ ನಿರ್ಗ್ರಂಥಸಾಧುವಿಗೆ ಮಾತ್ರ ಶೋಭಿಸುತ್ತದಲ್ಲದೆ ಸಗ್ರಂಥ(ಪರಿಗ್ರಹಸಹಿತ)ನಿಗೆ ಶೋಭಿಸುವುದಿಲ್ಲವೆಂದು ತಾತ್ಪರ್ಯಾರ್ಥವು.

**ವಿಸಯಹಂ ಉಪ್ಪರಿ ಪರಮಮುಣೀ, ದೇಸು ವಿ ಕರಇ ಣ ರಾಉ ।**
**ವಿಸಯಹಂ ಜೇಣ ವಿಯಾಣಿಯಉ, ಭಿಣ್ಣಉ ಅಪ್ಪಸಹಾಉ ॥ ೫೦ ॥**

"ವಿಷಯಾಣಾಂ ಉಪರಿ ಪರಮಮುನಿಃ ದ್ವೇಷಮಪಿ ಕರೋತಿ ನ ರಾಗಮ್ ।
ವಿಷಯಾತ್ ಯೇನ ವಿಜ್ಞಾತಃ ಭಿನ್ನಃ ಆತ್ಮಸ್ವಭಾವಃ ॥ ೫೦ ॥"

**ಅನ್ವಯಾರ್ಥ:— ಜೇಣ** — ಯಾವ ಸಾಧುವಿನಿಂದ **ಅಪ್ಪಸಹಾಉ**– ಆತಸ್ವಭಾವವು **ವಿಸಯಹಂ ಭಿಣ್ಣಉ** — ಪಂಚೇಂದ್ರಿಯವಿಷಯದ ದೆಸೆಯಿಂದ ಭಿನ್ನವಾದು

ದಾಗಿ **ವಿಯಾಣಿಯಉ**— ಚೆನ್ನಾಗಿ ತಿಳಿಯಲ್ಪಟ್ಟಿದೆಯೋ **ಪರಮಮುಣೀ**— ಆ ಮಹಾ ಮುನಿಯು **ವಿಸಯಹಂ ಉಪ್ಪರಿ**— ಪಂಚೇಂದ್ರಿಯವಿಷಯಗಳ ಮೇಲೆ **ದೇಸು ವಿ ಕರಇ ಣ ರಾಉ**— ದ್ವೇಷವನ್ನು ಮಾಡುವುದಿಲ್ಲ, ರಾಗವನ್ನೂ ಮಾಡುವುದಿಲ್ಲ.

**ಭಾವಾರ್ಥ:**— ದ್ರವ್ಯೇಂದ್ರಿಯಭಾವೇಂದ್ರಿಯಗ್ರಾಹ್ಯಗಳಾದ ಸಮಸ್ತವಿಷಯಗಳನ್ನು ಜಗತ್ರಯಕಾಲತ್ರಯಗಳಲ್ಲಿ ಮನವಚನಕಾಯಗಳಿಂದಲೂ ಕೃತಕಾರಿತಾನುಮೋದನಗಳಿಂದಲೂ ತೊರೆದು ಯಾವ ಪರಮಮುನಿಯು ನಿಜಶುದ್ಧಾತ್ಮಭಾವನೆಯಿಂದುಂಟಾದ ವೀತರಾಗಪರಮಾನಂದೈಕರೂಪ-ಸುಖಾಮೃತರಸಾಸ್ವಾದನದಿಂದ ತೃಪ್ತನಾಗಿ ವಿಷಯಗಳಿಂದ ಭಿನ್ನವಾದ ನಿಜಶುದ್ಧಾತ್ಮಾನುಭವವನ್ನು ಪಡೆಯುತ್ತಾನೋ ಆ ಮುನಿಯು ಪಂಚೇಂದ್ರಿಯವಿಷಯಗಳಲ್ಲಿ ರಾಗದ್ವೇಷಗಳನ್ನು ತಾಳುವುದಿಲ್ಲ ಈ ವ್ಯಾಖ್ಯಾನವು ಪಂಚೇಂದ್ರಿಯವಿಷಯಗಳನ್ನು ತೊರೆದು ಸ್ವಶುದ್ಧಾತ್ಮಸುಖತೃಪ್ತನಾಗಿರುವ ಸಾಧುವಿಗೆ ಮಾತ್ರ ಶೋಭಿಸುತ್ತದಲ್ಲದೆ ವಿಷಯಾಸಕ್ತನಿಗೆ ಶೋಭಿಸುವುದಿಲ್ಲವೆಂದು ಭಾವವು

**ದೇಹಹಂ ಉಪ್ಪರಿ ಪರಮಮುಣಿ, ದೇಸು ವಿ ಕರಇ ಣ ರಾಉ ।**
**ದೇಹಹಂ ಜೇಣ ವಿಯಾಣಿಯಉ, ಭಿಣ್ಣಉ ಅಪ್ಪಸಹಾಉ ॥ ೫೧ ॥**

"ದೇಹಸ್ಯ ಉಪರಿ ಪರಮಮುನಿಃ ದ್ವೇಷಮಪಿ ಕರೋತಿ ನ ರಾಗಮ್ ।
ದೇಹಾತ್ ಯೇನ ವಿಜ್ಞಾತಃ ಭಿನ್ನಃ ಆತ್ಮಸ್ವಭಾವಃ ॥ ೫೧ ॥"

**ಅನ್ವಯಾರ್ಥ:**— **ಪರಮಮುಣೀ**— ಪರಮಮುನಿಯು **ದೇಹಹಂ ಉಪ್ಪರಿ**— ದೇಹ(ಶರೀರ)ದ ಮೇಲೆ **ದೇಸು ವಿ ಕರಇ ಣ ರಾಉ**— ದ್ವೇಷವನ್ನು ಮಾಡುವುದಿಲ್ಲ, ರಾಗವನ್ನು ಮಾಡುವುದಿಲ್ಲ. **ಜೇಣ**— ಯಾವ ಮಹಾಮುನಿಯಿಂದ **ಅಪ್ಪಸಹಾಉ**— ಆತ್ಮಸ್ವಭಾವವು **ದೇಹಹಂ ಭಿಣ್ಣಉ**— ದೇಹದಿಂದ ಭಿನ್ನವಾದುದೆಂದು **ವಿಯಾಣಿಯಉ**— ತಿಳಿಯಲ್ಪಟ್ಟಿದೆ.

**ಭಾವಾರ್ಥ:**—"ಪ್ರವಚನಸಾರ"ದಲ್ಲಿ—"**ಸಪರಂ ಬಾಧಾಸಹಿಯಂ ವಿಚ್ಛಿಣ್ಣಂ ಬಂಧಕಾರಣಂ ವಿಸಮಂ । ಜಂ ಇಂದಿಯೇಹಿಂ ಲದ್ಧಂ ತಂ ಸುಕ್ಖಂ ದುಃಖಮೇವ ತಹಾ ॥**" ಅರ್ಥಾತ್ "ಇಂದ್ರಿಯಗಳಿಂದ ಪ್ರಾಪ್ತವಾದ ಯಾವ ಸುಖವು ಪರಾಧೀನವೂ ಬಾಧಾಯುಕ್ತವೂ ನಾಶವುಳ್ಳುದೂ ಕರ್ಮಬಂಧಕ್ಕೆ ಕಾರಣವೂ ಹಾಗೆಯೇ ವಿಷಮವೂ ಆಗಿರುವುದೋ ಅದು ದುಃಖವೇ ಆಗಿರುತ್ತದೆ." ಎಂದು ಹೇಳಿರುವಂತೆ ಇಂದ್ರಿಯಸಮುದಾಯರೂಪವಾದ ಶರೀರದಿಂದುಂಟಾಗುವ ಸುಖವು ವಸ್ತುತಃ ದುಃಖವೇ ಆಗಿರುತ್ತದಲ್ಲದೆ ಸುಖವಲ್ಲ. ಅಂತಹ ಶರೀರಜನ್ಯಸುಖವನ್ನು ಜಗತ್ರಯಕಾಲತ್ರಯಗಳಲ್ಲಿ ಮನೋವಾಕ್ಕಾಯಕೃತಕಾರಿತಾನುಮತಗಳಿಂದ ಸರ್ವಥಾ ತೊರೆದು ಪಾರಮಾರ್ಥಿಕ ಅನಾಕುಲತ್ವರೂಪಸುಖಪರಿಣತನಾದ ನಿಜಪರಮಾತ್ಮನಲ್ಲಿ ತನ್ಮಯನಾಗಿ ಸ್ವಶುದ್ಧಾತ್ಮನನ್ನು ದೇಹದಿಂದ ಭಿನ್ನನನ್ನಾಗಿ ತಿಳಿಯುವ ಪರಮಯೋಗಿಯು ದೇಹದ ಮೇಲೆ ರಾಗದ್ವೇಷಗಳನ್ನು ಹೊಂದುವುದಿಲ್ಲವೆಂದಭಿಪ್ರಾಯವು. ಇಲ್ಲಿಯೂ ದೇಹ

ಮಮತ್ವವನ್ನು ಸರ್ವಥಾ ತ್ಯಾಗಮಾಡಿರುವ ಮಹಾಮುನಿಗೆ ಮಾತ್ರ ಈ ವ್ಯಾಖ್ಯಾನವು ಶೋಭಿಸುತ್ತದಲ್ಲದೆ ಇತರರಿಗೆ ಶೋಭಿಸುವುದಿಲ್ಲವೆಂದು ತಾತ್ಪರ್ಯಾರ್ಥವು

**ವಿತ್ತಿಣಿವಿತ್ತಿಹಿ ಪರಮಮುಣಿ, ದೇಸುವಿ ವಿ ಕರಇ ಣ ರಾಉ ।**
**ಬಂಧಹಂ ಹೇಉ ವಿಯಾಣಿಯಉ, ಏಯಹಂ ಜೇಣ ಸಹಾಉ ॥ ೫೨ ॥**

"ವೃತ್ತಿನಿವೃತ್ತ್ಯೋಃ ಪರಮಮುನಿಃ ದ್ವೇಷಮಪಿ ಕರೋತಿ ನ ರಾಗಮ್ ।
ಬಂಧಸ್ಯ ಹೇತುಃ ವಿಜ್ಞಾತಃ ಏತಯೋಃ ಯೇನ ಸ್ವಭಾವಃ ॥ ೫೨ ॥"

**ಅನ್ವಯಾರ್ಥ— ಪರಮಮುಣಿ**— ಮಹಾಮುನಿಯು **ವಿತ್ತಿಣಿವಿತ್ತಿಹಿ** — ವೃತ್ತಿನಿವೃತ್ತಿರೂಪವಾದ ವ್ರತ-ಅವ್ರತಗಳಲ್ಲಿ **ದೇಸು ವಿ ಕರಇ ಣ ರಾಉ** – ದ್ವೇಷವನ್ನೂ ರಾಗವನ್ನೂ ಮಾಡುವುದಿಲ್ಲ. ಏಕೆಂದರೆ, **ಜೇಣ**— ಯಾವ ಮುನಿಯಿಂದ **ಏಯಹಂ ಸಹಾಉ**— ಈ ವ್ರತಾವ್ರತಗಳ ಸ್ವಭಾವವು **ಬಂಧಹಂ ಹೇಉ** – ಬಂಧಕ್ಕೆ ಕಾರಣವಾದುದೆಂದು **ವಿಯಾಣಿಯಉ**– ತಿಳಿಯಲ್ಪಟ್ಟಿದೆ ಅಥವಾ **"ಭಿಣ್ಣಉ ಜೇಣ ವಿಯಾಣಿಯಉ ಏಯಹಂ ಅಪ್ಪಸಹಾಉ"** ಎಂಬ ಪಾಠಾಂತರದಿಂದ "ಯಾವ ಮಹಾಮುನಿಯಿಂದ ಆತ್ಮಸ್ವಭಾವವು ಈ ವ್ರತಾವ್ರತಗಳಿಂದ ಭಿನ್ನವಾದುದೆಂದು ತಿಳಿಯಲ್ಪಟ್ಟಿದೆ" ಎಂದರ್ಥವು

**ಭಾವಾರ್ಥ:**— ಶುದ್ಧಾತ್ಮರತನಾದ ಮಹಾಮುನಿಯು ವ್ರತ-ಅವ್ರತಗಳು ಪುಣ್ಯಪಾಪಬಂಧಗಳಿಗೆ ಕಾರಣಗಳೆಂದೂ ಆತ್ಮಸ್ವರೂಪದಿಂದ ಭಿನ್ನವಾದುವುಗಳೆಂದೂ ತಿಳಿದವನಾಗಿ ಆ ವ್ರತಾವ್ರತಗಳಲ್ಲಿ ರಾಗದ್ವೇಷಗಳನ್ನು ಮಾಡುವುದಿಲ್ಲವೆಂದಭಿಪ್ರಾಯವು. ಇಲ್ಲಿ ವ್ರತದ ಮೇಲೆಯೂ ರಾಗ (ಪ್ರೀತಿ)ವನ್ನು ಮಾಡುವುದಿಲ್ಲವೆಂಬುದರಿಂದ ವ್ರತವೇ ನಿಷೇಧಿಸಲ್ಪಟ್ಟಿದೆಯೆಂದು ತಿಳಿಯಬಾರದು. ಸರ್ವಶುಭಾಶುಭಭಾವಗಳ ನಿವೃತ್ತಿಪರಿಣಾಮವೇ ವ್ರತವು ಗ್ರಂಥಾಂತರದಲ್ಲಿಯೂ ಹೀಗೆಯೇ ಹೇಳಿರುವರು,—**"ರಾಗದ್ವೇಷೌ ಪ್ರವೃತ್ತಿಃ ಸ್ಯಾನ್ನಿವೃತ್ತಿಸ್ತನ್ನಿಷೇಧನಮ್ । ತೌ ಚ ಬಾಹ್ಯಾರ್ಥಸಂಬಂಧೌ ತಸ್ಮಾತ್ತಾಂಸ್ತು ಪರಿತ್ಯಜೇತ್॥"** ಅರ್ಥಾತ್ "ರಾಗದ್ವೇಷಗಳೇ ಪ್ರವೃತ್ತಿಯು. ಅವುಗಳ ನಿಷೇಧನ (ತ್ಯಾಗ)ವು ನಿವೃತ್ತಿಯು. ಈ ಪ್ರವೃತ್ತಿನಿವೃತ್ತಿಗಳೆರಡೂ ಬಾಹ್ಯಪದಾರ್ಥದ ಸಂಬಂಧವುಳ್ಳುವು. ಆದುದರಿಂದ ಅವೆರಡನ್ನೂ ಬಿಡಬೇಕು" ಅಥವಾ **"ಹಿಂಸಾನೃತಸ್ತೇಯಾಬ್ರಹ್ಮಪರಿಗ್ರಹೇಭ್ಯೋ ವಿರತಿರ್ವ್ರತಮ್"** ಅಂದರೆ ಹಿಂಸೆ, ಸುಳ್ಳು, ಚೌರ್ಯ, ಕುಶೀಲ, ಪರಿಗ್ರಹ ಇವುಗಳಿಂದ ವಿರಕ್ತಿಯನ್ನು ಹೊಂದುವುದು ವ್ರತವು. ಈ ಅಹಿಂಸಾದಿವ್ರತಗಳು ವ್ಯವಹಾರನಯದಿಂದ ಜೀವಘಾತದಿಂದ ನಿವೃತ್ತಿ ಜೀವದಯೆಯಲ್ಲಿ ಪ್ರವೃತ್ತಿ, ಅಸತ್ಯದಿಂದ ನಿವೃತ್ತಿ ಸತ್ಯದಲ್ಲಿ ಪ್ರವೃತ್ತಿ ಇತ್ಯಾದಿರೂಪದಿಂದ ಏಕದೇಶವ್ರತಗಳಾಗಿರುತ್ತವೆ ಮತ್ತು ರಾಗದ್ವೇಷರೂಪವಾದ ಸಂಕಲ್ಪವಿಕಲ್ಪರಹಿತತ್ರಿಗುಪ್ತಿ-ಪರಮಸಮಾಧಿಯಲ್ಲಿ ಶುಭಾಶುಭಗಳ ತ್ಯಾಗದಿಂದ ಪರಿಪೂರ್ಣವ್ರತವುಂಟಾಗುತ್ತದೆ ಅರ್ಥಾತ್ ಅಶುಭನಿವೃತ್ತಿ ಶುಭಪ್ರವೃತ್ತಿರೂಪವಾದುದು ಏಕದೇಶ

ವ್ರತವೂ ಶುಭಾಶುಭತ್ಯಾಗರೂಪವಾದುದು ಪೂರ್ಣವ್ರತವೂ ಆಗಿರುತ್ತದೆ. ಹೀಗೆ ಪ್ರಥಮಾವಸ್ಥೆಯಲ್ಲಿ ಏಕದೇಶವ್ರತವೂ ಪರಿಪೂರ್ಣಾವಸ್ಥೆಯಲ್ಲಿ ಸರ್ವದೇಶವ್ರತವೂ ಇರುವುದರಿಂದ ವ್ರತವು ನಿಷೇಧಿಸಲ್ಪಟ್ಟಿರುವುದಿಲ್ಲವೆಂದು ತಿಳಿಯಬೇಕು.

ಆತ್ಮಭಾವನೆಯಿಂದಲೇ ಮೋಕ್ಷವುಂಟಾಗುತ್ತಿರಲು ವ್ರತದಿಂದೇನು ಪ್ರಯೋಜನ? ಏಕೆಂದರೆ ಭರತಚಕ್ರವರ್ತಿಯು ದೀಕ್ಷೆಗೊಂಡು(ಮುನಿಯಾಗಿ) ಎರಡು ಗಳಿಗೆಯಲ್ಲೇ ಮೋಕ್ಷಪಡೆದನು. ಅವನೇನು ವ್ರತಗಳನ್ನು ಧರಿಸಿದ್ದನೇ? ಎಂಬ ಪ್ರಶ್ನೆಗೆ ಉತ್ತರವೇ ನಂದರೆ:–ಭರತೇಶ್ವರನು ಜಿನದೀಕ್ಷೆಯನ್ನು ಧರಿಸುವಲ್ಲಿ ಮೊದಲು ಕೇಶಲುಂಚನಮಾಡಿದ ನಂತರ ಹಿಂಸಾದಿನಿವೃತ್ತಿರೂಪವಾದ ಮಹಾವ್ರತವನ್ನು ಸ್ವೀಕರಿಸಿದನು ಆಮೇಲೆ ಅಂತ ರ್ಮುಹೂರ್ತದಲ್ಲಿ ನಿದಾನಬಂಧಾದಿ-ಸಕಲವಿಕಲ್ಪರಹಿತವೂ ಮನೋವಾಕ್ಕಾಯನಿರೋ ಧಲಕ್ಷಣವುಳ್ಳುದೂ ಆದ ನಿಜಶುದ್ಧಾತ್ಮಧ್ಯಾನದಲ್ಲಿ ತನ್ಮಯನಾಗಿ ಅನಂತರ ನಿರ್ವಿಕಲ್ಪ (ಕೇವಲಿ)ನಾದನು. ಭರತೇಶ್ವರನು ರಾಜ್ಯವನ್ನು ತೊರೆದು ಮುನಿಯಾಗಿ ಅಂತರ್ಮು ಹೂರ್ತ(ಅತ್ಯಲ್ಪಕಾಲ)ದಲ್ಲೇ ಕೇವಲಿಯಾದುದರಿಂದ ಆತನ ಮಹಾವ್ರತವು ಲೋಕ ಪ್ರಸಿದ್ಧವಾಗಲಿಲ್ಲ. ಹಾಗೆಂದು ಎಲ್ಲ ಮುಮುಕ್ಷುಗಳೂ ಭರತೇಶನಂತೆ ಅವಸಾನಕಾಲ ದಲ್ಲಿ ಮಾತ್ರ ತಪಸ್ಸಂಯಮಗಳನ್ನು ಧರಿಸಿದರೆ ಸಾಕೆಂದೂ ಅದಕ್ಕಿಂತ ಮೊದಲು ತಪ ಸ್ಸಂಯಮಾದಿಗಳನ್ನು ಧರಿಸುವ ಅವಶ್ಯವಿಲ್ಲೆಂದೂ ಅಭಿಪ್ರಾಯವಲ್ಲ ಯಾವನಾದ ರೊಬ್ಬ ಅಂಧನಿಗೆ ಹೇಗೋ ನಿಧಿಯು ಸಿಕ್ಕಿತೆಂದರೆ ಎಲ್ಲ ಕುರುಡರಿಗೂ ಹಾಗೆ ಸಿಕ್ಕುತ್ತ ದೆಂದಭಿಪ್ರಾಯವಲ್ಲ ಹಾಗೆಯೇ ಭರತೇಶನಂಥವನೊಬ್ಬನಿಗೆ ಅವಸಾನಕಾಲದಲ್ಲಿ ಮಾಡಿದ ತಪಸ್ಸಂಯಮಗಳಿಂದ ಮುಕ್ತಿಯಾಯಿತೆಂದರೆ ಎಲ್ಲವರಿಗೂ ಹಾಗಾಗುವುದೆಂದು ಹೇಳಲಾಗುವುದಿಲ್ಲ. ಈ ವಿಷಯವನ್ನು ಗ್ರಂಥಾಂತರದಲ್ಲಿಯೂ—**"ಪುವ್ವಮಭಾವಿದ ಜೋಗೋ ಮರಣೇ ಆರಾಹಓ ಜದಿ ವಿ ಕೋಈ । ಖನ್ನಗನಿಧಿದಿಟ್ಠಂತಂ ತಂ ಖು ಪಮಾಣಂ ಣ ಸವ್ವತ್ಥ ॥"** ಅಂದರೆ "ಮೊದಲು ಭಾವಿಸದಿರುವಯೋಗವುಳ್ಳ ಅರ್ಥಾತ್ ಮೊದಲು ನಿಜಶುದ್ಧಾತ್ಮಭಾವನೆಯನ್ನು ಮಾಡದಿರುವ ಯಾವನಾದರೊಬ್ಬ ಜೀವನು ಮರಣಸಮಯದಲ್ಲಿ ನಿಶ್ಚಯರತ್ನತ್ರಯಾರಾಧನಾರೂಪವಾದ ನಿಜಶುದ್ಧಾತ್ಮಾ ನುಭವದಲ್ಲಿ ತನ್ಮಯನಾದರೆ ಅದು ಕುರುಡನು ನಿಧಿಯನ್ನು ಪಡೆದಂತಿದ್ದು ಸರ್ವತ್ರ ಪ್ರಮಾಣವಾಗಿರುವುದಿಲ್ಲ"ವೆಂದು ಸ್ಪಷ್ಟಗೊಳಿಸಿದ್ದಾರೆ. ಅತಏವ ಮುಮುಕ್ಷುಗಳಾದ ಭವ್ಯರು ನಿರಂತರ ತಪಸ್ಸಂಯಮಾದಿಗಳನ್ನು ಪಾಲಿಸುತ್ತಿರಬೇಕೆಂದು ತಾತ್ಪರ್ಯವು

ಹೀಗೆ ಮೋಕ್ಷ-ಮೋಕ್ಷಫಲಾದಿಪ್ರತಿಪಾದಕ-ದ್ವಿತೀಯಮಹಾಧಿಕಾರದ ಮಧ್ಯದಲ್ಲಿ ಪರಮೋಪಶಮಭಾವದ ವ್ಯಾಖ್ಯಾನದ ಮುಖ್ಯತೆಯಿಂದ ಹದಿನಾಲ್ಕು ಸೂತ್ರಗಳು ಹೇಳ ಲ್ಪಟ್ಟುವು.

ಮುಂದೆ ನಿಶ್ಚಯನಯದಿಂದ ಪುಣ್ಯಪಾಪಗಳ ಸಮಾನತೆಯನ್ನು ನಿರೂಪಿಸುವ ಮುಖ್ಯತೆಯಿಂದ ಹದಿನಾಲ್ಕು ಸೂತ್ರಗಳನ್ನು ಹೇಳುತ್ತಾರೆ:—

**ಬಂಧಹಂ ಮೊಕ್ಖಹಂ ಹೇಉ ಣಿಉ, ಜೋ ಣವಿ ಜಾಣಇ ಕೋಇ ।**
**ಸೋ ಪರ ಮೋಹಿಂ ಕರಇ ಜಿಯ, ಪುಣ್ಣು ವಿ ಪಾಉ ವಿ ದೋಇ ॥೫೩॥**

"ಬಂಧಸ್ಯ ಮೋಕ್ಷಸ್ಯ ಹೇತುಃ ನಿಜಃ ಯಃ ನೈವ ಜಾನಾತಿ ಕಶ್ಚಿತ್ ।
ಸ ಪರಂ ಮೋಹೇನ ಕರೋತಿ ಜೀವ ಪುಣ್ಯಮಪಿ ಪಾಪಮಪಿ ದ್ವೇ ಅಪಿ ॥ ೫೩ ॥"

**ಅನ್ವಯಾರ್ಥ:**— **ಜಿಯ**— ಜೀವನೇ! **ಜೋ ಕೋಇ**— ಆವನೋರ್ವ ಜೀವನು **ಬಂಧಹಂ ಮೊಕ್ಖಹಂ ಹೇಉ**– ಬಂಧದ ಹಾಗೂ ಮೋಕ್ಷದ ಕಾರಣವು **ಣಿಉ**— ತನ್ನ ವಿಭಾವ ಮತ್ತು ಸ್ವಭಾವರೂಪವಾದ ಪರಿಣಾಮವೆಂದು **ಣವಿ ಜಾಣಇ**— ತಿಳಿಯುವುದೇ ಇಲ್ಲವೋ **ಸೋ ಪರ**— ಆತನೇ **ಮೋಹಿಂ**— ಮೋಹದಿಂದ **ಪುಣ್ಣು ವಿ ಪಾಉ ವಿ**— ಪುಣ್ಯ ಮತ್ತು ಪಾಪ **ದೋವಿ**— ಇವೆರಡನ್ನೂ **ಕರಇ**— ಮಾಡುತ್ತಾನೆ.

**ಭಾವಾರ್ಥ** — ನಿಜಶುದ್ಧಾತ್ಮತತ್ತ್ವಶ್ರದ್ಧಾನವಿಪರೀತವಾದ ಮಿಥ್ಯಾದರ್ಶನ, ನಿಜಶುದ್ಧಾತ್ಮಜ್ಞಾನವಿಪರೀತವಾದ ಮಿಥ್ಯಾಜ್ಞಾನ ಹಾಗೂ ನಿಜಶುದ್ಧಾತ್ಮಾನುಚರಣವಿಪರೀತವಾದ ಮಿಥ್ಯಾಚಾರಿತ್ರ ಇವು ಮೂರು ಬಂಧಕಾರಣಗಳೆಂದೂ ಇವುಗಳಿಗೆ ವಿಪರೀತವಾದ ಭೇದಾಭೇದರತ್ನತ್ರಯವು ಮೋಕ್ಷಕಾರಣವೆಂದೂ ತಿಳಿಯದಿರುವ ಅಜ್ಞಾನಿ ಜೀವನು ಮೋಹವಶದಿಂದ ಪುಣ್ಯಪಾಪಗಳನ್ನು ಮಾಡುತ್ತಾನೆ ಅರ್ಥಾತ್ ನಿಶ್ಚಯನಯದಿಂದ ಪುಣ್ಯಪಾಪಗಳೆರಡೂ ಹೇಯಗಳಾಗಿದ್ದರೂ ಮೋಹವಶದಿಂದ ಅವುಗಳನ್ನು ಮಾಡುತ್ತಾನೆಂದು ಭಾವವು

**ದಂಸಣಣಾಣಚರಿತ್ತಮಉ, ಜೋ ಣವಿ ಅಪ್ಪು ಮುಣೇಇ ।**
**ಮೊಕ್ಖಹಂ ಕಾರಣು ಭಣಿವಿ ಜಿಯ, ಸೋ ಪರ ತಾಇಂ ಕರೇಇ ॥ ೫೪ ॥**

"ದರ್ಶನಜ್ಞಾನಚಾರಿತ್ರಮಯಂ ಯಃ ನೈವ ಆತ್ಮಾನಂ ಮನುತೇ ।
ಮೋಕ್ಷಸ್ಯ ಕಾರಣಂ ಭಣಿತ್ವಾ ಜೀವ ಸ ಪರಂ ತೇ ಕರೋತಿ ॥ ೫೪ ॥"

**ಅನ್ವಯಾರ್ಥ**— **ಜಿಯ**— ಜೀವನೇ! **ಜೋ**— ಯಾವನು **ದಂಸಣಣಾಣಚರಿತ್ತಮಉ**— ಸಮ್ಯಗ್ದರ್ಶನಜ್ಞಾನಚಾರಿತ್ರಮಯನಾದ **ಅಪ್ಪು**— ಆತ್ಮನನ್ನು **ಮೊಕ್ಖಹಂ ಕಾರಣು ಭಣಿವಿ**— ಮೋಕ್ಷಕ್ಕೆ ಕಾರಣನೆಂದು (ತಿಳಿದು) **ಣವಿ ಮುಣೇಇ**— ತಿಳಿಯುವುದಿಲ್ಲವೋ **ಸೋ ಪರ**— ಅವನೇ **ತಾಇಂ ಕರೇಇ**— ಅವೆರಡನ್ನು ಅರ್ಥಾತ್ ಪುಣ್ಯಪಾಪಗಳನ್ನು ಮಾಡುತ್ತಾನೆ

**ಭಾವಾರ್ಥ:**— ***"ಮೊಕ್ಖಸ್ಸ ಕಾರಣಂ ತತ್ತಿಯಮಇಓ ಣಿಓ ಅಪ್ಪಾ"** ಎಂಬ ಆಗಮೋಕ್ತಿಯಂತೆ ಯಾವ ಜೀವನು ನಿಶ್ಚಯರತ್ನತ್ರಯಮಯ(ಪರಿಣತ)ನಾದ ಆತ್ಮನೇ

---

***"ಸಮ್ಮದ್ದಂಸಣಣಾಣಂ, ಚರಣಂ ಮೊಕ್ಖಸ್ಸ ಕಾರಣಂ ಜಾಣೇ**
**ವವಹಾರಾ ಣಿಚ್ಛಯದೋ, ತತ್ತಿಯಮಇಓ ಣಿಓ ಅಪ್ಪಾ ॥ ೩೯ ॥"**
**ದ್ರವ್ಯಸಂಗ್ರಹ.**

ಮೋಕ್ಷಕ್ಕೆ ಕಾರಣನಾಗಿರುತ್ತಾನೆಂದು ತಿಳಿಯುವುದಿಲ್ಲವೋ ಆತನು ಪುಣ್ಯಪಾಪಗಳನ್ನು ಮಾಡುತ್ತಾನೆ ಅರ್ಥಾತ್ ಪುಣ್ಯವು ಉಪಾದೇಯವಾಗಿರುತ್ತದೆಂದೂ ಪಾಪವು ಹೇಯ ವಾಗಿರುತ್ತದೆಂದೂ ತಿಳಿಯುತ್ತಾನೆ. ರತ್ನತ್ರಯರೂಪದಿಂದ ಪರಿಣತನಾದ **ಆತ್ಮನೇ** ಮೋಕ್ಷಕ್ಕೆ ಕಾರಣ(ಮಾರ್ಗ)ನೆಂದೂ ತಿಳಿಯುವ ಸಮ್ಯಗ್ದೃಷ್ಟಿ-ಜೀವನು **ಯದ್ಯಪಿ** ಸಂಸಾರಸ್ಥಿತಿಯ ವಿಚ್ಛಿತ್ತಿಗೆ ಕಾರಣವೂ ಸಮ್ಯಕ್ತ್ವಾದಿಗುಣಗಳಿಂದ ಮುಕ್ತಿಗೆ ಪರಂ ಪರಾಕಾರಣವೂ ಆದ ತೀರ್ಥಂಕರನಾಮಪ್ರಕೃತಿ ಮೊದಲಾದ ಶುಭ(ಪುಣ್ಯ)ಪ್ರಕೃತಿಗಳ ಬಂಧವನ್ನು ಅನಿಚ್ಛಾವೃತ್ತಿಯಿಂದ ಮಾಡಿಕೊಳ್ಳುವನಾದರೂ ಅದನ್ನು ಉಪಾದೇಯ ವನ್ನಾಗಿ ತಿಳಿಯುವುದಿಲ್ಲ ಸರ್ವಕರ್ಮಪ್ರಕೃತಿಗಳನ್ನೂ ತ್ಯಾಜ್ಯಗಳನ್ನಾಗಿಯೇ ತಿಳಿಯುತ್ತಾನೆಂದು ಭಾವವು

**ಜೋ ಣವಿ ಮಣ್ಣಇ ಜೀಉ ಸಮು, ಪುಣ್ಣು ವಿ ಪಾಉ ವಿ ದೋಇ ।**
**ಸೋ ಚಿರು ದುಕ್ಖು ಸಹಂತು ಜಿಯ, ಮೋಹಿಂ ಹಿಂಡಇ ಲೋಇ ॥ ೫೫ ॥**

"ಯಃ ನೈವ ಮನ್ಯತೇ ಜೀವಃ ಸಮಾನೇ ಪುಣ್ಯಮಪಿ ಪಾಪಮಪಿ ದ್ವೇ ॥
ಸ ಚಿರಂ ದುಃಖಂ ಸಹಮಾನಃ ಜೀವ ಮೋಹೇನ ಹಿಂಡತೇ ಲೋಕೇ ॥ ೫೫ ॥

**ಅನ್ವಯಾರ್ಥ:**— **ಜಿಯ**— ಎಲೈ ಜೀವನೇ! **ಜೋ**— ಯಾವನು **ಪುಣ್ಣು ವಿ ಪಾಉ ವಿ ದೋಇ**— ಪುಣ್ಯಪಾಪಗಳೆರಡನ್ನೂ **ಸಮು**— ಸಮಾನವಾಗಿ (ಅರ್ಥಾತ್ ತ್ಯಾಜ್ಯಗಳನ್ನಾಗಿ) **ಣವಿ ಮಣ್ಣಇ**— ತಿಳಿಯುವುದಿಲ್ಲವೋ **ಸೋ**- ಅವನು **ಮೋಹಿಂ**— ಮೋಹದಿಂದ (ಮೋಹಿತನಾಗಿ) **ಚಿರು ದುಕ್ಖು ಸಹಂತು**— ಬಹುಕಾಲ ದುಃಖವನ್ನು ಸಹಿಸುವವನಾಗಿ **ಹಿಂಡಇ ಲೋಇ**— ಲೋಕ (ಸಂಸಾರ)ದಲ್ಲಿ ಭ್ರಮಿಸುತ್ತಾನೆ.

**ಭಾವಾರ್ಥ:**— ಯದ್ಯಪಿ ಅಸದ್ಭೂತ ವ್ಯವಹಾರನಯದಿಂದ ದ್ರವ್ಯಪುಣ್ಯ ದ್ರವ್ಯ ಪಾಪಗಳೆರಡು ಪರಸ್ಪರ ಭಿನ್ನಗಳಾಗಿವೆ ಮತ್ತು ಅಶುದ್ಧನಿಶ್ಚಯನಯದಿಂದ ಭಾವಪುಣ್ಯ ಭಾವಪಾಪಗಳೂ ಅನ್ಯೋನ್ಯ ಭಿನ್ನಗಳಾಗಿವೆ. ಆದರೂ ಶುದ್ಧನಿಶ್ಚಯನಯದಿಂದ ಪುಣ್ಯಪಾಪರಹಿತಶುದ್ಧಾತ್ಮನಿಂದ ಈ ಪುಣ್ಯಪಾಪಗಳೆರಡೂ ಅತ್ಯಂತಭಿನ್ನಗಳಾಗಿವೆ. ಈ ಅಪೇಕ್ಷೆಯಿಂದ ಸುವರ್ಣಶೃಂಖಲೆ (ಚಿನ್ನದ ಸಂಕೋಲೆ. ಬೇಡಿ)ಯೂ ಕಬ್ಬಿಣದ ಸಂಕೋಲೆಯೂ ಬಂಧಕಾರಣದ ಅಪೇಕ್ಷೆಯಿಂದ ಸಮಾನವಾಗಿರುವಂತೆ ಪುಣ್ಯಪಾಪ ಗಳೆರಡೂ ಬಂಧಕ್ಕೆ ಕಾರಣಗಳಾಗಿರುವುದರಿಂದ ಸಮಾನಗಳಾಗಿರುತ್ತವೆ ಹೀಗೆ ನಯ ವಿಭಾಗದಿಂದ ಪುಣ್ಯಪಾಪಗಳೆರಡನ್ನೂ ಸಮಾನವಾಗಿ ಯಾವಾತನು ತಿಳಿಯುವುದಿಲ್ಲವೋ ಆತನು ನಿರ್ಮೋಹಶುದ್ಧಾತ್ಮನಿಂದ ವಿಪರೀತವಾದ ಮೋಹದಿಂದ ಮೋಹಿತನಾಗಿ ಸಂಸಾರದಲ್ಲಿ ಚಿರಕಾಲ ಭ್ರಮಿಸುತ್ತಾನೆ. ಹೀಗೆ ಪುಣ್ಯಪಾಪಗಳೆರಡೂ ಸಮಾನ ವಾಗಿರುತ್ತವೆಂದಮೇಲೆ ಪುಣ್ಯಕಾರ್ಯಗಳನ್ನು ಮಾಡದ ಜನರನ್ನೇಕೆ ದೂಷಿಸಬೇಕು? ಎಂಬ ಪ್ರಶ್ನೆಗೆ ಉತ್ತರವೇನಂದರೆ:— ಶುದ್ಧಾತ್ಮಾನುಭೂತಿಲಕ್ಷಣವುಳ್ಳ ವೀತರಾಗನಿರ್ವಿ ಕಲ್ಪಸಮಾಧಿಯಲ್ಲಿ ಮಗ್ನರಾಗಿರುವ ಜೀವರು ಪುಣ್ಯಕಾರ್ಯಗಳನ್ನೂ ಬಿಡುತ್ತಾರೆ. ಅವು

**ಉಚಿತ**ವೇ ಆಗಿದೆ. ಆದರೆ ಅಂತಹ ಅವಸ್ಥೆಯನ್ನು ಪಡೆಯದಿರುವವರು ಗೃಹಸ್ಥಾವಸ್ಥೆ **ಯ**ಲ್ಲಿ ದಾನಪೂಜಾದಿಗಳನ್ನು ಮಾಡದಿರುವುದೂ ಮುನಿಅವಸ್ಥೆಯಲ್ಲಿ ಷಡಾವಶ್ಯಕಾದಿ **ಗ**ಳನ್ನು ಮಾಡದಿರುವುದೂ ದೂಷಣವೇ(ದೋಷವೇ) ಆಗಿರುತ್ತದೆ.

**ವರ ಜಿಯ ಪಾವಇಂ ಸುಂದರಇಂ, ಣಾಣಿಯ ತಾಇಂ ಭಣಂತಿ ।**
**ಜೀವಹಂ ದುಕ್ಖಇಂ ಜಣಿವಿ ಲಹು, ಸಿವಮಇಂ ಜಾಇಂ ಕುಣಂತಿ ॥೫೬॥**

"ವರಂ ಜೀವ ಪಾಪಾನಿ ಸುಂದರಾಣಿ ಜ್ಞಾನಿನಃ ತಾನಿ ಭಣಂತಿ ।
ಜೀವಾನಾಂ ದುಃಖಾನಿ ಜನಿತ್ವಾ ಲಘು ಶಿವಮತಿಂ ಯಾನಿ ಕುರ್ವಂತಿ ॥ ೫೬ ॥"

**ಅನ್ವಯಾರ್ಥ:—ಜಿಯ**—ಎಲೈ ಜೀವನೇ! **ಜಾಇಂ**—ಯಾವ ಪಾಪಗಳು **ಜೀವಹಂ**—ಜೀವರುಗಳಿಗೆ **ದುಕ್ಖಇಂ ಜಣಿವಿ**—ದುಃಖಗಳನ್ನುಂಟುಮಾಡಿ **ಲಹು**—ಬೇಗನೆ **ಸಿವಮಇ**—ಆತ್ಮಕಲ್ಯಾಣದ ಬುದ್ಧಿಯನ್ನು ಅಥವಾ ಮೋಕ್ಷೋಪಾಯದಲ್ಲಿ ಪ್ರವರ್ತಿಸುವ ಬುದ್ಧಿಯನ್ನು **ಕುಣಂತಿ**—ಉಂಟುಮಾಡುತ್ತವೋ **ತಾಇಂ ಪಾವಇಂ**—ಆ ಪಾಪಗಳು **ವರ ಸುಂದರಇಂ**—ಬಹು ಸುಂದರ ಅರ್ಥಾತ್ ಬಹು ಉತ್ತಮವಾದುವುಗಳೆಂದು **ಣಾಣಿಯ ಭಣಂತಿ**—ತತ್ತ್ವಜ್ಞಾನಿಗಳು ಹೇಳುತ್ತಾರೆ.

**ಭಾವಾರ್ಥ:**—ಕೆಲವು ಜೀವರುಗಳಿಗೆ ಪೂರ್ವಾರ್ಜಿತಪಾಪಕರ್ಮೋದಯದಿಂದ ದುಃಖವುಂಟಾದಾಗ ಅವರ ಬುದ್ಧಿಯು ಆತ್ಮಕಲ್ಯಾಣದ ಕಡೆಗೆ ಹರಿಯುತ್ತದೆ. ಅವರು ತಮಗುಂಟಾದ ಈ ಅಸಹ್ಯದುಃಖವು ಪಾಪಕರ್ಮೋದಯದ ಕಾರಣದಿಂದುಂಟಾದುದೆಂದು ತಿಳಿದು ಧರ್ಮಕಾರ್ಯದಲ್ಲಿ ಪ್ರವರ್ತಿಸುತ್ತಾರೆ. ಹೀಗೆಯೇ ನರಕದಲ್ಲಿ ದುಃಖಪಡುತ್ತಿರುವ ಕೆಲವು ಜೀವರುಗಳಿಗೆ ಸಮ್ಯಕ್ತ್ವವುಂಟಾಗುವುದುಂಟು. ನಾರಕಿಯರಿಗೆ ಸಮ್ಯಕ್ತ್ವವುಂಟಾಗಲು ಮೂರು ಕಾರಣಗಳಿರುತ್ತವೆ. ಮೂರನೆಯ ನರಕದ ವರೆಗೆ ದೇವತೆಗಳು ಹೋಗಿ ನಾರಕಿಯರಿಗೆ ಉಪದೇಶಿಸುತ್ತಾರೆ. ಅವರಿಗೆ ಪುಣ್ಯಪಾಪಗಳ ಫಲವನ್ನು ತಿಳಿಸುತ್ತಾರೆ ಈ ಕಾರಣದಿಂದ ಯಾವನಾದರೊಬ್ಬ ನಾರಕೀಜೀವನಿಗೆ ಎಂದಾದರೊಮ್ಮೆ ಸಮ್ಯಕ್ತ್ವವುಂಟಾಗಬಹುದು. ಎರಡನೆಯ ಕಾರಣವೆಂದರೆ ನಾರಕಿಯರಿಗುಂಟಾಗುವ ಜಾತಿಸ್ಮರಣೆ. ಇದರಿಂದಲೂ ತಾವು ಅನುಭವಿಸುತ್ತಿರುವ ಈ ಘೋರದುಃಖವು ಪೂರ್ವಕೃತಹಿಂಸಾದಿಪಾಪಗಳಿಂದುಂಟಾದುದೆಂದು ತಿಳಿದು ಧರ್ಮಬುದ್ಧಿಯಿಂದ ಕೆಲವರಲ್ಲಿ ಸಮ್ಯಕ್ತ್ವವುಂಟಾಗಬಹುದು. ಇನ್ನು ಮೂರನೆಯದಾಗಿ ಅಸಹ್ಯವೇದನೆಯಿಂದುಂಟಾದ ಪಾಪಭೀತಿಯಿಂದಲೂ ಎಂದಾದರೊಮ್ಮೆ ಸಮ್ಯಕ್ತ್ವವುಂಟಾಗಲೂ ಬಹುದು. ಹೀಗೆ ಮೂರನೆಯ ನರಕದ ವರೆಗೆ ಧರ್ಮಶ್ರದ್ಧೆ(ಸಮ್ಯಕ್ತ್ವ)ಯುಂಟಾಗಲು ಈ ಮೂರು ಕಾರಣಗಳಿರುತ್ತವೆ. ಆದರೆ ಅದರಿಂದ ಕೆಳಗಿನ ನರಕಗಳಲ್ಲಿ ದೇವತೆಗಳ ಗಮನವಿಲ್ಲದಿರುವುದರಿಂದ ಧರ್ಮಶ್ರವಣದ ಹೊರತು ಉಳಿದೆರಡು ಕಾರಣ (ಜಾತಿಸ್ಮರಣೆ ಮತ್ತು ವೇದನಾಜನಿತಪಾಪಭೀತಿ)ಗಳಿಂದ ಸಮ್ಯಕ್ತ್ವವುಂಟಾಗುವುದುಂಟು. ಆದಕಾರಣ ಯಾವ ಪಾಪವು ಜೀವನಿಗೆ ದುಃಖವನ್ನುಂಟುಮಾಡಿ ಆತ್ಮ

ನನ್ನು ಮೋಕ್ಷಮಾರ್ಗದಲ್ಲಿ ಪ್ರವರ್ತಿಸುವಂತೆ ಮಾಡುವುದೋ ಆ ಪಾಪವೂ ಶ್ರೇಯಸ್ಕರವಾದುದೆಂದು ಭಾವವು ಇದರಿಂದ ಸುಖವನ್ನುಂಟುಮಾಡಿ ಜೀವನನ್ನು ಉನ್ಮಾರ್ಗ (ಮಿಥ್ಯಾಮಾರ್ಗ)ದಲ್ಲಿ ಪ್ರವರ್ತಿಸುವಂತೆ ಮಾಡುವ ಪುಣ್ಯವೂ ಶ್ರೇಯಸ್ಕರವಲ್ಲವೆಂಬುದು ಧ್ವನಿತವಾಗುತ್ತದೆ. ಲೋಕದಲ್ಲಿ ಬಹುಶಃ **"ಆರ್ತಾ ನರಾ ಧರ್ಮಪರಾ ಭವಂತಿ"** ಎನ್ನುವಂತೆ ದುಃಖಪೀಡಿತರಾದ ಮನುಷ್ಯರೇ ಧರ್ಮಾಸಕ್ತರಾಗುತ್ತಾರೆ. ಹೀಗೆ ಸಂಸಾರದಲ್ಲಿ ದುಃಖವಿರುವುದರಿಂದಲೇ ಜನರಲ್ಲಿ ದೈವಭಕ್ತಿ(ದೇವರಲ್ಲಿ ಶ್ರದ್ಧೆ) ಯುಂಟಾಗುತ್ತದೆಂಬುವನ್ನು ಶ್ರೀಪೂಜ್ಯಪಾದಾಚಾರ್ಯರು **"ಶಾಂತ್ಯಷ್ಟಕ"**ದಲ್ಲಿ ದೃಷ್ಟಾಂತಪೂರ್ವಕ ವರ್ಣಿಸಿದ್ದಾರೆ —

**ನ ಸ್ನೇಹಾಚ್ಛರಣಂ ಪ್ರಯಾಂತಿ ಭಗವನ್ ಪಾದದ್ವಯಂ ತೇ ಪ್ರಜಾಃ ।**
**ಹೇತುಸ್ತತ್ರ ವಿಚಿತ್ರದುಃಖನಿಚಯಃ ಸಂಸಾರಘೋರಾರ್ಣವಃ ॥**
**ಅತ್ಯಂತಸ್ಫುರದುಗ್ರರಶ್ಮಿನಿಕರವ್ಯಾಕೀರ್ಣಭೂಮಂಡಲೋ ।**
**ಗ್ರೈಷ್ಮಃ ಕಾರಯತೀಂದುಪಾದಸಲಿಲಚ್ಛಾಯಾನುರಾಗಂ ರವಿಃ ॥ ೧ ॥**

**ಅರ್ಥ**—ಭಗವಂತನೇ! ಪ್ರಜೆಗಳು(ಲೋಕದಜನರು) ನಿನ್ನ ಪಾದಯುಗಲವನ್ನು ಪ್ರೀತಿವಶದಿಂದ ಶರಣವನ್ನಾಗಿ ಹೊಂದುವುದಿಲ್ಲ. ಹಾಗೆ ಶರಣವನ್ನು ಹೊಂದುವುದರಲ್ಲಿ ನಾನಾಪ್ರಕಾರವಾದ ದುಃಖಸಮೂಹವುಳ್ಳುದಾದ ಸಂಸಾರವೆಂಬ ಭಯಂಕರವಾದ ಸಮುದ್ರವು ಕಾರಣವಾಗಿದೆ. ಅಧಿಕವಾಗಿ ಪ್ರಕಾಶಿಸುವ ತೀವ್ರವಾದ ಕಿರಣಗಳ ಸಮೂಹದಿಂದ ಭೂಮಂಡಲವನ್ನು ವ್ಯಾಪಿಸಿರುವವನೂ ಬೇಸಿಗೆಯಲ್ಲಿ ಉಂಟಾದವನೂ ಆದ ಸೂರ್ಯನು ಚಂದ್ರನಕಿರಣಗಳಲ್ಲಿಯೂ ನೀರಿನಲ್ಲಿಯೂ ನೆರಳಿನಲ್ಲಿಯೂ ಪ್ರೀತಿಯನ್ನು ಮಾಡಲು ಕಾರಣನಾಗುತ್ತಾನೆ ಅರ್ಥಾತ್ ಬೇಸಿಗೆಯ ಸೂರ್ಯನು ಚಂದ್ರಕಿರಣಾದಿಗಳಲ್ಲಿ ಪ್ರೀತಿಯುಂಟಾಗಲು ಕಾರಣನಾಗಿರುವಂತೆ ದುಃಖಾಧಿಕ್ಯವುಳ್ಳ ಸಂಸಾರವು ಭಗವಂತನ ಪಾದಕಮಲಗಳನ್ನು ಶರಣವನ್ನಾಗಿ ಹೊಂದಲು(ಅಥವಾ ಭಗವಂತನಲ್ಲಿ ಭಕ್ತಿಯುಂಟಾಗಲು) ಕಾರಣವಾಗಿರುತ್ತದೆಂದು ಭಾವವು. ಈ ಪ್ರಕಾರವಾಗಿ ಯಾವ ಪಾಪದಿಂದುಂಟಾದ ದುಃಖವು ಜೀವನ ಮೋಕ್ಷಮಾರ್ಗಪ್ರವರ್ತನೆಗೆ ಕಾರಣವಾಗುತ್ತದೋ ಆ ಪಾಪವು ಉತ್ತಮವಾಗಿರುತ್ತದೆಂದು ಶ್ರೀಯೋಗೀಂದುದೇವರ **ಅಭಿಪ್ರಾಯ**ವಾಗಿದೆ.

**ಮಂ ಪುಣು ಪುಣ್ಣಇಂ ಭಲ್ಲಾಇಂ, ಣಾಣಿಯ ತಾಇಂ ಭಣಂತಿ ।**
**ಜೀವಹಂ ರಜ್ಜಇಂ ದೇವಿ ಲಹು, ದುಕ್ಖಇಂ ಜಾಇಂ ಜಣಂತಿ ॥ ೫೭ ॥**

"ಮಾ ಪುನಃ ಪುಣ್ಯಾನಿ ಭದ್ರಾಣಿ ಜ್ಞಾನಿನಃ ತಾನಿ ಭಣಂತಿ ।
ಜೀವಸ್ಯ ರಾಜ್ಯಾನಿ ದತ್ವಾ ಲಘು ದುಃಖಾನಿ ಯಾನಿ ಜನಯಂತಿ ॥ ೫೭ ॥"

**ಅನ್ವಯಾರ್ಥ**:—**ಪುಣು**—ಮತ್ತು **ಜಾಇಂ**—ಯಾವ ಪುಣ್ಯಗಳು **ಜೀವಹಂ**—ಜೀವನಿಗೆ **ರಜ್ಜಇಂ ದೇವಿ**—ರಾಜ್ಯಗಳನ್ನು ಕೊಟ್ಟು **ಲಹು**—ಶೀಘ್ರವಾಗಿ **ದುಕ್ಖಇಂ**

**ಜಣಂತಿ**— ದುಃಖಗಳನ್ನು ಉಂಟುಮಾಡುತ್ತವೋ **ತಾಇಂ ಪುಣ್ಣಾಇಂ**— ಆ ಪುಣ್ಯಗಳನ್ನು **ಣಾಣಿಯ**— ಜ್ಞಾನಿಗಳು **ಮಂ ಭಲ್ಲಾಇಂ ಭಣಂತಿ**— ಒಳ್ಳೆಯವು (ಶ್ರೇಯಸ್ಕರವಾದುವು)ಗಳನ್ನಾಗಿ ಹೇಳುವುದಿಲ್ಲ ಅರ್ಥಾತ್ ತಿಳಿಯುವುದಿಲ್ಲ.

**ಭಾವಾರ್ಥ:**— ದೃಷ್ಟಶ್ರುತಾನುಭೂತ (ತಾನು ನೋಡಿದ ಕೇಳಿದ ಮತ್ತು ಅನುಭವಿಸಿದ) ಭೋಗಾಕಾಂಕ್ಷಾರೂಪವಾದ ನಿದಾನಬಂಧಪೂರ್ವಕವಾಗಿ ಮಾಡಿದ ದಾನ ತಪಾದಿಗಳಿಂದ ಸಂಪಾದಿಸಲ್ಪಟ್ಟ ಪುಣ್ಯ (ಪುಣ್ಯಕರ್ಮ)ವು ಹೇಯವಾಗಿರುತ್ತದೆ ಏಕೆಂದರೆ ನಿದಾನಬಂಧಪೂರ್ವಕವಾಗಿ ಸಂಪಾದಿಸಿದ ಪುಣ್ಯದಿಂದ ಜೀವನು ಭವಾಂತರದಲ್ಲಿ ರಾಜ್ಯಾದಿಸಂಪತ್ತುಗಳನ್ನು ಪಡೆಯುತ್ತಾನೆ. ಆದರೆ ಆ ಸುಖೋಪಭೋಗಗಳನ್ನು ಬಿಡಲಸಮರ್ಥನಾಗಿ ರಾವಣಮೊದಲಾದವರಂತೆ ನರಕಾದಿದುಃಖಗಳನ್ನು ಪಡೆಯುತ್ತಾನೆ ಆದಕಾರಣ ಅಂತಹಪುಣ್ಯವು ಹೇಯವಾಗಿದೆ. ನಿದಾನಬಂಧರಹಿತವಾದ ಪುಣ್ಯವುಳ್ಳ ಜೀವರು ಭವಾಂತರದಲ್ಲಿ ರಾಜ್ಯಾದಿವಿಭೂತಿಗಳನ್ನು ಹೊಂದಿದರೂ ಅವುಗಳನ್ನು ತೊರೆದು ಜಿನದೀಕ್ಷೆಯನ್ನು ಸ್ವೀಕರಿಸಿ ಬಲದೇವ ಮೊದಲಾದವರಂತೆ ಊರ್ಧ್ವಗತಿಗಾಮಿಗಳಾಗುತ್ತಾರೆ ಅರ್ಥಾತ್ ಸ್ವರ್ಗ ಮತ್ತು ಮೋಕ್ಷವನ್ನು ಪಡೆಯುತ್ತಾರೆ. ಇದನ್ನು ಗ್ರಂಥಾಂತರದಲ್ಲಿ ಹೀಗೆ ಹೇಳಿದ್ದಾರೆ:—**"ಊರ್ಧ್ವಗಾ ಬಲದೇವಾಃ ಸ್ಯುರ್ನಿರ್ನಿದಾನಾ ಭವಾಂತರೇ"** ಅರ್ಥಾತ್ ನಿದಾನಬಂಧರಹಿತರಾದ ಮಹಾಮುನಿಗಳು ತಪಶ್ಚರಣೆಯನ್ನು ಮಾಡಿ ಸ್ವರ್ಗವನ್ನು ಪಡೆಯುತ್ತಾರೆ ಆ ಮೇಲೆ ಅಲ್ಲಿಂದ ಬಂದು ಬಲಭದ್ರರಾಗಿ ಜನಿಸುತ್ತಾರೆ ಮತ್ತು ದೇವತೆಗಳಿಗಿಂತಲೂ ಅಧಿಕವಾದ ಸುಖಭೋಗಗಳನ್ನೂ ತೃಣದಂತೆ ತ್ಯಜಿಸಿ ಮುನಿವ್ರತವನ್ನು ಸ್ವೀಕರಿಸಿದವರಾಗಿ ನಿಶ್ಚಯರತ್ನತ್ರಯಾರಾಧನೆಯಿಂದ ಕೇವಲ ಜ್ಞಾನವನ್ನು ಪಡೆದು ಅನಂತರ ಮೋಕ್ಷವನ್ನು ಪಡೆಯುತ್ತಾರೆ ಅಥವಾ ಋದ್ಧಿಧಾರಿ-ದೇವತೆಗಳಾಗಿ ಜನಿಸಿ ಪುನಃ ಮನುಷ್ಯಭವವನ್ನು ತಾಳಿ ಮೋಕ್ಷವನ್ನು ಪಡೆಯುತ್ತಾರೆಂದು ಭಾವವು.

**ವರಣಿಯದಂಸಣ-ಅಹಿಮುಹಉ, ಮರಣು ವಿ ಜೀವ ಲಹೇಸಿ ।**
**ಮಾ ಣಿಯದಂಸಣ-ವಿಮ್ಮುಹಉ, ಪುಣ್ಣು ವಿ ಜೀವ ಕರೇಸಿ ॥ ೫೮ ॥**

"ವರಂ ನಿಜದರ್ಶನಾಭಿಮುಖಃ ಮರಣಮಪಿ ಜೀವ ಲಭಸ್ವ ।
ಮಾ ನಿಜದರ್ಶನವಿಮುಖಃ ಪುಣ್ಯಮಪಿ ಜೀವ ಕರಿಷ್ಯಸಿ ॥ ೫೮ ॥"

**ಅನ್ವಯಾರ್ಥ:**— **ಜೀವ**—ಜೀವನೇ! ನೀನು **ಣಿಯದಂಸಣ-ಅಹಿಮುಹಉ**— ತನ್ನ ಸಮ್ಯಗ್ದರ್ಶನಕ್ಕೆ ಅಭಿಮುಖನಾಗಿ **ಮರಣು ವಿ**— ಮರಣವನ್ನೂ **ಲಹೇಸಿ**— ಹೊಂದುವೆಯಾದರೂ(ಹೊಂದಿದರೂ)**ವರ**— ಉತ್ತಮವು ಆದರೆ, **ಜೀವ**— ಜೀವನೇ! **ಣಿಯದಂಸಣ-ವಿಮ್ಮುಹಉ**— ನಿಜಸಮ್ಯಗ್ದರ್ಶನದಿಂದ ವಿಮುಖನಾದವನಾಗಿ **ಪುಣ್ಣು ವಿ ಕರೇಸಿ**— ಪುಣ್ಯವನ್ನು ಮಾಡುವೆಯಾದರೂ ಅದು **ಮಾ ವರು**— ಉತ್ತಮವಲ್ಲ.

**ಭಾವಾರ್ಥ:**— ಎಲೈ ಜೀವನೇ! ನೀನು ನಿಜಪರಮಾತ್ಮಾನುಭೂತಿ-ರುಚಿರೂಪವಾದ ವೀತರಾಗನಿಶ್ಚಯಸಮ್ಯಗ್ದರ್ಶನಾಭಿಮುಖನಾಗಿದ್ದು ಒಂದುವೇಳೆ ಮರಣವನ್ನು ಪಡೆ

ದರೂ ಅದು ಉತ್ತಮವೇ ಅರ್ಥಾತ್ ದೋಷವಲ್ಲ. ಆದರೆ ಸಮ್ಯಕ್ತ್ವರಹಿತನಾಗಿದ್ದು ಮಿಥ್ಯಾತ್ವಾವಸ್ಥೆಯಲ್ಲಿ ಪುಣ್ಯವನ್ನು ಸಂಪಾದಿಸಿದರೂ ಅದು ಉತ್ತಮವಲ್ಲ. ಏಕೆಂದರೆ ಮಿಥ್ಯಾದೃಷ್ಟಿಯಾಗಿರುವ ಜೀವನು ಪುಣ್ಯಸಹಿತನಾಗಿದ್ದರೂ ಆತನು ಪಾಪಿಯೆಂದೇ(ಪಾಪಜೀವನೆಂದೇ) ಹೇಳಲ್ಪಡುತ್ತಾನೆ ಸಮ್ಯಕ್ತ್ವಸಹಿತನಾದ ಜೀವನು ಪೂರ್ವಾರ್ಜಿತಪಾಪಕರ್ಮೋದಯದಿಂದ ದಾರಿದ್ರ್ಯಾದಿದುಃಖಗಳನ್ನನುಭವಿಸುತ್ತಿದ್ದರೂ ವಸ್ತುತಃ ಆತನು ಪುಣ್ಯಾತ್ಮನೆಂದೇ ಹೇಳಲ್ಪಡುತ್ತಾನೆ. ಆದುದರಿಂದ ಸಮ್ಯಕ್ತ್ವಸಹಿತರಾದ ಜೀವರಿಗೆ ಮರಣವೂ(ಉತ್ತಮಗತಿಯನ್ನುಂಟುಮಾಡುವುದರಿಂದ) ಉತ್ತಮವಾಗಿದೆ ಸಮ್ಯಕ್ತ್ವರಹಿತರಾದ ಜೀವರು ನಿದಾನಬದ್ಧವಾದ ಪುಣ್ಯದಿಂದ ಭವಾಂತರದಲ್ಲಿ ಭೋಗಗಳನ್ನನುಭವಿಸಿ ಆಮೇಲೆ ನರಕಾದಿದುರ್ಗತಿಗಳನ್ನು ಪಡೆಯುವವರಾದುದರಿಂದ ಅವರ ಪುಣ್ಯವೂ ಶ್ರೇಯಸ್ಕರವಾಗಿರುವುದಿಲ್ಲ ಗ್ರಂಥಾಂತರದಲ್ಲಿಯೂ ಹೀಗೆ ಹೇಳಿದ್ದಾರೆ—**"ವರಂ ನರಕವಾಸೋಽಪಿ ಸಮ್ಯಕ್ತ್ವೇನ ಹಿ ಸಂಯುತಃ । ನ ತು ಸಮ್ಯಕ್ತ್ವಹೀನಸ್ಯ ನಿವಾಸೋ ದಿವಿ ರಾಜತೇ ॥"** ಅರ್ಥಾತ್ "ಸಮ್ಯಕ್ತ್ವಸಹಿತವಾದ ನರಕವಾಸವು ಉತ್ತಮವು ಆದರೆ ಸಮ್ಯಕ್ತ್ವರಹಿತನಾದವನ ಸ್ವರ್ಗನಿವಾಸವೂ ಶೋಭಿಸುವುದಿಲ್ಲ ಅರ್ಥಾತ್ ಉತ್ತಮವಲ್ಲ" ನಾರಕೀಜೀವನಿಗೆ ಯಾವುದಾದರೊಂದು ಕಾರಣದಿಂದ ಸಮ್ಯಕ್ತ್ವವುಂಟಾದುದಾದರೆ ಅಥವಾ ನರಕಗತಿ ಆಯುಃಕರ್ಮದ ಬಂಧವಾದನಂತರ ಸಮ್ಯಕ್ತ್ವವುಂಟಾದರೂ ಗತಿಚ್ಛೇದವಾಗದಾದುದರಿಂದ ಯಾವನಾದರೊಬ್ಬ ಜೀವನು ನರಕಗತಿಯಲ್ಲಿ ಜನಿಸಿದುದಾದರೆ ಆತನು ಆಯುಷ್ಯಾವಸಾನದಲ್ಲಿ ಊರ್ಧ್ವಗತಿ(ಉತ್ತಮಗತಿ)ಯನ್ನು ಪಡೆಯುವನು ಹಾಗೆಯೇ ಸಮ್ಯಕ್ತ್ವಬಾಹಿರನಾದ ಜೀವನು ಪುಣ್ಯೋದಯದಿಂದ ಸ್ವರ್ಗದಲ್ಲಿ ಜನ್ಮತಾಳಿದರೂ ಅಲ್ಲಿಂದ ಚ್ಯುತನಾಗಿ ನೀಚಗತಿಯನ್ನು ಪಡೆಯುವನು ಅತಏವ ಸಮ್ಯಕ್ತ್ವಯುಕ್ತನಾದ ಜೀವನೇ ಸರ್ವೋತ್ತಮನಾಗಿರುವನೆಂದು ಭಾವವು.

**ಜೇ ಣಿಯದಂಸಣಅಹಿಮುಹಾ, ಸೊಕ್ಖು ಅಣಂತು ಲಹಂತಿ ।**
**ತಿಂ ವಿಣು ಪುಣ್ಣು ಕರಂತಾ ವಿ, ದುಕ್ಖು ಅಣಂತು ಸಹಂತಿ ॥ ೫೯ ॥**

"ಯೇ ನಿಜದರ್ಶನಾಭಿಮುಖಾಃ ಸೌಖ್ಯಮನಂತಂ ಲಭಂತೇ ।
ತೇನ ವಿನಾ ಪುಣ್ಯಂ ಕುರ್ವಾಣಾ ಅಪಿ ದುಃಖಮನಂತಂ ಸಹಂತೇ ॥ ೫೯ ॥"

**ಅನ್ವಯಾರ್ಥ**—**ಜೇ**—ಯಾವ ಮಹಾಪುರುಷರು **ಣಿಯದಂಸಣಅಹಿಮುಹಾ**—ನಿಜದರ್ಶನಕ್ಕೆ (ಸಮ್ಯಗ್ದರ್ಶನಕ್ಕ) ಅಭಿಮುಖರಾದವರಾಗಿ **ಅಣಂತು ಸೊಕ್ಖು ಲಹಂತಿ**—ಅನಂತವಾದ ಸುಖವನ್ನು ಪಡಯುತ್ತಾರೋ **ತಿಂ ವಿಣು**—ಆ ಸಮ್ಯಗ್ದರ್ಶನದ ಹೊರತು ಅರ್ಥಾತ್ ಸಮ್ಯಗ್ದರ್ಶನರಹಿತರಾದ ಜೀವರು **ಪುಣ್ಣು ಕರಂತಾ ವಿ** ಪುಣ್ಯವನ್ನು ಮಾಡುವವರಾಗಿದ್ದರೂ **ದುಕ್ಖು ಅಣಂತು ಸಹಂತಿ**—ಅನಂತದುಃಖವನ್ನು ಸಹಿಸುತ್ತಾರೆ ಅರ್ಥಾತ್ ಅನಂತದುಃಖವನ್ನನುಭವಿಸುವವರಾಗಿ ಸಂಸಾರದಲ್ಲಿ ಭ್ರಮಿಸುತ್ತಾರೆ

**ಭಾವಾರ್ಥ** — ನಿಜಶುದ್ಧಾತ್ಮೋಪಲಬ್ಧಿರುಚಿರೂಪವಾದ ನಿಶ್ಚಯಸಮ್ಯಗ್ದರ್ಶನಕ್ಕೆ ಅಭಿಮುಖರಾದ ಸತ್ಪುರುಷರು ಇದೇ (ವರ್ತಮಾನ)ಭವದಲ್ಲಿ ಯುಧಿಷ್ಠಿರ ಭೀಮ ಅರ್ಜುನಾದಿಗಳಂತೆ ಅಕ್ಷಯಸುಖವನ್ನು ಪಡೆಯುತ್ತಾರೆ. ಹಾಗೂ ಕೆಲವರು ನಕುಲ ಸಹದೇವಮೊದಲಾದವರಂತೆ ಸ್ವರ್ಗಸುಖ (ಅಥವಾ ಅಹಮಿಂದ್ರಪದವಿ)ವನ್ನು ಪಡೆಯುತ್ತಾರೆ. ಆದರೆ ಸಮ್ಯಕ್ತ್ವರಹಿತರಾದ ಅರ್ಥಾತ್ ಮಿಥ್ಯಾದೃಷ್ಟಿಗಳಾದ ಜೀವರು ಪುಣ್ಯವನ್ನು ಸಂಪಾದಿಸುವವರಾಗಿದ್ದರೂ ಅವರು ದುಃಖಮಯವಾದ ಸಂಸಾರದಲ್ಲೇ ಭ್ರಮಿಸುತ್ತಿರುತ್ತಾರಲ್ಲದೆ ಮೋಕ್ಷವನ್ನು ಪಡೆಯಲಾರರೆಂದು ತಾತ್ಪರ್ಯವು

**ಪುಣ್ಣೇಣ ಹೋಇ ವಿಹವೋ, ವಿಹವೇಣ ಮಓ ಮಏಣ ಮಇಮೋಹೋ।**
**ಮಇಮೋಹೇಣ ಯ ಪಾವಂ, ತಾ ಪುಣ್ಣಂ ಅಮ್ಹ ಮಾ ಹೋಉ ॥೬೦॥**

"ಪುಣ್ಯೇನ ಭವತಿ ವಿಭವೋ ವಿಭವೇನ ಮದೋ ಮದೇನ ಮತಿಮೋಹಃ ।
ಮತಿಮೋಹೇನ ಚ ಪಾಪಂ ತಸ್ಮಾತ್ ಪುಣ್ಯಂ ಅಸ್ಮಾಕಂ ಮಾ ಭವತು ॥ ೬೦ ॥"

**ಅನ್ವಯಾರ್ಥ:**— **ಪುಣ್ಣೇಣ**— ಪುಣ್ಯದಿಂದ **ವಿಹವೋ ಹೋಇ**— ಸಂಪತ್ತಿ (ಧನಕನಕಾದಿವಿಭೂತಿ)ಯುಂಟಾಗುತ್ತದೆ **ವಿಹವೇಣ ಮಓ**— ಸಂಪತ್ತಿನಿಂದ ಮದವೂ **ಮಏಣ ಮಇಮೋಹೋ**— ಮದ (ಗರ್ವ, ಅಹಂಕಾರ)ದಿಂದ ಬುದ್ಧಿಭ್ರಮಣೆ (ಚಿತ್ತವಿಕಾರ)ಯೂ **ಮಇಮೋಹೇಣ ಯ ಪಾವಂ**— ಬುದ್ಧಿಭ್ರಮಣೆಯಿಂದ ಪಾಪವೂ ಉಂಟಾಗುತ್ತದೆ **ತಾ**— ಆದಕಾರಣ **ಅಮ್ಹ ಪುಣ್ಣಂ ಮಾ ಹೋಉ**— ನಮಗೆ ಇಂತಹ ಪುಣ್ಯವು ಉಂಟಾಗದಿರಲಿ

**ಭಾವಾರ್ಥ**— ಭೇದಾಭೇದ-ರತ್ನತ್ರಯಾರಾಧನಾವಿಮುಖರಾದ ಜೀವರು ಪೂರ್ವಭವದಲ್ಲಿ ದೃಷ್ಟಶ್ರುತಾನುಭೂತಭೋಗಾಕಾಂಕ್ಷಾರೂಪವಾದ ನಿದಾನಪರಿಣಾಮಯುಕ್ತರಾಗಿ ತಾವು ಸಂಪಾದಿಸಿದ ಪುಣ್ಯದ ಉದಯದಿಂದ ಈ ಭವದಲ್ಲಿ ಧನಕನಕಾದಿ ವಿಭವವುಳ್ಳವರಾಗುತ್ತಾರೆ. ಅಂತಹ ವಿಭವ(ಸಂಪತ್ತಿ)ದಿಂದ ಅವರಲ್ಲಿ ಜ್ಞಾನ ಪೂಜಾದಿಮದಗಳುಂಟಾಗುತ್ತವೆ ಹೀಗೆ ಮದ(ಅಭಿಮಾನ)ದಿಂದ ಕೂಡಿದ ಅವರು ಮತಿಭ್ರಷ್ಟರಾಗಿ ಪಾಪಕಾರ್ಯಗಳಲ್ಲಿ ಪ್ರವರ್ತಿಸುತ್ತಾರೆ ಹಾಗೂ ಆ ಪಾಪದಿಂದ ಜನ್ಮಜನ್ಮಾಂತರಗಳಲ್ಲಿ ಅನಂತದುಃಖಗಳನ್ನನುಭವಿಸುತ್ತಾರೆ. ಅತಏವ ಅಂತಹ ಪುಣ್ಯವು ಹೇಯವಾದುದೆಂದಭಿಪ್ರಾಯವು. ಭರತ ಸಗರ ರಾಘವ ಮತ್ತು ಪಾಂಡವಾದಿ ಪುಣ್ಯಪುರುಷರಂತೆ ಸಮ್ಯಕ್ತ್ವಾದಿಗುಣಗಳಿಂದ ಯುಕ್ತರಾಗಿರುವ ಜೀವರ ಪುಣ್ಯಬಂಧವು ಅಭಿಮಾನಾದಿವಿಕಲ್ಪಗಳನ್ನುಂಟುಮಾಡುವುದಿಲ್ಲ. ಪುಣ್ಯಪಾತ್ರರಾದ ಆ ಸಮ್ಯಗ್ದೃಷ್ಟಿಗಳು ಚಕ್ರವರ್ತಿ ಬಲಭದ್ರಾದಿಪದವಿಯ ಅತುಲಸಂಪತ್ತನ್ನು ಪಡೆದರೂ ನಿರಹಂಕಾರಿಗಳಾಗಿದ್ದು ಕೊನೆಗೆ ವಿಷಯಭೋಗಗಳನ್ನು ತೊರೆದು ಮೋಕ್ಷಸಾಧಕರಾಗುತ್ತಾರೆ.

**ದೇವಹಂ ಸತ್ಥಹಂ ಮುಣಿವರಹಂ, ಭತ್ತಿಏ ಪುಣ್ಣು ಹವೇಇ।**
**ಕಮ್ಮಕ್ಖಉ ಪುಣು ಹೋಇ ಣವಿ, ಅಜ್ಜಉ ಸಂತಿ ಭಣೇಇ ॥ ೬೧ ॥**

"ದೇವಾನಾಂ ಶಾಸ್ತ್ರಾಣಾಂ ಮುನಿವರಾಣಾಂ ಭಕ್ತ್ಯಾ ಪುಣ್ಯಂ ಭವತಿ ।
ಕರ್ಮಕ್ಷಯಃ ಪುನಃ ಭವತಿ ನೈವ ಆರ್ಯಾಃ ಶಾಂತಿಃ ಭಣತಿ ॥ ೬೧ ॥"

**ಅನ್ವಯಾರ್ಥ —ದೇವಹಂ ಸತ್ಥಹಂ ಮುಣಿವರಹಂ**— ವೀತರಾಗಪರಮ ದೇವರ, ದ್ವಾದಶಾಂಗಶಾಸ್ತ್ರಗಳ ಮತ್ತು ನಿರ್ಗ್ರಂಥಸಾಧು(ಮುನಿ)ಗಳ **ಭತ್ತಿಏ**— ಭಕ್ತಿ ಯಿಂದ **ಪುಣ್ಣು ಹವೇಇ**— ಪುಣ್ಯವುಂಟಾಗುತ್ತದೆ **ಪುಣು**— ಆದರೆ **ಕಮ್ಮಕ್ಖವು ಹೋಇ ಣವಿ**— ಕರ್ಮಕ್ಷಯವು ಆಗುವುದೇ ಇಲ್ಲ ಹೀಗೆಂದು **ಅಜ್ಜಉ ಸಂತಿ**- ಶಾಂತಿ ಯೆಂಬ ಹೆಸರುಳ್ಳ ಆರ್ಯರು ಅಥವಾ ಶಾಂತಪರಿಣಾಮಿಗಳಾದ ಸತ್ಪುರುಷರು **ಭಣೇಇ**— ಹೇಳುತ್ತಾರೆ

**ಭಾವಾರ್ಥ** —ದೇವಗುರುಶಾಸ್ತ್ರಗಳಲ್ಲಿ ಸಮ್ಯಕ್ತ್ವಪೂರ್ವಕವಾದ ಭಕ್ತಿಯನ್ನು ಮಾಡುವುದರಿಂದ ಮುಖ್ಯವಾಗಿ ಪುಣ್ಯವುಂಟಾಗುತ್ತದೆ, ಹಾಗೂ ಪರಂಪರೆಯಿಂದ ಮೋಕ್ಷ ವುಂಟಾಗುತ್ತದೆ ಸಮ್ಯಕ್ತ್ವರಹಿತರಾದ ಮಿಥ್ಯಾದೃಷ್ಟಿಗಳಲ್ಲಿ ಲೌಕಿಕ-ಬಾಹ್ಯಭಕ್ತಿಮಾತ್ರ ವಿರುತ್ತದಲ್ಲದೆ ಭಾವಭಕ್ತಿಯಿರುವುದಿಲ್ಲ ಅರ್ಥಾತ್ ಯಥಾರ್ಥ ದೇವಗುರುಶಾಸ್ತ್ರಗಳಲ್ಲಿ ಸದ್ಭಾವಪೂರ್ವಕವಾದ ಭಕ್ತಿಯಿರುವುದಿಲ್ಲ ಆದಕಾರಣ ಬಾಹ್ಯಭಕ್ತಿಯಿಂದ ಪುಣ್ಯ ಬಂಧವಾಗಬಹುದಲ್ಲದೆ ಮೋಕ್ಷವುಂಟಾಗದು ಹೀಗೆ ಪುಣ್ಯವು ಮುಖ್ಯತೆಯಿಂದ ಮೋಕ್ಷ ಕಾರಣವಾಗಿರುವುದಿಲ್ಲವೆಂದರೆ ಅದು ಉಪಾದೇಯವೂ ಆಗಿರುವುದಿಲ್ಲವೆಂದು ಹೇಳಿ ದಂತಾಯಿತು ಹಾಗಿದ್ದರೆ ಭರತ, ಸಗರ, ರಾಮ, ಪಾಂಡವರೇ ಮೊದಲಾದವರು ನಿರಂತರ ಪಂಚಪರಮೇಷ್ಠಿಗಳ ಗುಣಸ್ಮರಣೆ, ದಾನಪೂಜಾದಿಶುಭಕಾರ್ಯಗಳಲ್ಲಾಸಕ್ತ ರಾಗಿ ಪುಣ್ಯೋಪಾರ್ಜನೆಯನ್ನೇಕೆ ಮಾಡಿದರು? ಎಂಬ ಪ್ರಶ್ನೆಗೆ ಉತ್ತರವೇನೆಂದರೆ— ಶುಭಾಶುಭ(ಪುಣ್ಯಪಾಪ) ಕರ್ಮಗಳ ಸರ್ವಥಾ ಅಭಾವವೇ ಮೋಕ್ಷವಾಗಿರುವುದರಿಂದ ಪುಣ್ಯವು ಮುಖ್ಯತಃ (ಪ್ರಧಾನ) ಮೋಕ್ಷಕಾರಣವಾಗಿರುವುದಿಲ್ಲವೆಂದು ಹೇಳಿದುದಾಗಿದೆ. ಆದರೆ ವ್ಯವಹಾರದಲ್ಲಿ ಜನರು ತಮ್ಮ ಪ್ರಿಯನಾಯಿಕೆಯ ಕಡೆಯಿಂದ ಬರುವ, ಆಕೆಯ ಸಂದೇಶವನ್ನು ಅಥವಾ ಯಾವುದಾದರೊಂದು ಶುಭಸಮಾಚಾರವನ್ನು ತರುವ ವ್ಯಕ್ತಿಯನ್ನು ಆದರದಿಂದ ಸತ್ಕರಿಸುತ್ತಾರೆ ಆದಕ್ಕೆ ಆ ತಮ್ಮ ನಾಯಿಕೆಯ ಮೇಲಿ ರುವ ಪ್ರೇಮವೇ ಕಾರಣವಲ್ಲದೆ ಆಕೆಯ ಕಡೆಯಿಂದ ಬಂದ ವ್ಯಕ್ತಿಯು ಕಾರಣನಲ್ಲ. ಹಾಗೆಯೇ ಭರತಸಗರಾದಿ ಮಹಾಪುರುಷರು ಮೋಕ್ಷಲಕ್ಷ್ಮಿಯ ಪ್ರಾಪ್ತಿಗಾಗಿ ಪ್ರಯ ತ್ನಿಸುವವರಾಗಿ ಸದಾಕಾಲವೂ ಆಕೆಯನ್ನೇ (ಮುಕ್ತಿಲಕ್ಷ್ಮಿಯನ್ನೇ) ಧ್ಯಾನಿಸುತ್ತ ಆಕೆಯ ಪ್ರಾಪ್ತಿಗೆ ಪರಂಪರಾಕಾರಣವೂ ವಿಷಯಕಷಾಯಾದಿಗಳಿಂದುಂಟಾಗುವ ದುರ್ಧ್ಯಾನದ ವಿನಾಶಕ್ಕೆ ಕಾರಣವೂ ಆದ ಪಂಚಪರಮೇಷ್ಠಿಗಳ ಗುಣಸ್ಮರಣೆ, ದಾನಪೂಜಾದಿಶುಭ (ಪುಣ್ಯ)ಕಾರ್ಯಗಳನ್ನು ಮಾಡುತ್ತಾರೆ ಅವರು ಇಂತಹ ಕಾರ್ಯಗಳನ್ನು ವೀತರಾಗಪರ ಮಾನಂದೈಕರೂಪಮೋಕ್ಷಲಕ್ಷ್ಮಿಯ ಮೇಲಿನ ಮಮತೆಯಿಂದಲೇ ಮಾಡುತ್ತಾರೆಂದು ಭಾವವು. ಹೀಗೆ ಪಂಚಪರಮೇಷ್ಠಿಗಳ ಭಕ್ತಿ ಮೊದಲಾದುವನ್ನು ಮಾಡುತ್ತಿರುವುದ ರಿಂದ ಅವರಿಗೆ ಪುಣ್ಯಪ್ರಕೃತಿಗಳ ಆಸ್ರವವು ಸ್ವತಃ (ಅನಪೇಕ್ಷಿತವಾಗಿ) ಉಂಟಾಗುತ್ತದೆ.

ಆದರೆ ಅವರ ದೃಷ್ಟಿಯು ಕೇವಲ ನಿಜಶುದ್ಧಾತ್ಮಪರಿಣತಿಯ ಮೇಲಿರುತ್ತದಲ್ಲದೆ ಪರ ವಸ್ತುಗಳ ಮೇಲಿರುವುದಿಲ್ಲ ಧಾನ್ಯವನ್ನು ಪಡೆಯುವುದೇ ಕೃಷೀವಲ(ರೈತ)ನ ಮುಖ್ಯ ಉದ್ದೇಶವಾಗಿದ್ದರೂ ಹುಲ್ಲು, ಹೊಟ್ಟು, ತೌಡು ಮೊದಲಾದ ಇತರ ಪದಾರ್ಥಗಳೂ ಆತನಿಗೆ ಸಹಜವಾಗಿ ದೊರಕುವಂತೆ ಮೋಕ್ಷಪ್ರಾಪ್ತಿಯ ಮುಖ್ಯೋದ್ದೇಶದಿಂದ ಶುಭ ಕಾರ್ಯಪ್ರವೃತ್ತರಾದ ಜೀವರುಗಳಿಗೆ ಪುಣ್ಯಪ್ರಕೃತಿಗಳ ಆಸ್ರವವು ತಾನಾಗಿಯೇ ಉಂಟಾಗುತ್ತದೆಂದಭಿಪ್ರಾಯವು

**ದೇವಹಂ ಸತ್ಥಹಂ ಮುಣಿವರಹಂ, ಜೋ ವಿದ್ದೇಸ ಕರೇಇ ।**
**ಣಿಯಮೇಂ ಪಾಉ ಹವೇಇ ತಸು, ಜೇಂ ಸಂಸಾರು ಭಮೇಇ ॥ ೬೨ ॥**

"ದೇವಾನಾಂ ಶಾಸ್ತ್ರಾಣಾಂ ಮುನಿವರಾಣಾಂ ಯೋ ವಿದ್ವೇಷಂ ಕರೋತಿ ।
ನಿಯಮೇನ ಪಾಪಂ ಭವತಿ ತಸ್ಯ ಯೇನ ಸಂಸಾರಂ ಭ್ರಮತಿ ॥ ೬೨ ॥"

**ಅನ್ವಯಾರ್ಥ** — **ಜೋ**— ಯಾವನು **ದೇವಹಂ ಸತ್ಥಹಂ ಮುಣಿವರಹಂ**— ಸರ್ವಜ್ಞದೇವರ, ಜಿನಾಗಮದ ಮತ್ತು ನಿರ್ಗ್ರಂಥಮುನಿಗಳ **ವಿದ್ದೇಸ ಕರೇಇ**— ವಿದ್ವೇಷ(ಅಥವಾ ನಿಂದೆ)ವನ್ನು ಮಾಡುತ್ತಾನೋ **ತಸು**— ಅವನಿಗೆ **ಣಿಯಮೇಂ ಪಾಉ ಹವೇಇ** — ನಿಶ್ಚಯದಿಂದ ಪಾಪವುಂಟಾಗುತ್ತದೆ **ಜೇಂ**— ಯಾವ ಪಾಪದಕಾರಣದಿಂದ ಅವನು **ಸಂಸಾರು ಭಮೇಇ**— ಸಂಸಾರದಲ್ಲಿ ಭ್ರಮಿಸುತ್ತಾನೆ.

**ಭಾವಾರ್ಥ** — ನಿಜಪರಮಾತ್ಮಪದಾರ್ಥರುಚಿರೂಪವಾದ ನಿಶ್ಚಯಸಮ್ಯಗ್ದರ್ಶನಕ್ಕೆ ಕಾರಣವಾದ ತತ್ತ್ವಾರ್ಥಶ್ರದ್ಧಾನರೂಪವ್ಯವಹಾರಸಮ್ಯಗ್ದರ್ಶನಕ್ಕ ವಿಷಯಭೂತಗಳಾದ ಯಥಾರ್ಥದೇವಶಾಸ್ತ್ರಗುರುಗಳನ್ನು ಯಾವನು ದ್ವೇಷಿಸು(ನಿಂದಿಸು)ತ್ತಾನೋ ಅವನು ಮಿಥ್ಯಾದೃಷ್ಟಿಯಾಗುತ್ತಾನೆ ಆ ಮಿಥ್ಯಾತ್ವದಿಂದ ಪಾಪಬಂಧವಾಗುತ್ತದೆ ಹಾಗೂ ಪಾಪದ ಕಾರಣದಿಂದ ಆತನು ಚತುರ್ಗತಿಭ್ರಮಣರೂಪವಾದ ಸಂಸಾರದಲ್ಲಿ ಭ್ರಮಿಸುತ್ತಾನೆಂದು ತಾತ್ಪರ್ಯವು.

**ಪಾವೇಂ ಣಾರಉ ತಿರಿಉ ಜಿಉ, ಪುಣ್ಣೇಂ ಅಮರು ವಿಯಾಣು ।**
**ಮಿಸ್ಸೇಂ ಮಾಣುಸ-ಗಇ ಲಹಇ, ದೋಹಿ ವಿ ಖಇ ಣಿವ್ವಾಣು ॥ ೬೩ ॥**

"ಪಾಪೇನ ನಾರಕಃ ತಿರ್ಯಕ್ ಜೀವಃ ಪುಣ್ಯೇನ ಅಮರಃ ವಿಜಾನೀಹಿ ।
ಮಿಶ್ರೇಣ ಮನುಷ್ಯಗತಿಂ ಲಭತೇ ದ್ವಯೋರಪಿ ಕ್ಷಯೇ ನಿರ್ವಾಣಮ್ ॥ ೬೩ ॥"

**ಅನ್ವಯಾರ್ಥ:**— **ಜಿಉ**— ಜೀವನು **ಪಾವೇಂ**— ಪಾಪದಿಂದ **ಣಾರಉ ತಿರಿಉ**— ನಾರಕನಾಗಿಯೂ ತಿರ್ಯಂಚನಾಗಿಯೂ **ಪುಣ್ಣೇಂ ಅಮರು**— ಪುಣ್ಯದಿಂದ ದೇವನಾಗಿಯೂ ಜನಿಸುತ್ತಾನೆ. **ಮಿಸ್ಸೇಂ**— ಪುಣ್ಯಪಾಪಗಳೆರಡರ ಮಿಶ್ರದಿಂದ **ಮಾಣುಸ ಗಇ**— ಮನುಷ್ಯಗತಿಯನ್ನೂ **ದೋಹಿ ವಿ ಖಇ**— ಪುಣ್ಯಪಾಪಗಳೆರಡರ ಕ್ಷಯದಲ್ಲಿ (ನಾಶದಿಂದ) **ಣಿವ್ವಾಣು** — ಮೋಕ್ಷವನ್ನೂ **ಲಹಇ**— ಪಡೆಯುತ್ತಾನೆ. ಹೀಗೆಂದು **ವಿಯಾಣಿ**— ತಿಳಿ.

**ಭಾವಾರ್ಥ** —ಪುಣ್ಯಪಾಪಗಳೆರಡೂ ಪರಮಾತ್ಮನ ಸಹಜಶುದ್ಧ ಚಿದಾನಂದೈಕ ಸ್ವಭಾವಕ್ಕೆ ವಿಪರೀತಗಳಾಗಿವೆ ಜೀವನು ಪಾಪಕರ್ಮೋದಯದಿಂದ ನರಕಗತಿ ತಿರ್ಯಗ್ಗತಿಗಳನ್ನೂ ಪುಣ್ಯೋದಯದಿಂದ ದೇವಗತಿಯನ್ನೂ ಪುಣ್ಯಪಾಪಗಳೆರಡರ ಸಮ್ಮಿಶ್ರಣ ದಿಂದ ಮನುಷ್ಯಗತಿಯನ್ನೂ ಪಡೆಯುತ್ತಾನೆ ಅತಏವ ಪುಣ್ಯಪಾಪಗಳೆರಡೂ ಸಂಸಾರಕ್ಕೆ ಕಾರಣಗಳಾಗಿವೆ ಯಾವಾಗ ಜೀವನು ವಿಶುದ್ಧಜ್ಞಾನದರ್ಶನಸ್ವಭಾವವುಳ್ಳ ನಿಜ ಶುದ್ಧಾತ್ಮತತ್ತ್ವದ ಸಮ್ಯಕ್ ಶ್ರದ್ಧಾನಜ್ಞಾನಾನುಷ್ಠಾನರೂಪವಾದ ಶುದ್ಧೋಪಯೋಗ ದಿಂದ ಪರಿಣತನಾಗಿ ಪುಣ್ಯಪಾಪಕರ್ಮಗಳೆರಡನ್ನೂ ಅಥವಾ ಸಮಸ್ತ ದ್ರವ್ಯಭಾವ ಕರ್ಮಗಳನ್ನು ನಾಶಗೊಳಿಸುತ್ತಾನೋ ಆಗ ಮುಕ್ತನಾಗುತ್ತಾನೆ ಗ್ರಂಥಾಂತರದಲ್ಲೂ ಹೀಗೆಯೇ ಹೇಳಲ್ಪಟ್ಟಿದೆ —"**ಪಾವೇಣ ಣರಯತಿರಿಯಂ, ಗಮ್ಮಇ ಧಮ್ಮೇಣ ದೇವಲೋಯಮ್ಮಿ । ಮಿಸ್ಸೇಣ ಮಾಣುಸತ್ತಂ, ದೊಣ್ಹಂ ಪಿ ಖಏಣ ಣಿವ್ವಾಣಂ ॥**" ಅರ್ಥಾತ್ ಜೀವನು ಪಾಪದಿಂದ ನರಕಗತಿತಿರ್ಯಗ್ಗತಿಗಳನ್ನೂ ಪುಣ್ಯ ದಿಂದ ದೇವಲೋಕ(ದೇವಗತಿ)ನನ್ನೂ ಹೊಂದುತ್ತಾನೆ ಮತ್ತು ಪುಣ್ಯಪಾಪಗಳ ಮಿಶ್ರಣ (ಸಮ್ಮಿಲನ)ದಿಂದ ಮನುಷ್ಯತ್ವವನ್ನೂ ಪುಣ್ಯಪಾಪಗಳೆರಡರ ಕ್ಷಯದಿಂದ ನಿರ್ವಾಣ (ಮೋಕ್ಷ)ವನ್ನೂ ಪಡೆಯುತ್ತಾನೆಂದು ಭಾವವು.

**ವಂದಣು ಣಿಂದಣು ಪಡಿಕಮಣು, ಪುಣ್ಣಹಂ ಕಾರಣು ಜೇಣ ।**
**ಕರಇ ಕರಾವಇ ಅಣುಮಣಇ, ಎಕ್ಕು ವಿ ಣಾಣಿ ಣ ತೇಣ ॥ ೬೪ ॥**

"ವಂದನಂ ನಿಂದನಂ ಪ್ರತಿಕ್ರಮಣಂ ಪುಣ್ಯಸ್ಯ ಕಾರಣಂ ಯೇನ ।
ಕರೋತಿ ಕಾರಯತಿ ಅನುಮನ್ಯತೇ ಏಕಮಪಿ ಜ್ಞಾನೀ ನ ತೇನ ॥ ೬೪ ॥"

**ಅನ್ವಯಾರ್ಥ** —**ಜೇಣ**—ಯಾವ ಕಾರಣದಿಂದ **ವಂದಣು**-ಪಂಚಪರಮೇಷ್ಠಿ ಗಳ ವಂದನೆಯು **ಣಿಂದಣು**—ತನ್ನ ಅಶುಭಕರ್ಮ(ಕಾರ್ಯ)ಗಳನ್ನು ನಿಂದಿಸುವಿಕೆಯು **ಪಡಿಕಮಣು**—ಪ್ರಾಯಶ್ಚಿತ್ತಾದಿವಿಧಿಯಿಂದ ಆತ್ಮಾಪರಾಧಗಳ ನಿವೃತ್ತಿಯು ಇವುಗಳು **ಪುಣ್ಣಹಂ ಕಾರಣು**—ಪುಣ್ಯಕ್ಕೆ ಕಾರಣವಾಗಿರುತ್ತವೋ **ತೇಣ**—ಆ ಕಾರಣದಿಂದ **ಣಾಣಿ**—ಜ್ಞಾನಿಯಾದ ಜೀವನು **ಎಕ್ಕುವಿ**—ಪೂರ್ವೋಕ್ತ ವಂದನಾದಿಗಳಲ್ಲಿ ಒಂದನ್ನೂ **ಣ ಕರಇ**—ತಾನು ಮಾಡುವುದಿಲ್ಲ **ಣ ಕರಾವಇ**—ಇತರರಿಂದ ಮಾಡಿಸುವುದಿಲ್ಲ ಹಾಗೂ **ಣ ಅಣುಮಣಇ**—ಇತರರು ಮಾಡಿದುದನ್ನು ಅನುಮೋದಿಸುವುದಿಲ್ಲ.

**ಭಾವಾರ್ಥ** —ಪಂಚಪರಮೇಷ್ಠಿಗಳ ಮತ್ತು ವೃಷಭಾದಿಚತುರ್ವಿಂಶತಿತೀರ್ಥಂ ಕರರ ವಂದನೆ, ಆತ್ಮಾಪರಾಧಗಳ ನಿಂದೆ ಮತ್ತು ತಾನು ಮಾಡಿರುವ ದೋಷಗಳ ಪ್ರಾಯಶ್ಚಿತ್ತಾದಿವಿಧಿಯಿಂದ ನಿವೃತ್ತಿ ಇವುಗಳಿಂದ ಪುಣ್ಯಬಂಧವಾಗುತ್ತದೆ ಪುಣ್ಯ ಬಂಧವೂ ಮೋಕ್ಷಕ್ಕೆ ಪ್ರತಿಕೂಲವಾದುದರಿಂದ ಆತ್ಮಜ್ಞಾನಿಯು ಈ ವಂದನಾದಿಗಳನ್ನು ಕೃತಕಾರಿತಾನುಮೋದನಗಳಿಂದ ತ್ಯಾಗಮಾಡುತ್ತಾನೆ. ಪ್ರತಿಕ್ರಮಣಾದಿಗಳು ನಿಶ್ಚಯ ವ್ಯವಹಾರಭೇದದಿಂದ ಎರಡೆರಡು ಭೇದವುಳ್ಳುವುಗಳಾಗಿವೆ. ಶುದ್ಧನಿರ್ವಿಕಲ್ಪಪರ

ಮಾತ್ಮತತ್ತ್ವಭಾವನೆಯ ಬಲದಿಂದ ತಾನು ಹಿಂದೆ ಮಾಡಿರುವ ದೃಷ್ಟಶ್ರುತಾನುಭೂತ ಭೋಗಾಕಾಂಕ್ಷಾದಿರೂಪವಾದ ರಾಗಾದಿದೋಷಗಳ ನಿರಾಕರಣೆಯು **"ನಿಶ್ಚಯಪ್ರತಿಕ್ರಮಣ"**ವಾಗಿರುತ್ತದೆ. ವೀತರಾಗಚಿದಾನಂದೈಕಾನುಭೂತಿಯ ಬಲದಿಂದ ಮುಂದಿನ (ಭವಿಷ್ಯತ್ಕಾಲದ) ಭೋಗಾಕಾಂಕ್ಷಾರೂಪವಾದ ರಾಗಾದಿಗಳ ತ್ಯಾಗವು **"ನಿಶ್ಚಯ ಪ್ರತ್ಯಾಖ್ಯಾನವು".** ನಿಜಶುದ್ಧಾತ್ಮೋಪಲಬ್ಧಿಯ ಬಲದಿಂದ ವರ್ತಮಾನ(ಈಗ)ದಲ್ಲಿ ಉದಯಕ್ಕೆ ಬಂದಿರುವ ಶುಭಾಶುಭಗಳಿಗೆ ಕಾರಣಗಳಾದ ಹರ್ಷವಿಷಾದಾದಿಪರಿಣಾಮಗಳನ್ನು ನಿಜಶುದ್ಧಾತ್ಮದ್ರವ್ಯದಿಂದ ದೂರಗೊಳಿಸುವಿಕೆಯು **"ನಿಶ್ಚಯ ಆಲೋಚನ"**ವಾಗಿದೆ ಹೀಗೆಯೇ ಹಿಂದೆ(ಭೂತಕಾಲದಲ್ಲಿ) ಮಾಡಿರುವ ಅಶುಭಕರ್ಮಗಳ ನಿವೃತ್ತಿಗೆ **"ವ್ಯವಹಾರಪ್ರತಿಕ್ರಮಣ"**ವೆಂದೂ ಭವಿಷ್ಯದಲ್ಲುಂಟಾಗಬಹುದಾದ ಅಶುಭ ಪರಿಣಾಮಗಳನ್ನು ತಡೆಯುವುದಕ್ಕೆ **"ವ್ಯವಹಾರ ಪ್ರತ್ಯಾಖಾನ'**ವೆಂದೂ ವರ್ತಮಾನ ಕಾಲದಲ್ಲಿ ಶುಭಪ್ರವೃತ್ತಿ ಹಾಗೂ ಅಶುಭನಿವೃತ್ತಿಗೆ **"ವ್ಯವಹಾರ ಆಲೋಚನ"** ವೆಂದೂ ಹೆಸರು ಹೀಗೆ ನಿಶ್ಚಯಪ್ರತಿಕ್ರಮಣ-ಪ್ರತ್ಯಾಖ್ಯಾನ-ಆಲೋಚನಗಳಲ್ಲಿ ನಿರತ ನಾದ ಯಾವ ಜೀವನು ವ್ಯವಹಾರಪ್ರತಿಕ್ರಮಣ-ಪ್ರತ್ಯಾಖ್ಯಾನ-ಆಲೋಚನಗಳನ್ನು ಮತ್ತು ಅವುಗಳಿಗೆ ಅನುಕೂಲವಾದ ವಂದನನಿಂದನಾದಿಶುಭೋಪಯೋಗವನ್ನೂ ಬಿಡುತ್ತಾನೋ ಆತನೇ ಜ್ಞಾನಿಯೆಂದು ಹೇಳಲ್ಪಡುತ್ತಾನೆ ವ್ಯವಹಾರದಲ್ಲಿ ಶುಭಪ್ರವೃತ್ತಿಯೂ ಅಶುಭ ನಿವೃತ್ತಿಯೂ ಇರುತ್ತದೆ. ಆದರೆ ನಿಶ್ಚಯದಲ್ಲಿ ಶುಭಾಶುಭಗಳೆರಡರ ನಿವೃತ್ತಿಯೇ ಇರುತ್ತದೆಂದು ಭಾವಾರ್ಥವು.

**ವಂದಣು ಣಿಂದಣು ಪಡಿಕಮಣು, ಣಾಣಿಹಿಂ ಏಹು ಣ ಜುತ್ತು ।**
**ಏಕ್ಕು ಜಿ ಮೆಲ್ಲಿವಿ ಣಾಣಮಉ, ಸುದ್ಧಉ ಭಾಉ ಪವಿತ್ತು ॥ ೬೫ ॥**

"ವಂದನಂ ನಿಂದನಂ ಪ್ರತಿಕ್ರಮಣಂ ಜ್ಞಾನಿನಾಂ ಇದಂ ನ ಯುಕ್ತಮ್ ।
ಏಕಮೇವ ಮುಕ್ತ್ವಾ ಜ್ಞಾನಮಯಂ ಶುದ್ಧಂ ಭಾವಂ ಪವಿತ್ರಮ್ ॥ ೬೫ ॥"

**ಅನ್ವಯಾರ್ಥ.-ಣಾಣಮಉ ಸುದ್ಧಉ ಪವಿತ್ತು**-ಜ್ಞಾನಮಯವೂ ಶುದ್ಧವೂ ಪವಿತ್ರವೂ ಆದ **ಏಕ್ಕು ಜಿ ಭಾಉ**— ಭಾವವೊಂದನ್ನೇ **ಮೆಲ್ಲಿವಿ**— ಬಿಟ್ಟು(ಹೊರತು) **ಣಾಣಿಹಿಂ**— ಜ್ಞಾನಿಗಳಿಗೆ **ಏಹು ವಂದಣು ಣಿಂದಣು ಪಡಿಕಮಣು**— ಈ ವಂದನ, ನಿಂದನ ಮತ್ತು ಪ್ರತಿಕ್ರಮಣವು **ಣ ಜುತ್ತು**— ಯುಕ್ತ(ಯೋಗ್ಯ)ವಲ್ಲ.

**ಭಾವಾರ್ಥ** —ಪಂಚೇಂದ್ರಿಯವಿಷಯಭೋಗಗಳ ಇಚ್ಛೆಯೇ ಮೊದಲಾದ ಸಮಸ್ತವಿಭಾವಗಳಿಂದ ರಹಿತವೂ ಕೇವಲಜ್ಞಾನಾದಿ ಅನಂತಗುಣರೂಪವಾದ ಪರಮಾತ್ಮ ತತ್ತ್ವದ ಸಮ್ಯಕ್-ಶ್ರದ್ಧಾನಜ್ಞಾನಾನುಷ್ಠಾರೂಪನಿರ್ವಿಕಲ್ಪಸಮಾಧಿಯಿಂದುಂಟಾದ ಪರ ಮಸಮರಸೀಭಾವರೂಪವಾದ ಸುಖಾಮೃತರಸಾಸ್ವಾದದಿಂದ ಭರಿತವೂ ಆದ ಯಾವ ಜ್ಞಾನಮಯವಾದ ಭಾವವಿದೆಯೋ ಅದೊಂದನ್ನು ಬಿಟ್ಟು ಇತರ ವ್ಯವಹಾರಪ್ರತಿಕ್ರ ಮಣಪ್ರತ್ಯಾಖ್ಯಾನಾಲೋಚನಗಳೂ ಅವುಗಳಿಗನುಕೂಲವಾದ ವಂದನನಿಂದನಾದಿಶು

ಭೋಪಯೋಗರೂಪವಿಕಲ್ಪಜಾಲವೂ ಜ್ಞಾನಿಗಳಿಗೆ ಯೋಗ್ಯವಾಗಿರುವುದಿಲ್ಲ ಅರ್ಥಾತ್ ಈಸರ್ವವಿಕಲ್ಪಗಳೂ ತ್ಯಾಜ್ಯಗಳಾಗಿರುತ್ತವೆ ವ್ಯವಹಾರಪ್ರತಿಕ್ರಮಣಾದಿಗಳೂ ವಂದನಾದಿ-ಶುಭೋಪಯೋಗಗಳೂ ಪ್ರಥಮಾವಸ್ಥೆಯಲ್ಲಿ ಉಪಾದೇಯಗಳಾಗಿರುತ್ತವಾದರೂ ಮುಂದೆ ಪೂರ್ಣಾವಸ್ಥೆಯಲ್ಲಿ ತ್ಯಾಜ್ಯಗಳಾಗಿರುತ್ತವೆಂದು ತಾತ್ಪರ್ಯವು

**ವಂದಉ ಣಿಂದಉ ಪಡಿಕಮಉ, ಭಾಉ ಅಸುದ್ಧಉ ಜಾಸು ।**
**ಪರ ತಸು ಸಂಜಮು ಅತ್ಥಿ ಣವಿ, ಜಂ ಮಣಸುದ್ಧಿ ಣ ತಾಸು ॥ ೬೬ ॥**

"ವಂದತಾಂ ನಿಂದತು ಪ್ರತಿಕ್ರಾಮತು ಭಾವಃ ಅಶುದ್ಧಃ ಯಸ್ಯ ।
ಪರಂ ತಸ್ಯ ಸಂಯಮೋಽಸ್ತಿ ನೈವ ಯಸ್ಮಾತ್ ಮನಃಶುದ್ಧಿರ್ನ ತಸ್ಯ ॥ ೬೬ ॥

**ಅನ್ವಯಾರ್ಥ — ವಂದಉ ಣಿಂದಉ ಪಡಿಕಮಉ**– ವಂದನೆಯನ್ನು ಮಾಡಲಿ, ನಿಂದನೆಯನ್ನು ಮಾಡಲಿ ಮತ್ತು ಪ್ರತಿಕ್ರಮಣವನ್ನೂ ಮಾಡಲಿ ಆದರೆ **ಜಾಸು ಭಾಉ ಅಸುದ್ಧಉ**— ಯಾವನ ಭಾವವು ಅಶುದ್ಧವಾಗಿರುವುದೋ **ತಸು ಪರ**— ಆತನಿಗೆ ನಿಶ್ಚಯದಿಂದ **ಸಂಜಮು ಅತ್ಥಿ ಣವಿ**— ಸಂಯಮವು ಇರುವುದಿಲ್ಲ **ಜಂ**— ಯಾವ ಕಾರಣದಿಂದ (ಏಕೆಂದರೆ) **ತಾಸು**— ಅವನಿಗೆ **ಮಣಸುದ್ಧಿ** ಣ— ಮನಸ್ಸಿನ ಶುದ್ಧತೆಯಿರುವುದಿಲ್ಲ.

**ಭಾವಾರ್ಥ:**— ನಿತ್ಯಾನಂದೈಕರೂಪಸ್ವಶುದ್ಧಾತ್ಮಾನುಭೂತಿಗೆ ವಿಪರೀತಗಳಾದ ವಿಷಯಕಷಾಯಾದಿವಿಕಲ್ಪಗಳಿಂದುಂಟಾದ ದುರ್ಧ್ಯಾನಗಳಿಂದ ಕಲುಷಿತವಾದ ಮನಸ್ಸುಳ್ಳ ಜೀವನು ದ್ರವ್ಯರೂಪವಾದ ವಂದನನಿಂದನಪ್ರತಿಕ್ರಮಣಾದಿಗಳನ್ನು ಮಾಡುತ್ತಿದ್ದರೂ ಆತನಲ್ಲಿ ಭಾವಸಂಯಮವಿಲ್ಲದಿರುವುದರಿಂದ ಆತನು ಅಸಂಯಮಿಯೆಂದು ಹೇಳಲ್ಪಡುತ್ತಾನೆ

ಹೀಗೆ ಮೋಕ್ಷ-ಮೋಕ್ಷಫಲ-ಮೋಕ್ಷಮಾರ್ಗಾದಿಗಳ ಪ್ರತಿಪಾದನೆಯ ಮುಖ್ಯತೆಯುಳ್ಳ ದ್ವಿತೀಯಮಹಾಧಿಕಾರದಲ್ಲಿ ನಿಶ್ಚಯನಯದಿಂದ ಪುಣ್ಯಪಾಪಗಳೆರಡರ ಸಮಾನತೆಯನ್ನು ನಿರೂಪಿಸುವ ಮುಖ್ಯತೆಯಿಂದ ಹದಿನಾಲ್ಕು ಸೂತ್ರಗಳು ಹೇಳಲ್ಪಟ್ಟವು.

ಮುಂದೆ ಶುದ್ಧೋಪಯೋಗಾದಿಗಳನ್ನು ಪ್ರತಿಪಾದಿಸುವ ಮುಖ್ಯತೆಯಿಂದ ನಲುವತ್ತೊಂದು ಸೂತ್ರಗಳನ್ನು ಹೇಳುತ್ತಾರೆ ಅವುಗಳಲ್ಲಿ ಐದುಸೂತ್ರಗಳಿಂದ ಶುದ್ಧೋಪಯೋಗವನ್ನೂ, ಹದಿನೈದು ಸೂತ್ರಗಳಿಂದ ಸ್ವಸಂವೇದನಜ್ಞಾನವನ್ನೂ, ಎಂಟು ಸೂತ್ರಗಳಿಂದ ಪರಿಗ್ರಹತ್ಯಾಗವನ್ನೂ ಹದಿಮೂರು ಸೂತ್ರಗಳಿಂದ ಕೇವಲಜ್ಞಾನಾದಿಗುಣಸ್ವರೂಪದಿಂದ ಎಲ್ಲ ಜೀವರೂ ಸಮಾನರಾಗಿರುತ್ತಾರೆಂಬುದನ್ನೂ ನಿರೂಪಿಸುತ್ತಾರೆ.

**ಸುದ್ಧಹಂ ಸಂಜಮು ಸೀಲು ತಉ, ಸುದ್ಧಹಂ ದಂಸಣು ಣಾಣು ।**
**ಸುದ್ಧಹಂ ಕಮ್ಮಕ್ಖಉ ಹವಇ, ಸುದ್ಧಉ ತೇಣ ಪಹಾಣು ॥ ೬೭ ॥**

"ಶುದ್ಧಾನಾಂ ಸಂಯಮಃ ಶೀಲಂ ತಪಃ ಶುದ್ಧಾನಾಂ ದರ್ಶನಂ ಜ್ಞಾನಮ್ ।
ಶುದ್ಧಾನಾಂ ಕರ್ಮಕ್ಷಯೋ ಭವತಿ ಶುದ್ಧೋ ತೇನ ಪ್ರಧಾನಃ ॥ ೬೭ ॥"

**ಅನ್ವಯಾರ್ಥ:— ಸುದ್ಧಹಂ**-ಶುದ್ಧೋಪಯೋಗವುಳ್ಳವರಿಗೆ **ಸಂಜಮು ಸೀಲು ತಉ**— ಸಂಯಮವೂ ಶೀಲವೂ ತಪವೂ **ಸುದ್ಧಹಂ**— ಶುದ್ಧೋಪಯೋಗವುಳ್ಳವರಿಗೆ **ದಂಸಣು ಣಾಣು**— ಸಮ್ಯಗ್ದರ್ಶನವೂ ವೀತರಾಗಸ್ವಸಂವೇದನಜ್ಞಾನವೂ **ಸುದ್ಧಹಂ** ಶುದ್ಧೋಪಯೋಗವುಳ್ಳವರಿಗೆ **ಕಮ್ಮಕ್ಖಉ**— ಕರ್ಮಗಳ ನಾಶವೂ **ಹವಇ**— ಉಂಟಾಗುತ್ತದೆ **ತೇಣ**— ಆ ಕಾರಣದಿಂದ **ಸುದ್ಧಉ ಪಹಾಣು**— ಶುದ್ಧೋಪಯೋಗವು ಪ್ರಧಾನವಾಗಿರುತ್ತದೆ

**ಭಾವಾರ್ಥ**--ಇಂದ್ರಿಯವಿಷಯಾಭಿಲಾಷೆಯ ನಿವೃತ್ತಿ ಹಾಗೂ ಷಡ್ಜೀವನಿಕಾಯ ಹಿಂಸಾನಿವೃತ್ತಿಯಬಲದಿಂದ ಆತ್ಮನಲ್ಲಿ ನಿಶ್ಚಲತೆಯು **"ಸಂಯಮ"ವು** ಅಥವಾ ತ್ರಿಗುಪ್ತಿರೂಪವಾದುದು "ಉಪೇಕ್ಷಾಸಂಯಮ"ವೆಂದೂ ಪಂಚಸಮಿತಿಗಳ ಪಾಲನೆಯು "ಉಪಹೃತಸಂಯಮ'ವೆಂದೂ ಹೇಳಲ್ಪಡುತ್ತದೆ. ಹಾಗೆಯೇ ಶುಭೋಪಯೋಗ ರೂಪವಾದುದು "ಸರಾಗಸಂಯಮ"ವೆಂದೂ ಶುದ್ಧೋಪಯೋಗರೂಪವಾದುದು "ವೀತರಾಗಸಂಯಮ"ವೆಂದೂ ಹೇಳಲ್ಪಡುತ್ತದೆ ಅಥವಾ ಸಾಮಾಯಿಕ, ಛೇದೋಪಸ್ಥಾಪನಾ, ಪರಿಹಾರವಿಶುದ್ಧಿ, ಸೂಕ್ಷ್ಮಸಾಂಪರಾಯ ಮತ್ತು ಯಥಾಖ್ಯಾತವೆಂದು ಈ ಸಂಯಮವು ಐದುವಿಧವಾಗಿರುತ್ತದೆ ತನ್ನಿಂದ ತನ್ನಾತ್ಮನಲ್ಲಿ ಪ್ರವೃತ್ತಿಯು ನಿಶ್ಚಯವ್ರತವಾಗಿದೆ ರಾಗಾದಿಗಳ ತ್ಯಾಗದಿಂದ ವ್ರತಪರಿರಕ್ಷಣೆಯು **"ನಿಶ್ಚಯಶೀಲ"**ವೆನಿಸುತ್ತದೆ ಬಾಹ್ಯಾಭ್ಯಂತರರೂಪದಿಂದ ಹನ್ನೆರಡು ವಿಧವಾದ ತಪಶ್ಚರಣೆಯಬಲದಿಂದ ಸಮಸ್ತ ಪರದ್ರವ್ಯಗಳ ಇಚ್ಛೆಯನ್ನು ನಿರೋಧಿಸಿ(ತಡೆದು)ಸ್ವಶುದ್ಧಾತ್ಮನಲ್ಲಿ ಮಗ್ನನಾಗಿರುವಿಕೆಯು **"ತಪ"**ವಾಗಿದೆ ಛದ್ಮಸ್ಥಾವಸ್ಥೆಯಲ್ಲಿ (ಅಥವಾ ಸಾಧಕಾವಸ್ಥೆಯಲ್ಲಿ) ಶುದ್ಧಾತ್ಮಶ್ರದ್ಧಾನರೂಪವಾದುದು **"ಸಮ್ಯಗ್ದರ್ಶನ"**ವು. ಕೇವಲಜ್ಞಾನದ ಉತ್ಪತ್ತಿಯಾಗುತ್ತಿರಲು ಅದರ ಫಲವಾದ ವಿಪರೀತಾಭಿನಿವೇಶರಹಿತಪರಿಣಾಮಕ್ಕೆ ಕ್ಷಾಯಿಕ ಸಮ್ಯಕ್ತ್ವ ಅಥವಾ ಕೇವಲದರ್ಶನವೆಂದು ಹೆಸರು ವೀತರಾಗಸ್ವಸಂವೇದನಜ್ಞಾನವು ಮತ್ತು ಅದರ ಫಲಭೂತಕೇವಲಜ್ಞಾನವು **"ಜ್ಞಾನ"**ವೆನಿಸುತ್ತದೆ. ದ್ರವ್ಯಭಾವಕರ್ಮಗಳ ನಾಶಕ್ಕೆ **"ಕರ್ಮಕ್ಷಯ"**ವೆಂದು ಹೆಸರು. ಹೀಗೆ ಈ ಸಂಯಮ, ಶೀಲ, ತಪ, ದರ್ಶನ, ಜ್ಞಾನ ಮತ್ತು ಕರ್ಮಕ್ಷಯ ಇವುಗಳು ಶುದ್ಧೋಪಯೋಗವುಳ್ಳ ಜೀವನಿಗೇನೇ ಉಂಟಾಗುತ್ತವೆ ಅತಏವ ಶುದ್ಧೋಪಯೋಗವೇ ಪ್ರಧಾನವೂ ಉಪಾದೇಯವೂ ಆಗಿರುತ್ತದೆಂದಭಿಪ್ರಾಯವು. ಹೀಗಯೇ ಶುದ್ಧೋಪಯೋಗದ ಫಲವನ್ನು ಗ್ರಂಥಾಂತರದಲ್ಲಿಯೂ ಹೇಳಿರುವರು —**"ಸುದ್ಧಸ್ಸ ಯ ಸಾಮಣ್ಣಂ, ಭಣಿಯಂ ಸುದ್ಧಸ್ಸ ದಂಸಣಂ ಣಾಣಂ । ಸುದ್ಧಸ್ಸ ಯ ಣಿವ್ವಾಣಂ, ಸೋ ಚಿಯ ಸುದ್ಧೋ ಣಮೋ ತಸ್ಸ ॥"** ಅರ್ಥಾತ್ ಶುದ್ಧೋಪಯೋಗವುಳ್ಳವನಿಗೆ ಮುನಿಪದವೂ ದರ್ಶನ ಜ್ಞಾನ ಹಾಗೂ ಮೋಕ್ಷ ಇವುಗಳೂ ಉಂಟಾಗುತ್ತವೆಂದು ಹೇಳಲ್ಪಟ್ಟಿದೆ. ರಾಗಾದಿಗಳಿಂದ ರಹಿತನಾದ ಆ ಶುದ್ಧೋಪಯೋಗಿಗೆ ನಮಸ್ಕಾರವು

**ಭಾಉ ವಿಸುದ್ಧಉ ಅಪ್ಪಣಉ, ಧಮ್ಮು ಭಣೇವಿಣು ಲೇಹು ।**
**ಚಉಗಇದುಕ್ಖಹಂ ಜೋ ಧರಇ, ಜೀಉ ಪಡಂತಉ ಏಹು** ॥ ೬೮ ॥

"ಭಾವೋ ವಿಶುದ್ಧಃ ಆತ್ಮೀಯಃ ಧರ್ಮಂ ಭಣಿತ್ವಾ ಲಾಹಿ ।
ಚತುರ್ಗತಿದುಃಖೇಭ್ಯಃ ಯೋ ಧರತಿ ಜೀವಂ ಪತಂತಮಿಮುಮಪ್ ॥ ೬೮ ॥"

**ಅನ್ವಯಾರ್ಥ:— ಅಪ್ಪಣಉ ವಿಸುದ್ಧಉ ಭಾಉ**— ತನ್ನ (ಆತ್ಮನ) ಮಿಥ್ಯಾತ್ವ ರಾಗಾದಿರಹಿತವಾದ ವಿಶುದ್ಧಪರಿಣಾಮವು **ಧಮ್ಮು ಭಣೇವಿಣು**— ಧರ್ಮವೆಂದು ತಿಳಿದು **ಲೇಹು**— ಅಂಗೀಕರಿಸು **ಜೋ**— ಯಾವ ಆತ್ಮಧರ್ಮವು **ಪಡಂತಉ ಏಹು ಜೀಉ**— ಸಂಸಾರದಲ್ಲಿ ಬೀಳುತ್ತಿರುವ ಈ ಜೀವನನ್ನು **ಚಉಗಇದುಕ್ಖಹಂ**— ಚತುರ್ಗತಿಸಂಬಂಧವಾದ ದುಃಖಗಳ ದೆಸೆಯಿಂದ **ಧರಇ**— ಉದ್ಧರಿಸಿ ಉತ್ತಮಸುಖದಲ್ಲಿರಿಸುತ್ತದೆ

**ಭಾವಾರ್ಥ** — ಶ್ರೀಸಮಂತಭದ್ರಾಚಾರ್ಯರು **"ಸಂಸಾರದುಃಖತಃ ಸತ್ವಾನ್ ಯೋ ಧರತ್ಯುತ್ತಮೇ ಸುಖೇ"** ಎಂದು ಧರ್ಮದ ಸ್ವರೂಪವನ್ನು ಹೇಳಿರುವಂತೆ ಯಾವುದು ಸಂಸಾರದಲ್ಲಿ ಬೀಳುತ್ತಿರುವ (ಅಥವಾ ಬಿದ್ದಿರುವ) ಪ್ರಾಣಿಗಳನ್ನು ಚತುರ್ಗತಿದುಃಖದಿಂದ ಉದ್ಧರಿಸಿ ನರೇಂದ್ರನಾಗೇಂದ್ರಸುರೇಂದ್ರಾದಿಗಳಿಂದ ವಂದಿಸಲು ಯೋಗ್ಯವಾದ ಮೋಕ್ಷಪದದಲ್ಲಿರಿಸುತ್ತದೋ ಅದೇ ಧರ್ಮವು ಇಲ್ಲಿ ನಿಶ್ಚಯದಿಂದ ಜೀವನ ಶುದ್ಧಪರಿಣಾಮವೇ ಧರ್ಮವೆಂದು ತಿಳಿಯಬೇಕು ಧರ್ಮದ ಈ ಲಕ್ಷಣದಲ್ಲಿ ವೀತರಾಗಸರ್ವಜ್ಞಪ್ರಣೀತವಾದ ನಯವಿಭಾಗದಿಂದ ಹೇಳಲ್ಪಟ್ಟಿರುವ ಧರ್ಮದ ಲಕ್ಷಣಗಳೆಲ್ಲವೂ ಅಂತರ್ಭವಿಸುತ್ತವೆ ಹೇಗಂದರೆ, **"ಅಹಿಂಸಾಲಕ್ಷಣೋ ಧರ್ಮಃ"** ಎನ್ನುವ ಅಹಿಂಸಾರೂಪವಾದ ಧರ್ಮವೂ ಜೀವನ ಶುದ್ಧಭಾವದ ಹೊರತು ಉಂಟಾಗುವುದಿಲ್ಲ **"ಸಾಗಾರಧರ್ಮ"**(ಗೃಹಸ್ಥಧರ್ಮ) **"ಅನಾಗಾರಧರ್ಮ"**(ಯತಿಧರ್ಮ) ಗಳೂ ಉತ್ತಮಕ್ಷಮಾದಿಲಕ್ಷಣವುಳ್ಳ **"ದಶವಿಧಧರ್ಮ"**ಗಳೂ ಜೀವನ ಶುದ್ಧಭಾವವನ್ನಪೇಕ್ಷಿಸುತ್ತವೆ. ಹೀಗೆಯೇ **"ರತ್ನತ್ರಯ"**ರೂಪವಾದ ಧರ್ಮವೂ ಜೀವನ ಶುದ್ಧ ಭಾವವನ್ನು ಹೊಂದಿಯೇ ಉಂಟಾಗುತ್ತದೆ, ರಾಗದ್ವೇಷಮೋಹರಹಿತವಾದ ಪರಿಣಾಮ ಲಕ್ಷಣವುಳ್ಳ ಧರ್ಮವೂ **"ಧಮ್ಮೋ ವತ್ಥುಸಹಾವೋ"** ಎಂಬಂತೆ ವಸ್ತುಸ್ವಭಾವರೂಪವಾದ ಧರ್ಮವೂ ಜೀವನ ಶುದ್ಧಸ್ವಭಾವವೇ ಆಗಿರುತ್ತದೆ, ಇಂತಹ ಧರ್ಮವು ಜೀವರುಗಳನ್ನು ಚತುರ್ಗತಿಭ್ರಮಣರೂಪವಾದ ಸಂಸಾರದ ದುಃಖದಿಂದ ಉದ್ಧರಿಸಿ ಉತ್ತಮ ಸುಖಸ್ಥಾನದಲ್ಲಿರಿಸುವುದರಿಂದ ಸರ್ವಥಾ ಉಪಾದೇಯವಾಗಿರುತ್ತದೆಂದು ಭಾವವು. ಹಿಂದಿನ ಸೂತ್ರದಲ್ಲಿ ಶುದ್ಧೋಪಯೋಗದ ಮುಖ್ಯತೆಯಿಂದ ಶುದ್ಧೋಪಯೋಗದಿಂದ ಸಂಯಮಾದಿಗುಣಗಳುಂಟಾಗುತ್ತವೆಂದೂ ಈ ಸೂತ್ರದಲ್ಲಿ ಆತ್ಮನ ಶುದ್ಧಪರಿಣಾಮವೇ ಧರ್ಮವೆಂದು ಧರ್ಮದ ಮುಖ್ಯತೆಯಿಂದಲೂ ಹೇಳಿದುದಲ್ಲದೆ ಇವೆರಡೂ ವಸ್ತುತಃ ಸಮಾನವಾಗಿವೆ ಅರ್ಥಾತ್ ಹೆಸರಿನಲ್ಲಿ ಮಾತ್ರ ಭೇದವಲ್ಲದೆ ಇವೆರಡರ ತಾತ್ಪರ್ಯವು ಒಂದೇ ಆಗಿದೆ.

**ಸಿದ್ಧಿಹಿಂ ಕೇರಾ ಪಂಥಡಾ, ಭಾಉ ವಿಸುದ್ಧಉ ಏಕ್ಕು ।**
**ಜೋ ತಸು ಭಾವಹಂ ಮುಣಿ ಚಲಇ, ಸೋ ಕಿಮ ಹೋಇ ವಿಮುಕ್ಕು ॥ ೬೯ ॥**

"ಸಿದ್ಧೇಃ ಸಂಬಂಧೀ ಪಂಥಾಃ ಭಾವೋ ವಿಶುದ್ಧ ಏಕಃ ।
ಯಃ ತಸ್ಮಾದ್ಭಾವಾತ್ ಮುನಿಶ್ಚಲತಿ ಸ ಕಥಂ ಭವತಿ ವಿಮುಕ್ತಃ ॥ ೬೯ ॥"

**ಅನ್ವಯಾರ್ಥ:— ಭಾಉ ವಿಸುದ್ಧಉ ಎಕ್ಕು**— ಆತ್ಮನ ವಿಶುದ್ಧಭಾವ (ಪರಿಣಾಮ)ವೊಂದೇ **ಸಿದ್ಧಿಹಿಂ ಕೇರಾ ಪಂಥಡಾ**— ಮೋಕ್ಷದ ಸಂಬಂಧವಾದ ಮಾರ್ಗವು. **ಜೋ ಮುಣಿ**— ಯಾವ ಮುನಿಯು **ತಸು ಭಾವಹಂ**— ಆ ಶುದ್ಧಭಾವದಿಂದ **ಚಲಇ** ವಿಚಲಿತನಾಗುತ್ತಾನೋ **ಸೋ**— ಅವನು **ಕಿಹು ಹೋಇ ವಿಮುಕ್ಕು**— ಹೇಗೆ ಮುಕ್ತನಾಗುತ್ತಾನೆ ಅರ್ಥಾತ್ ಹೇಗೆ ಮುಕ್ತನಾಗಬಲ್ಲನು? ಎಂದೂ ಮುಕ್ತನಾಗಲಾರನೆಂದರ್ಥವು.

**ಭಾವಾರ್ಥ**:— ಸಮಸ್ತಶುಭಾಶುಭಸಂಕಲ್ಪವಿಕಲ್ಪರಹಿತವಾದ ಜೀವನ ಯಾವ ಶುದ್ಧಭಾವವಿರುವುದೋ ಅದೇ ನಿಶ್ಚಯರತ್ನತ್ರಯಾತ್ಮಕವಾದ ಮೋಕ್ಷಮಾರ್ಗವು ಯಾವ ಮುನಿಯು ಇಂತಹ ಶುದ್ಧಾತ್ಮಪರಿಣಾಮ(ಭಾವ)ದಿಂದ ಚ್ಯುತನಾಗುತ್ತಾನೋ ಆತನು ಮುಕ್ತಿಯನ್ನು ಹೇಗೆ ಪಡೆಯಬಲ್ಲನು? ಅರ್ಥಾತ್ ಪಡೆಯಲಾರನು ಶುದ್ಧಭಾವವೊಂದೇ ಮೋಕ್ಷಪ್ರಾಪ್ತಿಯ ಮಾರ್ಗ(ಉಪಾಯ)ವಾಗಿರುವುದರಿಂದ ಮೋಕ್ಷಾರ್ಥಿಯಾದ ಜೀವನು ಆ ನಿಜಶುದ್ಧಾತ್ಮಾನುಭೂತಿಪರಿಣಾಮವನ್ನೇ ನಿರಂತರ ಧರಿಸಬೇಕೆಂದು ತಾತ್ಪರ್ಯವು

**ಜಹಿಂ ಭಾವಇ ತಹಿಂ ಜಾಹಿ ಜಿಯ, ಜಂ ಭಾವಇ ಕರಿ ತಂ ಜಿ ।**
**ಕೆಮ್ವಇ ಮೊಕ್ಖು ಣ ಅತ್ಥಿ ಪರ, ಚಿತ್ತಹಂ ಸುದ್ಧಿ ಣ ಜಂ ಜಿ ॥ ೭೦ ॥**

"ಯತ್ರ ಭಾತಿ ತತ್ರ ಯಾಹಿ ಜೀವ ಯತ್ ಭಾತಿ ಕುರು ತದೇವ ।
ಕಥಮಪಿ ಮೋಕ್ಷಃ ನಾಸ್ತಿ ಪರಂ ಚಿತ್ತಸ್ಯ ಶುದ್ಧಿರ್ನ ಯದೇವ ॥ ೭೦ ॥

**ಅನ್ವಯಾರ್ಥ:— ಜಿಯ**— ಎಲೈ ಜೀವನೇ! ನೀನು **ಜಹಿಂ ಭಾವಇ**— ಎಲ್ಲಿ ಕಾಣುತ್ತದೋ ಅರ್ಥಾತ್ ಎಲ್ಲಿಗೆ ಹೋಗುವುದು ಉಚಿತವೆಂದು ಕಾಣುತ್ತದೋ **ತಹಿಂ ಜಾಹಿ**— ಅಲ್ಲಿಗೆ ಹೋಗು. **ಜಂ ಭಾವಇ**— ಯಾವುದು ಕಾಣುತ್ತದೋ ಅರ್ಥಾತ್ ಯಾವ ಕಾರ್ಯವು ಉಚಿತವೆಂದು ತೋರುತ್ತದೋ **ತಂ ಜಿ ಕರಿ**— ಅದನ್ನೇ ಮಾಡು. ಆದರೆ, **ಜಂ ಜಿ**— ಯಾವ ಕಾರಣದಿಂದ (ಎಂದಿನವರೆಗೆ) **ಚಿತ್ತಹಂ ಸುದ್ಧಿ ಣ**— ಮನಸ್ಸಿನ ಶುದ್ಧಿಯಿರುವುದಿಲ್ಲವೋ (ಆ ಕಾರಣದಿಂದ ಅಂದಿನವರೆಗೆ) **ಪರ**— ನಿಶ್ಚಯದಿಂದ **ಕೆಮ್ವಇ**— ಯಾವ ವಿಧದಿಂದಲೂ **ಮೊಕ್ಖು ಣ ಅತ್ಥಿ**—(ನಿನಗೆ) ಮೋಕ್ಷವಿರುವುದಿಲ್ಲ.

**ಭಾವಾರ್ಥಃ**— ಜೀವನೇ! ಎಂದಿನ ವರೆಗೆ ನಿನ್ನ ಚಿತ್ತವು ಶುದ್ಧಾತ್ಮಾನುಭೂತಿಗೆ ವಿರುದ್ಧವಾದ ಖ್ಯಾತಿಪೂಜಾಲಾಭಾದಿಗಳ ಅಭಿಲಾಷೆ ಮತ್ತು ದೃಷ್ಟಶ್ರುತಾನುಭೂತ ಭೋಗಾಕಾಂಕ್ಷಾರೂಪವಾದ ದುರ್ಧ್ಯಾನ (ದುಶ್ಚಿಂತನೆ)ಗಳಿಂದ ಕಲುಷಿತವಾಗಿರುತ್ತದೋ ಅಂದಿನವರೆಗೆ ನೀನು ಯಾವ ದೇಶದೇಶಾಂತರಗಳನ್ನು ಹಾಗೂ ತೀರ್ಥಕ್ಷೇತ್ರಾದಿ

ಗಳನ್ನಾದರೂ ಸಂಚರಿಸು  ಯಾವ ಅನುಷ್ಠಾನವನ್ನಾದರೂ ಮಾಡು. ಆದರೆ ನಿನಗೆ ಮುಕ್ತಿಯು ಮಾತ್ರ ಲಭಿಸದೆಂದು ನಿಶ್ಚಯವಾಗಿ ತಿಳಿ  ಏಕೆಂದರೆ, ಕಾಮಕ್ರೋಧಾದಿ ಅಪಧ್ಯಾನಗಳಿಂದ ಯುಕ್ತನಾದ ಜೀವನು ವಿಷಯಭೋಗಗಳನ್ನು ಅನುಭವಿಸದಿರುತ್ತಿದ್ದರೂ ಶುದ್ಧಾತ್ಮಭಾವನಾರಹಿತವಾದ ಪರಿಣಾಮದಿಂದ ಕರ್ಮಬಂಧವನ್ನು ಮಾಡಿಕೊಳ್ಳುತ್ತಾನೆಂದು ಆಗಮದಲ್ಲಿ ನಿರೂಪಿಸಿರುವರು —"**ಕಂಖಿದಕಲುಸಿದಭೂದೋ ಹು ಕಾಮಭೋಗೇಹಿಂ ಮುಚ್ಛಿದೋ ಜೀವೋ । ಣವಿ ಭುಂಜಂತೋ ಭೋಗೇ ಬಂಧದಿ ಭಾವೇಣ ಕಮ್ಮಾಣಿ ॥**" ಅರ್ಥಾತ್ ಇಹಲೋಕ ಪರಲೋಕಸಂಬಂಧವಾದ ಭೋಗಗಳ ಅಭಿಲಾಷೆಯುಳ್ಳವನೂ ಕಷಾಯಗಳಿಂದ (ಕ್ರೋಧ, ಮಾನ, ಮಾಯಾ, ಲೋಭ ಇವುಗಳಿಂದ) ಕಲುಷಿತವಾದ ಮನಸ್ಸುಳ್ಳವನೂ ತಾನು ಪಡೆಯದಿರುವ ಭೋಗಗಳನ್ನು ಆಶಿಸುವವನೂ ತಾನು ಪಡೆದಿರುವ ಭೋಗಗಳಲ್ಲಿ ಅತ್ಯಂತ ಆಸಕ್ತಿಯುಳ್ಳವನೂ ಆದ ಜೀವನು ಒಂದುವೇಳೆ ಭೋಗಗಳನ್ನು ಅನುಭವಿಸದಿರುತ್ತಿದ್ದರೂ ತನ್ನ ಅಶುದ್ಧಭಾವ (ಪರಿಣಾಮ)ದಿಂದ ಕರ್ಮಗಳನ್ನು ಬಂಧಿಸಿಕೊಳ್ಳುತ್ತಾನೆ  ಅತಏವ ಮೋಕ್ಷಾಭಿಲಾಷಿಯು ಮುಖ್ಯತಃ ಮನಶ್ಶುದ್ಧಿಯನ್ನು ಪಡೆಯಬೇಕೆಂದು ಭಾವವು

**ಸುಹಪರಿಣಾಮೇಂ ಧಮ್ಮು ಪರ, ಅಸುಹೇಂ ಹೋಇ ಅಹಮ್ಮು ।**
**ದೋಹಿಂ ವಿ ಏಹಿಂ ವಿವಜ್ಜಿಯಉ, ಸುದ್ಧು ಣ ಬಂಧಇ ಕಮ್ಮು ॥ ೭೧ ॥**

"ಶುಭಪರಿಣಾಮೇನ ಧರ್ಮಃ ಪರಂ ಅಶುಭೇನ ಭವತಿ ಅಧರ್ಮಃ ।
ದ್ವಾಭ್ಯಾಮಪಿ ಏತಾಭ್ಯಾಂ ವಿವರ್ಜಿತಃ ಶುದ್ಧೋ ನ ಬಧ್ನಾತಿ ಕರ್ಮ  ॥ ೭೧ ॥"

**ಅನ್ವಯಾರ್ಥ** — **ಪರ**— ಮುಖ್ಯವಾಗಿ **ಸುಹಪರಿಣಾಮೇಂ**- ಶುಭಪರಿಣಾಮದಿಂದ **ಧಮ್ಮು**— ಪುಣ್ಯವೂ **ಅಸುಹೇಂ**— ಅಶುಭಪರಿಣಾಮದಿಂದ **ಅಹಮ್ಮು**— ಅಧರ್ಮ(ಪಾಪ)ವೂ **ಹೋಇ**— ಉಂಟಾಗುತ್ತದೆ. **ಏಹಿಂ ದೋಹಿಂ ವಿ**— ಈ ಶುಭಾಶುಭಪರಿಣಾಮಗಳೆರಡರಿಂದಲೂ **ವಿವಜ್ಜಿಯಉ**— ಬಿಡಲ್ಪಟ್ಟ **ಸುದ್ಧು**— ಶುದ್ಧಪರಿಣಾಮವು ಅಥವಾ ಶುದ್ಧಪರಿಣಾಮಿಯಾದ ಜೀವನು **ಕಮ್ಮು ಣ ಬಂಧಇ**— ಜ್ಞಾನಾವರಣಾದಿಕರ್ಮಗಳನ್ನು ಬಂಧಿಸಿಕೊಳ್ಳುವುದಿಲ್ಲ ಅರ್ಥಾತ್ ಶುಭಾಶುಭಕರ್ಮಬಂಧವನ್ನು ಮಾಡಿಕೊಳ್ಳುವುದಿಲ್ಲ.

**ಭಾವಾರ್ಥ** — ಪರಿಶುದ್ಧವಾದ ಸ್ಫಟಿಕಮಣಿಯ ಹಿಂದೆ ಕಪ್ಪುಬಣ್ಣದ ವಸ್ತುವನ್ನಿಟ್ಟರೆ ,ಅದು ಕಪ್ಪಾಗಿಯೂ ಹಳದಿಬಣ್ಣದ ವಸ್ತುವನ್ನಿಟ್ಟರೆ ಹಳದಿಬಣ್ಣವುಳ್ಳುದಾಗಿಯೂ ಕಾಣುತ್ತದೆ  ಯಾವವಸ್ತುವನ್ನೂ ಇಡದಿದ್ದರೆ ಅದು ಶುದ್ಧಸ್ಫಟಿಕರೂಪದಿಂದ ಕಾಣುತ್ತದೆ.  ಅದರಂತೆಯೇ ಜೀವನು ಅಶುಭ-ಶುಭ-ಶುದ್ಧೋಪಯೋಗರೂಪದಿಂದ ಪರಿಣಮಿಸುತ್ತಾನೆ  ಮಿಥ್ಯಾತ್ವವಿಷಯಕಷಾಯಾದಿಗಳ ಅವಲಂಬನೆ(ಸಹಾಯತೆ)ಯಿಂದ ಅಶುಭೋಪಯೋಗಪರಿಣತನಾಗಿ ಪಾಪಬಂಧವನ್ನು ಮಾಡಿಕೊಳ್ಳುತ್ತಾನೆ. ಪಂಚಪರಮೇಷ್ಠಿಗಳ ಗುಣಸ್ಮರಣೆ ಮತ್ತು ದಾನಪೂಜಾದಿಗಳ ಅವಲಂಬನೆಯಿಂದ

ಶುಭೋಪಯೋಗಪರಿಣತನಾಗಿ ಸಂಸಾರವಿಚ್ಛೇದಪೂರ್ವಕವಾಗಿ ತೀರ್ಥಂಕರತ್ವನಾಮ ಕರ್ಮವೊದಲಾದ ವಿಶಿಷ್ಟಪುಣ್ಯಬಂಧನನ್ನು ಅನಿಚ್ಛಾಪ್ರವೃತ್ತಿಯಿಂದ ಬಂಧಿಸಿಕೊಳ್ಳು ತ್ತಾನೆ ಮತ್ತು ಶುದ್ಧಾತ್ಮಾನಲಂಬನೆಯಿಂದ ಶುದ್ಧೋಪಯೋಗಪರಿಣತನಾಗಿ ಕೇವಲ ಜ್ಞಾನಾದ್ಯನಂತಗುಣರೂಪವಾದ ಮೋಕ್ಷವನ್ನು ಪಡೆಯುತ್ತಾನೆ ಅತಏವ ಶುಭಾ ಶುಭಶುದ್ಧೋಪಯೋಗಗಳಲ್ಲಿ ಮುಖ್ಯತಃ ಶುದ್ಧೋಪಯೋಗವೇ ಗ್ರಾಹ್ಯವಾಗಿರುತ್ತ ದೆಂದು ತಾತ್ಪರ್ಯವು

ಹೀಗೆ ನಲುವತ್ತೊಂದು ಸೂತ್ರಗಳ ಮಧ್ಯದಲ್ಲಿ ಐದು ಸೂತ್ರಗಳಿಂದ ಶುದ್ಧೋಪ ಯೋಗದ ವ್ಯಾಖ್ಯಾನವು ಮುಗಿದುದು.

ಇನ್ನು ವೀತರಾಗಸ್ವಸಂವೇದನಜ್ಞಾನದ ಮುಖ್ಯತೆಯಿಂದ ಹದಿನೈದು ಸೂತ್ರಗಳು ಹೇಳಲ್ಪಡುತ್ತವೆ:—

**ದಾಣೆಂ ಲಬ್ಭಇ ಭೋಉ ಪರ, ಇಂದತ್ತಣು ವಿ ತವೇಣ ।**
**ಜಮ್ಮಣಮರಣವಿವಜ್ಜಿಯಉ, ಪಉ ಲಬ್ಭಇ ಣಾಣೇಣ ॥ ೭೨ ॥**

"ದಾನೇನ ಲಭ್ಯತೇ ಭೋಗಃ ಪರಂ ಇಂದ್ರತ್ವಮಪಿ ತಪಸಾ ।
ಜನ್ಮಮರಣವಿವರ್ಜಿತಂ ಪದಂ ಲಭ್ಯತೇ ಜ್ಞಾನೇನ ॥ ೭೨ ॥"

**ಅನ್ವಯಾರ್ಥ:**— **ದಾಣೆಂ**— ದಾನದಿಂದ **ಪರ**— ನಿಯಮದಿಂದ **ಭೋಉ ಲಬ್ಭಇ**— ಭೋಗ (ಪಂಚೇಂದ್ರಿಯವಿಷಯಭೋಗ)ವು ಪ್ರಾಪ್ತವಾಗುತ್ತದೆ **ತವೇಣ**- ತಪಸ್ಸಿನಿಂದ **ಇಂದತ್ತಣು ವಿ**— ಇಂದ್ರತ್ವ (ದೇವೇಂದ್ರಪದವಿ)ವೂ ಲಭಿಸುತ್ತದೆ. ಹಾಗೆಯೇ **ಣಾಣೇಣ**— ವೀತರಾಗಸ್ವಸಂವೇದನಜ್ಞಾನದಿಂದ **ಜಮ್ಮಣಮರಣವಿವಜ್ಜಿ ಯಉ**— ಜನ್ಮಮರಣ-ರಹಿತವಾದ **ಪಉ ಲಬ್ಭಇ**-ಸ್ಥಾನ (ಮೋಕ್ಷ)ವು ದೊರಕುತ್ತದೆ.

**ಭಾವಾರ್ಥ:**— ಸಮ್ಯಕ್ತ್ವಸಹಿತವಾದ ಆಹಾರ ಅಭಯ ಭೈಷಜ್ಯ ಮತ್ತು ಶಾಸ್ತ್ರ ದಾನಗಳಿಂದ ಪರಂಪರೆಯಿಂದ ಮೋಕ್ಷಪ್ರಾಪ್ತಿಯಾಗುವುದಾದರೂ ಅದು ದೇವೇಂದ್ರ ಚಕ್ರವರ್ತ್ಯಾದಿ ವಿಭೂತಿಸಹಿತವಾಗಿ ಉಂಟಾಗುತ್ತದೆ ಅರ್ಥಾತ್ ಚತುರ್ವಿಧದಾನ ಗಳಿಂದ ಮೊದಲು ದೇವೇಂದ್ರಚಕ್ರವರ್ತ್ಯಾದಿವಿಷಯಭೋಗಗಳ ಪ್ರಾಪ್ತಿಯುಂಟಾಗಿ ಅನಂತರ ಪರಂಪರೆಯಿಂದ ಮುಕ್ತಿಯು ಲಭಿಸುತ್ತದೆ. ಸಮ್ಯಕ್ತ್ವರಹಿತವಾದ ದಾನ ಗಳಿಂದ ಇಂದ್ರಿಯವಿಷಯಭೋಗಗಳು ಲಭಿಸುತ್ತವೆ. ಈ ವಿಷಯವನ್ನು ಪಂಡಿತ ಆಶಾಧರರು **"ಸಾಗಾರಧರ್ಮಾಮೃತ"**ದಲ್ಲಿ ಹೀಗೆ ಹೇಳಿದ್ದಾರೆ:—

***"ನ್ಯಜ್ಮಧ್ಯೋತ್ತಮಕುತ್ಸ್ಯಭೋಗಜಗತೀಭುಕ್ತ್ವಾವಶೇಷಾದ್ವೃಷಾ— ।**
**ತ್ತಾದೃಕ್‌ಪಾತ್ರವಿತೀರ್ಣಭುಕ್ತಿರಸುದೃಗ್ದೇವೊ ಯಥಾಸ್ವಂ ಭವೇತ್ ॥**
**ಸದ್ದೃಷ್ಟಿಸ್ತು ಸುಪಾತ್ರದಾನಸುಕೃತೋದ್ರೇಕಾತ್ಸುಭುಕ್ತ್ವೋತ್ತಮ— ।**
**ಸ್ವರ್ಭೂರ್ಮರ್ತ್ಯಪದೋಽಶ್ನುತೇ ಶಿವಪದಂ ವ್ಯರ್ಥಸ್ತ್ವಪಾತ್ರೇ ವ್ಯಯಃ ॥"**

---

***ಸಾಗಾರಧರ್ಮಾಮೃತ, ಅಧ್ಯಾಯ—೨, ಶ್ಲೋಕ—೬೭.**

ಅರ್ಥಾತ್ ಮಿಥ್ಯಾದೃಷ್ಟಿಯು ಉತ್ತಮ-ಮಧ್ಯಮ-ಜಘನ್ಯ ಪಾತ್ರಗಳಿಗೆ ದಾನವನ್ನು ಮಾಡಿದುದಾದರೆ ಆತನು ಆ ದಾನದ ಪುಣ್ಯದಿಂದ ಅನುಕ್ರಮವಾಗಿ ಉತ್ತಮ-ಮಧ್ಯಮ-ಜಘನ್ಯಭೋಗಭೂಮಿಯಲ್ಲಿ ಜನಿಸಿ ಅಲ್ಲಿಯ ಭೋಗಗಳನ್ನನುಭವಿಸಿ ಮತ್ತೂ ಉಳಿದ ಪುಣ್ಯದಿಂದ ಅದಕ್ಕನುಗುಣವಾಗಿ ದೇವಪರ್ಯಾಯವನ್ನು ಪಡೆಯುವನು. ಸಮ್ಯಗ್ದೃಷ್ಟಿಯು ಸತ್ಪಾತ್ರದಾನಮಾಡಿದ ಪುಣ್ಯದ ಫಲದಿಂದ ಉತ್ತಮಭೋಗಭೂಮಿಯಲ್ಲಿ ಜನಿಸಿ ಅಲ್ಲಿಯ ಭೋಗಗಳನ್ನನುಭವಿಸಿ ಮತ್ತೂ ಉಳಿದ ಪುಣ್ಯದ ಬಾಹುಲ್ಯತೆಯಿಂದ ದೇವೇಂದ್ರ ಚಕ್ರವರ್ತ್ಯಾದಿಪದವಿಯನ್ನು ಪಡೆದು ಆ ಮೇಲೆ (ಪರಂಪರೆಯಿಂದ) ಶಿವಪದ (ಮೋಕ್ಷ)ವನ್ನೂ ಪಡೆಯುವನು (ಆದರೆ ಅಪಾತ್ರಕ್ಕೆ ದಾನಮಾಡುವುದು ವ್ಯರ್ಥವು ಅಥವಾ ಅನಿಷ್ಟಫಲವನ್ನುಂಟುಮಾಡುವಂತಹುದು ) ಅತಏವ ದಾನದಿಂದ ಇಂದ್ರಿಯವಿಷಯ ಭೋಗಗಳುಂಟಾಗುತ್ತವೆಂಬುದು ಸ್ಪಷ್ಟವಾಗುತ್ತದೆ ಇನ್ನು ಸಮ್ಯಕ್ತ್ವಸಹಿತವಾದ ತಪಸ್ಸಿನಿಂದ ನಿರ್ವಾಣವು ಲಭಿಸುವುದಾದರೂ ಅದು ದೇವೇಂದ್ರ ಚಕ್ರವರ್ತ್ಯಾದಿವಿಭೂತಿ ಪೂರ್ವಕವಾಗಿಯೇ ಲಭಿಸುತ್ತದೆ ಆದರೆ ಸವಿಕಲ್ಪಾವಸ್ಥೆಯಲ್ಲಿ ವೀತರಾಗಸ್ವಸಂವೇದನಸಮ್ಯಗ್ಜ್ಞಾನದಿಂದ ದೇವೇಂದ್ರಚಕ್ರವರ್ತ್ಯಾದಿವಿಭೂತಿವಿಶೇಷಗಳು ಲಭಿಸುವುವಾದರೂ ನಿರ್ವಿಕಲ್ಪವೀತರಾಗಸ್ವಸಂವೇದನಜ್ಞಾನದಿಂದ ಮೋಕ್ಷವೇ ಲಭಿಸುತ್ತದೆ. ಅರ್ಥಾತ್ ನಿರ್ವಿಕಲ್ಪವೀತರಾಗಸ್ವಸಂವೇದನಸಮ್ಯಗ್ಜ್ಞಾನವು ಸಾಕ್ಷಾತ್ ಮೋಕ್ಷ ಕಾರಣವಾಗಿರುತ್ತದೆಂದು ಭಾವವು. ಹೀಗೆ ವಿಜ್ಞಾನದಿಂದಲೇ ಮೋಕ್ಷವುಂಟಾಗುತ್ತಿರಲು “ಸಾಂಖ್ಯ”ಮತೀಯರು “ಜ್ಞಾನಮಾತ್ರದಿಂದಲೇ ಮೋಕ್ಷವುಂಟಾಗುತ್ತದೆ” ಎಂದು ಹೇಳುವುದರಲ್ಲಿ ದೋಷವೇನು? ಎಂಬ ಶಂಕೆಗೆ ಸಮಾಧಾನವೇನೆಂದರೆ:—ಜಿನಶಾಸನದಲ್ಲಿ ವೀತರಾಗನಿರ್ವಿಕಲ್ಪಸ್ವಸಂವೇದನಸಮ್ಯಗ್ಜ್ಞಾನವು ಮೋಕ್ಷಕ್ಕೆ ಕಾರಣವಾಗಿರುತ್ತದೆಂದು ಹೇಳಲ್ಪಟ್ಟಿದೆ ಇಲ್ಲಿ ಜ್ಞಾನಕ್ಕೆ ಕೊಟ್ಟಿರುವ “ವೀತರಾಗ” ಎಂಬ ವಿಶೇಷಣದಿಂದ ಚಾರಿತ್ರವೂ “ಸಮ್ಯಕ್” ಎಂಬ ವಿಶೇಷಣದಿಂದ ಸಮ್ಯಕ್ತ್ವವೂ ಗ್ರಾಹ್ಯವಾಗಿರುತ್ತದೆ. ಅನೇಕ ಔಷಧದ್ರವ್ಯಗಳ ಸಮ್ಮಿಶ್ರಣದಿಂದ ತಯಾರಿಸಲ್ಪಟ್ಟ ಚೂರ್ಣವು ಒಂದೇ ಔಷಧದ ಹೆಸರಿನಿಂದ ಹೇಳಲ್ಪಡುವುದಾದರೂ ಅದರಲ್ಲಿ ಅನೇಕದ್ರವ್ಯಗಳು ಸೇರಿರುವಂತೆ ವೀತರಾಗನಿರ್ವಿಕಲ್ಪಸ್ವಸಂವೇದನಸಮ್ಯಗ್ಜ್ಞಾನವೆನ್ನುವಲ್ಲಿ ಸಮ್ಯಕ್ತ್ವಚಾರಿತ್ರಗಳೂ ಸೇರಿರುತ್ತವೆ. ಸಾಂಖ್ಯರು ಹೇಳುವ ಜ್ಞಾನದಲ್ಲಿ ವೀತರಾಗವಿಶೇಷಣವಾಗಲೀ ಸಮ್ಯಗ್ವಿಶೇಷಣವಾಗಲೀ ಇರುವುದಿಲ್ಲ. ಅತಏವ ಅವರ ಮಾನ್ಯತೆಯು ದೋಷಯುಕ್ತವಾಗಿರುತ್ತದೆಂದು ಭಾವವು.

**ದೇಉ ಣಿರಂಜಣು ಇಉಂ ಭಣಇ, ಣಾಣಿಂ ಮುಕ್ಖು ಣ ಭಂತಿ ।**
**ಣಾಣವಿಹೀಣಾ ಜೀವಡಾ, ಚಿರು ಸಂಸಾರು ಭಮಂತಿ ॥ ೭೩ ॥**

“ದೇವಃ ನಿರಂಜನಃ ಏವಂ ಭಣತಿ ಜ್ಞಾನೇನ ಮೋಕ್ಷೋ ನ ಭ್ರಾಂತಿಃ ।
ಜ್ಞಾನವಿಹೀನಾ ಜೀವಾಃ ಚಿರಂ ಸಂಸಾರಂ ಭ್ರಮಂತಿ ॥ ೭೩ ॥”

**ಅನ್ವಯಾರ್ಥ:—ಣಾಣೆ**— ವೀತರಾಗಸ್ವಸಂವೇದನರೂಪವಾದ ಸಮ್ಯಗ್ಜ್ಞಾನ ದಿಂದ **ಮುಕ್ಖ**— ಮೋಕ್ಷವುಂಟಾಗುತ್ತದೆ ಈ ವಿಷಯದಲ್ಲಿ **ಣ ಭಂತಿ**— ಸಂದೇಹ ವಿಲ್ಲ. ಮತ್ತು **ಣಾಣವಿಹೀಣಾ ಜೀವಡಾ**— ವೀತರಾಗಸ್ವಸಂವೇದನಜ್ಞಾನರಹಿತ ರಾದ ಜೀವರು **ಚಿರು**-ಬಹುಕಾಲದವರೆಗೆ **ಸಂಸಾರು ಭಮಂತಿ**— ಸಂಸಾರದಲ್ಲಿ ಭ್ರಮಿಸುತ್ತಾರೆ. **ಇಉಂ**-ಹೀಗೆ **ದೇಉ ಣಿರಂಜಣು**- ಅನಂತಜ್ಞಾನಾದಿಗುಣಸಹಿ ತರೂ ಅಷ್ಟಾದಶದೋಷರಹಿತರೂ ಆದ ವೀತರಾಗಪರಮದೇವರು **ಭಣಇ**— ಹೇಳು ತ್ತಾರೆ

**ಭಾವಾರ್ಥ**:-ಯದ್ಯಪಿ ವೀತರಾಗಸ್ವಸಂವೇದನಜ್ಞಾನದೊಡನೆ ಸಮ್ಯಕ್ತ್ವಚಾರಿತ್ರ ಗಳು ಸೇರಿರುತ್ತವಾದರೂ ಇಲ್ಲಿ ಸಮ್ಯಗ್ಜ್ಞಾನದ ವಿವಕ್ಷೆಯಿಂದ ವೀತರಾಗಸ್ವಸಂವೇ ದನ ಜ್ಞಾನವನ್ನು ಮುಖ್ಯತಃ ಹೇಳಿದುದಾಗಿದೆ ಅರ್ಥಾತ್ ಇಲ್ಲಿ ಜ್ಞಾನವು ಮುಖ್ಯವಾ ಗಿಯೂ ಸಮ್ಯಕ್ತ್ವಚಾರಿತ್ರಗಳು ಗೌಣ(ಅಮುಖ್ಯ)ವಾಗಿಯೂ ಹೇಳಲ್ಪಟ್ಟಿರುತ್ತವೆಂದು ತಿಳಿಯಬೇಕು.

**ಣಾಣವಿಹೀಣಹಂ ಮೊಕ್ಖಪಉ, ಜೀವ ಮ ಕಾಸು ವಿ ಜೋಇ ।**
**ಬಹುಏಂ ಸಲಿಲವಿರೋಲಿಯಇಂ, ಕರು ಚೊಪ್ಪಡಉ ಣ ಹೋಇ ॥೭೪॥**

"ಜ್ಞಾನವಿಹೀನಸ್ಯ ಮೋಕ್ಷಪದಂ ಜೀವ ಮಾ ಕಸ್ಯಾಪಿ ಅದ್ರಾಕ್ಷೀಃ ।
ಬಹುನಾ ಸಲಿಲವಿಲೋಡಿತೇನ ಕರಃ ಚಿಕ್ಕಣೋ ನ ಭವತಿ ॥ ೭೪ ॥"

**ಅನ್ವಯಾರ್ಥ**·—**ಜೀವ**— ಎಲೈ ಜೀವನೇ! **ಣಾಣವಿಹೀಣಹಂ**— ವೀತರಾಗ ಸ್ವಸಂವೇದನಸಮ್ಯಗ್ಜ್ಞಾನರಹಿತನಾದ **ಕಾಸು ವಿ**— ಯಾವನಿಗಾದರೂ **ಮೊಕ್ಖಪಉ** ಮೋಕ್ಷಪದವು ಲಭಿಸುವುದೆಂದು **ಮ ಜೋಇ**— ನೋಡಬೇಡ ಅರ್ಥಾತ್ ತಿಳಿಯ ಬೇಡ ಏಕೆಂದರೆ **ಬಹುಏಂ**— ಬಹಳವಾಗಿ **ಸಲಿಲವಿರೋಲಿಯಇಂ**— ನೀರಿನಲ್ಲಿ ಅಳ್ಳಾಡಿಸುವುದರಿಂದ ಅರ್ಥಾತ್ ನೀರಿನಿಂದ ತೊಳೆಯುವುದರಿಂದ **ಕರು**— ಹಸ್ತ(ಕೈ)ವು **ಚೊಪ್ಪಡಉ ಣ ಹೋಇ**— ಸ್ನಿಗ್ಧ(ಜಿಗುಟುಳ್ಳುದು)ವಾಗುವುದಿಲ್ಲ.

**ಭಾವಾರ್ಥ** — ನಿಜಶುದ್ಧಾತ್ಮಸಂವಿತ್ತಿರೂಪವಾದ ಸಮ್ಯಗ್ಜ್ಞಾನದಿಂದ ರಹಿತ ನಾದ ಹಾಗೂ ತನ್ನ ಖ್ಯಾತಿಪೂಜಾಲಾಭಾದಿದುರ್ಭಾವಗಳಿಂದ ಪರಿಣತವಾದ ಚಿತ್ತ ವನ್ನು ಯಾರೂ ತಿಳಿಯಲಾರರೆಂದು ಭಾವಿಸುವವನಾಗಿ ಲೋಕರಂಜನೆಗಾಗಿ ಬಕಪಕ್ಷಿ ಯಂತೆ ಬಾಹ್ಯವೇಷಧಾರಿಯಾಗಿ ಮಾಯಾದಿ ಶಲ್ಯಗಳಿಂದ ಕಲುಷಿತಚಿತ್ತವುಳ್ಳವನಾದ ಯಾವನೊಬ್ಬ ಜೀವನೂ ಮುಕ್ತಿಯನ್ನು ಪಡೆಯಲಾರನು ಅರ್ಥಾತ್ ಸಮ್ಯಗ್ಜ್ಞಾನ ರಹಿತವಾದ ತಪಶ್ಚರಣಾದಿಗಳಿಂದ ಎಂದೂ ಮೋಕ್ಷವುಂಟಾಗದು. ಸ್ನಿಗ್ಧ(ಜಿಗುಟು) ಗುಣವಿಲ್ಲದ ನೀರಿನಿಂದ ಕೈಯನ್ನು ಎಷ್ಟುಬಾರಿ ತೊಳೆದರೂ ಕೈಯು ಜಿಗಟಾಗದು. ಅದರಂತೆ ವೀತರಾಗಶುದ್ಧಾತ್ಮಾನುಭೂತಿರೂಪವಾದ ಸಮ್ಯಗ್ಜ್ಞಾನದ ಹೊರತು ಎಷ್ಟು

ಕಾಲ(ಮಿಥ್ಯಾ)ತಪಶ್ಚರಣಾದಿಗಳನ್ನು ಮಾಡಿದರೂ ಜೀವನು ಪರಿಶುದ್ಧ(ಮುಕ್ತ)ನಾಗ ಲಾರನು. ಇಲ್ಲಿಯೂ ಸಮ್ಯಗ್ಜ್ಞಾನದ ಮುಖ್ಯತೆಯನ್ನು ಪ್ರತಿಪಾದಿಸಿರುವರೆಂದು ಭಾವಾರ್ಥವು

**ಜಂ ಣಿಯಬೋಹಹಂ ಬಾಹಿರಉ, ಣಾಣು ವಿ ಕಜ್ಜು ಣ ತೇಣ ।**
**ದುಕ್ಖಹಂ ಕಾರಣು ಜೇಣ ತಉ, ಜೀವಹಂ ಹೋಇ ಖಣೇಣ ॥ ೭೫ ॥**

"ಯತ್ ನಿಜಬೋಧಾದ್ಬಾಹ್ಯಂ ಜ್ಞಾನಮಪಿ ಕಾರ್ಯಂ ನ ತೇನ ।
ದುಃಖಸ್ಯ ಕಾರಣಂ ಯೇನ ತಪಃ ಜೀವಸ್ಯ ಭವತಿ ಕ್ಷಣೇನ ॥ ೭೫ ॥"

**ಅನ್ವಯಾರ್ಥ— ಜಂ ಣಾಣು ವಿ**–ಯಾವ ಜ್ಞಾನವು ಸಹ **ಣಿಯಬೋಹಹಂ ಬಾಹಿರಉ**— ಆತ್ಮಜ್ಞಾನದಿಂದ ಬಾಹಿರ(ರಹಿತ)ವಾಗಿರುವುದೋ **ತೇಣ**— ಆ ಜ್ಞಾನ ದಿಂದ **ಣ ಕಜ್ಜು** — ಕಾರ್ಯವಿರುವುದಿಲ್ಲ. ಅರ್ಥಾತ್ ಪ್ರಯೋಜನವಿರುವುದಿಲ್ಲ. **ಜೇಣ**– ಯಾವ ಕಾರಣದಿಂದ ಅರ್ಥಾತ್ ವೀತರಾಗಸ್ವಸಂವೇದನರೂಪ-ಆತ್ಮಜ್ಞಾನರಹಿತವಾಗಿ ರುವುದರಿಂದ **ತಉ** — ತಪಶ್ಚರಣೆಯು **ಖಣೇಣ**— ಕ್ಷಣದಿಂದ(ಶೀಘ್ರವಾಗಿ) **ಜೀವಹಂ**– ಜೀವನಿಗೆ **ದುಕ್ಖಹಂ ಕಾರಣು ಹೋಇ**— ದುಃಖಕ್ಕೆ ಕಾರಣವಾಗುತ್ತದೆ.

**ಭಾವಾರ್ಥ** —ಆತ್ಮಜ್ಞಾನರಹಿತವಾದ ಜ್ಞಾನವು ಮೋಕ್ಷಕ್ಕೆ ಕಾರಣವಾಗುವು ದಿಲ್ಲ ಹಾಗೆಯೇ ಸಮ್ಯಗ್ಜ್ಞಾನರಹಿತವಾದ ಕಾಯಕ್ಲೇಶಾದಿ ತಪಶ್ಚರಣೆಗಳೂ ಸಾಂಸಾ ರಿಕವಿಷಯಭೋಗಗಳ ಪ್ರಾಪ್ತಿಗೆ ಕಾರಣವಾಗುತ್ತವಲ್ಲದೆ ಮೋಕ್ಷಕ್ಕೆ ಕಾರಣವಾಗು ವುದಿಲ್ಲ ಆತ್ಮಜ್ಞಾನರಹಿತನಾದ ಜೀವನು ಮಾಯಾ, ಮಿಥ್ಯಾ, ನಿದಾನರೂಪವಾದ ಶಲ್ಯತ್ರಯದಿಂದ ಕೂಡಿರುವವನಾಗಿ ದೃಷ್ಟಶ್ರುತಾನುಭೂತ ಅರ್ಥಾತ್ ತಾನು ನೋಡಿ ರುವ ಕೇಳಿರುವ ಹಾಗೂ ಅನುಭವಿಸಿರುವ ವಿಷಯಭೋಗಗಳ ಆಶಾರೂಪವಾದ ನಿದಾನದಿಂದ ತನಗೆ ಮುಂದೆ ಉತ್ತಮರೂಪ ಲಾವಣ್ಯ ಸೌಭಾಗ್ಯ ಹಾಗೂ ಚಕ್ರ ವರ್ತ್ಯಾದಿ ಪದವಿಗಳು ದೊರೆಯಬೇಕೆಂಬ ಅಭಿಲಾಷೆಯಿಂದ ದಾನಪೂಜೆಗಳನ್ನೂ ಕಾಯ ಕ್ಲೇಶಾದಿ ತಪಶ್ಚರಣೆಯನ್ನೂ ಮಾಡುತ್ತಾನೆ. ಈ ದಾನಪೂಜಾದಿ ಶುಭಕಾರ್ಯಗಳಿಂ ದುಂಟಾದ ಪುಣ್ಯದಿಂದ ಆತನು ಚಕ್ರವರ್ತ್ಯಾದಿಪದವಿಗಳನ್ನು ಪಡೆಯುತ್ತಾನೆ ಅರ್ಥಾತ್ ವಿಷಯಭೋಗಗಳನ್ನನುಭವಿಸುತ್ತಾನೆ ಆದರೆ ಇದು ಸಂಸಾರಕ್ಕೇನೇ ಕಾರಣವಾಗು ತ್ತದಲ್ಲದೆ ಮೋಕ್ಷಕ್ಕೆ ಕಾರಣವಾಗುವುದಿಲ್ಲ. ಅತಏವ ಆತ್ಮಜ್ಞಾನರಹಿತವಾದ ಶಾಸ್ತ್ರ ಜ್ಞಾನವೂ ತಪಶ್ಚರಣಾದಿಗಳೂ ಪುಣ್ಯಬಂಧಕ್ಕೆ ಮಾತ್ರ ಕಾರಣವಾಗುತ್ತವಲ್ಲದೆ ಮೋಕ್ಷ ಕಾರಣಗಳಾಗಿರುವುದಿಲ್ಲವೆಂದು ಭಾವವು. ಇಂದ್ರಿಯವಿಷಯಭೋಗಗಳಿಂದುಂಟಾಗುವ ಸುಖವು ನಿಜವಾದ ಸುಖವಾಗಿರದೆ ವಸ್ತುತಃ ದುಃಖವೇ ಆಗಿರುತ್ತದೆ. ಹೀಗೆ ಆತ್ಮ ಜ್ಞಾನಸಹಿತವಾದ ತಪಶ್ಚರಣಾದಿಗಳೇ ಮೋಕ್ಷಕ್ಕೆ ಕಾರಣವಾಗಿರುವುದರಿಂದ ವೀತರಾಗ ಸ್ವಸಂವೇದನರೂಪವಾದ ಆತ್ಮಜ್ಞಾನವೇ ಮುಖ್ಯತಃ ಉಪಾದೇಯವಾಗಿರುತ್ತದೆಂದಭಿ ಪ್ರಾಯವು

**ತಂ ಣಿಯಣಾಣಂ ಜಿ ಹೋಇ ಣವಿ, ಜೇಣ ಪವಡ್ಢಇ ರಾಉ ।**
**ದಿಣಯರಕಿರಣಹಂ ಪುರಉ ಜಿಯ, ಕಿಂ ವಿಲಸಇ ತಮರಾಉ ॥ ೭೬ ॥**

"ತತ್ ನಿಜಜ್ಞಾನಮೇವ ಭವತಿ ನಾಪಿ ಯೇನ ಪ್ರವರ್ಧತೇ ರಾಗಃ ।
ದಿನಕರಕಿರಣಾನಾಂ ಪುರತಃ ಜೀವ ಕಿಂ ವಿಲಸತಿ ತಮೋರಾಗಃ ॥ ೭೬ ॥"

**ಅನ್ವಯಾರ್ಥ:— ಜಿಯ**— ಎಲೈ ಜೀವನೇ! **ಜೇಣ**— ಯಾವ ಜ್ಞಾನದಿಂದ **ರಾಉ ಪವಡ್ಢಇ**— ಪಂಚೇಂದ್ರಿಯವಿಷಯಾದಿಪರದ್ರವ್ಯಗಳಲ್ಲಿ ಪ್ರೀತಿಯು ಹೆಚ್ಚಾಗಿ ವೃದ್ಧಿಯಾಗುತ್ತದೋ **ತಂ**— ಅದು **ಣಿಯಣಾಣಂ ಜಿ ಹೋಇ ಣವಿ**— ನಿಜಜ್ಞಾನ (ಆತ್ಮಜ್ಞಾನ)ವೇ ಆಗಿರುವುದಿಲ್ಲ. ಏಕೆಂದರೆ, **ದಿಣಯರಕಿರಣಹಂ ಪುರಉ**— ಸೂರ್ಯನ ಕಿರಣಗಳ ಮುಂದೆ **ತಮರಾಉ**— ಕತ್ತಲೆಯ ಕಪ್ಪು ಅಥವಾ ಕತ್ತಲೆಯ ವ್ಯಾಪ್ತಿ(ಹರಡುವಿಕೆ)ಯು **ಕಿಂ ವಿಲಸಇ**— ಶೋಭಿಸುತ್ತದೆಯೋ? ಅರ್ಥಾತ್ ಶೋಭಿಸುವುದಿಲ್ಲ (ಅಥವಾ ಇರುವುದಿಲ್ಲ)ವೆಂದರ್ಥವು.

**ಭಾವಾರ್ಥ**— ಸೂರ್ಯಕಿರಣಗಳಿರುವಲ್ಲಿ ಅಂಧಕಾರ(ಕತ್ತಲೆ)ವಿರುವುದಿಲ್ಲ ಅದರಂತೆ ಆತ್ಮಜ್ಞಾನವಿರುವಲ್ಲಿ ಇಂದ್ರಿಯವಿಷಯಾನುರಾಗವು ಇರುವುದಿಲ್ಲ ಸೂರ್ಯಕಿರಣಗಳು ಕತ್ತಲೆಯನ್ನು ವಿರೋಧಿಸು(ಹೋಗಲಾಡಿಸು)ವಂತೆ ಆತ್ಮಜ್ಞಾನವು ವಿಷಯಾನುರಾಗವನ್ನು ವಿರೋಧಿಸುತ್ತದೆ. ಆದುದರಿಂದ ಒಬ್ಬ ಜೀವನಲ್ಲಿ ಶಾಸ್ತ್ರಾಭ್ಯಾಸಾದಿಗಳಿಂದುಂಟಾದ ಜ್ಞಾನವಿರುತ್ತಿದ್ದರೂ ಆತನಲ್ಲಿ ಅನಾಕುಲತ್ವಲಕ್ಷಣವುಳ್ಳ ಪಾರಮಾರ್ಥಿಕ ಸುಖಕ್ಕೆ ವ್ಯತಿರಿಕ್ತವಾಗಿ ಆಕುಲತೆಯನ್ನುಂಟುಮಾಡುವ ರಾಗಾದಿಭಾವಗಳು ವೃದ್ಧಿಯಾಗುತ್ತಿರುವುವಾದರೆ ಆತನ ಆ ಶಾಸ್ತ್ರಾಭ್ಯಾಸಜನಿತಪರಿಜ್ಞಾನವು ಯಥಾರ್ಥವಾದ (ಸಮ್ಯಕ್)ಜ್ಞಾನವಾಗಿರುವುದಿಲ್ಲ. ಏಕೆಂದರೆ ವಿಶಿಷ್ಟಮೋಕ್ಷಫಲದಾಯಕವಾದುದೇ ನಿಶ್ಚಯಸಮ್ಯಗ್ಜ್ಞಾನವು.

**ಅಪ್ಪಾ ಮಿಲ್ಲಿವಿ ಣಾಣಿಯಹಂ, ಅಣ್ಣು ಣ ಸುಂದರು ವತ್ಥು ।**
**ತೇಣ ಣ ವಿಸಯಹಂ ಮಣು ರಮಇ, ಜಾಣಂತಹ ಪರಮತ್ಥು ॥ ೭೭ ॥**

"ಆತ್ಮಾನಂ ಮುಕ್ತ್ವಾ ಜ್ಞಾನಿನಾಂ ಅನ್ಯನ್ನ ಸುಂದರಂ ವಸ್ತು ।
ತೇನ ನ ವಿಷಯೇಷು ಮನೋ ರಮತೇ ಜಾನತಾಂ ಪರಮಾರ್ಥಮ್ ॥ ೭೭ ॥"

**ಅನ್ವಯಾರ್ಥ:— ಣಾಣಿಯಹಂ**— ಜ್ಞಾನಿಗಳಿಗೆ **ಅಪ್ಪಾ ಮಿಲ್ಲಿವಿ**— ಆತ್ಮನನ್ನು ಬಿಟ್ಟು (ಆತ್ಮನ ಹೊರತು) **ಅಣ್ಣು ಣ ಸುಂದರು ವತ್ಥು**— ಉತ್ತಮವಾದ ವಸ್ತುವು ಬೇರೊಂದಿಲ್ಲ. ಅಥವಾ ಬೇರೆ ಯಾವ ವಸ್ತುವೂ ಸಮೀಚೀನ(ಉತ್ತಮ)ವಾಗಿ ಕಾಣುವುದಿಲ್ಲ. **ತೇಣ**— ಆ ಕಾರಣದಿಂದ **ಪರಮತ್ಥು ಜಾಣಂತಹ**— ಪರಮಾತ್ಮಪದಾರ್ಥವನ್ನು ತಿಳಿದವರ **ಮಣು**— ಮನಸ್ಸು **ಣ ವಿಸಯಹಂ ರಮಇ**— ಪಂಚೇಂದ್ರಿಯ ವಿಷಯ-ಭೋಗಗಳಲ್ಲಿ ಆಸಕ್ತವಾಗುವುದಿಲ್ಲ.

**ಭಾವಾರ್ಥ** — ಮಿಥ್ಯಾತ್ವರಾಗಾದಿಗಳನ್ನು ಬಿಡುವುದರಿಂದ ನಿಜಶುದ್ಧಾತ್ಮಜ್ಞಾನ ಪರಿಣತರಾದ ಸಮ್ಯಗ್ಜ್ಞಾನಿಗಳಿಗೆ ಶುದ್ಧಜ್ಞಾನೈಕಸ್ವಭಾವವುಳ್ಳ ಪರಮಾತ್ಮಪದಾರ್ಥದ ಹೊರತು ಬೇರೆ ಯಾವುದೊಂದು ಪದಾರ್ಥವೂ ಉತ್ತಮವೆಂದೂ ಉಪಾದೇಯವೆಂದೂ ಕಾಣುವುದಿಲ್ಲ ಅತಏವ ಪರಮಾತ್ಮತತ್ತ್ವವನ್ನು ತಿಳಿದಿರುವ ಅವರ ಚಿತ್ತವು ಪರಮಾತ್ಮ ತತ್ತ್ವದಲ್ಲೇ ಆಸಕ್ತವಾಗಿರುತ್ತದಲ್ಲದೆ ಶುದ್ಧಾತ್ಮೋಪಲಬ್ಧಿಗೆ ಪ್ರತಿಪಕ್ಷಗಳಾದ ಪಂಚೇಂದ್ರಿಯವಿಷಯರೂಪವಾದ ಕಾಮಭೋಗಗಳಲ್ಲಿ ರಮಿಸು(ಆಸಕ್ತವಾಗು)ವುದಿಲ್ಲ ಆದುದರಿಂದ ವಿಷಯಭೋಗಗಳಲ್ಲಿ ಆಸಕ್ತರಾಗಿರುವವರು ಅಜ್ಞಾನಿಗಳೆಂದೂ ವಿಷಯವಿಕಾರಗಳಿಂದ ಸರ್ವಥಾ ವಿರಕ್ತರಾಗಿರುವವರು ಜ್ಞಾನಿಗಳೆಂದೂ ತಾತ್ಪರ್ಯವು

**ಅಪ್ಪಾ ಮಿಲ್ಲಿವಿ ಣಾಣಮಉ, ಚಿತ್ತಿ ಣ ಲಗ್ಗಇ ಅಣ್ಣು ।**
**ಮರಗಉ ಜೇಂ ಪರಿಯಾಣಿಯಉ, ತಹುಂ ಕಚ್ಚೇಂ ಕಉ ಗಣ್ಣು ॥೭೮॥**

"ಆತ್ಮಾನಂ ಮುಕ್ತ್ವಾ ಜ್ಞಾನಮಯಂ ಚಿತ್ತೇ ನ ಲಗತಿ ಅನ್ಯತ್ ।
ಮರಕತಃ ಯೇನ ಪರಿಜ್ಞಾತಃ ತಸ್ಯ ಕಾಚೇನ ಕುತೋ ಗಣನಾ ॥ ೭೮ ॥"

**ಅನ್ವಯಾರ್ಥ.— ಣಾಣಮಉ**— ಕೇವಲಜ್ಞಾನಮಯನಾದ ಹಾಗೂ ಕೇವಲಜ್ಞಾನಾಂತರ್ಗತಅನಂತಗುಣಮಯನಾದ **ಅಪ್ಪಾ ಮಿಲ್ಲಿವಿ**— ಆತ್ಮನನ್ನು ಬಿಟ್ಟು **ಅಣ್ಣು**- ಇತರಪದಾರ್ಥವು **ಚಿತ್ತಿ**— ಜ್ಞಾನಿಗಳ ಚಿತ್ತದಲ್ಲಿ **ಣ ಲಗ್ಗಇ**— ಸೇರುವುದಿಲ್ಲ ಅರ್ಥಾತ್ ಮನಸ್ಸಿಗೆ ಪರಪದಾರ್ಥವು ರುಚಿಸುವುದಿಲ್ಲ, **ಜೇಂ**— ಯಾವನಿಂದ **ಮರಗಉ**— ಮರಕತರತ್ನ(ರತ್ನವಿಶೇಷ)ವು **ಪರಿಯಾಣಿಯಉ** — ತಿಳಿಯಲ್ಪಟ್ಟಿದೆಯೋ **ತಹುಂ**— ಆತನಿಗೆ **ಕಚ್ಚೇಂ**- ಗಾಜಿನಿಂದ ಅಥವಾ ಗಾಜಿನಮಣಿಯಿಂದ **ಕಉ ಗಣ್ಣು** ಏನು ಗಣನೆಯು ಅರ್ಥಾತ್ ಏನು ಪ್ರಯೋಜನವು?

**ಭಾವಾರ್ಥ** — ರತ್ನದ ಪರೀಕ್ಷೆಯನ್ನರಿತ ಮನುಷ್ಯನು ಗಾಜಿನ ಮಣಿಯನ್ನು ಲೆಕ್ಕಿಸುವುದಿಲ್ಲ ಹಾಗೆಯೇ ರತ್ನವನ್ನು ಪಡೆದಿರುವ ಮನುಷ್ಯನು ಗಾಜಿನಮಣಿಯನ್ನು ಬಯಸುವುದಿಲ್ಲ. ಅದೇಪ್ರಕಾರವಾಗಿ ನಿಜಾತ್ಮತತ್ತ್ವವನ್ನು ತಿಳಿದಿರುವ ಹಾಗೂ ಸ್ವಾತ್ಮಾನುಭೂತಿಯನ್ನು ಪಡೆದಿರುವ ಆತ್ಮಜ್ಞಾನಿಗಳು ಕೇವಲಜ್ಞಾನಾದ್ಯನಂತಗುಣಮಯನಾದ ನಿಜಾತ್ಮನನ್ನು ಬಿಟ್ಟು ಇತರ ಪರದಾರ್ಥಗಳನ್ನೆಂದೂ ಚಿಂತಿಸುವುದಿಲ್ಲ ಅಥವಾ ಬಯಸುವುದಿಲ್ಲ. ಅವರಿಗೆ ನಿಜಶುದ್ಧಾತ್ಮತತ್ತ್ವವೊಂದೇ ಉಪಾದೇಯವಾಗಿರುತ್ತದಲ್ಲದೆ ಇತರ ಪದಾರ್ಥಗಳಿಂದೇನೂ ಪ್ರಯೋಜವಿರುವುದಿಲ್ಲವೆಂದು ಭಾವವು.

**ಭುಂಜಂತು ವಿ ಣಿಯಕಮ್ಮಫಲು, ಮೋಹಹಂ ಜೋ ಜಿ ಕರೇಇ ।**
**ಭಾಉ ಅಸುಂದರು ಸುಂದರು ವಿ, ಸೋ ಪರ ಕಮ್ಮು ಜಣೇಇ ॥ ೭೯ ॥**

"ಭುಂಜಾನೋಽಪಿ ನಿಜಕರ್ಮಫಲಂ ಮೋಹೇನ ಯ ಏವ ಕರೋತಿ ।
ಭಾವಂ ಅಸುಂದರಂ ಸುಂದರಮಪಿ ನ ಪರಂ ಕರ್ಮ ಜನಯತಿ ॥ ೭೯ ॥"

**ಅನ್ವಯಾರ್ಥ,—ಜೋ ಜಿ—** ಯಾವ ಜೀವನು **ಣಿಯಯಕಮ್ಮಫಲು—** ತನ್ನ (ತಾನುಸಂಪಾದಿಸಿರುವ, ಪೂರ್ವೋಪಾರ್ಜಿತ)ಕರ್ಮಗಳ ಫಲವನ್ನು **ಭುಂಜಂತು ವಿ** ಅನುಭವಿಸುವವನಾಗಿಯೂ **ಮೋಹಹಂ—** ಮೋಹದಿಂದ **ಅಸುಂದರು ಸುಂದರು ವಿ ಭಾಉ—** ಅಶುಭ ಮತ್ತು ಶುಭರೂಪವಾದ ಭಾವವನ್ನು(ಶುಭಾಶುಭಪರಿಣಾಮ ಗಳನ್ನು) **ಕರೇಇ—** ಮಾಡುತ್ತಾನೋ **ಸೋ ಪರ—** ಅತನು ಅಥವಾ ಆ ಶುಭಾಶುಭ ಭಾವವು ನಿಶ್ಚಯವಾಗಿ **ಕಮ್ಮು ಜಣೇಇ—** ಶುಭಾಶುಭಕರ್ಮವನ್ನುಂಟುಮಾಡು ತ್ತಾನೆ ಅರ್ಥಾತ್ ಶುಭಾಶುಭಕರ್ಮಗಳ ಬಂಧವನ್ನು ಮಾಡಿಕೊಳ್ಳುತ್ತಾನೆ (ಅಥವಾ ಭಾವ ಎಂಬ ಅರ್ಥದಲ್ಲಿ–ಶುಭಾಶುಭಕರ್ಮಬಂಧವನ್ನುಂಟುಮಾಡುತ್ತದೆ )

**ಭಾವಾರ್ಥ·—** ಪೂರ್ವೋಪಾರ್ಜಿತಶುಭಾಶುಭಕರ್ಮೋದಯದಿಂದುಂಟಾದ ಸುಖದುಃಖ(ಫಲ)ಗಳನ್ನನುಭವಿಸುತ್ತಿರುವ ಅಜ್ಞಾನಿಯಾದ ಜೀವನು ನಿಜಸ್ವಭಾವದಿಂದ ಚ್ಯುತನಾಗಿ ಮೋಹವಶದಿಂದ ರಾಗದ್ವೇಷಾದಿಭಾವಗಳನ್ನು ಹೊಂದುತ್ತಾನೆ ಅದರಿಂದ ಪುನಃ ನವೀನಕರ್ಮಗಳ ಬಂಧವನ್ನು ಮಾಡಿಕೊಳ್ಳುತ್ತಾನೆ ಅರ್ಥಾತ್ ಜೀವನ ಶುಭಾ ಶುಭಭಾವ(ಪರಿಣಾಮ)ಗಳಿಂದ ಶುಭಾಶುಭಕರ್ಮಗಳ ಆಸ್ರವ ಹಾಗೂ ಬಂಧವುಂಟಾ ಗುತ್ತದೆಂದು ಭಾವವು

**ಭುಂಜಂತು ವಿ ಣಿಯಯಕಮ್ಮಫಲು, ಜೋ ತಹಿ ರಾಉ ಣ ಜಾಇ ।**
**ಸೋ ಣವಿ ಬಂಧಇ ಕಮ್ಮು ಪುಣು, ಸಂಚಿಉ ಜೇಣ ವಿಲಾಇ ॥ ೮೦ ॥**

"ಭುಂಜಾನೋಽಪಿ ನಿಜಕರ್ಮಫಲಂ ಯಃ ತತ್ರ ರಾಗಂ ನ ಯಾತಿ ।
ಸ ನೈವ ಬಧ್ನಾತಿ ಕರ್ಮ ಪುನಃ ಸಂಚಿತಂ ಯೇನ ವಿಲೀಯತೇ ॥ ೮೦ ॥"

**ಅನ್ವಯಾರ್ಥ;—ಜೋ—** ಯಾವ ಜೀವನು **ಣಿಯಯಕಮ್ಮಫಲು—** ತನ್ನ ಕರ್ಮ ಗಳ ಫಲವನ್ನು **ಭುಂಜಂತು ವಿ—** ಅನುಭವಿಸುವವನಾಗಿಯೂ **ತಹಿ—** ಆ ಕರ್ಮ ಫಲಾನುಭವದಲ್ಲಿ **ರಾಉ ಣ ಜಾಇ—** ರಾಗ (ರಾಗದ್ವೇಷ)ವನ್ನು ಹೊಂದುವುದಿಲ್ಲವೋ **ಸೋ–** ಅವನು **ಕಮ್ಮು ಪುಣು—** ಪುನಃ ನವೀನಕರ್ಮವನ್ನು **ಣವಿ ಬಂಧಇ—** ಬಂಧಿಸಿ ಕೊಳ್ಳುವುದಿಲ್ಲ. **ಜೇಣ—** ಯಾವುದರಿಂದ ಅರ್ಥಾತ್ ಕರ್ಮಬಂಧಾಭಾವಪರಿಣಾಮ ದಿಂದ **ಸಂಚಿಉ ವಿಲಾಇ—** ಪೂರ್ವಸಂಚಿತಕರ್ಮವು ನಾಶವಾಗುತ್ತದೆ.

**ಭಾವಾರ್ಥ:—** ನಿಜಶುದ್ಧಾತ್ಮಜ್ಞಾನಿಯಾದ ಜೀವನು ಪೂರ್ವೋಪಾರ್ಜಿತ ಶುಭಾ ಶುಭಕರ್ಮಗಳ ಫಲವನ್ನನುಭವಿಸುತ್ತಿದ್ದರೂ ವೀತರಾಗಚಿದಾನಂದೈಕಸ್ವಭಾವವುಳ್ಳ ನಿಜಶುದ್ಧಾತ್ಮಭಾವನೆಯಿಂದುಂಟಾದ ಸುಖಾಮೃತವನ್ನಾಸ್ವಾದಿಸುವವನಾಗಿ ಸುಖ ದುಃಖಾದಿಗಳಲ್ಲಿ ರಾಗದ್ವೇಷಗಳನ್ನು ಹೊಂದುವುದಿಲ್ಲ. ಅವನ ರಾಗದ್ವೇಷರಹಿತ (ವೀತರಾಗ)ವಾದ ಈ ಪರಿಣಾಮದಿಂದ ನವೀನಕರ್ಮಗಳ ಬಂಧಾಭಾವ (ಸಂವರೆ)ವೂ ಪೂರ್ವಸಂಚಿತಕರ್ಮಗಳ ನಾಶ(ನಿರ್ಜರೆ)ವೂ ಉಂಟಾಗುತ್ತದೆ. ಇಲ್ಲಿ ಕರ್ಮಬಂಧಾ ಭಾವವು ನಿಜಶುದ್ಧಾತ್ಮಜ್ಞಾನಿಯ ಅಪೇಕ್ಷೆಯಿಂದ ಹೇಳಿದುದಾಗಿದೆ. ಅತಏವ ಸಾಂಖ್ಯಾದಿ

ಮತಾವಲಂಬಿಗಳು ಹೇಳುವ—"ಜ್ಞಾನಿಯು ಕರ್ಮೋದಯಫಲವನ್ನನುಭವಿಸುತ್ತಿದ್ದರೂ ಕರ್ಮದಿಂದ ಬದ್ಧನಾಗುವುದಿಲ್ಲ" ಎಂಬ ಮಾತು ಉಚಿತವಾಗಿರುವುದಿಲ್ಲ. ಏಕೆಂದರೆ ಅವರು ಹೇಳುವ ಜ್ಞಾನಿಯಲ್ಲಿ ನಿಜಶುದ್ಧಾತ್ಮಾನುಭೂತಿಲಕ್ಷಣವುಳ್ಳ ವೀತರಾಗಚಾರಿತ್ರ ವಿರುವುದಿಲ್ಲ ಆದುದರಿಂದ ನಿಜಶುದ್ಧಾತ್ಮಾನುಭೂತಿರಹಿತನಾದ ಜೀವನು ರಾಗದ್ವೇಷಾದಿ ಭಾವಗಳನ್ನು ಹೊಂದುವವನಾಗಿ ಕರ್ಮಗಳಿಂದ ಅವಶ್ಯವಾಗಿ ಬಂಧಿಸಲ್ಪಡುತ್ತಾನೆ. ಅತಏವ ಸಾಂಖ್ಯಾದಿಗಳ ಮಾನ್ಯತೆಯು ಸರಿಯಾದುದಲ್ಲವೆಂದು ಭಾವವು

**ಜಂ ಅಣುಮೆತ್ತು ವಿ ರಾಉ ಮಣಿ, ಜಾಮ ಣ ಮಿಲ್ಲಇ ಎತ್ಥು ।**
**ಸೋ ಣವಿ ಮುಚ್ಚಇ ತಾಮ ಜಿಯ, ಜಾಣಂತುವಿ ಪರಮತ್ಥು ॥ ೮೧ ॥**

"ಯಃ ಅಣುಮಾತ್ರಮಪಿ ರಾಗಂ ಮನಸಿ ಯಾವತ್ ನ ಮುಂಚತಿ ಅತ್ರ ।
ನ ನೈವ ಮುಚ್ಯತೇ ತಾವತ್ ಜೀವ ಜಾನನ್ನಪಿ ಪರಮಾರ್ಥಮ್ ॥ ೮೧ ॥"

**ಅನ್ವಯಾರ್ಥಃ** – **ಜಿಯ**— ಎಲೈ ಜೀವನೇ! **ಜೋ**—ಯಾವ ಜೀವನು **ಮಣಿ**— ಮನಸ್ಸಿನಲ್ಲಿ **ಅಣುಮೆತ್ತು ವಿ ರಾಉ**—ಅಣುಮಾತ್ರ(ಸೂಕ್ಷ್ಮ)ವಾದ ರಾಗವನ್ನೂ **ಜಾಮ**–ಎಂದಿನವರೆಗೆ(ಎಷ್ಟುಕಾಲದವರೆಗೆ) **ಣ ಮಿಲ್ಲಇ**—ಬಿಡುವುದಿಲ್ಲವೋ **ತಾಮ** ಅಂದಿನವರೆಗೆ(ಅಷ್ಟುಕಾಲದವರೆಗೆ) **ಸೋ**—ಅವನು **ಎತ್ಥು**— ಈ ಲೋಕದಲ್ಲಿ **ಪರ ಮತ್ಥು**—ಪರಮಾರ್ಥವೆಂದು ಹೇಳಲ್ಪಡುವ ನಿಜಶುದ್ಧಾತ್ಮತತ್ತ್ವವನ್ನು **ಜಾಣಂತು ವಿ**—ತಿಳಿದವನಾದರೂ **ಣವಿ ಮುಚ್ಚಇ**—ಜ್ಞಾನಾವರಣಾದಿಕರ್ಮಗಳಿಂದ ನಿಶ್ಚಯ ವಾಗಿಯೂ ಬಿಡಲ್ಪಡುವುದಿಲ್ಲ.

**ಭಾವಾರ್ಥ**·—ಯಾವ ಜೀವನ ಮನಸ್ಸಿನಲ್ಲಿ ಅಣುಮಾತ್ರ(ಸೂಕ್ಷ್ಮ)ವಾದರೂ ಪಂಚೇಂದ್ರಿಯವಿಷಯಸುಖಾಭಿಲಾಷೆಯಿರುವುದೋ ಅವನು ಆಗಮಜ್ಞಾನದಿಂದ ನಿಜ ಶುದ್ಧಾತ್ಮನನ್ನರಿತವನಾಗಿದ್ದರೂ ವೀತರಾಗಾನುಷ್ಠಾನ(ರಾಗದ್ವೇಷರಹಿತವಾದ ವರ್ತನೆ) ದಿಂದ ರಹಿತನಾಗಿರುವುದರಿಂದ ಕರ್ಮಗಳಿಂದ ಮುಕ್ತನಾಗಲಾರನು. ಆದುದರಿಂದ ಅತಿ ಸೂಕ್ಷ್ಮವಾದ ರಾಗವೂ ಮೋಕ್ಷಕ್ಕೆ ಪ್ರತಿಬಂಧಕವಾಗಿರುತ್ತದೆಂದು ಭಾವವು.

**ಬುಜ್ಝಇ ಸತ್ಥಹಂ ತಉ ಚರಇ, ಪರ ಪರಮತ್ಥು ಣ ವೇಇ ।**
**ತಾವ ಣ ಮುಂಚಇ ಜಾಮ ಣವಿ, ಇಹು ಪರಮತ್ಥು ಮುಣೇಇ ॥ ೮೨ ॥**

"ಬುಧ್ಯತೇ ಶಾಸ್ತ್ರಾಣಿ ತಪಃ ಚರತಿ ಪರಂ ಪರಮಾರ್ಥಂ ನ ವೇತ್ತಿ ।
ತಾವತ್ ನ ಮುಚ್ಯತೇ ಯಾವತ್ ನೈವ ಏನಂ ಪರಮಾರ್ಥಂ ಮನುತೇ ॥ ೮೨ ॥"

**ಅನ್ವಯಾರ್ಥ** —ನಿರ್ವಿಕಲ್ಪಆತ್ಮಭಾವನೆಯಿಂದ ರಹಿತನಾದ ಜೀವನು **ಸತ್ಥಹಂ ಬುಜ್ಝಇ**—ಶಾಸ್ತ್ರಗಳನ್ನು ತಿಳಿಯುತ್ತಾನೆ. **ತಉ ಚರಇ**—ತಪಸ್ಸನ್ನು ಆಚರಿಸು ತ್ತಾನೆ **ಪರ**—ಆದರೆ **ಪರಮತ್ಥು ಣ ವೇಇ**—ಪರಮಾತ್ಮನನ್ನು ತಿಳಿಯುವುದಿಲ್ಲ. ಹೀಗೆ **ಜಾವ**—ಎಷ್ಟರವರೆಗೆ **ಇಹು ಪರಮತ್ಥು**—ಈ ಪರಮಾತ್ಮನನ್ನು **ಣವಿ**

**ಮುಣೇಇ**— ತಿಳಿಯುವುದಿಲ್ಲವೋ **ತಾವ**— ಅಷ್ಟರ ವರೆಗೆ ಣ **ಮುಂಚಇ**— ಕರ್ಮ ದಿಂದ ಬಿಡಲ್ಪಡುವುದಿಲ್ಲ

**ಭಾವಾರ್ಥ:**— ಪರಮಾತ್ಮಸ್ವರೂಪವು ಯದ್ಯಪಿ ವ್ಯವಹಾರದಿಂದ ಪರಮಾತ್ಮ ಸ್ವರೂಪಪ್ರತಿಪಾದಕಶಾಸ್ತ್ರಗಳಿಂದ ತಿಳಿಯಲ್ಪಡುವುದಾದರೂ ನಿಶ್ಚಯದಿಂದ ಅದು (ಪರ ಮಾತ್ಮಸ್ವರೂಪ)ವೀತರಾಗಸ್ವಸಂವೇದನಜ್ಞಾನದಿಂದಲೇ ತಿಳಿಯಲ್ಪಡುತ್ತದೆ ಹಾಗೆಯೇ ಅನಶನಾದಿದ್ವಾದಶವಿಧತಪಶ್ಚರಣೆಯು ಆತ್ಮಸಿದ್ಧಿಗೆ ಬಾಹ್ಯಸಹಕಾರಿಕಾರಣವಾಗಿರುತ್ತ ದಾದರೂ ನಿಶ್ಚಯದಿಂದ ನಿರ್ವಿಕಲ್ಪಶುದ್ಧಾತ್ಮವಿಶ್ರಾಂತಿರೂಪವಾದ ವೀತರಾಗಚಾರಿತ್ರ ದಿಂದಲೇ ಆತ್ಮಸಿದ್ಧಿಯುಂಟಾಗುತ್ತದೆ. ಹೀಗೆ ಜೀವನು ಎಂದಿನತನಕ ವೀತರಾಗ ಸ್ವಸಂವೇದನಜ್ಞಾನದಿಂದ ಪರಮಾತ್ಮನನ್ನರಿತು ವೀತರಾಗಚಾರಿತ್ರದ ಮೂಲಕ ನಿಜ ಶುದ್ಧಾತ್ಮಾನುಭವವನ್ನು ಪಡೆಯುವುದಿಲ್ಲವೋ ಅಂದಿನತನಕ ಆತನು ಕರ್ಮಬಂಧನ ದಿಂದ ಮುಕ್ತನಾಗಲಾರನೆಂದು ತಾತ್ಪರ್ಯವು ದೀಪವನ್ನು ಹಿಡಿದುಕೊಂಡು ಅದರ ಪ್ರಕಾಶದಿಂದ ನಮಗೆ ಬೇಕಾದ ವಸ್ತುವನ್ನು ಹುಡುಕಿ ತೆಗೆದು ಆಮೇಲೆ ದೀಪವನ್ನು ಬಿಡುವಂತೆ ಪರಮಾತ್ಮಸ್ವರೂಪವನ್ನು ನಿರೂಪಿಸುವ ಶಾಸ್ತ್ರದಿಂದ ಶುದ್ಧಾತ್ಮತತ್ತ್ವವನ್ನು ತಿಳಿದುಕೊಂಡು ಅನಂತರ ಆ ಶಾಸ್ತ್ರವಿಕಲ್ಪವನ್ನು ಬಿಡಬೇಕೆಂದು ಭಾವವು

**ಸತ್ಥು ಪಢಂತು ವಿ ಹೋಇ ಜಡು, ಜೋ ಣ ಹಣೇಇ ವಿಯಪ್ಪು ।**
**ದೇಹಿ ವಸಂತು ವಿ ಣಿಮ್ಮಲಉ, ಣವಿ ಮಣ್ಣಇ ಪರಮಪ್ಪು ॥ ೮೩ ॥**

"ಶಾಸ್ತ್ರಂ ಪಠನ್ನಪಿ ಭವತಿ ಜಡಃ ಯಃ ನ ಹಂತಿ ವಿಕಲ್ಪಮ್ ।
ದೇಹೇ ವಸಂತಮಪಿ ನಿರ್ಮಲಂ ನೈವ ಮನ್ಯತೇ ಪರಮಾತ್ಮಾನಂ ॥ ೮೩ ॥"

**ಅನ್ವಯಾರ್ಥ:**— **ಜೋ**— ಯಾವ ಜೀವನು **ಸತ್ಥು ಪಢಂತು ವಿ**— ಶಾಸ್ತ್ರವನ್ನು ಓದುವವನಾಗಿಯೂ ಅರ್ಥಾತ್ ಶಾಸ್ತ್ರಾಭ್ಯಾಸವನ್ನು ಮಾಡುವವನಾಗಿಯೂ **ವಿಯಪ್ಪು ಣ ಹಣೇಇ**— ಮಿಥ್ಯಾತ್ವರಾಗಾದಿವಿಕಲ್ಪವನ್ನು ಬಿಡುವುದಿಲ್ಲವೋ ಮತ್ತು **ದೇಹಿ ವಸಂತು**— ಶರೀರದಲ್ಲಿ ವಾಸಮಾಡಿಕೊಂಡಿರುವ **ಣಿಮ್ಮಲಉ ಪರಮಪ್ಪು ವಿ**— ಕರ್ಮ ಮಲರಹಿತನಾದ ನಿಜಪರಮಾತ್ಮನನ್ನೂ **ಣವಿ ಮಣ್ಣಇ**— ತಿಳಿಯುವುದಿಲ್ಲವೋ ಅರ್ಥಾತ್ ಪರಮಾತ್ಮನು ತನ್ನ ಶರೀರದಲ್ಲಿರುತ್ತಿದ್ದರೂ ಆತನನ್ನು ತಿಳಿಯುವುದಿಲ್ಲವೋ ಅವನು **ಜಡು ಹೋಇ**— ಮೂರ್ಖನಾಗಿರುತ್ತಾನೆ

**ಭಾವಾರ್ಥ:**— ರಾಗಾದಿವಿಕಲ್ಪಗಳನ್ನು ಬಿಡುವುದೇ ಶಾಸ್ತ್ರವನ್ನು ಅಭ್ಯಾಸಮಾಡು ವುದರ ಫಲವಾಗಿರುತ್ತದೆ ಆದರೆ ಯಾವ ಜೀವನು ಶಾಸ್ತ್ರಾಭ್ಯಾಸವನ್ನು ಮಾಡಿಯೂ ರಾಗಾದಿವಿಕಲ್ಪಗಳನ್ನು ಬಿಟ್ಟು ತನ್ನ ದೇಹದಲ್ಲಿಯೇ ಶಕ್ತಿರೂಪದಿಂದ ಇರುತ್ತಿರುವ ಪರಮಾತ್ಮನಲ್ಲಿ ಶ್ರದ್ಧೆಯನ್ನಿಡುವುದಿಲ್ಲವೋ ಆತನು ಶಾಸ್ತ್ರಜ್ಞಾನವುಳ್ಳವನಾಗಿದ್ದರೂ ಮೂರ್ಖನೇ ಆಗಿರುತ್ತಾನೆ ಆದುದರಿಂದ **"ಶಾಸ್ತ್ರಾಣ್ಯಧೀತ್ಯಾಪಿ ಭವಂತಿ ಮೂರ್ಖಾಃ, ಯಸ್ತು ಕ್ರಿಯಾವಾನ್ ಪುರುಷಃ ಸ ವಿದ್ವಾನ್"** ಅರ್ಥಾತ್

ಜನರು ಶಾಸ್ತ್ರಾಭ್ಯಾಸವನ್ನು ಮಾಡಿಯೂ ಮೂರ್ಖರಾಗಿರುತ್ತಾರೆ. ಯಾವ ಮನು ಷ್ಯನು ಶಾಸ್ತ್ರಕ್ಕನುಕೂಲವಾದ ಕ್ರಿಯೆಯುಳ್ಳವನಾಗಿರುತ್ತಾನೋ ಆತನೇ ವಸ್ತುತಃ ವಿದ್ವಾಂಸನು ಅತಏವ ಶಾಸ್ತ್ರಾಧ್ಯಯನದಿಂದ ನಿಜಪರಮಾತ್ಮಸ್ವರೂಪವನ್ನರಿತು ಮಿಥ್ಯಾ ತ್ವರಾಗಾದಿವಿಕಲ್ಪಗಳನ್ನು ತೊರೆದು ತ್ರಿಗುಪ್ತಿರೂಪಸಮಾಧಿಯಿಂದ ನಿಜಶುದ್ಧಾತ್ಮನನ್ನೇ ಭಾವಿಸಬೇಕು ಪರಮಸಮಾಧಿಯನ್ನು ಹೊಂದಲಸಮರ್ಥನಾಗಿರುವಲ್ಲಿ (ಪ್ರಾರಂಭಿ ಕಾವಸ್ಥೆಯಲ್ಲಿ) ವಿಷಯಕಷಾಯಗಳನ್ನು ದೂರಗೊಳಿಸುವುದಕ್ಕಾಗಿಯೂ ಶುದ್ಧಾತ್ಮ ಭಾವನೆಯಲ್ಲಿ ಚಿತ್ತವನ್ನು ದೃಢೀಕರಿಸುವುದಕ್ಕಾಗಿಯೂ ಇತರರಿಗೆ ಧರ್ಮೋಪದೇಶ ವನ್ನು ಕೊಡಬೇಕು ಮತ್ತು "ಜೀವನೇ! ಧರ್ಮೋಪದೇಶವನ್ನಿತ್ತು ಇತರರನ್ನು ವಿಷಯ ಕಷಾಯಗಳಿಂದ ಬಿಡಿಸುವ ನೀನೇಕೆ ಸ್ವತಃ ವಿಷಯಕಷಾಯಗಳನ್ನು ಬಿಡುವುದಿಲ್ಲ?" ಎಂದು ತನ್ನನ್ನು ತಾನು ವಿಶೇಷತಃ ಬೋಧಿಸಿಕೊಳ್ಳಬೇಕು. ಹೀಗೆ ವಿಷಯಕಷಾಯಾದಿ ಗಳನ್ನು ತೊರೆದು ಶುದ್ಧಾತ್ಮಾನುಭವವನ್ನು ಪಡೆಯುವವನೇ ನಿಜವಾದ ಜ್ಞಾನಿಯೆಂದು ತಾತ್ಪರ್ಯವು.

**ಬೋಹಣಿಮಿತ್ತೇಂ ಸತ್ಥು ಕಿಲ, ಲೋಇ ಪಢಿಜ್ಜಇ ಇತ್ಥು ।**
**ತೇಣ ವಿ ಬೋಹು ಣ ಜಾಸು ವರು, ಸೋ ಕಿಂ ಮೂಢು ಣ ತತ್ಥು ॥೮೪॥**

"ಬೋಧನಿಮಿತ್ತೇನ ಶಾಸ್ತ್ರಂ ಕಿಲ ಲೋಕೇ ಪಠ್ಯತೇ ಅತ್ರ ।
ತೇನಾಪಿ ಬೋಧೋ ನ ಯಸ್ಯ ವರಃ ಸ ಕಿಂ ಮೂಢೋ ನ ತಥ್ಯಮ್ ॥ ೮೪ ॥"

**ಅನ್ವಯಾರ್ಥ:**— **ಇತ್ಥು ಲೋಇ**— ಈ ಲೋಕದಲ್ಲಿ ಕಿಲ— ನಿಶ್ಚಯವಾಗಿ **ಬೋಹಣಿಮಿತ್ತೇಂ**— ಜ್ಞಾನದ ನಿಮಿತ್ತದಿಂದ ಅರ್ಥಾತ್ ಜ್ಞಾನವುಂಟಾಗಬೇಕೆಂದು **ಸತ್ಥು ಪಢಿಜ್ಜಇ**— ಶಾಸ್ತ್ರವು ಓದಲ್ಪಡುತ್ತದೆ (ಅಭ್ಯಾಸಿಸಲ್ಪಡುತ್ತದೆ) **ಜಾಸು**— ಯಾವ ನಿಗೆ **ತೇಣ ವಿ**— ಆ ಶಾಸ್ತ್ರಾಭ್ಯಾಸದಿಂದಲೂ **ವರು ಬೋಹು ಣ**— ಉತ್ತಮವಾದ ಜ್ಞಾನವುಂಟಾಗುವುದಿಲ್ಲವೋ **ಸೋ**- ಅವನು **ಕಿಂ ಮೂಢು ಣ ತತ್ಥು**- ನಿಜವಾಗಿಯೂ ಮೂರ್ಖನಲ್ಲವೇ? ಅರ್ಥಾತ್ **"ತತ್ಥು"**— ನಿಜವಾಗಿಯೂ ಮೂರ್ಖನು.

**ಭಾವಾರ್ಥ:**— ಲೋಕವ್ಯವಹಾರದಲ್ಲಿ ಸಾಹಿತ್ಯವ್ಯಾಕರಣಾದಿಶಾಸ್ತ್ರಗಳ ಪಠನ ದಿಂದುಂಟಾದ ಕವಿತಾಶಕ್ತಿ ಮೊದಲಾದುವು ಶಾಸ್ತ್ರಜ್ಞಾನವೆಂದು ಹೇಳಲ್ಪಡುತ್ತದಾದರೂ ಇಲ್ಲಿ ಪ್ರಕರಣಾನುಸಾರವಾಗಿ ಅಧ್ಯಾತ್ಮಶಾಸ್ತ್ರದ ಅಧ್ಯಯನದಿಂದುಂಟಾದ ವೀತರಾಗ ಸ್ವಸಂವೇದನಜ್ಞಾನವೇ ಶಾಸ್ತ್ರಜ್ಞಾನವೆಂದು ತಿಳಿಯಬೇಕು. ಅತಏವ ವೀತರಾಗ ಸ್ವಸಂವೇದನಜ್ಞಾನವಿಲ್ಲದವನು ಶಾಸ್ತ್ರಾಭ್ಯಾಸಿಯಾಗಿದ್ದರೂ ಮೂರ್ಖನೇ ಸರಿ. ಯಾವ ನಾದರೊಬ್ಬನು ಪರಮಾತ್ಮಜ್ಞಾನವನ್ನುಂಟುಮಾಡುವ ಶಾಸ್ತ್ರಗಳನ್ನು ಅಲ್ಪಸ್ವಲ್ಪವಾಗಿ ತಿಳಿದವನಾಗಿದ್ದರೂ ವೀತರಾಗಭಾವನೆಯುಳ್ಳವನಾಗಿದ್ದರೆ ಆತನು ಮುಕ್ತನಾಗುವನು ಹಾಗೂ ವೀತರಾಗಭಾವನೆಯಿಲ್ಲದವನು ಅಧ್ಯಾತ್ಮಶಾಸ್ತ್ರಗಳನ್ನು ಸಂಪೂರ್ಣವಾಗಿ ತಿಳಿದವನಾಗಿದ್ದರೂ ಮುಕ್ತನಾಗಲಾರನು ಹೀಗೆಯೇ ಗ್ರಂಥಾಂತರದಲ್ಲಿಯೂ ಹೇಳ

ಲ್ಪಟ್ಟಿದೆ—"**ವೀರಾ ವೇರಗ್ಗಪರಾ, ಥೋವಂ ಪಿ ಹು ಸಿಕ್ಖಿಊಣ ಸಿಜ್ಝಂತಿ । ಣ ಹು ಸಿಜ್ಝಂತಿ ವಿರಾಗೇಣ ವಿಣಾ, ಪಢಿದೇಸು ವಿ ಸವ್ವಸತ್ಥೇಸು ॥**" ಅರ್ಥಾತ್ ವೈರಾಗ್ಯಪರರಾದ ವೀರರು (ಮೋಹಶತ್ರುವನ್ನು ಜಯಿಸುವ ಪರಾಕ್ರಮಿಗಳು) ಶಾಸ್ತ್ರವನ್ನು ಅಲ್ಪವಾಗಿ ತಿಳಿದೂ ಸಿದ್ಧಿ(ಮುಕ್ತಿ)ಯನ್ನು ಪಡೆಯುತ್ತಾರೆ. ಆದರೆ, ವೈರಾಗ್ಯ (ವೀತರಾಗತ್ವ)ವ ಹೊರತು ಸರ್ವಶಾಸ್ತ್ರಗಳನ್ನು ಪಠಿಸಿದರೂ ನಿಶ್ಚಯವಾಗಿಯೂ ಸಿದ್ಧಿಯನ್ನು ಪಡೆಯಲಾರರು. ಹಾಗೆಯೇ—"**ಅಕ್ಖರಡಾ ಜೋಯಂತು ಠಿಉ, ಅಪ್ಪಿ ಣ ದಿಣ್ಣಉ ಚಿತ್ತು । ಕಣವಿರಹಿಯಉ ಪಲಾಲು ಜಿಮು, ಪರ ಸಂಗಹಿಉ ಬಹುತ್ತು ॥**" ಅರ್ಥಾತ್ ಶಾಸ್ತ್ರದ ಒಂದೊಂದು ಅಕ್ಷರವನ್ನೂ ವಿವರಿಸುವಂತಹ ವಿದ್ವಾಂಸನೂ ತನ್ನ ಆತ್ಮನಲ್ಲಿ ಮನಸ್ಸನ್ನು ಸ್ಥಿರಗೊಳಿಸದವನಾದರೆ ಆತನ ಆ ಶಾಸ್ತ್ರಜ್ಞಾನವೂ ಶಾಸ್ತ್ರಾಭ್ಯಾಸದ ಪ್ರಯಾಸವೂ ಧಾನ್ಯರಹಿತವಾದ (ಕಾಳಿಲ್ಲದ) ಬರಿಯ ಸಿಪ್ಪೆಯನ್ನು ಸಂಗ್ರಹಿಸಿದಂತೆ ನಿಷ್ಫಲವಾದುದು ಹಾಗೆಂದು ಅಧಿಕಶಾಸ್ತ್ರಜ್ಞರನ್ನು ಅಲ್ಪಶಾಸ್ತ್ರಜ್ಞರೂ ಅಲ್ಪಶಾಸ್ತ್ರಜ್ಞರನ್ನು ಅಧಿಕಶಾಸ್ತ್ರಜ್ಞನೂ (ಪರಸ್ಪರ) ನಿಂದಿಸಬಾರದು, ಹಾಗೆ ದೂಷಿಸುವುದರಿಂದ ರಾಗದ್ವೇಷಗಳುಂಟಾಗಿ ಜ್ಞಾನತಪಶ್ಚರಣಾದಿಗಳು ನಾಶವಾಗುತ್ತವೆಂದಭಿಪ್ರಾಯವು.

**ತಿತ್ಥಹಂ ತಿತ್ಥು ಭಮಂತಾಹಂ, ಮೂಢಹಂ ಮೊಕ್ಖು ಣ ಹೋಇ ।**
**ಣಾಣವಿವಜ್ಜಿಉ ಜೇಣ ಜಿಯ, ಮುಣಿವರು ಹೋಇ ಣ ಸೋಇ ॥ ೮೫ ॥**

"ತೀರ್ಥಂ ತೀರ್ಥಂ ಭ್ರಮತಾಂ ಮೂಢಾನಾಂ ಮೋಕ್ಷೋ ನ ಭವತಿ ।
ಜ್ಞಾನವಿವರ್ಜಿತೋ ಯೇನ ಜೀವ ಮುನಿವರೋ ಭವತಿ ನ ಸಏವ ॥ ೮೫ ॥"

**ಅನ್ವಯಾರ್ಥ**—**ಜಿಯ**—ಎಲೈ ಜೀವನೇ! **ತಿತ್ಥಹಂ ತಿತ್ಥು ಭಮಂತಾಹಂ**—ತೀರ್ಥ—ತೀರ್ಥಗಳನ್ನು(ಪ್ರತಿಯೊಂದು ತೀರ್ಥವನ್ನೂ)ಕುರಿತು ಭ್ರಮಿಸು(ತಿರುಗಾಡು)ತ್ತಿರುವ **ಮೂಢಹಂ**—ವೀತರಾಗಸ್ವಸಂವೇದನಜ್ಞಾನರಹಿತರಾದ ಮೂಢಾತ್ಮರಿಗೆ **ಮೊಕ್ಖು ಣ ಹೋಇ**—ಮೋಕ್ಷವಾಗುವುದಿಲ್ಲ **ಜೇಣ**—ಯಾವ ಕಾರಣದಿಂದ(ಏಕೆಂದರೆ) **ಣಾಣವಿವಜ್ಜಿಯಉ**—ಆತ್ಮಜ್ಞಾನರಹಿತನಾದ **ಸೋಇ**—ಅವನೇ(ತೀರ್ಥಯಾತ್ರೆಯನ್ನು ಮಾಡುವ ಜೀವನು) **ಮುಣಿವರು ಹೋಇ ಣ**—ಮುನಿಶ್ರೇಷ್ಠನಾಗುವುದಿಲ್ಲ. ಅತಏವ ಮೋಕ್ಷವನ್ನು ಪಡೆಯುವುದಿಲ್ಲವೆಂದರ್ಥವು.

**ಭಾವಾರ್ಥ:**—ಆತ್ಮಜ್ಞಾನವಿಲ್ಲದೆ ಕೇವಲ ತೀರ್ಥಯಾತ್ರೆ ತೀರ್ಥವಂದನಾದಿಗಳಿಂದ ಯಾರಿಗೂ ಮುಕ್ತಿಲಭಿಸದು ವ್ಯವಹಾರದಿಂದ ತೀರ್ಥಂಕರಪರಮದೇವರು ಮೊದಲಾದವರ ಗುಣಸ್ಮರಣೆಗೆ ಕಾರಣವಾದುವೂ ಮುಖ್ಯತಃ ಪುಣ್ಯಬಂಧಕ್ಕೆ ಕಾರಣಗಳೂ ಆದ ಕೈಲಾಸಪರ್ವತ ಸಮ್ಮೇದಶಿಖರಿಮೊದಲಾದ ನಿರ್ವಾಣಭೂಮಿ(ಸ್ಥಾನ)ಗಳೂ ಜಿನಚೈತ್ಯ(ಜಿನಬಿಂಬ)ಚೈತ್ಯಾಲಯಾದಿಗಳೂ ತೀರ್ಥಗಳೆಂದು ಹೇಳಲ್ಪಡುತ್ತವೆ. ಪರಂತು ನಿಶ್ಚಯದಿಂದ ನಿರ್ದೋಷಪರಮಾತ್ಮಭಾವನೆಯಿಂದುಂಟಾದ ವೀತರಾಗ-ಪರ

ಮಾನಂದರೂಪವಾದ ನಿರ್ಮಲಜಲದಿಂದ ಭರಿತವೂ ಜ್ಞಾನದರ್ಶನಾದಿಗುಣಗಳ ಸಮೂಹವೆಂಬ ಚಂದನಾದಿವೃಕ್ಷಗಳ ಸಮೂಹದಿಂದ ಶೋಭಿಸುತ್ತಿರುವುದೂ ದೇವೇಂದ್ರಚಕ್ರವರ್ತಿಗಣಧರರುಮೊದಲಾದ ಭವ್ಯಜೀವರುಗಳೆಂಬ ತೀರ್ಥಯಾತ್ರಿಕರಿಂದಲೂ ಅವರ ಕಿವಿಗಿಂಪಾದ ದಿವ್ಯಧ್ವನಿಯೆಂಬ ಕಲಕಲನಿನಾದದಿಂದಲೂ ಕೂಡಿರುವುದೂ, ಮುನಿಜನರೇ ಮೊದಲಾದ ಭವ್ಯರುಗಳ ಜಯಘೋಷವೆಂಬ ರಾಜಹಂಸಮೊದಲಾದ ವಿವಿಧಪಕ್ಷಿಗಳ ಕೋಲಾಹಲದಿಂದ ಮನೋಹರವೂ ಆದ ವೀತರಾಗಸರ್ವಜ್ಞ(ಅರ್ಹತ್)ಸ್ವರೂಪವೇ ತೀರ್ಥವಾಗಿರುತ್ತದಲ್ಲದೆ ಇತರ ಗಂಗಾಸಿಂಧ್ವಾದಿನದಿಗಳು ತೀರ್ಥಗಳಲ್ಲ. ಪರಮನಿಶ್ಚಯನಯದಿಂದಲಾದರೋ ವೀತರಾಗನಿರ್ವಿಕಲ್ಪಸಮಾಧಿಯಲ್ಲಿ ಮಗ್ನರಾದವರಿಗೆ ನಿಜಶುದ್ಧಾತ್ಮತತ್ತ್ವದ ಸ್ಮರಣೆಯೇ ತೀರ್ಥವಾಗಿರುತ್ತದೆ ಇಲ್ಲಿ ಸಂಸಾರಸಾಗರವನ್ನು ದಾಂಟಲು ಯಾವುದು ಕಾರಣವಾಗಿರುವುದೋ ಅಥವಾ ಯಾವುದರಿಂದ ಸಂಸಾರಸಾಗರವು ದಾಂಟಲ್ಪಡುವುದೋ ಅದು "ತೀರ್ಥ"ವೆನಿಸುತ್ತದೆ. ಅತಏವ ಪೂರ್ವೋಕ್ತ ನಿಶ್ಚಯತೀರ್ಥದ ಶ್ರದ್ಧಾನ ಪರಿಜ್ಞಾನ ಮತ್ತು ಅನುಷ್ಠಾನ ರಹಿತರಾದ ಅಜ್ಞಾನಿಜೀವರುಗಳಿಗೆ ಇತರ ತೀರ್ಥಗಳು ಮುಕ್ತಿಕಾರಣಗಳಾಗಿರುವುದಿಲ್ಲವೆಂದು ಭಾವವು.

**ಣಾಣಿಹಿಂ ಮೂಢಹಂ ಮುಣಿವರಹಂ, ಅಂತರು ಹೋಇ ಮಹಂತು ।**
**ದೇಹು ವಿ ಮಿಲ್ಲಇ ಣಾಣಿಯಉ, ಜೀವಹಂ ಭಿಣ್ಣು ಮುಣಂತು ॥ ೮೬ ॥**

"ಜ್ಞಾನಿನಾಂ ಮೂಢಾನಾಂ ಮುನಿವರಾಣಾಂ ಅಂತರಂ ಭವತಿ ಮಹತ್ ।
ದೇಹಮಪಿ ಮುಂಚತಿ ಜ್ಞಾನೀ ಜೀವಾದ್ಭಿನ್ನಂ ಮನ್ಯಮಾನಃ ॥ ೮೬ ॥"

**ಅನ್ವಯಾರ್ಥ** — **ಣಾಣಿಹಿಂ**— ವೀತರಾಗಸ್ವಸಂವೇದನಜ್ಞಾನಿಗಳಾದ ಮತ್ತು **ಮೂಢಹಂ**— ಮೂಢ(ಪೂರ್ವೋಕ್ತಜ್ಞಾನರಹಿತ)ರಾದ **ಮುಣಿವರಹಂ**— ಮುನೀಂದ್ರರುಗಳಲ್ಲಿ **ಮಹಂತು**— ಹೆಚ್ಚಾದ **ಅಂತರು ಹೋಇ**— ಅಂತರ(ಭೇದ-ವ್ಯತ್ಯಾಸ) ವಿರುತ್ತದೆ **ಣಾಣಿಯಉ**— ಜ್ಞಾನಿಯಾದ ಮುನಿಯು **ದೇಹು ವಿ**— ದೇಹವನ್ನು ಸಹ **ಜೀವಹಂ ಭಿಣ್ಣು ಮುಣಂತು**— ಜೀವನಿಂದ ಭಿನ್ನ(ಬೇರೆ)ವಾದುದೆಂದು ತಿಳಿಯುವವನಾಗಿ **ಮಿಲ್ಲಇ**— ಬಿಡುತ್ತಾನೆ ಅರ್ಥಾತ್ ದೇಹದ ಮಮತ್ವವನ್ನು ಬಿಡುತ್ತಾನೆ.

**ಭಾವಾರ್ಥ** — ವೀತರಾಗಸ್ವಸಂವೇದನಜ್ಞಾನಿಯು ಪುತ್ರಮಿತ್ರಕಲತ್ರಾದಿಪರವಸ್ತುಗಳ ಮಮತ್ವವನ್ನು ಬಿಡುವುದಂತಿರಲಿ; ತನ್ನ ಶರೀರವನ್ನೂ ಅದು ತನ್ನ ಶುದ್ಧಾತ್ಮಸ್ವರೂಪದಿಂದ ಭಿನ್ನವಾದುದೆಂದು ತಿಳಿದು ತ್ಯಾಗಮಾಡುತ್ತಾನೆ ಆದರೆ ಮೂಢಾತ್ಮನು ಶರೀರಾದಿಗಳನ್ನು ತನ್ನವುಗಳನ್ನಾಗಿ ತಿಳಿಯುತ್ತಾನೆ. ಸಾರಾಂಶತ — ಜ್ಞಾನಿಯು ಪರವಸ್ತುಗಳಲ್ಲಿ ಅನಾತ್ಮಭಾವವನ್ನೂ ಮೂಢಾತ್ಮನು ಪರವಸ್ತುಗಳಲ್ಲಿ ಆತ್ಮಭಾವವನ್ನೂ ತಾಳುತ್ತಾನೆ ಹೀಗೆ ಜ್ಞಾನಿ ಮತ್ತು ಅಜ್ಞಾನಿಗಳಲ್ಲಿ ಬಹಳ ಅಂತರವಿರುತ್ತದೆಂದಭಿಪ್ರಾಯವು

ಹೀಗೆ ಪೂರ್ವೋಕ್ತಪ್ರಕಾರ ನಲುವತ್ತೊಂದು ಸೂತ್ರಗಳ ಮಧ್ಯದಲ್ಲಿ ವೀತರಾಗ ಸ್ವಸಂವೇದನಜ್ಞಾನದ ಮುಖ್ಯತೆಯಿಂದ ಹದಿನೈದು ಸೂತ್ರಗಳು ಹೇಳಲ್ಪಟ್ಟುವು

ಮುಂದೆ ಪರಿಗ್ರಹತ್ಯಾಗನಿರೂಪಣೆಯ ಮುಖ್ಯತೆಯಿಂದ ಎಂಟು ಸೂತ್ರಗಳು ಹೇಳಲ್ಪಡುತ್ತವೆ —

**ಲೇಣಹಂ ಇಚ್ಛಇ ಮೂಢು ಪರ, ಭುವಣು ವಿ ಏಹು ಅಸೇಸು ।**
**ಬಹುವಿಹಧಮ್ಮಮಿಸೇಣ ಜಿಯ, ದೋಹಿಂ ವಿ ಏಹು ವಿಸೇಸು ॥ ೮೭ ॥**

"ಲಾತುಂ ಇಚ್ಛತಿ ಮೂಢಃ ಪರಂ ಭುವನಮಪಿ ಏತತ್ ಅಶೇಷಮ್ ।
ಬಹುವಿಧಧರ್ಮಮಿಷೇಣ ಜೀವದ್ವಯೋಃ ಅಪಿ ಏಷ ವಿಶೇಷಃ ॥ ೮೭ ॥"

**ಅನ್ವಯಾರ್ಥ:— ಜಿಯ**— ಎಲೈ ಜೀವನೇ! **ಮೂಢು**— ಮೂಢಾತ್ಮ (ಬಹಿರಾತ್ಮ)ನು **ಪರ**— ನಿಶ್ಚಯವಾಗಿ **ಬಹುವಿಹಧಮ್ಮಮಿಸೇಣ**— ಅನೇಕಪ್ರಕಾರವಾದ ಧರ್ಮದ ವ್ಯಾಜ(ನೆಪ)ದಿಂದ **ಏಹುಅಸೇಸು ಭುವಣು ವಿ**— ಈ ಸಮಸ್ತಲೋಕವನ್ನೂ **ಲೇಣಹಂ ಇಚ್ಛಇ**— ತೆಗೆದುಕೊಳ್ಳುವುದಕ್ಕೆ ಇಚ್ಛಿಸುತ್ತಾನ **ದೋಹಿಂ ವಿ**— ಅಜ್ಞಾನಿ ಮತ್ತು ಜ್ಞಾನಿ ಇವರಿಬ್ಬರಲ್ಲಿ **ಏಹು ವಿಸೇಸು**— ಇದು ವಿಶೇಷ(ಅಂತರ, ಭೇಧ)ವು.

**ಭಾವಾರ್ಥ:**— ವೀತರಾಗಸ್ವಸಂವೇದನಜ್ಞಾನವಿಲ್ಲದಿರುವ ಹಾಗೂ ನಿಶ್ಚಯ ರತ್ನತ್ರಯಭಾವನಾರಹಿತನಾದ ಜೀವನು ಅರ್ಥಾತ್ ಭಾವಲಿಂಗರಹಿತನಾಗಿ ಕೇವಲ ದ್ರವ್ಯಲಿಂಗಿಯಾಗಿರುವ ಮುನಿಯು ವಿಷಯಭೋಗಾಸಕ್ತಿಯುಳ್ಳವನಾಗಿ ಬಹುವಿಧವಾದ ಧರ್ಮದ ಹೆಸರಿನಿಂದ ಜಗತ್ತನ್ನೇ ಅರ್ಥಾತ್ ಸಂಸಾರದ ಸರ್ವಭೋಗಗಳನ್ನೂ ಪಡೆಯಲಿಚ್ಛಿಸುತ್ತಾನೆ ಸ್ವರ್ಗಾದಿಗಳ ಸುಖವನ್ನು ಪಡೆಯಬೇಕೆಂಬ ಅಭಿಲಾಷೆಯಿಂದ ತಪಶ್ಚರಣಾದಿಗಳನ್ನು ಮಾಡುತ್ತಾನೆ. ಆದರೆ ಮೊದಲಿನ ಸೂತ್ರದಲ್ಲಿ ಹೇಳಿರುವಂತೆ ಜ್ಞಾನಿಯಾದ ಮುನಿಯು ಚಿರಸಂಬಂಧವುಳ್ಳ ತನ್ನ ದೇಹವನ್ನೂ ಪರವಸ್ತುವನ್ನಾಗಿ ತಿಳಿದು ಅದರ ಮಮತ್ವವನ್ನು ಬಿಡುತ್ತಾನೆ. ಹೀಗಿದು ಜ್ಞಾನಿ ಮತ್ತು ಅಜ್ಞಾನಿಗಳಲ್ಲಿರುವ ಭೇದವಾಗಿದೆ

**ಚೆಲ್ಲಾಚೆಲ್ಲೀಪುತ್ಥಿಯಹಿಂ, ತೂಸಇ ಮೂಢು ಣಿಭಂತು ।**
**ಏಯಹಿಂ ಲಜ್ಜಇ ಣಾಣಿಯಉ, ಬಂಧಹಂ ಹೇಉ ಮುಣಂತು ॥ ೮೮ ॥**

"ಶಿಷ್ಯಾರ್ಜಿಕಾಪುಸ್ತಕೈಃ ತುಷ್ಯತಿ ಮೂಢೋ ನಿರ್ಭ್ರಾಂತಃ ।
ಏತೈಃ ಲಜ್ಜತೇ ಜ್ಞಾನೀ ಬಂಧಸ್ಯ ಹೇತುಂ ಜಾನನ್ ॥ ೮೮ ॥"

**ಅನ್ವಯಾರ್ಥ:— ಮೂಢು**— ಅಜ್ಞಾನಿಯು ತನ್ನ **ಚೆಲ್ಲಾಚೆಲ್ಲೀಪುತ್ಥಿಯಹಿಂ**— ಶಿಷ್ಯ ಶಿಷ್ಯೆ (ಅರ್ಜಿಕೆ) ಮತ್ತು ಪುಸ್ತಕಗಳಿಂದ **ಣಿಭಂತು**— ಸಂದೇಹವಿಲ್ಲದವನಾಗಿ (ನಿಶ್ಚಯವಾಗಿ) **ತೂಸಇ**— ಸಂತೋಷಪಡುತ್ತಾನೆ. **ಣಾಣಿಯಉ**— ಜ್ಞಾನಿಯು **ಬಂಧಹಂ ಹೇಉ**— ಇವುಗಳನ್ನು ಬಂಧಕ್ಕೆ ಕಾರಣಗಳನ್ನಾಗಿ **ಮುಣಂತು**— ತಿಳಿಯುವವನಾಗಿ **ಏಯಹಿಂ**— ಈ ಶಿಷ್ಯಾದಿಗಳಿಂದ **ಲಜ್ಜಇ**— ಲಜ್ಜೆಪಡುತ್ತಾನೆ.

**ಭಾವಾರ್ಥ:—** ಅಜ್ಞಾನಿಯು ತನ್ನ ಶಿಷ್ಯ-ಶಿಷ್ಯೆಯರು ಹಾಗೂ ಪುಸ್ತಕ(ಜ್ಞಾನೋಪಕರಣ) ಮೊದಲಾದುವುಗಳಿಂದ ಸಂತುಷ್ಟನಾಗುತ್ತಾನೆ ಯದ್ಯಪಿ ಶಿಷ್ಯ-ಶಿಷ್ಯೆಯರಿಗೆ ಧರ್ಮೋಪದೇಶ ಜಿನದೀಕ್ಷಾದಿಗಳನ್ನು ಕೊಡುವುದೂ ಶಾಸ್ತ್ರಸ್ವಾಧ್ಯಾಯವೂ ಪುಣ್ಯಬಂಧಕ್ಕೆ ಕಾರಣವಾಗಿದ್ದು ಮುಕ್ತಿಗೆ ಪರಂಪರಾಕಾರಣವಾಗಿರುವುದಾದರೂ ಸಾಕ್ಷಾತ್ಕಾರಣವಲ್ಲ, ಆದರೆ ಅಜ್ಞಾನಿಯು ಅದು ಮುಕ್ತಿಯ ಸಾಕ್ಷಾತ್ಕಾರಣವೆಂದು ತಿಳಿಯುವವನಾಗಿ ಶಿಷ್ಯಾದಿಗಳನ್ನು ನೋಡಿ ಸಂತೋಷಪಡುತ್ತಾನೆ ಪರಂತು ಜ್ಞಾನಿಯು ಜಿನದೀಕ್ಷಾದಾನ ಗ್ರಂಥಪಠನಾದಿ ಶುಭಾನುಷ್ಠಾನಗಳು ಪರಂಪರೆಯಿಂದ ಮೋಕ್ಷಕ್ಕೆ ಕಾರಣಗಳಾಗಿರುತ್ತವಲ್ಲದೆ ಸಾಕ್ಷಾತ್ ಕಾರಣಗಳಾಗಿರುವುದಿಲ್ಲವೆಂದೂ ಪುಣ್ಯಬಂಧಕ್ಕೆ ಮಾತ್ರ ಕಾರಣಗಳಾಗುತ್ತವೆಂದೂ ತಿಳಿದವನಾಗಿ ಅವುಗಳಲ್ಲಿ ಆಸಕ್ತನಾಗುವುದಿಲ್ಲವೆಂದು ಭಾವವು

**ಚಟ್ಟಹಿಂ ಪಟ್ಟಹಿಂ ಕುಂಡಿಯಹಿಂ, ಚೇಲ್ಲಾಚೆಲ್ಲಿಯಏಹಿಂ ।**
**ಮೋಹು ಜಣೇವಿಣು ಮುನಿವರಹಂ, ಉಪ್ಪಹಿ ಪಾಡಿಯ ತೇಹಿಂ ॥೮೯॥**

"ಚಟ್ಟೈಃ ಪಟ್ಟೈಃ ಕುಂಡಿಕಾಭಿಃ ಶಿಷ್ಯಾರ್ಜಿಕಾಭಿಃ ।
ಮೋಹಂ ಜನಯಿತ್ವಾ ಮುನಿವರಾಣಾಂ ಉತ್ಪಥೇ ಪಾತಿತಾಸ್ತೈಃ ॥ ೮೯ ॥"

**ಅನ್ವಯಾರ್ಥ:— ಚಟ್ಟಹಿಂ ಪಟ್ಟಹಿಂ ಕುಂಡಿಯಹಿಂ**— ಪಿಂಛ ಪುಸ್ತಕ ಕಮಂಡಲುಗಳಿಂದ ಮತ್ತು **ಚೆಲ್ಲಾಚೆಲ್ಲಿಯಏಹಿಂ**— ಶಿಷ್ಯ ಅರ್ಜಿಕೆಯರು ಮೊದಲಾದ ಪರಿವಾರ (ಸಂಘ)ಗಳಿಂದ **ಮುಣಿವರಹಂ**— ಮುನಿಶ್ರೇಷ್ಠರುಗಳಿಗೆ **ಮೋಹು ಜಣೇವಿಣು**— ಮೋಹವನ್ನುಂಟುಮಾಡಿ **ತೇಹಿಂ**— ಆ ಪಿಂಛಾದಿಗಳಿಂದ (ಮುನಿಗಳು) **ಉಪ್ಪಹಿ ಪಾಡಿಯ**— ಉತ್ಪಥ (ಕೆಟ್ಟ [ಮಿಥ್ಯಾ]ಮಾರ್ಗ)ದಲ್ಲಿ ಬೀಳಿಸಲ್ಪಟ್ಟವರಾಗುತ್ತಾರೆ ಅಥವಾ ಬೀಳಿಸಲ್ಪಡುತ್ತಾರೆ.

**ಭಾವಾರ್ಥ:—** ಅಜ್ಞಾನಿಗಳಾದ ಮುನಿಗಳಿಗೆ ಪಿಂಛಕಮಂಡಲುಮೊದಲಾದ ಉಪಕರಣಗಳೂ ಶಿಷ್ಯಾದಿಪರಿವಾರಗಳೂ ಮೋಹೋತ್ಪತ್ತಿಗೆ ಕಾರಣಗಳಾಗುವುದುಂಟು. ಓರ್ವ ಅಜೀರ್ಣರೋಗಿಯು ತನ್ನ ಅಜೀರ್ಣದ ಪರಿಹಾರಕ್ಕಾಗಿ ಲಂಘನ (ಉಪವಾಸ) ವನ್ನು ಮಾಡಿ ಔಷಧಿಯನ್ನು ಸೇವಿಸಿದರೂ ಪುನಃ ಜಿಹ್ವಾಚಾಪಲ್ಯದಿಂದ ಅಜೀರ್ಣವನ್ನುಂಟುಮಾಡುವ ಪದಾರ್ಥವನ್ನು ಸೇವಿಸಿದುದಾದರೆ ಆತನ ರೋಗವು ಮತ್ತಷ್ಟು ವೃದ್ಧಿಯಾಗುವಂತೆ ಮೋಹವನ್ನು ನಾಶಗೊಳಿಸುವುದಕ್ಕಾಗಿ ಸಮಸ್ತಪರಿಗ್ರಹಗಳನ್ನು ತೊರೆದು ದೀಕ್ಷೆಗೊಂಡಿರುವ ಮುನಿಯೂ ಅಜ್ಞಾನದಿಂದ ತನ್ನ ಪಿಂಛಾದ್ಯುಪಕರಣಗಳಲ್ಲಿಯೂ ಶಿಷ್ಯಾದಿಗಳಲ್ಲಿಯೂ ಮಮತ್ವವನ್ನು ಹೊಂದಿದುದಾದರೆ ಅದರಿಂದ ಮೋಹವು ಮತ್ತೂ ವೃದ್ಧಿಯಾಗಿ ಆ ಮುನಿಯು ಉನ್ಮಾರ್ಗಗಾಮಿಯಾಗುವನು. ಇದಕ್ಕೆ ಆ ಮುನಿಯಲ್ಲಿರುವ ಅಜ್ಞಾನವೇ ಕಾರಣವಾಗಿರುವುದು ನಿರ್ವಿಕಲ್ಪಪರಮಸಮಾಧಿ (ಶುದ್ಧೋಪಯೋಗ) ರೂಪಸಂಯಮಧಾರಕನಾದ ಮುನಿಗೆ ಪಿಂಛಕಮಂಡಲು

ಮೊದಲಾದ ಸರ್ವಪರಿಗ್ರಹಗಳೂ ತ್ಯಾಜ್ಯಗಳಾಗಿರುತ್ತವೆ ಹಾಗೆ ಪರಮೋಪೇಕ್ಷಾ ಸಂಯಮ (ಶುದ್ಧೋಪಯೋಗ)ವನ್ನು ಪಡೆಯದಿರುವ ಮುನಿಯು ಭಾವಸಂಯಮದ ರಕ್ಷಣೆಗಾಗಿ ಮತ್ತು ಹೀನಸಂಹನನವುಳ್ಳವನಾಗಿ ಶರೀರಶಕ್ತಿಯು ಕಡಿಮೆಯಾಗಿರುತ್ತಿರಲು ತಪಸ್ಸಾಧನವಾದ ತನ್ನ ಶರೀರದ ರಕ್ಷಣೆಗಾಗಿ ಅನ್ನಪಾನಾದಿಗಳನ್ನೂ ಸಂಯಮೋಪಕರಣ (ಪಿಂಛ) ಶೌಚೋಪಕರಣ (ಕಮಂಡಲು) ಮತ್ತು ಜ್ಞಾನೋಪಕರಣ (ಪುಸ್ತಕ) ಗಳನ್ನೂ ಗ್ರಹಣೆಮಾಡುತ್ತಿದ್ದರೂ ಜ್ಞಾನಿಯಾದ ಆ ಮುನಿಯು ಅವುಗಳಲ್ಲಿ ಮಮತೆ (ಮೋಹ)ಯನ್ನು ಹೊಂದುವುದಿಲ್ಲ ಹೀಗೆ ಜ್ಞಾನಿ ಮತ್ತು ಅಜ್ಞಾನಿಗಳಲ್ಲಿ ಅಂತರವಿರುತ್ತದೆಂದೂ ಅತಏವ ಜ್ಞಾನಿಯಾಗಿದ್ದು ಸರ್ವಬಾಹ್ಯಾಭ್ಯಂತರಪರಿಗ್ರಹಗಳ ಮೋಹವನ್ನು ಬಿಡಬೇಕೆಂದೂ ಭಾವಾರ್ಥವು.

**ಕೇಣ ವಿ ಅಪ್ಪಉ ವಂಚಿಯಉ, ಸಿರು ಲುಂಚಿವಿ ಛಾರೇಣ ।**
**ಸಯಲ ವಿ ಸಂಗ ಣ ಪರಿಹರಿಯ, ಜಿಣವರಲಿಂಗಧರೇಣ ॥ ೯೦ ॥**

"ಕೇನಾಪಿ ಆತ್ಮಾ ವಂಚಿತಃ ಶಿರೋ ಲುಂಚಿತ್ವಾ ಕ್ಷಾರೇಣ ।
ಸಕಲಾ ಅಪಿ ಸಂಗಾ ನ ಪರಿಹೃತಾ ಜಿನವರಲಿಂಗಧರೇಣ ॥ ೯೦ ॥"

**ಅನ್ವಯಾರ್ಥ:—ಛಾರೇಣ**—ಕ್ಷಾರ(ಭಸ್ಮ, ಬೂದಿ)ದಿಂದ **ಸಿರು ಲುಂಚಿವಿ**–ತಲೆಯನ್ನು ಅರ್ಥಾತ್ ಕೇಶವನ್ನು ಕಿತ್ತು(ಬೋಳಿಸಿ) **ಜಿಣವರಲಿಂಗಧರೇಣ**—ಜಿನವರಲಿಂಗ(ನಿರ್ಗ್ರಂಥತ್ವ–ದಿಗಂಬರತ್ವ)ವನ್ನು ಧರಿಸಿರುವ ಯಾವ ಮುನಿಯಿಂದ **ಸಯಲು ವಿ ಸಂಗ**—ಸಮಸ್ತಬಾಹ್ಯಾಭ್ಯಂತರ–ಪರಿಗ್ರಹಗಳು **ಣ ಪರಿಹರಿಯ**—ಬಿಡಲ್ಪಡಲಿಲ್ಲವೋ ಅಂತಹ **ಕೇಣ ವಿ**—ಯಾವನೋರ್ವಮುನಿಯಿಂದ **ಅಪ್ಪಉ ವಂಚಿಯಉ** ಆತ್ಮನು ವಂಚಿಸಲ್ಪಟ್ಟನು.

**ಭಾವಾರ್ಥ**—"ಮೂರ್ಛಾ ಪರಿಗ್ರಹಃ" ಎನ್ನುವಂತೆ ಪರವಸ್ತುಗಳ ಮಮತೆಯೇ ಪರಿಗ್ರಹವು ಯಾವನು ಸಂಯಮೋಪಕರಣಾದಿಪರವಸ್ತುಗಳ ಮಮತೆಯನ್ನು ಬಿಡದೆ ಕೇವಲ ತಲೆಕೂದಲುಗಳನ್ನು ಕಿತ್ತು ಮುನಿವೇಷಧಾರಿಯಾಗಿರುವನೋ ಆತನು ನಿಶ್ಚಯವಾಗಿಯೂ ಆತ್ಮವಂಚಕನು ಅರ್ಥಾತ್.—ವೀತರಾಗನಿರ್ವಿಕಲ್ಪನಿಜಾನಂದೈಕರೂಪವಾದ ಸುಖರಸಾಸ್ವಾದಪರಿಣತಪರಮಾತ್ಮಭಾವನೆಯೆಂಬ ತೀಕ್ಷ್ಣವಾದ ಶಸ್ತ್ರ(ಕ್ಷೌರಕತ್ತಿ)ದಿಂದ ಬಾಹ್ಯಾಭ್ಯಂತರಸಮಸ್ತಪರಿಗ್ರಹಾಕಾಂಕ್ಷೆಗಳ ತ್ಯಾಗರೂಪವಾದ ಮನೋಮುಂಡನ(ಮನಸ್ಸಿನ ಬೋಳಿಸುವಿಕೆ)ವನ್ನು ಮೊದಲು ಮಾಡದೆ ಜಿನದೀಕ್ಷಾರೂಪ ಶಿರೋಮುಂಡನ(ತಲೆಯ ಬೋಳಿಸುವಿಕೆ)ವನ್ನು ಮಾಡಿಕೊಂಡಿರುವ ಮುನಿಯು ಆತ್ಮವಂಚಕನಾಗುವನು. ಏಕೆಂದರೆ ಆತನು ಬಾಹ್ಯದಲ್ಲಿಮಾತ್ರ ನಿರ್ಗ್ರಂಥನಾಗಿ ಕಾಣುತ್ತಾನಲ್ಲದೆ ಆಭ್ಯಂತರದಲ್ಲಿ ನಿರ್ಗ್ರಂಥನಾಗಿರುವುದಿಲ್ಲ. ಅತಏವ ಕೇವಲ ಸ್ವಶುದ್ಧಾತ್ಮಭಾವನೆಯಿಂದುಂಟಾದ ಪರಮಾನಂದರೂಪವಾದ ಪರಿಗ್ರಹ(ಸ್ವೀಕಾರ)ವುಳ್ಳವನಾಗಿ ಶುದ್ಧಾತ್ಮಾನುಭೂತಿಗೆ ವಿಪರೀತಗಳಾದ ದೃಷ್ಟಶ್ರುತಾನುಭೂತಸಮಸ್ತಪರಿಗ್ರಹಗಳನ್ನು

ಜಗತ್ತ್ರಯಕಾಲತ್ರಯಗಳಲ್ಲಿ ಮನೋವಾಕ್ಕಾಯಕೃತಕಾರಿತಾನುಮೋದನಗಳಿಂದ ಸರ್ವಧಾ ತ್ಯಾಗಮಾಡಬೇಕೆಂದು ತಾತ್ಪರ್ಯವು.

**ಜೇ ಜಿಣಲಿಂಗು ಧರೇವಿ ಮುಣಿ, ಇಟ್ಠಪರಿಗ್ಗಹ ಲೆಂತಿ ।**
**ಛದ್ದಿ ಕರೇವಿಣು ತೇ ಜಿ ಜಿಯ, ಸಾ ಪುಣು ಛದ್ದಿ ಗಿಲಂತಿ ॥ ೯೧ ॥**

"ಯೇ ಜಿನಲಿಂಗಂ ಧೃತ್ವಾಪಿ ಮುನಯ ಇಷ್ಟಪರಿಗ್ರಹಾನ್ ಲಾಂತಿ ।
ಛರ್ದಿಂ ಕೃತ್ವಾ ತೇ ಏವ ಜೀವ ತಾಂ ಪುನಃ ಛರ್ದಿಂ ಗಿಲಂತಿ ॥ ೯೧ ॥"

**ಅನ್ವಯಾರ್ಥ:**—**ಜಿಯ**—ಎಲೈ ಜೀವನೇ! **ಜೇ ಮುಣಿ**—ಯಾವ ಮುನಿ(ಸಾಧು)ಗಳು **ಜಿಣಲಿಂಗು ಧರೇವಿ**—ಜಿನಲಿಂಗ(ದಿಗಂಬರತ್ವ)ವನ್ನು ಧರಿಸಿಯೂ **ಇಟ್ಠಪರಿಗ್ಗಹ**—ತಮಗಿಷ್ಟವಾದ ಪರಿಗ್ರಹಗಳನ್ನು **ಲೆಂತಿ**—ಗ್ರಹಣಮಾಡುತ್ತಾರೋ **ತೇ ಜಿ**—ಅವರು ನಿಶ್ಚಯವಾಗಿ **ಛದ್ದಿ ಕರೇವಿಣು**—ವಮನ(ವಾಂತಿ)ವನ್ನು ಮಾಡಿ **ಪುಣು**—ಮರಳಿ **ಸಾ ಛದ್ದಿ**—ಆ ವಮನವನ್ನು(ಕಾರಿದುದನ್ನು) **ಗಿಲಂತಿ**—ನುಂಗುತ್ತಾರೆ ಅರ್ಥಾತ್ ಸೇವಿಸುತ್ತಾರೆ

**ಭಾವಾರ್ಥ:**—ಪರಿಗ್ರಹಗಳಲ್ಲಿ ಸಚಿತ್ತ ಅಚಿತ್ತ ಹಾಗೂ ಮಿಶ್ರಗಳೆಂದು ಮೂರು ಭೇದಗಳನ್ನು ಕಲ್ಪಿಸಬಹುದು ಗೃಹಸ್ಥಾಪೇಕ್ಷೆಯಿಂದ ಪುತ್ರಕಲತ್ರಾದಿಗಳು ಚೇತನ (ಸಚಿತ್ತ) ಪರಿಗ್ರಹಗಳು ಸುವರ್ಣಾದಿಗಳು ಅಚೇತನಪರಿಗ್ರಹಗಳು ಹಾಗೂ ಆಭರಣಾದಿಯುಕ್ತ ಸ್ತ್ರೀಮೊದಲಾದುವು ಮಿಶ್ರ (ಸಚಿತ್ತಾಚಿತ್ತ) ಪರಿಗ್ರಹಗಳು ಮುನಿಯ ಅಪೇಕ್ಷೆಯಿಂದ ಶಿಷ್ಯಾದಿಗಳು ಸಚಿತ್ತಗಳು. ಪಿಂಛಮೊದಲಾದುವು ಅಚಿತ್ತಗಳು ಹಾಗೂ ಉಪಕರಣಯುಕ್ತಶಿಷ್ಯಾದಿಗಳು ಮಿಶ್ರಗಳು ಅಥವಾ ಮಿಥ್ಯಾತ್ವರಾಗಾದಿರೂಪವಾದುದು ಸಚಿತ್ತವು. ದ್ರವ್ಯಕರ್ಮನೋಕರ್ಮರೂಪವಾದುದು ಅಚಿತ್ತವು ಹಾಗೂ ದ್ರವ್ಯಕರ್ಮ ಭಾವಕರ್ಮರೂಪವಾದುದು ಮಿಶ್ರವು ವೀತರಾಗನಿರ್ವಿಕಲ್ಪಸಮಾಧಿಸ್ಥನಾದ ಪುರುಷನ ಅಪೇಕ್ಷೆಯಿಂದ ಸಿದ್ಧರೂಪವಾದುದು ಸಚಿತ್ತವು ಪುದ್ಗಲಾದಿಪಂಚದ್ರವ್ಯರೂಪವಾದುದು ಅಚಿತ್ತವು ಹಾಗೂ ಗುಣಸ್ಥಾನಮಾರ್ಗಣಸ್ಥಾನ-ಜೀವಸಮಾಸಾದಿರೂಪದಿಂದ ಪರಿಣತನಾದ ಸಂಸಾರಿಜೀವರೂಪವಾದುದು ಮಿಶ್ರಪರಿಗ್ರಹವು. ಈ ಪ್ರಕಾರವಾದ ಬಾಹ್ಯಾಭ್ಯಂತರಪರಿಗ್ರಹರಹಿತವಾದ ಜಿನಲಿಂಗವನ್ನು ಸ್ವೀಕರಿಸಿಯೂ ಯಾವ ಮುನಿಯು, ಶುದ್ಧಾತ್ಮಾನುಭೂತಿಗೆ ವಿಪರೀತವಾದ ಇಷ್ಟಪರಿಗ್ರಹವನ್ನು ಸ್ವೀಕರಿಸುತ್ತಾನೋ ಅವನು ವಮನ ಮಾಡಿದ ಎಂಜಲನ್ನು ಪುನಃ ಸೇವಿಸುವ ಮನುಷ್ಯನಿಗೆ ಸಮಾನನಾಗಿರುವನು. ಇದನ್ನು ಗ್ರಂಥಾಂತರದಲ್ಲಿ ಹೀಗೆ ಹೇಳಿರುವರು:—"**ತ್ಯಕ್ತ್ವಾ ಸ್ವಕೀಯಪಿತೃಮಿತ್ರಕಲತ್ರಪುತ್ರಾನ್ ಸಕ್ತೋಽನ್ಯಗೇಹವನಿತಾದಿಷು ನಿರ್ಮಮುಕ್ಷುಃ । ದೋರ್ಭ್ಯಾಂ ಪಯೋನಿಧಿಸಮುದ್ಗತನಕ್ರಚಕ್ರಂ ಪ್ರೋತ್ತೀರ್ಯ ಗೋಷ್ಪದಜಲೇಷು ನಿಮಗ್ನವಾನ್ ಸಃ ॥**" ಅರ್ಥಾತ್ ತನ್ನ ಪಿತೃಮಿತ್ರಪತ್ನೀಪುತ್ರಾದಿಗಳನ್ನು ತೊರೆದು ಮುನಿಯಾಗಿರುವವನು ಮೋಹದಿಂದ ಅನ್ಯವನಿತಾದಿಗಳಲ್ಲಿ ಅಥವಾ ತನ್ನ ಪುಸ್ತಕಾದ್ಯುಪ

ಕರಣಗಳಲ್ಲಿ ಆಸಕ್ತನಾದುದಾದರೆ ಆತನು ಜಲಚರಪ್ರಾಣಿಗಳಿಂದ ನಿಬಿಡವಾದ ಸಮುದ್ರ ವನ್ನು ಬಾಹುಗಳಿಂದ ದಾಟಿ ಪುನಃ ಗೋಷ್ಪದಜಲ (ಗೋವಿನ ಹೆಜ್ಜೆ ಮುಳುಗುವಷ್ಟು ನೀರು ಅಥವಾ ಗೋವಿನ ಹೆಜ್ಜೆಯಿಂದಾದ ಹೊಂಡದಲ್ಲಿ ಹಿಡಿಯುವಷ್ಟು ನೀರು)ದಲ್ಲಿ ಬಿದ್ದು ಮುಳುಗಿದವನಂತಾಗುವನು. ಅತಏವ ಮೋಹದ ಪರಿಹಾರಕ್ಕಾಗಿ ಸಮಸ್ತ ಬಾಹ್ಯಾಭ್ಯಂತರಪರಿಗ್ರಹಗಳನ್ನು ತ್ಯಾಗಮಾಡಿರುವ ಮುನಿಯು ಯಾವುದೊಂದು ಇಷ್ಟ ಪರಿಗ್ರಹದ ಮೇಲೂ ಮಮತೆಯನ್ನಿಡಬಾರದೆಂದು ಭಾವವು.

**ಲಾಹಹಂ ಕಿತ್ತಿಹಿ ಕಾರಣೇಣ, ಜೇ ಸಿವಸಂಗು ಚಯಂತಿ ।**
**ಖೀಲಾಲಗ್ಗಿವಿ ತೇ ವಿ ಮುಣಿ, ದೇಉಲು ದೇಉ ಡಹಂತಿ ॥ ೯೨ ॥**

"ಲಾಭಸ್ಯ ಕೀರ್ತೇಃ ಕಾರಣೇನ ಯೇ ಶಿವಸಂಗಂ ತ್ಯಜಂತಿ ।
ಕೀಲಾನಿಮಿತ್ತಂ ತೇಽಪಿ ಮುನಯಃ ದೇವಕುಲಂ ದೇವಂ ದಹಂತಿ ॥ ೯೨ ॥"

**ಅನ್ವಯಾರ್ಥ:—ಜೇ**—ಯಾರು **ಲಾಹಹಂ**—ಲಾಭದ ಮತ್ತು **ಕಿತ್ತಿಹಿ ಕಾರಣೇಣ**—ಕೀರ್ತಿಯಕಾರಣದಿಂದ **ಸಿವಸಂಗು ಚಯಂತಿ**-ಶಿವ ಅರ್ಥಾತ್ ಪರಮಾತ್ಮನ ಧ್ಯಾನವನ್ನು ಬಿಡುತ್ತಾರೋ **ತೇ ಮುಣಿ**—ಆ ಮುನಿಗಳು **ಖೀಲಾಲಗ್ಗಿವಿ**—ಕಬ್ಬಿಣದ ಕೀಲಿಗಾಗಿ ಅರ್ಥಾತ್ ಕೀಲಿಗೆ ಸಮಾನವಾದ ಅಸಾರ-ಇಂದ್ರಿಯಸುಖಕ್ಕಾಗಿ **ದೇಉಲು ವಿ**—ದೇವಾಲಯವನ್ನು ಅರ್ಥಾತ್ ಮೋಕ್ಷಪ್ರಾಪ್ತಿಗೆ ಯೋಗ್ಯವಾದ ದಿವ್ಯಪರಮೌದಾರಿಕಶರೀರವೆಂಬ ದೇವಸ್ಥಾನವನ್ನು ಮತ್ತು **ದೇಉ**—ದೇವನನ್ನು ಅರ್ಥಾತ್ ನಿಜಪರಮಾತ್ಮದೇವನನ್ನು **ಡಹಂತಿ**—ಸುಡುತ್ತಾರೆ ಅರ್ಥಾತ್ ಕೆಡಿಸುತ್ತಾರೆ.

**ಭಾವಾರ್ಥ.**—ಸಂಸಾರಶರೀರಭೋಗಾದಿಗಳನ್ನು ತ್ಯಜಿಸಿ ಮಹಾವ್ರತವನ್ನು ಸ್ವೀಕರಿಸಿರುವ ಮುನಿಗಳೂ ಮೋಹವಶದಿಂದ ತಮ್ಮ ಕೀರ್ತಿ(ಖ್ಯಾತಿ)ಪೂಜಾಲಾಭಾದಿಗಳಿಗಾಗಿ ನಿಜಪರಮಾತ್ಮಧ್ಯಾನವನ್ನು ಬಿಟ್ಟುದಾದರೆ ಅವರು ತುಚ್ಛವಾದ ಲೋಹದ ಕೀಲಿ (ಮೊಳೆ)ಗಾಗಿ ಜಿನಬಿಂಬವನ್ನೂ ದೇವಾಲಯವನ್ನೂ ಸುಟ್ಟಂತೆ ತುಚ್ಛವಾದ ಇಂದ್ರಿಯ ಸುಖಕ್ಕಾಗಿ ನಿಜಪರಮಾತ್ಮನನ್ನೂ ದಿವ್ಯಪರಮೌದಾರಿಕಶರೀರವನ್ನೂ ಭಸ್ಮಗೊಳಿಸುತ್ತಾರೆ. ಹೇಗಂದರೆ, ಖ್ಯಾತಿಪೂಜಾದಿಗಳ ಲಾಲಸೆಯಿಂದ ಶುದ್ಧಾತ್ಮಭಾವನೆಯನ್ನು ತೊರೆದು ಅಜ್ಞಾನಭಾವಗಳಲ್ಲಿ ಪ್ರವರ್ತಿಸುವುದರಿಂದ ಜ್ಞಾನಾವರಣಾದಿಕರ್ಮಗಳ ಬಂಧವುಂಟಾಗುತ್ತದೆ. ಈ ಕರ್ಮಬಂಧದಿಂದ ಜ್ಞಾನಾದಿಗುಣಗಳ ಆವರಣ(ಮುಚ್ಚುವಿಕೆ)ವುಂಟಾಗುತ್ತದೆ ಅರ್ಥಾತ್ ಕೇವಲಜ್ಞಾನಾವರಣಕರ್ಮದಿಂದ ಕೇವಲ(ಅನಂತ)ಜ್ಞಾನವೂ ಕೇವಲದರ್ಶನಾವರಣಕರ್ಮದಿಂದ ಕೇವಲದರ್ಶನವೂ ವೀರ್ಯಾಂತರಾಯಕರ್ಮದಿಂದ ಅನಂತವೀರ್ಯವೂ ಮೋಹಕರ್ಮೋದಯದಿಂದ ಅನಂತಸುಖವೂ ಆಚ್ಛಾದಿಸಲ್ಪಡುತ್ತದೆ. ಹೀಗೆ ಕೇವಲಜ್ಞಾನಾದಿ ಅನಂತಚತುಷ್ಟಯಗಳ ಪ್ರಾಪ್ತಿಯಾಗದಿರುವುದರಿಂದ ಜೀವನು ಪರಮೌದಾರಿಕಶರೀರವನ್ನು ಹೊಂದುವುದಿಲ್ಲ. ಏಕಂದರೆ ತದ್ಭವಮೋಕ್ಷಗಾಮಿ(ಅದೇ ಭವದಲ್ಲಿ ಮುಕ್ತಿಯನ್ನು ಹೊಂದುವವರು)ಗಳಿಗೆ ಮಾತ್ರವೇ ಪರಮೌದಾರಿಕಶರೀರವುಂಟಾಗುತ್ತದೆ. ಅತಏವ ಪೂರ್ವೋಕ್ತ ಮುನಿಗಳು ಸ್ವಶುದ್ಧಾತ್ಮಭಾವನೆಯಿಂದಲೂ ಮುಕ್ತಿ

ಯೋಗ್ಯವಾದ ಶರೀರದಿಂದಲೂ ವಂಚಿತರಾಗುತ್ತಾರೆ ಅರ್ಥಾತ್ ಮೋಕ್ಷವನ್ನು ಪಡೆಯುವುದಿಲ್ಲವೆಂದು ಭಾವವು. ಪರಂತು ಸಮಭಾವದಿಂದ ಶುದ್ಧಾತ್ಮಭಾವನಾಪರನಾದ ಮುನಿಯು ಸಂಸಾರಸ್ಥಿತಿಯನ್ನು ಛೇದಿಸುವವನಾಗಿ ಸ್ವರ್ಗದಲ್ಲಿ ಜನ್ಮತಾಳುತ್ತಾನೆ. ಅಲ್ಲಿಂದ ಪುನಃ ಮನುಷ್ಯಭವವನ್ನು ಹೊಂದಿ ಮೋಕ್ಷಗಾಮಿಯಾಗುತ್ತಾನೆ. **ಈ** ಕುರಿತು ಗ್ರಂಥಾಂತರದಲ್ಲಿ ಹೀಗೆ ಹೇಳಿದ್ದಾರೆ—"**ಸಗ್ಗೋ ತವೇಣ ಸವ್ವೋ ವಿ ಪಾವಏ ಕಿಂ ತು ಝಾಣಜೋಏಣ । ಜೋ ಪಾವಇ ಸೋ ಪಾವಇ ಪರಭವೇ ಸಾಸಯಂ ಸೊಕ್ಖಂ ॥**" ಅರ್ಥಾತ್ ತಪಶ್ಚರಣೆಯಿಂದ ಸ್ವರ್ಗವನ್ನು ಎಲ್ಲವರೂ **ಪಡೆ**ಯುತ್ತಾರೆ. ಆದರೆ ಯಾವನು ನಿಜಶುದ್ಧಾತ್ಮಧ್ಯಾನದ ಯೋಗದಿಂದ ಸ್ವರ್ಗವನ್ನು **ಪಡೆ**ಯುತ್ತಾನೋ ಆತನೇ ಪರಭವದಲ್ಲಿ ಶಾಶ್ವತಸುಖ(ಅನಶ್ವರಸುಖ, ಮೋಕ್ಷ)ವನ್ನು **ಪಡೆ**ಯುವನು.

**ಅಪ್ಪಉ ಮಣ್ಣಇ ಜೋ ಜಿ ಮುಣಿ, ಗರುಯಉ ಗಂಥಹಿ ತತ್ತು ।**
**ಸೋ ಪರಮತ್ಥೇ ಜಿಣು ಭಣಇ, ಣವಿ ಬುಜ್ಝಇ ಪರಮತ್ಥು ॥ ೯೩ ॥**

"ಆತ್ಮಾನಂ ಮನ್ಯತೇ ಯ ಏವ ಮುನಿಃ ಗುರುಕಂ ಗ್ರಂಥೈಃ ತಥ್ಯಮ್ ।
ಸ ಪರಮಾರ್ಥೇನ ಜಿನೋ ಭಣತಿ ನೈವ ಬುಧ್ಯತೇ ಪರಮಾರ್ಥಮ್ ॥ ೯೩ ॥"

**ಅನ್ವಯಾರ್ಥ**—**ಜೋ**—ಯಾವ **ಮುಣಿ**—ಮುನಿಯು **ಗಂಥಹಿ ಜಿ**—ಪರಿಗ್ರಹಗಳಿಂದಲೇ **ಅಪ್ಪಉ**—ತನ್ನನ್ನು **ಗರುಯಉ ಮಣ್ಣಇ**—ದೊಡ್ಡವ(ಮಹಾತ್ಮ)ನನ್ನಾಗಿ ತಿಳಿಯುತ್ತಾನೋ **ಸೋ**—ಅವನು **ತತ್ತು**—ನಿಜವಾಗಿಯೂ **ಪರಮತ್ಥೇ**—ಪರಮಾರ್ಥ(ಯಥಾರ್ಥ)ದಿಂದ **ಪರಮತ್ಥು**—ಪರಮಾರ್ಥ(ವಸ್ತುಸ್ಥಿತಿ)ವನ್ನು **ಣವಿ ಬುಜ್ಝಇ**—ತಿಳಿಯುವುದಿಲ್ಲ. ಹೀಗೆಂದು **ಜಿಣು ಭಣಇ**—ಜಿನೇಂದ್ರರು ಹೇಳುತ್ತಾರೆ.

**ಭಾವಾರ್ಥ.**—ನಿರ್ದೋಷಪರಮಾತ್ಮಭಾವನೆಯಿಂದ ಪರಾಙ್ಮುಖನಾದ **ಯಾವ** ತಪಸ್ವಿಯು ಪೂರ್ವೋಕ್ತ ಸಚಿತ್ತಾಚಿತ್ತಮಿಶ್ರರೂಪವಾದ ಪರಿಗ್ರಹಗಳಿಂದಲೇ ತನ್ನನ್ನು ದೊಡ್ಡವನನ್ನಾಗಿ ತಿಳಿಯುತ್ತಾನೋ ಅರ್ಥಾತ್ ತಾನು ಉತ್ತಮಜ್ಞಾನಿಯೆಂದೂ ಪೂಜ್ಯನೆಂದೂ ಅಭಿಮಾನವನ್ನು ಪಡೆಯುತ್ತಾನೋ ವಸ್ತುತಃ ಆತನು ವೀತರಾಗಪರಮಾನಂದ ಸ್ವಭಾವವುಳ್ಳ ನಿಜಾತ್ಮನನ್ನೇ ತಿಳಿಯುವುದಿಲ್ಲ ಅರ್ಥಾತ್ ಆತ್ಮಜ್ಞಾನರಹಿತನಾಗಿರುತ್ತಾನೆ.

**ಬುಜ್ಝಂತಹಂ ಪರಮತ್ಥು ಜಿಯ, ಗುರುಲಹು ಅತ್ಥಿ ಣ ಕೋಇ ।**
**ಜೀವಾ ಸಯಲ ವಿ ಬಂಭು ಪರು, ಜೇಣ ವಿಯಾಣಇ ಸೋಇ ॥ ೯೪ ॥**

"ಬುಧ್ಯಮಾನಾನಾಂ ಪರಮಾರ್ಥಂ ಜೀವ ಗುರುಃ ಲಘುಃ ಅಸ್ತಿ ನ ಕೋಽಪಿ ।
ಜೀವಾಃ ಸಕಲಾ ಅಪಿ ಬ್ರಹ್ಮ ಪರಂ ಯೇನ ವಿಜಾನಾತಿ ಸೋಽಪಿ ॥ ೯೪ ॥"

**ಅನ್ವಯಾರ್ಥ:**—**ಜಿಯ**—ಎಲೈ ಜೀವನೇ! **ಪರಮತ್ಥು ಬುಜ್ಝಂತಹಂ**—ಪರಮಾರ್ಥವನ್ನು ತಿಳಿಯುವಂಥವರಿಗೆ **ಕೋಇ**—ಯಾವನೊಬ್ಬ ಜೀವನೂ **ಗುರು**

**ಲಹು ಅತ್ಥಿ** ಣ— ಗುರು(ದೊಡ್ಡವ)ವಾಗಿಯೂ ಲಘು(ಅಲ್ಪ)ವಾಗಿಯೂ ಇರುವುದಿಲ್ಲ. **ಸಯಲ ವಿ ಜೀವಾ**— ಎಲ್ಲ ಜೀವರುಗಳೂ **ಬಂಭು ವರು**— ಪರಬ್ರಹ್ಮಸ್ವರೂಪರಾಗಿ ರುತ್ತಾರೆ **ಜೇಣ**— ಯಾವಕಾರಣದಿಂದ (ನಿಶ್ಚಯನಯದಿಂದ) **ಸೋಇ**–ಸಮ್ಯಗ್ದೃಷ್ಟಿ ಯಾದ ಆ ಜೀವನು **ವಿಯಾಣಇ**— ಸರ್ವಜೀವರುಗಳನ್ನೂ ಶುದ್ಧರೂಪದಿಂದ ತಿಳಿಯು ತ್ತಾನೆ.

**ಭಾವಾರ್ಥ:**— ಹಿಂದೆ ಹೇಳಿದಂತೆ ಪರಮಾರ್ಥವನ್ನರಿಯದಿರುವ ಮನುಷ್ಯನು ಪರಿಗ್ರಹವಿರುವುದರಿಂದ ತಾನು ದೊಡ್ಡವನೆಂದೂ ಪರಿಗ್ರಹದ ಅಭಾವದಿಂದ ಅಲ್ಪ ನೆಂದೂ ತಿಳಿಯುತ್ತಾನೆ. ಆದರೆ ವಸ್ತುತಃ ಯಾವ ಜೀವರಲ್ಲಿಯೂ ಗುರುತ್ವ–ಲಘುತ್ವ ಗಳಿರುವುದಿಲ್ಲ. ಯದ್ಯಪಿ ಕರ್ಮಾವರಣದ ದೆಸೆಯಿಂದ ಜೀವರುಗಳಲ್ಲಿ ಗುರುತ್ವ-ಲಘುತ್ವಗಳು ಕಂಡುಬರುವುವಾದರೂ ಶುದ್ಧನಿಶ್ಚಯನಯದಿಂದ ಎಲ್ಲ ಜೀವರುಗಳೂ ಸಮಾನರಾಗಿರುವರು ಅರ್ಥಾತ್ ಪರಮಬ್ರಹ್ಮ ಅಥವಾ ಸಿದ್ಧಾತ್ಮ(ಮುಕ್ತಾತ್ಮ)ಸ್ವರೂ ಪರಾಗಿರುವರು. ಆದುದರಿಂದ ನಿಶ್ಚಯಸಮ್ಯಗ್ದೃಷ್ಟಿಯಾದ ಜೀವನು(ನಿಶ್ಚಯನಯ ದಿಂದ) ಸಮಸ್ತಜೀವರುಗಳನ್ನೂ ಶುದ್ಧಸ್ವರೂಪದಿಂದಲೇ ತಿಳಿಯುತ್ತಾನೆ

ಈಪ್ರಕಾರವಾಗಿ ನಲ್ವತ್ತೊಂದು ಸೂತ್ರಗಳ ಮಧ್ಯದಲ್ಲಿ ಪರಿಗ್ರಹತ್ಯಾಗವ್ಯಾಖ್ಯಾನದ ಮುಖ್ಯತೆಯಿಂದ ಎಂಟು ಸೂತ್ರಗಳು ಹೇಳಲ್ಪಟ್ಟುವು

ಮುಂದೆ ಹದಿಮೂರು ಸೂತ್ರಗಳವರೆಗೆ ಶುದ್ಧನಿಶ್ಚಯನಯದಿಂದ ಸರ್ವಜೀವರೂ ಕೇವಲಜ್ಞಾನಾದಿಗುಣಗಳಿಂದ ಸಮಾನರಾಗಿರುತ್ತಾರೆಂಬುದನ್ನು ನಿರೂಪಿಸುತ್ತಾರೆ —

**ಜೋ ಭತ್ತಉ ರಯಣತ್ತಯಹಂ, ತಸು ಮುಣಿ ಲಕ್ಖಣು ಏಉ ।**
**ಅಚ್ಛಉ ಕಹಿಂ ವಿ ಕುಡಿಲ್ಲಿಯಇ, ಸೋ ತಸು ಕರಇ ಣ ಭೇಉ ॥ ೯೫ ॥**

"ಯಃ ಭಕ್ತಃ ರತ್ನತ್ರಯಸ್ಯ ತಸ್ಯ ಮುನ್ಯಸ್ವ ಲಕ್ಷಣಂ ಇದಮ್ ।
ತಿಷ್ಠತು ಕನ್ಯಾಮಪಿ ಕುಡ್ಯಾಂ ನ ತಸ್ಯ ಕರೋತಿ ನ ಭೇದಮ್ ॥ ೯೫ ॥"

**ಅನ್ವಯಾರ್ಥ:— ಜೋ**–ಯಾವ ಮುನಿಯು **ರಯಣತ್ತಯಹಂ**–ರತ್ನತ್ರಯದ **ಭತ್ತಉ**— ಭಕ್ತನೋ ಅರ್ಥಾತ್ ಆರಾಧಕನೋ **ತಸು**— ಅವನ **ಲಕ್ಖಣು ಏಉ ಮುಣಿ**— ಲಕ್ಷಣವಿದೆಂದು ತಿಳಿ. (ಜೀವನು) **ಕಹಿಂ ವಿ ಕುಡಿಲ್ಲಿಯಇ**— ಯಾವ ಶರೀರದಲ್ಲಾದರೂ **ಅಚ್ಛಉ**— ಇರಲಿ **ಸೋ**–ಆ ಜ್ಞಾನಿಯು **ತಸು ಕರಇ ಣ ಭೇಉ**– ಆ ಜೀವನ ಭೇದವನ್ನು ಮಾಡುವುದಿಲ್ಲ ಅರ್ಥಾತ್ ಜ್ಞಾನದೃಷ್ಟಿಯಿಂದ ಎಲ್ಲ ಜೀವರು ಗಳನ್ನೂ ಸಮಾನರನ್ನಾಗಿ ತಿಳಿಯುತ್ತಾನೆ.

**ಭಾವಾರ್ಥ**— ನಿಶ್ಚಯರತ್ನತ್ರಯಾರಾಧಕನಾದ ವೀತರಾಗಸ್ವಸಂವೇದನಜ್ಞಾನಿ ಯು ಜೀವರು ಕರ್ಮೋದಯಕ್ಕನುಸಾರವಾಗಿ ಯಾವ ಶರೀರದಲ್ಲಾದರೂ ಇರಲಿ. ಶುದ್ಧನಿಶ್ಚಯನಯದಿಂದ ಆ ಜೀವರೆಲ್ಲರೂ ಶುದ್ಧಬುದ್ಧಸ್ವಭಾವವುಳ್ಳವರಾಗಿರುವರೆಂದು ತಿಳಿಯುತ್ತಾನೆ. ಅರ್ಥಾತ್ ಜ್ಞಾನಾದಿಗುಣಗಳಿಂದ ಅವರಲ್ಲಿ ಯಾವ ಭೇದವೂ

ಇರುವುದಿಲ್ಲವೆಂದಭಿಪ್ರಾಯವು. ಹೀಗೆ ಜೀವರಲ್ಲಿ ದೇಹದ ಭೇದದಿಂದ ಭೇದವಿರುವು ದಿಲ್ಲವೆಂದೂ ಅತಏವ ಎಲ್ಲಾ ಜೀವರು ಸಮಾನರಾಗಿರುತ್ತಾರೆಂದೂ ಹೇಳಿದುದರಿಂದ "ವೇದಾಂತಿ"ಗಳು ಹೇಳುವಂತೆ "ಆತ್ಮನು ಒಬ್ಬನೇ ಇರುತ್ತಾನೆ" ಎಂದು ತಿಳಿಯ ಬಾರದು "ಸೈನ್ಯವು ಬಂದಿತು" "ಸೈನ್ಯವು ಹೋಯಿತು" ಎಂದು ಮೊದಲಾಗಿ ಸೈನ್ಯ ವನ್ನು ಜಾತ್ಯಪೇಕ್ಷೆಯಿಂದ(ಸಂಗ್ರಹನಯದಿಂದ)ಏಕರೂಪವಾಗಿ(ಏಕವಚನದಿಂದ)ಹೇಳು ವುದಾದರೂ ವ್ಯಕ್ತ್ಯಪೇಕ್ಷೆಯಿಂದ(ವ್ಯವಹಾರನಯದಿಂದ)ಸೈನ್ಯವು ಆನೆ, ಕುದುರೆ, ರಥ ಮೊದಲಾದ ಭೇದದಿಂದ ಅನೇಕರೂಪವಾಗಿರುತ್ತದೆ ಹೀಗೆಯೇ ವನ(ಕಾಡು)ವು ಜಾತ್ಯಪೇಕ್ಷೆಯಿಂದ ಏಕತ್ವದಿಂದ(ಏಕವಚನದಿಂದ)ವನವೆಂದು ಕರೆಯಲ್ಪಡುವುದಾದರೂ ಬೇರೆಬೇರೆ ಜಾತಿಯ ವೃಕ್ಷಗಳ ಅಪೇಕ್ಷೆಯಿಂದ ಅದು(ವನವು)ಭೇದವುಳ್ಳುದಾಗಿರು ತ್ತದೆ ಅದೇ ಪ್ರಕಾರವಾಗಿ ಜಾತ್ಯಪೇಕ್ಷೆಯಿಂದ ಅಥವಾ ಜ್ಞಾನಾಪೇಕ್ಷೆಯಿಂದ ಜೀವ ರಲ್ಲಿ ಏಕತ್ವ(ಅಭೇದ)ವಿರುವುದಾದರೂ ವ್ಯಕ್ತಿರೂಪದಿಂದ ಅರ್ಥಾತ್ ದ್ರವ್ಯಾಪೇಕ್ಷೆ ಯಿಂದ ಜೀವರು ಬೇರೆಬೇರೆಯಾಗಿರುತ್ತಾರೆ. ಅತಏವ ವ್ಯವಹಾರನಯದಿಂದ ಅನೇಕ ಜೀವರುಗಳಿರುವುದರಿಂದ ವೇದಾಂತಿಗಳ ಮಾನ್ಯತೆಯಂತೆ ಜೀವನು ಒಬ್ಬನೇ ಆಗಿರು ವುದಿಲ್ಲವೆಂದು ತಿಳಿಯಬೇಕು

**ಜೀವಹಂ ತಿಹುಯಣಸಂಠಿಯಹಂ, ಮೂಢಾ ಭೇಉ ಕರಂತಿ ।**
**ಕೇವಲಣಾಣಿಂ ಣಾಣಿ ಫುಡು, ಸಯಲು ವಿ ಎಕ್ಕು ಮುಣಂತಿ ॥ ೯೬ ॥**

"ಜೀವಾನಾಂ ತ್ರಿಭುವನಸಂಸ್ಥಿತಾನಾಂ ಮೂಢಾ ಭೇದಂ ಕುರ್ವಂತಿ ।
ಕೇವಲಜ್ಞಾನೇನ ಜ್ಞಾನಿನಃ ಸ್ಫುಟಂ ಸಕಲಮಪಿ ಏಕಂ ಮನ್ಯಂತೇ ॥ ೯೬ ॥"

**ಅನ್ವಯಾರ್ಥ — ಮೂಢಾ**— ಮೂರ್ಖ(ಅಜ್ಞಾನಿ)ರು **ತಿಹುಯಣಸಂಠಿ ಯಹಂ**— ಮೂರುಲೋಕದಲ್ಲಿರುವ **ಜೀವಹಂ**— ಜೀವರುಗಳ **ಭೇಉ ಕರಂತಿ**— ಭೇದವನ್ನು ಮಾಡುತ್ತಾರೆ. **ಣಾಣಿ**— ಜ್ಞಾನಿಗಳು **ಕೇವಲಣಾಣಿಂ**— ಕೇವಲಜ್ಞಾನ ದಿಂದ **ಫುಡು**— ಸ್ಪಷ್ಟವಾಗಿ(ನಿಶ್ಚಯವಾಗಿ) **ಸಯಲು ವಿ**- ಸಮಸ್ತ ಜೀವರಾಶಿಯನ್ನೂ **ಎಕ್ಕು ಮುಣಂತಿ**— ಒಂದನ್ನಾಗಿ ಅರ್ಥಾತ್ ಸಮಾನವನ್ನಾಗಿ ತಿಳಿಯುತ್ತಾರೆ.

**ಭಾವಾರ್ಥ.**— ಸ್ಫಟಿಕಮಣಿಯ ಹಿಂದೆ ಕೆಂಪು ಹಳದಿ ಹಸುರುಮೊದಲಾದ ಬಣ್ಣ ವುಳ್ಳ ವಸ್ತು(ಕಾಗದ ಮೊದಲಾದುವು)ಗಳನ್ನಿಡುವುದರಿಂದ ಆ ವಸ್ತುಗಳ ವರ್ಣದ ಭೇದ ದಿಂದ ಸ್ಫಟಿಕಮಣಿಯಲ್ಲಿ ಭೇದವು ಕಾಣಲ್ಪಡುವಂತೆ ಹಾಗೂ ಸ್ಫಟಿಕಮಣಿಯಲ್ಲಿ ಯಾವ ಭೇದವೂ ಇಲ್ಲದಿರುವಂತೆ ಮೂರುಲೋಕಗಳಲ್ಲಿರುವ ಜೀವರಲ್ಲಿ ವ್ಯವಹಾರನಯದಿಂದ ಶರೀರಭೇದದಿಂದ ಭೇದವಿರುತ್ತದಾದರೂ ನಿಶ್ಚಯನಯದಿಂದ ಯಾವಭೇದವೂ ಇರು ವುದಿಲ್ಲ ಅಜ್ಞಾನಿಗಳು ಜೀವರಲ್ಲಿ ವ್ಯವಹಾರನಯದಿಂದಿರುವ ಭೇದವನ್ನು ನೋಡಿ ನಿಶ್ಚಯನಯದಿಂದಲೂ ಭೇದವನ್ನು ಕಲ್ಪಿಸುತ್ತಾರೆ. ಪರಂತು ವೀತರಾಗಸ್ವಸಂವೇದನ ಜ್ಞಾನಿಗಳು(ಕೇವಲಜ್ಞಾನದಿಂದ) ಜೀವತ್ವಾಪೇಕ್ಷೆಯಿಂದ ತ್ರಿಲೋಕದಲ್ಲಿರುವ ಸರ್ವ ಜೀವರೂ ಸಮಾನರಾಗಿರುತ್ತಾರೆಂದು ತಿಳಿಯುತ್ತಾರೆ.

**ಜೀವಾ ಸಯುಲ ವಿ ಣಾಣಮುಯು, ಜಮ್ಮಣಮರಣವಿಮುಕ್ಕ ।**
**ಜೀವಪಏಸಹಿಂ ಸಯುಲ ಸಮು, ಸಯುಲ ವಿ ಸಗುಣಹಿಂ ಎಕ್ಕ ॥ ೯೭ ॥**

"ಜೀವಾಃ ಸಕಲಾ ಅಪಿ ಜ್ಞಾನಮಯಾ ಜನ್ಮಮರಣವಿಮುಕ್ತಾಃ ।
ಜೀವಪ್ರದೇಶೈಃ ಸಕಲಾಃ ಸಮಾಃ ಸಕಲಾ ಅಪಿ ಸ್ವಗುಣೈರೇಕೇ ॥ ೯೭ ॥"

**ಅನ್ವಯಾರ್ಥ.**—**ಸಯುಲ ವಿ ಜೀವಾ**—ಸಮಸ್ತಜೀವರೂ **ಣಾಣಮುಯು**—ಜ್ಞಾನಮಯರೂ **ಜಮ್ಮಣಮರಣವಿಮುಕ್ಕ**—ಜನ್ಮಮರಣಗಳಿಂದ ಬಿಡಲ್ಪಟ್ಟವ(ರಹಿತ)ರೂ ಆಗಿರುತ್ತಾರೆ. **ಜೀವಪಏಸಹಿಂ**—ಜೀವಪ್ರದೇಶಗಳಿಂದ **ಸಯುಲ ಸಮು**—ಎಲ್ಲಾ ಜೀವರು ಸಮಾನರು ಮತ್ತು **ಸಯುಲವಿ**—ಎಲ್ಲಾ ಜೀವರು **ಸಗುಣಹಿಂ ಎಕ್ಕ**—ತಮ್ಮ(ಕೇವಲಜ್ಞಾನಾದಿ)ಗುಣಗಳಿಂದ ಏಕರೂಪ(ಸಮಾನ)ರು.

**ಭಾವಾರ್ಥ.**—ವ್ಯವಹಾರದಿಂದ ಲೋಕಾಲೋಕಪ್ರಕಾಶಕವೂ ನಿಶ್ಚಯನಯದಿಂದ ಸ್ವಶುದ್ಧಾತ್ಮಗ್ರಾಹಕವೂ ಆದ ಕೇವಲಜ್ಞಾನವು ಯದ್ಯಪಿ ವ್ಯವಹಾರನಯದಿಂದ ಕೇವಲಜ್ಞಾನಾವರಣಕರ್ಮದಿಂದ ಆಚ್ಛಾದಿಸಲ್ಪಟ್ಟಿರುವುದಾದರೂ ಶುದ್ಧನಿಶ್ಚಯನಯದಿಂದ ಕೇವಲಜ್ಞಾನಾವರಣದ ಅಭಾವವಿರುವುದರಿಂದ ಪೂರ್ವೋಕ್ತಕೇವಲಜ್ಞಾನಸ್ವಭಾವದಿಂದ ಎಲ್ಲ ಜೀವರೂ ಜ್ಞಾನಮಯರಾಗಿರುವರು ವ್ಯವಹಾರನಯದಿಂದ ಸರ್ವಸಂಸಾರಿಜೀವರು ಜನ್ಮಮರಣಸಹಿತರಾಗಿರುವರಾದರೂ ನಿಶ್ಚಯನಯದಿಂದ ವೀತರಾಗನಿಜಾನಂದೈಕರೂಪಸುಖಾಮೃತಮಯರೂ ಅನಾದಿನಿಧನರೂ ಆಗಿದ್ದು ಶುದ್ಧಾತ್ಮಸ್ವರೂಪದಿಂದ ವಿಲಕ್ಷಣವಾದ ಹಾಗೂ ಜನ್ಮಮರಣಗಳಿಗೆ ಕಾರಣವಾದ ಕರ್ಮದ ಅಭಾವದಿಂದ ಜನ್ಮಮರಣರಹಿತರಾಗಿರುವರು. ಸಂಸಾರಾವಸ್ಥೆಯಲ್ಲಿ ವ್ಯವಹಾರದಿಂದ ಜೀವರು ಪ್ರದೇಶಗಳ ಸಂಕೋಚವಿಸ್ತಾರಗಳಿಂದ ಸ್ವದೇಹಪರಿಮಾಣವುಳ್ಳವರು. ಮುಕ್ತಾವಸ್ಥೆಯಲ್ಲಿ ಕಿಂಚಿದೂನ(ಸ್ವಲ್ಪಕಡಮೆ)ವಾದ ಚರಮಶರೀರಪ್ರಮಾಣವುಳ್ಳವರು. ಪರಂತು ನಿಶ್ಚಯನಯದಿಂದ ಲೋಕಾಕಾಶಪ್ರಮಿತ-ಅಸಂಖ್ಯಾತಪ್ರದೇಶಗಳುಳ್ಳವರಾಗಿರುವರು ಮತ್ತು ಹಾನಿವೃದ್ಧಿಗಳಿಲ್ಲದಿರುವುದರಿಂದ ತಮ್ಮತಮ್ಮ ಪ್ರದೇಶಗಳಿಂದ ಸರ್ವಜೀವರೂ ಸಮಾನರಾಗಿರುವರು. ವ್ಯವಹಾರದಿಂದ ಸಂಸಾರಾವಸ್ಥೆಯಲ್ಲಿ ಜೀವರ ಅವ್ಯಾಬಾಧ ಅನಂತಸುಖಮೊದಲಾದ ಗುಣಗಳು ಕರ್ಮಗಳಿಂದ ಆಚ್ಛಾದಿಸಲ್ಪಟ್ಟಿರುವುವಾದರೂ ನಿಶ್ಚಯನಯದಿಂದ ಕರ್ಮಗಳ ಅಭಾವದ ಕಾರಣದಿಂದ ತಮ್ಮಗುಣಗಳಿಂದ ಎಲ್ಲ ಜೀವರೂ ಸಮಾನರಾಗಿರುವರು. ಈ ಪ್ರಕಾರವಾದ ಶುದ್ಧಾತ್ಮಸ್ವರೂಪವೇ ಉಪಾದೇಯ(ಧ್ಯಾನಯೋಗ್ಯ)ವಾಗಿರುತ್ತದೆಂದು ಭಾವಾರ್ಥವು.

**ಜೀವಹಂ ಲಕ್ಖಣು ಜಿಣವರಹಿಂ, ಭಾಸಿಉ ದಂಸಣಣಾಣು ।**
**ತೇಣ ಣ ಕಿಜ್ಜಇ ಭೇಉ ತಹಂ, ಜಇ ಮಣಿ ಜಾಉ ವಿಹಾಣು ॥ ೯೮ ॥**

"ಜೀವಾನಾಂ ಲಕ್ಷಣಂ ಜಿನವರೈಃ ಭಾಷಿತಂ ದರ್ಶನಂ ಜ್ಞಾನಮ್ ।
ತೇನ ನ ಕ್ರಿಯತೇ ಭೇದಃ ಯದಿ ಮನಸಿ ಜಾತೋ ವಿಭಾತಃ ॥ ೯೮ ॥"

**ಅನ್ವಯಾರ್ಥಃ**--**ಜಿಣವರಹಿಂ**— ಜಿನೇಂದ್ರದೇವರಿಂದ **ಜೀವಹಂ ಲಕ್ಖಣು**— ಜೀವರ ಲಕ್ಷಣವು **ದಂಸಣಣಾಣು**— ದರ್ಶನಜ್ಞಾನಗಳೆಂದು **ಭಾಸಿಉ**— ಹೇಳಲ್ಪಟ್ಟಿದೆ. **ತೇಣ**— ಆ ಕಾರಣದಿಂದ **ಜಇ**— ಒಂದುವೇಳೆ **ಮಣಿ**-ಮನಸ್ಸಿನಲ್ಲಿ **ಜಾಉ ವಿಭಾಉ**— ಪ್ರಭಾತವುಂಟಾದುದಾದರೆ ಅರ್ಥಾತ್ ಜ್ಞಾನವೆಂಬ ಸೂರ್ಯನ ಉದಯ ವಾದುದಾದರೆ **ತಹಂ ಭೇಉ ಣ ಕಿಜ್ಜಇ**— ಆ ಜೀವರುಗಳ(ಜೀವರಲ್ಲಿ) ಭೇದವು ಮಾಡಲ್ಪಡುವುದಿಲ್ಲ.

**ಭಾವಾರ್ಥ** — ಯದ್ಯಪಿ ವ್ಯವಹಾರದಿಂದ ಸಂಸಾರಿ ಅವಸ್ಥೆಯಲ್ಲಿ ಮತ್ಯಾದಿ ಜ್ಞಾನಗಳೂ ಚಕ್ಷುರಾದಿದರ್ಶನಗಳೂ ಜೀವರ ಲಕ್ಷಣವಾಗಿದ್ದರೂ ನಿಶ್ಚಯದಿಂದ ಕೇವಲ ದರ್ಶನ ಹಾಗೂ ಕೇವಲಜ್ಞಾನವು ಜೀವರ ಲಕ್ಷಣವೆಂದು ಜೈನಾಗಮದಲ್ಲಿ ಹೇಳಲ್ಪಟ್ಟಿದೆ. ಅತಏವ ಯಾವನ ಚಿತ್ತದಲ್ಲಿ ವೀತರಾಗಸ್ವಸಂವೇದನಜ್ಞಾನರೂಪವಾದ ದಿನಕರನ ಉದಯುವಾಗಿರುತ್ತದೋ ಅರ್ಥಾತ್ ಸೂರ್ಯೋದಯದ ಪ್ರಭಾತಸಮಯದಂತೆ ಮೋಹ ನಿದ್ರೆಯ ಅಭಾವದಿಂದ ಹಾಗೂ ಮೋಹಾಂಧಕಾರವು ತೊಲಗುವುದರಿಂದ ಆತ್ಮಬೋಧ ರೂಪವಾದ ಪ್ರಭಾತಸಮಯವು ಪ್ರಾದುರ್ಭವಿಸಿರುವುದೋ ಅತನು ಕೇವಲಜ್ಞಾನಾದಿ ಗುಣ(ಲಕ್ಷಣ)ಗಳಿಂದ ಜೀವರಲ್ಲಿ ಭೇದವನ್ನು ಮಾಡುವುದಿಲ್ಲ. ಅಂದರೆ ಎಲ್ಲಾ ಜೀವರೂ ಜ್ಞಾನಾದಿಗುಣಗಳಿಂದ ಸಮಾನರೆಂದು ತಿಳಿಯುತ್ತಾನೆ.

ಒಂದೇ ಜಾತಿಯ ಹಾಗೂ ಒಂದೇ(ಸಮಾನ)ಗುಣವುಳ್ಳ ರತ್ನಗಳ ರಾಶಿಯಲ್ಲಿ ಒಂದು ರತ್ನವನ್ನು ಪ್ರತ್ಯೇಕಿಸಿದರೆ ಅದರೊಡನೆ ಎಲ್ಲರತ್ನಗಳು ಬರುವುದಿಲ್ಲ. ಏಕಂದರೆ ಅವುಗಳ ಪ್ರದೇಶಗಳು ಬೇರೆಬೇರೆಯಾಗಿರುತ್ತವೆ ಅದರಂತೆಯೇ ಕೇವಲಜ್ಞಾನದರ್ಶನ ಲಕ್ಷಣದಿಂದ ಸಮಾನವಾಗಿರುವ ಜೀವರುಗಳಲ್ಲಿಯೂ ಪ್ರದೇಶಗಳು ಬೇರೆಬೇರೆಯಾಗಿ ರುವುದರಿಂದ ಓರ್ವ ವಿವಕ್ಷಿತಜೀವನೊಡನೆ ಅರ್ಥಾತ್ ಒಬ್ಬ ಜೀವನನ್ನು ಗ್ರಹಣೆಮಾಡು ವಾಗ ಎಲ್ಲಾ ಜೀವರು ಬರುವುದಿಲ್ಲ. ಈ ಕಾರಣದಿಂದ ಕೇವಲಜ್ಞಾನದರ್ಶನಗಳಿಂದ ಎಲ್ಲ ಜೀವರು ಸಮಾನರಾಗಿದ್ದರೂ ಅವರಲ್ಲಿ ಪ್ರದೇಶಭೇದವಿರುತ್ತದೆಂದು ತಿಳಿಯ ಬೇಕೆಂದು ಭಾವವು.

**ಬಂಭಹಂ ಭುವಣಿ ವಸಂತಾಹಂ, ಜೇ ಣವಿ ಭೇಉ ಕರಂತಿ ।**
**ತೇ ಪರಮಪ್ಪಪಯಾಸಯರ, ಜೋಇಯ ವಿಮಲು ಮುಣಂತಿ ॥ ೯೯ ॥**

"ಬ್ರಹ್ಮಣಾಂ ಭುವನೇ ವಸತಾಂ ಯೇ ನೈವ ಭೇದಂ ಕುರ್ವಂತಿ ।
ತೇ ಪರಮಾತ್ಮಪ್ರಕಾಶಕರಾಃ ಯೋಗಿನ್ ವಿಮಲಂ ಜಾನಂತಿ ॥ ೯೯ ॥"

**ಅನ್ವಯಾರ್ಥ:** – **ಜೋಇಯ**— ಎಲೈ ಯೋಗಿಯೇ! **ಜೇ**— ಯಾರು **ಭುವಣಿ ವಸಂತಾಹಂ**— ಲೋಕದಲ್ಲಿರುವ **ಬಂಭಹಂ**— ಜೀವರು(ಶುದ್ಧಾತ್ಮರು)ಗಳ **ಭೇಉ ಣವಿ ಕರಂತಿ**— ಭೇದವನ್ನು ಮಾಡುವುದಿಲ್ಲವೋ **ತೇ**— ಅವರು **ಪರಮಪ್ಪಪಯಾಸಯರ**— ಪರಮಾತ್ಮಸ್ವರೂಪವನ್ನು ಪ್ರಕಾಶಪಡಿಸುವವರಾಗಿ **ವಿಮಲು**— ನಿಜಶುದ್ಧಾತ್ಮ ನನ್ನು ಅಥವಾ ಶುದ್ಧಾತ್ಮಸ್ವರೂಪವನ್ನು **ಮುಣಂತಿ**— ತಿಳಿಯುತ್ತಾರೆ.

**ಭಾವಾರ್ಥ:**— ರತ್ನಗಳ ರಾಶಿಯಲ್ಲಿ ರಾಶಿಯ ಅಪೇಕ್ಷೆಯಿಂದ ಏಕತ್ವವಿರುವು ದಾದರೂ ರತ್ನಗಳು ಬೇರೆಬೇರೆಯಾಗಿರುವಂತೆ ಅಥವಾ ಜಾತ್ಯಪೇಕ್ಷೆಯಿಂದ ವೃಕ್ಷಗಳಲ್ಲಿ ಏಕತ್ವವಿದ್ದರೂ ಆ ವೃಕ್ಷಗಳು ಬೇರೆಬೇರೆಯಾಗಿರುವಂತೆ ಜೀವರಲ್ಲಿಯೂ ಜೀವರಾಶಿಯ ಅಪೇಕ್ಷೆಯಿಂದ ಏಕತ್ವವಿರುತ್ತದಾದರೂ ವ್ಯಕ್ತ್ಯಪೇಕ್ಷೆಯಿಂದ (ಪ್ರದೇಶಭೇದದಿಂದ) ಜೀವರು ಬೇರೆಬೇರೆಯಾಗಿರುತ್ತಾರೆ. ಆದರೆ ನೀರಿನಿಂದ ತುಂಬಿದ ಅನೇಕ ಘಟ(ಕೊಡ, ಪಾತ್ರ)ಗಳಲ್ಲಿ ಒಬ್ಬ ಚಂದ್ರನು ಬೇರೆಬೇರೆಯಾಗಿ ನೀರಿನಲ್ಲಿ ಪ್ರತಿಬಿಂಬಿಸಿ ಕಾಣಲ್ಪಡು ವಂತೆ ಒಬ್ಬ ಜೀವನೇ ಅನೇಕಶರೀರಗಳಲ್ಲಿ ಭಿನ್ನಭಿನ್ನರೂಪದಿಂದ ಕಾಣಲ್ಪಡುತ್ತಾನೆಂದು ತಿಳಿದರೆ ದೋಷವೇನು? ಎಂಬ ಶಂಕೆಗೆ ಸಮಾಧಾನವೇನಂದರೆ — ಅನೇಕ(ಬಹಳ)ಜಲ ಘಟಗಳಲ್ಲಿ ಚಂದ್ರಕಿರಣದ ನಿಮಿತ್ತದಿಂದ ಜಲಪುದ್ಗಲಗಳೇ ಚಂದ್ರಾಕಾರದಿಂದ ಪರಿ ಣಮಿಸುತ್ತವಲ್ಲದೆ ಆಕಾಶದಲ್ಲಿರುವ ಚಂದ್ರನು ಒಬ್ಬನೇ ಆಗಿರುತ್ತಾನೆ ಆತನು ಅನೇ ಕತ್ವವನ್ನು ಹೊಂದುವುದಿಲ್ಲ ಅನೇಕಪ್ರಕಾರವಾದ ಕನ್ನಡಿಗಳ ಮುಂದಿರುವ ಒಬ್ಬ ಮನುಷ್ಯನ ಮುಖವು ಆ ಕನ್ನಡಿಗಳಲ್ಲಿ ಅನೇಕವಿಧವಾಗಿ ಕಾಣಲ್ಪಡುವುದಕ್ಕೆ ಆ ಕನ್ನಡಿ ಗಳ ಪುದ್ಗಲಗಳು ಅನೇಕರೀತಿಯಾಗಿ ಪರಿಣಮಿಸುವುದೇ ಕಾರಣವಾಗಿರುತ್ತದೆ. ಆ ಮನುಷ್ಯನ ಮುಖವಂತೂ ಇದ್ದಂತೆಯೇ ಇರುತ್ತದಲ್ಲದೆ ಅದು ಅನೇಕವಿಧದಿಂದ ಪರಿ ಣಮಿಸುವುದಿಲ್ಲ. ಒಂದು ವೇಳೆ ಮುಖವೇ ನಾನಾರೀತಿಯಾಗಿ ಪರಿಣಮಿಸುವುದಾದರೆ ಕನ್ನಡಿಗಳಲ್ಲಿ ಕಾಣುವ ಆ ಪ್ರತಿಬಿಂಬಗಳೆಲ್ಲವೂ ಚೇತನವಾಗಬೇಕಾಗುವುದು. ಆದರೆ ವಸ್ತುತಃ ಹಾಗಿರುವುದಿಲ್ಲ ಅರ್ಥಾತ್ ಪ್ರತಿಬಿಂಬಗಳು ಅಚೇತನಗಳಾಗಿವೆ. ಅದೇ ಪ್ರಕಾರವಾಗಿ ಒಬ್ಬ ಚಂದ್ರನು ಅನೇಕರೂಪನಾಗಿ ಪರಿಣಮಿಸುವುದಿಲ್ಲವೆಂದು ತಿಳಿಯ ಬೇಕು. ಅತಏವ ಓರ್ವ ಬ್ರಹ್ಮ(ಜೀವ)ನೇ ಅನೇಕಶರೀರಗಳಲ್ಲಿರುತ್ತಾನೆಂದು ಅಥವಾ ಅನೇಕಶರೀರಗಳಲ್ಲಿ ಭಿನ್ನಭಿನ್ನರೂಪದಿಂದ ಕಾಣಲ್ಪಡುತ್ತಾನೆಂದು ತಿಳಿಯುವುದು ಸರಿ ಯಲ್ಲವೆಂದು ಭಾವಾರ್ಥವು

**ರಾಯದೋಸ ಬೇ ಪರಿಹರಿವಿ, ಜೇ ಸಮ ಜೀವ ಣಿಯಂತಿ ।**
**ತೇ ಸಮಭಾವಿ ಪರಿಟ್ಠಿಯಾ, ಲಹು ಣಿವ್ವಾಣು ಲಹಂತಿ ॥ ೧೦೦ ॥**

"ರಾಗದ್ವೇಷೌ ದ್ವೌ ಪರಿಹೃತ್ಯ ಯೇ ಸಮಾನ್ ಜೀವಾನ್ ಪಶ್ಯಂತಿ ।
ತೇ ಸಮಭಾವೇ ಪ್ರತಿಷ್ಠಿತಾಃ ಲಘು ನಿರ್ವಾಣಂ ಲಭಂತೇ ॥ ೧೦೦ ॥"

**ಅನ್ವಯಾರ್ಥ:**— **ಜೇ**— ಯಾವ ಜೀವರು **ರಾಯದೋಸ ಬೇ ಪರಿಹರಿವಿ**— ರಾಗದ್ವೇಷಗಳೆರಡನ್ನು ಬಿಟ್ಟು **ಸಮ ಜೀವ**— ಸರ್ವಜೀವರನ್ನು ಸಮಾನರನ್ನಾಗಿ **ಣಿಯಂತಿ**— ಕಾಣು(ತಿಳಿಯು)ತ್ತಾರೋ **ಸಮಭಾವಿ ಪರಿಟ್ಠಿಯಾ**— ಸಮಭಾವದಲ್ಲಿ ವಿರಾಜಿಸುವ(ಸಮಭಾವದಿಂದ ಕೂಡಿರುವ) **ತೇ**— ಆ ಜೀವರು **ಲಹು ಣಿವ್ವಾಣು ಲಹಂತಿ**— ಶೀಘ್ರವಾಗಿ ನಿರ್ವಾಣ(ಮೋಕ್ಷ)ವನ್ನು ಪಡೆಯುತ್ತಾರೆ.

**ಭಾವಾರ್ಥ:**— ಯಾವ ಮಹಾಪುರುಷರು ವೀತರಾಗನಿಜಾನಂದೈಕಸ್ವರೂಪವುಳ್ಳ ಸ್ವಶುದ್ಧಾತ್ಮದ್ರವ್ಯದ ಭಾವನೆಗೆ ಪ್ರತಿಕೂಲಗಳಾದ ರಾಗದ್ವೇಷಗಳನ್ನು ತೊರೆದು

ಕೇವಲಜ್ಞಾನದರ್ಶನಲಕ್ಷಣದಿಂದ ಸರ್ವಜೀವರೂ ಸಮಾನರೆಂದು ತಿಳಿಯುತ್ತಾರೋ, ಜೀವಿತ–ಮರಣ, ಲಾಭ–ಅಲಾಭ ಹಾಗೂ ಸುಖ-ದುಃಖಾದಿಗಳಲ್ಲಿ ಸಮತಾಭಾವನಾ ರೂಪವಾದ ಸಮಭಾವದಿಂದ ಕೂಡಿದವರಾದ ಆ ಮಹಾಪುರುಷರು ಶೀಘ್ರವಾಗಿ (ಬೇಗನೆ)ಆತ್ಯಂತಿಕ-ಅಚಿಂತ್ಯ-ಅದ್ಭುತಕೇವಲಜ್ಞಾನಾದಿಗುಣಗಳಿಗೆ ಆಸ್ಪದವಾದ ನಿರ್ವಾಣ(ಮೋಕ್ಷ)ವನ್ನು ಪಡೆಯುತ್ತಾರೆಂದೂ ಅತಏವ ಮುಮುಕ್ಷುವು ರಾಗದ್ವೇಷಗಳನ್ನು ತೊರೆದವನಾಗಿ ಶುದ್ಧಾತ್ಮಾನುಭೂತಿರೂಪವಾದ ಸಮತಾಭಾವನೆಯನ್ನು ಮಾಡಬೇಕೆಂದೂ ತಾತ್ಪರ್ಯವು

**ಜೀವಹಂ ದಂಸಣು ಣಾಣು ಜಿಯ, ಲಕ್ಖಣು ಜಾಣಇ ಜೋ ಜಿ ।**
**ದೇಹವಿಭೇಏಂ ಭೇಉ ತಹಂ, ಣಾಣಿ ಕಿ ಮಣ್ಣಇ ಸೋಜಿ ॥ ೧೦೧ ॥**

"ಜೀವಾನಾಂ ದರ್ಶನಂ ಜ್ಞಾನಂ ಜೀವ ಲಕ್ಷಣಂ ಜಾನಾತಿ ಯ ಏವ ।
ದೇಹವಿಭೇದೇನ ಭೇದಂ ತೇಷಾಂ ಜ್ಞಾನೀ ಕಿಂ ಮನ್ಯತೇ ತಮೇವ ॥ ೧೦೧ ॥"

**ಅನ್ವಯಾರ್ಥ:**— **ಜೋ ಜಿ**— ಯಾವನು **ದಂಸಣು ಣಾಣು**— ದರ್ಶನವನ್ನೂ ಜ್ಞಾನವನ್ನೂ **ಜೀವಹಂ ಲಕ್ಖಣು**— ಜೀವರ ಲಕ್ಷಣವನ್ನಾಗಿ **ಜಾಣಇ**— ತಿಳಿಯುತ್ತಾನೋ **ಜಿಯ**– ಎಲೈ ಜೀವನೇ! **ಣಾಣಿ**— ಆ ಜ್ಞಾನಿಯು **ದೇಹವಿಭೇಏಂ**–ದೇಹದ ಭೇದದಿಂದ **ತಹಂ**— ಆ ಜೀವರುಗಳ **ಸೋ ಜಿ ಭೇಉ**–ಆ ಭೇದವನ್ನೇ **ಕಿ ಮಣ್ಣಇ** ತಿಳಿಯುತ್ತಾನೆಯೋ ಏನು? ಅರ್ಥಾತ್ ತಿಳಿಯುವುದಿಲ್ಲ.

**ಭಾವಾರ್ಥ:**--ಜಗತ್ತ್ರಯಕಾಲತ್ರಯವರ್ತಿ–ಸಮಸ್ತದ್ರವ್ಯಗುಣಪರ್ಯಾಯಗಳನ್ನು ಕ್ರಮಕರಣವ್ಯವಧಾನರಹಿತವಾಗಿ ಗ್ರಹಿಸುವುದರಲ್ಲಿ ಸಮರ್ಥವಾದ ವಿಶುದ್ಧಜ್ಞಾನ ದರ್ಶನಗಳು ಜೀವರ ಲಕ್ಷಣವೆಂದು ತಿಳಿಯುವ ವೀತರಾಗಸ್ವಸಂವೇದನಜ್ಞಾನಿಯು ಪಂಚೇಂದ್ರಿಯಸುಖಾಸ್ವಾದಮಗ್ನರೂ ಶುದ್ಧಾತ್ಮಭಾವನಾರಹಿತರೂ ಆದ ಜೀವರಿಂದ ಸಂಪಾದಿಸಲ್ಪಟ್ಟ ಕರ್ಮಗಳ ಉದಯದಿಂದುಂಟಾದ ಶರೀರದ ಭೇದದಿಂದ ಜೀವರುಗಳಲ್ಲಿ ಭೇದವನ್ನು ಕಲ್ಪಿಸುವುದಿಲ್ಲ. ಅರ್ಥಾತ್ ದೇಹಾಪೇಕ್ಷೆಯಿಂದ ಯಾವ ಭೇದವಿದ್ದರೂ ಜ್ಞಾನಾದಿಗುಣಗಳಿಂದ ಸರ್ವಜೀವರೂ ಸಮಾನರಾಗಿರುತ್ತಾರಲ್ಲದೆ ಅವರಲ್ಲಿ ಸರ್ವಥಾ ಯಾವ ಭೇದವೂ ಇರುವುದಿಲ್ಲವೆಂದು ತಿಳಿಯುತ್ತಾನೆ

ಕೆಲವರು **"ಬ್ರಹ್ಮಾದ್ವೈತವಾದಿ"**ಗಳು ನಾನಾಜೀವರುಗಳನ್ನು ಒಪ್ಪುವುದಿಲ್ಲ. ಅರ್ಥಾತ್ ಜೀವನು ಒಬ್ಬನೇ ಇರುತ್ತಾನೆಂದು ಹೇಳುತ್ತಾರೆ. ಅವರ ಮಾನ್ಯತೆಯಂತೆ ಒಬ್ಬ ಜೀವನಿಗೆ ಜೀವಿತಮರಣಸುಖದುಃಖಾದಿಗಳುಂಟಾದಾಗ (ಏಕಜೀವತ್ವದಿಂದ) ಅದೇಕ್ಷಣದಲ್ಲಿ ಸರ್ವಜೀವರಿಗೂ ಜೀವಿತಮರಣಸುಖದುಃಖಾದಿಗಳುಂಟಾಗಬೇಕಾಗುವುದು. ಆದರೆ ವಸ್ತುತಃ (ಪ್ರತ್ಯಕ್ಷವಾಗಿ) ಹಾಗೆ ಕಾಣಲ್ಪಡುವುದಿಲ್ಲ. ಅತಏವ ಬ್ರಹ್ಮಾದ್ವೈತವಾದಿಗಳ ಏಕಜೀವತ್ವವಾದವು ಸರಿಯಾದುದಲ್ಲ ಅರ್ಥಾತ್ ಅದು ಪ್ರತ್ಯಕ್ಷಬಾಧಿತವಾದುದೆಂದು ಭಾವವು.

**ದೇಹವಿಭೇಯುಹಂ ಜೋ ಕುಣಇ, ಜೀವಹಂ ಭೇಉ ವಿಚಿತ್ತು ।**
**ಸೋ ಣವಿ ಲಕ್ಖಣು ಮುಣಇ ತಹಂ, ದಂಸಣು ಣಾಣು ಚರಿತ್ತು ॥೧೦೨॥**

"ದೇಹವಿಭೇದೇನ ಯಃ ಕರೋತಿ ಜೀವಾನಾಂ ಭೇದಂ ವಿಚಿತ್ರಮ್ ।
ನ ನೈವ ಲಕ್ಷಣಂ ಮನುತೇ ತೇಷಾಂ ದರ್ಶನಂ ಜ್ಞಾನಂ ಚಾರಿತ್ರಮ್ ॥ ೧೦೨ ॥"

**ಅನ್ವಯಾರ್ಥ:**— **ಜೋ**— ಯಾವನು- **ದೇಹವಿಭೇಯುಹಂ**- ಶರೀರಗಳ ಭೇದ ದಿಂದ **ಜೀವಹಂ**— ಜೀವರುಗಳ— **ಭೇಉ ವಿಚಿತ್ತು**— ವಿಚಿತ್ರ(ನಾನಾರೂಪ)ವಾದ ಭೇದವನ್ನು **ಕುಣಇ**— ಮಾಡುತ್ತಾನೋ— **ಸೋ**— ಅವನು **ತಹಂ**— ಆ ಜೀವರು ಗಳ **ಲಕ್ಖಣು**— ಲಕ್ಷಣವಾದ **ದಂಸಣು ಣಾಣು ಚರಿತ್ತು**— ದರ್ಶನವನ್ನು ಜ್ಞಾನ ವನ್ನು ಮತ್ತು ಚಾರಿತ್ರವನ್ನು **ಣವಿ ಮುಣಇ**— ತಿಳಿಯುವುದಿಲ್ಲ ಅರ್ಥಾತ್ ಜೀವರ ನಿಜಗುಣಗಳನ್ನು ತಿಳಿಯುವುದಿಲ್ಲ.

**ಭಾವಾರ್ಥ:**— ಯಾವನು ದೇಹಮುಮತ್ವಕ್ಕ ಮೂಲಭೂತಗಳಾದ ಖ್ಯಾತಿ ಪೂಜಾಲಾಭಾದಿರೂಪದುರ್ಧ್ಯಾನಕ್ಕೆ ವ್ಯತಿರಿಕ್ತವಾದ ಸ್ವಶುದ್ಧಾತ್ಮಧ್ಯಾನದ ಅಭಾವ ದಿಂದ ಉಪಾರ್ಜಿಸಲ್ಪಟ್ಟುವುಗಳಾದ ಶುಭಾಶುಭಕರ್ಮಗಳ ಉದಯದಿಂದುಂಟಾದ ಶರೀರಗಳ ಭೇದದಿಂದ ಜೀವರುಗಳಲ್ಲಿ ಭೇದವನ್ನು ಕಲ್ಪಿಸು(ತಿಳಿಯು)ತ್ತಾನೋ ಆತನು ಜೀವರುಗಳ ದರ್ಶನಾದಿಗುಣಗಳನ್ನು ತಿಳಿಯುವುದಿಲ್ಲ. ಯದ್ಯಪಿ ಜೀವರಿಗೆ ಪಾಪ ಕರ್ಮೋದಯದಿಂದ ನರಕಶರೀರವೂ ಪುಣ್ಯೋದಯದಿಂದ ದೇವಶರೀರವೂ ಪುಣ್ಯಪಾಪ (ಮಿಶ್ರ)ಕರ್ಮೋದಯದಿಂದ ಮನುಷ್ಯ-ಶರೀರವೂ ಮಾಯಾಚಾರಾದಿಗಳಿಂದ ತಿರ್ಯಂಚ ಶರೀರವೂ ದೊರೆತು ಈ ಶರೀರಗಳ ಭೇದದಿಂದ ಜೀವರಲ್ಲಿ ವಿವಿಧಚೇಷ್ಟೆಗಳು ಕಾಣ ಲ್ಪಡುವುವಾದರೂ ಜ್ಞಾನದರ್ಶನಲಕ್ಷಣದಿಂದ ಎಲ್ಲ ಜೀವರೂ ಸಮಾನರಾಗಿರುತ್ತಾರೆ. ಉಪಯೋಗ(ಜ್ಞಾನದರ್ಶನ)ಲಕ್ಷಣವಿಲ್ಲದ ಯಾವನೊಬ್ಬ ಜೀವನೂ ಇರುವುದಿಲ್ಲ. ಆದುದರಿಂದ ಜ್ಞಾನಿಗಳು ಸರ್ವಜೀವರನ್ನೂ ಸಮಾನರನ್ನಾಗಿ ತಿಳಿಯುತ್ತಾರೆ. ಅತ ಏವ ನಿಶ್ಚಯನಯದಿಂದ ಸಮ್ಯಗ್ದರ್ಶನಜ್ಞಾನಚಾರಿತ್ರಲಕ್ಷಣವುಳ್ಳ ಜೀವರುಗಳ ನರ ನಾರಕಾದಿರೂಪವಾದ ಹಾಗೂ ಬ್ರಾಹ್ಮಣಕ್ಷತ್ರಿಯವೈಶ್ಯಚಾಂಡಾಲಾದಿರೂಪವಾದ ದೇಹ ಭೇದವನ್ನು ನೋಡಿ ಅವರಲ್ಲಿ ರಾಗದ್ವೇಷಗಳನ್ನು ಮಾಡಬಾರದೆಂದು ಅರ್ಥಾತ್ ಸರ್ವಜೀವರನ್ನೂ ಸಮಾನತೆಯಿಂದ ತಿಳಿಯಬೇಕೆಂದು ಭಾವವು.

**ಅಂಗಇಂ ಸುಹುಮಇಂ ಬಾದರಇಂ, ವಿಹಿವಸಿಂ ಹೊಂತಿ ಜೇ ಬಾಲ ।**
**ಜಿಯ ಪುಣು ಸಯಲ ವಿ ತಿತ್ತಿಡಾ, ಸವ್ವತ್ಥ ವಿ ಸಯಕಾಲ ॥ ೧೦೩ ॥**

"ಅಂಗಾನಿ ಸೂಕ್ಷ್ಮಾಣಿ ಬಾದರಾಣಿ ವಿಧಿವಶೇನ ಭವಂತಿ ಯೇ ಬಾಲಾಃ ।
ಜೀವಾಃ ಪುನಃ ಸಕಲಾ ಅಪಿ ತಾವಂತಃ ಸರ್ವತ್ರಾಪಿ ಸದಾಕಾಲೇ ॥ ೧೦೩ ॥"

**ಅನ್ವಯಾರ್ಥ:**— **ಸುಹುಮಇಂ ಬಾದರಇಂ**— ಸೂಕ್ಷ್ಮಗಳೂ ಬಾದರ (ಸ್ಥೂಲ)ಗಳೂ ಆದ **ಜೇ ಅಂಗಇಂ**— ಯಾವ ಶರೀರಗಳೂ **ಬಾಲ**- ಬಾಲ್ಯಾವಸ್ಥೆಯೂ

ಅರ್ಥಾತ್ ಉಪಲಕ್ಷಣದಿಂದ ಬಾಲವೃದ್ಧತರುಣಾದಿ ಅವಸ್ಥಾವಿಶೇಷಗಳೂ **ವಿಹಿವಸಿಂ ಹೊಂತಿ**— ಪೂರ್ವೋಪಾರ್ಜಿತಕರ್ಮವಶದಿಂದ ಉಂಟಾಗುತ್ತವೆ. **ಜಿಯ ಪುಣ**— ಜೀವರುಗಳಾದರೋ **ಸಯಲು ವಿ**— ಎಲ್ಲವರೂ (ಎಲ್ಲ ಜೀವರೂ) **ಸವ್ವತ್ಥ ವಿ**— ಎಲ್ಲ ಕಡೆಯಲ್ಲಿಯೂ **ಸಯಕಾಲ**-ಸದಾಕಾಲವೂ **ತಿತ್ತಿಡಾ**-ಅಷ್ಟೇ ಪ್ರಮಾಣ(ಅಸಂಖ್ಯಾತ ಪ್ರದೇಶ)ವುಳ್ಳವರಾಗಿರುವರು.

**ಭಾವಾರ್ಥ:**— ಜೀವರ ಚತುರ್ಗತಿಸಂಬಂಧವಾದ ಶರೀರಗಳೂ·ಬಾಲವೃದ್ಧತರುಣಾದಿ ಅವಸ್ಥೆಗಳೂ ಪೂರ್ವೋಪಾರ್ಜಿತಶುಭಾಶುಭಕರ್ಮಗಳ ನಿಮಿತ್ತದಿಂದುಂಟಾಗುತ್ತವೆ ಆದಕಾರಣ ಕರ್ಮಜನಿತಗಳಾದ ಶರೀರಭೇದಗಳೂ ಬಾಲವೃದ್ಧಾದ್ಯವಸ್ಥಾವಿಶೇಷಗಳೂ ಜೀವಸಂಬಂಧಿಗಳಾಗಿರುವುದಿಲ್ಲ ದ್ರವ್ಯಪ್ರಮಾಣದಿಂದ ಅನಂತಜೀವರುಗಳಿರುತ್ತಾರೆ ಕ್ಷೇತ್ರಾಪೇಕ್ಷೆಯಿಂದ ಒಬ್ಬೊಬ್ಬಜೀವನು ವ್ಯವಹಾರನಯದಿಂದ ಸ್ವದೇಹಪರಿಮಾಣ(ತಾನು ಹೊಂದಿದ ದೇಹದಷ್ಟು ಪ್ರಮಾಣ)ವುಳ್ಳವನಾಗಿದ್ದರೂ ನಿಶ್ಚಯನಯದಿಂದ ಲೋಕಾಕಾಶಪ್ರಮಿತ— ಅಸಂಖ್ಯಾತಪ್ರದೇಶಪ್ರಮಾಣವುಳ್ಳವನಾಗಿರುತ್ತಾನೆ. ಹೀಗೆಯೇ ಸರ್ವಲೋಕದಲ್ಲಿಯೂ ಸರ್ವಕಾಲದಲ್ಲಿಯೂ ಜೀವರ ಸ್ವರೂಪವಿರುತ್ತದೆಂದು ತಿಳಿಯಬೇಕು ಸಾರಾಂಶತಃ— ಕರ್ಮಜನಿತಗಳಾದ ಬಾದರಸೂಕ್ಷ್ಮಾದಿಭೇದಗಳು ಆತ್ಮನವುಗಳಲ್ಲವೆಂದೂ ವಿಶುದ್ಧಜ್ಞಾನದರ್ಶನ (ಉಪಯೋಗ)ಲಕ್ಷಣದಿಂದ ಸರ್ವಜೀವರೂ ಸಮಾನರೆಂದೂ ನಿಶ್ಚಯದಿಂದ ತಿಳಿಯಬೇಕೆಂದು ಭಾವವು ಇಲ್ಲಿ "ಬಾಲ" ಎಂಬ ಪದವನ್ನು ಸಂಬೋಧನಾರ್ಥದಲ್ಲಿ ಗ್ರಹಿಸಿದರೆ "ಎಲೈ ಅಜ್ಞಾನಿಯಾದ ಜೀವನೇ! ನೀನು ಈ(ಪೂರ್ವೋಕ್ತ)ವಿಷಯವನ್ನು ನಿಶ್ಚಯ(ನಿಸ್ಸಂದೇಹ)ವಾಗಿ ತಿಳಿ ಎಂಬ ಅರ್ಥವು ಧ್ವನಿತವಾಗುತ್ತದ.

**ಸತ್ತು ವಿ ಮಿತ್ತು ವಿ ಅಪ್ಪು ಪರು, ಜೀವ ಅಸೇಸು ವಿ ಏಇ।**
**ಎಕ್ಕು ಕರೇವಿಣು ಜೋ ಮುಣಇ, ಸೋ ಅಪ್ಪಾ ಜಾಣೇಇ ॥ ೧೦೪ ॥**

"ಶತ್ರುರಪಿ ಮಿತ್ರಮಪಿ ಆತ್ಮಾ ಪರಃ ಜೀವಾ ಅಶೇಷಾ ಅಪಿ ಏತೇ ।
ಏಕತ್ವಂ ಕೃತ್ವಾ ಯೋ ಮನುತೇ ಸ ಆತ್ಮಾನಂ ಜಾನಾತಿ ॥ ೧೦೪ ॥"

**ಅನ್ವಯಾರ್ಥ:**— ವ್ಯವಹಾರನಯದಿಂದ **ಸತ್ತು ವಿ ಮಿತ್ತು ವಿ**— ಶತ್ರುವೂ, ಮಿತ್ರನೂ **ಅಪ್ಪು ಪರು**— ತನ್ನವನೂ ಅನ್ಯನೂ ಹೀಗೆ **ಏಇ ಅಸೇಸು ವಿ ಜೀವ**— ಈ ಎಲ್ಲಾ ಜೀವರುಗಳಿರುತ್ತಾರೆ. ಈ ಸಮಸ್ತ ಜೀವರುಗಳನ್ನು **ಜೋ**— ಯಾವ ಜ್ಞಾನಿಯು **ಎಕ್ಕು ಕರೇವಿಣು**— ಏಕತ್ವವನ್ನು ಮಾಡಿ ಅರ್ಥಾತ್ ಸಮದೃಷ್ಟಿಯಿಂದ **ಮುಣಇ**— ತಿಳಿಯುತ್ತಾನೋ **ಸೋ ಅಪ್ಪಾ ಜಾಣೇಇ**— ಅವನು ಆತ್ಮನನ್ನು(ಆತ್ಮಸ್ವರೂಪವನ್ನು) ತಿಳಿಯುತ್ತಾನೆ.

**ಭಾವಾರ್ಥ:**— ಈ ಸಂಸಾರಿಜೀವರಲ್ಲಿ ಶತ್ರು, ಮಿತ್ರ, ಆತ್ಮೀಯ, ಪರಕೀಯ ಮೊದಲಾದ ಅನೇಕ ವಿಕಲ್ಪ(ಭೇದ)ಗಳು ಕಾಣಲ್ಪಡುತ್ತವೆ. ಪರಂತು ಜ್ಞಾನಿಯು

ಈ ಎಲ್ಲಾ ಜೀವರನ್ನು ಒಂದೇ ದೃಷ್ಟಿಯಿಂದ ನೋಡುತ್ತಾನೆ ಅರ್ಥಾತ್ ಸಮಾನತೆ ಯಿಂದ ತಿಳಿಯುತ್ತಾನೆ. ಹೀಗೆ ಶತ್ರು, ಮಿತ್ರ, ಜೀವಿತ, ಮರಣ, ಲಾಭ, ಅಲಾಭ ಮೊದಲಾದುವುಗಳಲ್ಲಿ ಸಮಭಾವರೂಪವಾದ ವೀತರಾಗಪರಮಸಾಮಾಯಿಕಚಾರಿತ್ರದ ಪ್ರಭಾವದಿಂದ ಯಾವ ಜ್ಞಾನಿಯು ಶುದ್ಧಸಂಗ್ರಹನಯದಿಂದ ಸರ್ವಜೀವರೂ ಸಮಾನರೆಂದು ತಿಳಿಯುತ್ತಾನೋ ಆತನೇ ಶತ್ರುಮಿತ್ರಾದಿಸಮಸ್ತವಿಕಲ್ಪರಹಿತನೂ ವೀತರಾಗಸಹಜಾನಂದೈಕಸ್ವರೂಪನೂ ಆದ ಆತ್ಮನನ್ನು ತಿಳಿಯುತ್ತಾನೆ ಅತಏವ ಸಮಭಾವದ ಹೊರತು ಯಾರೊಬ್ಬನೂ ಆತ್ಮಸ್ವರೂಪವನ್ನು ತಿಳಿಯಲಾರನೆಂದು ತಾತ್ಪರ್ಯವು.

**ಜೋ ಣವಿ ಮಣ್ಣಇ ಜೀವ ಜಿಯು, ಸಯಲ ವಿ ಎಕ್ಕಸಹಾವ ।**
**ತಾಸು ಣ ಥಕ್ಕಇ ಭಾಉ ಸಮು, ಭವಸಾಯರಿ ಜೋ ಣಾವ ॥ ೧೦೫ ॥**

"ಯಃ ನೈವ ಮನ್ಯತೇ ಜೀವಾನ್ ಜೀವ ಸಕಲಾನಪಿ ಏಕಸ್ವಭಾವಾನ್ ।
ತಸ್ಯ ನ ತಿಷ್ಠತಿ ಭಾವಃ ಸಮಃ ಭವಸಾಗರೇ ಯಃ ನೌಃ ॥ ೧೦೫ ॥"

**ಅನ್ವಯಾರ್ಥ:—ಜಿಯು—**ಜೀವನೇ! **ಜೋ**-ಯಾವನು **ಸಯಲ ವಿ ಜೀವ** ಎಲ್ಲಾ ಜೀವರನ್ನೂ **ಎಕ್ಕಸಹಾವ**—ಒಂದೇ ಸ್ವಭಾವವುಳ್ಳವರನ್ನಾಗಿ **ಣವಿ ಮಣ್ಣಇ**-ನಿಶ್ಚಯದಿಂದ ತಿಳಿಯುವುದಿಲ್ಲವೋ **ತಾಸು**—ಅವನಿಗೆ(ಆ ಅಜ್ಞಾನಿಗೆ) **ಭಾಉ ಸಮು ಣ ಥಕ್ಕಇ**—ಸಮಭಾವವು ಇರುವುದಿಲ್ಲ **ಜೋ** - ಯಾವ ಸಮಭಾವವು **ಭವಸಾಯರಿ**—ಭವಸಾಗರ(ಸಂಸಾರಸಮುದ್ರ)ದಲ್ಲಿ **ಣಾವ**-ನಾವೆ(ದೋಣಿ)ಯು ಅರ್ಥಾತ್ ಭವಸಾಗರವನ್ನು ದಾಂಟಲು ನಾವೆಯಂತಿರುವುದು.

**ಭಾವಾರ್ಥ:—**ಯಾವ ಅಜ್ಞಾನಿಜೀವನು ವೀತರಾಗನಿರ್ವಿಕಲ್ಪಪರಮಸಮಾಧಿಯಲ್ಲಿ ನಿರತನಾಗಿ ನಿಶ್ಚಯನಯದಿಂದ ಸಮಸ್ತಪದಾರ್ಥಗಳನ್ನು ತಿಳಿಯುವುದೂ ನಿರ್ಮಲವೂ ಆದ ಕೇವಲಜ್ಞಾನವೇಮೊದಲಾದ ಗುಣಗಳಿಂದ (ಗುಣಗಳ ಅಪೇಕ್ಷೆಯಿಂದ) ಸರ್ವಜೀವರೂ ಸಮಾನರೆಂದು ತಿಳಿಯುವುದಿಲ್ಲವೋ ಅಥವಾ ಯಾವನಲ್ಲಿ ಇಂತಹ ಶ್ರದ್ಧೆಯಿರುವುದಿಲ್ಲವೋ ಅವನಿಗೆ ಎಂದೂ ಸಮಭಾವವುಂಟಾಗದು. ಈ ಸಮಭಾವವು ಸಂಸಾರವೆಂಬ ಮಹಾಸಾಗರವನ್ನು ದಾಂಟಿಸಲು ಸಮರ್ಥವೂ ಸುದೃಢವೂ ಆದ ದೊಡ್ಡ ನೌಕೆಯಂತಿರುತ್ತದೆ ಅತಏವ ಮುಮುಕ್ಷುವು ರಾಗದ್ವೇಷಮೋಹಗಳನ್ನು ತೊರೆದು ಪರಮೋಪಶಮಭಾವ(ಪರಮಶಾಂತಭಾವ)ರೂಪಶುದ್ಧಾತ್ಮನಲ್ಲಿ ಲೀನನಾಗಬೇಕೆಂದಭಿಪ್ರಾಯವು.

**ಜೀವಹಂ ಭೇಉ ಜಿ ಕಮ್ಮಕಿಉ, ಕಮ್ಮು ಜಿ ಜೀಉ ಣ ಹೋಇ ।**
**ಜೇಣ ವಿಭಿಣ್ಣಉ ಹೋಇ ತಹಂ, ಕಾಲು ಲಹೇವಿಣು ಕೋಇ ॥ ೧೦೬ ॥**

"ಜೀವಾನಾಂ ಭೇದ ಏವ ಕರ್ಮಕೃತಃ ಕರ್ಮ ಅಪಿ ಜೀವೋ ನ ಭವತಿ ।
ಯೇನ ವಿಭಿನ್ನಃ ಭವತಿ ತೇಭ್ಯಃ ಕಾಲಂ ಲಬ್ಧ್ವಾ ಕಿಮಪಿ ॥ ೧೦೬ ॥"

**ಅನ್ವಯಾರ್ಥ:— ಜೀವಹಂ ಭೇಉ ಜಿ** — ಜೀವರುಗಳ ಭೇದವೇ **ಕಮ್ಮಕಿಉ** · ಕರ್ಮಗಳಿಂದ ಮಾಡಲ್ಪಟ್ಟುದು. **ಕಮ್ಮು ವಿ** — ಕರ್ಮವೂ **ಜೀ ಉ ಣ ಹೋಇ** ಜೀವವಾಗಿರುವುದಿಲ್ಲ ಅರ್ಥಾತ್ ಜೀವಸ್ವರೂಪವಾಗಿರುವುದಿಲ್ಲ. **ಜೇಣ** — ಯಾವ ಕಾರಣದಿಂದ(ಈ ಕಾರಣದಿಂದ) ಜೀವನು **ಕೋಇ ಕಾಲು ಲಹೇವಿಣು** — ಯಾವು ದಾದರೊಂದು ಕಾಲ(ಸಮಯ, ಕಾಲಲಬ್ಧಿ)ವನ್ನು ಪಡೆದು **ತಹಂ** — ಆ ಕರ್ಮಗಳಿಂದ **ವಿಭಿಣ್ಣಉ ಹೋಇ** — ಭಿನ್ನ(ಬೇರೆ)ನಾಗುತ್ತಾನೆ

**ಭಾವಾರ್ಥ:** — ಜೀವರುಗಳ ನರನಾರಕಾದಿ ಸರ್ವಭೇದಗಳೂ ಕರ್ಮಜನಿತ ಗಳಾಗಿರುತ್ತವೆ ಕರ್ಮಗಳು ವಿಶುದ್ಧಜ್ಞಾನದರ್ಶನಮಯನಾದ ಜೀವನ ಸ್ವರೂಪ ದಿಂದ ಸರ್ವಥಾ ಭಿನ್ನಸ್ವರೂಪವುಳ್ಳವುಗಳು. ಅನಾದಿಕಾಲದಿಂದ ಈ ಜೀವನು ನಿಜ ಸ್ವರೂಪವನ್ನು ಮರೆತು(ತಿಳಿಯದೆ)ರಾಗದ್ವೇಷಾದಿ-ಅಶುದ್ಧೋಪಯೋಗದಿಂದ ಜ್ಞಾನಾ ವರಣಾದಿ ಕರ್ಮಗಳಿಂದ ಬದ್ಧನಾಗಿರುತ್ತಾನೆ ಯಾವುದಾದರೊಂದು ಸಮಯ ಈ ಜೀವನು ವೀತರಾಗಪರಮಾತ್ಮಾನುಭೂತಿಗೆ ಸಹಕಾರಿಕಾರಣವಾದ ಸಮ್ಯಕ್ತ್ವದ ಉತ್ಪತ್ತಿಕಾಲ(ಕಾಲಲಬ್ಧಿ)ವನ್ನು ಪಡೆದುದಾದರೆ ಆಗ ಕರ್ಮಗಳಿಂದ ಬೇರೆಯಾಗು ವನು ಅರ್ಥಾತ್ ಕರ್ಮವಿಮುಕ್ತನಾಗುವನು. ಜೀವನ ಭವಸ್ಥಿತಿಯು ಸಮೀಪ (ಅಲ್ಪ)ವಾಗಿರುತ್ತಿರಲು ಆತನಲ್ಲಿ ನಿಶ್ಚಯ-ಸಮ್ಯಕ್ತ್ವವುಂಟಾಗುತ್ತದೆ ಹಾಗೂ ಸಮ್ಯಕ್ತ್ವ ವುಂಟಾಗುವುದರಿಂದ ಆತನು ಕರ್ಮಕಲಂಕದಿಂದ ಬಿಡಲ್ಪಡುತ್ತಾನೆಂದಭಿಪ್ರಾಯವು. ಆದುದರಿಂದ ವಿಶುದ್ಧಜೀವಸ್ವಭಾವದಿಂದ ವಿಲಕ್ಷಣಗಳಾದ ಮನೋಜ್ಞಾಮನೋಜ್ಞ-ಸ್ತ್ರೀಪುರುಷಾದಿ-ಶರೀರಭೇದಗಳನ್ನು ನೋಡಿ ರಾಗಾದ್ಯಪಧ್ಯಾನವನ್ನು ಮಾಡಬಾರದೆಂದು ಭಾವಾರ್ಥವು

**ಎಕ್ಕು ಕರೇ ಮಣ ಬಿಣ್ಣಿ ಕರಿ, ಮಂ ಕರಿ ವಣ್ಣವಿಸೇಸು ।**
**ಇಕ್ಕಇಂ ದೇವಇಂ ಜೇಂ ವಸಇ, ತಿಹುಯಣು ಏಹು ಅಸೇಸು ॥ ೧೦೭ ॥**

"ಏಕಂ ಕುರು ಮಾ ದ್ವೌ ಕುರು ಮಾ ಕುರು ವರ್ಣವಿಶೇಷಮ್ ।
ಏಕೇನ ದೇವೇನ ಯೇನ ವಸತಿ ತ್ರಿಭುವನಂ ಏತತ್ ಅಶೇಷಮ್ ॥ ೧೦೭ ॥"

**ಅನ್ವಯಾರ್ಥ:** — ಎಲೈ ಜೀವನೇ! **ಎಕ್ಕು ಕರೇ** — ಜಾತಿಯ ಅಪೇಕ್ಷೆಯಿಂದ ಎಲ್ಲ ಜೀವರನ್ನೂ ಒಂದನ್ನಾಗಿ ತಿಳಿ **ಮಣ ಬಿಣ್ಣಿ ಕರಿ** — ಎರಡನ್ನಾಗಿ(ಭೇದವುಳ್ಳವು ಗಳನ್ನಾಗಿ) ತಿಳಿಯಬೇಡ. **ವಣ್ಣವಿಸೇಸು** — ಮನುಷ್ಯಜಾತಿಯ ಅಪೇಕ್ಷೆಯಿಂದ ಬ್ರಾಹ್ಮಣಾದಿ ವರ್ಣಭೇದವನ್ನು **ಮಂಕರಿ** — ಮಾಡಬೇಡ **ಜೇಂ** — ಯಾವ ಕಾರಣ ದಿಂದ(ಏಕೆಂದರೆ) **ಇಕ್ಕಇಂ ದೇವಇಂ** — ಅಭೇದನಯದಿಂದ ಒಬ್ಬ ಶುದ್ಧಜೀವನಿಂದ (ಶುದ್ಧಾತ್ಮನಿಗೆ ಸಮಾನವಾಗಿ) **ಏಹು ಅಸೇಸು** — ಈ ಸಂಪೂರ್ಣವಾದ **ತಿಹು ಯಣು** — ತ್ರಿಭುವನ(ಮೂರು ಲೋಕ)ವು ಅರ್ಥಾತ್ ತ್ರಿಭುವನದಲ್ಲಿರುವ ಜೀವ ರಾಶಿಯು **ವಸಇ** — ಇರುತ್ತದೆ.

**ಭಾವಾರ್ಥ:**— ಜಾತ್ಯಪೇಕ್ಷೆಯಿಂದ ಎಲ್ಲ ಜೀವರೂ ಏಕಸಮಾನರಾಗಿರುತ್ತಾರೆ. ನರನಾರಕಾದಿಭೇದಗಳೂ ಬ್ರಾಹ್ಮಣಕ್ಷತ್ರಿಯಾದಿವರ್ಣಭೇದಗಳೂ ಕರ್ಮಜನಿತಗಳಾಗಿರುತ್ತವೆ. ಆದುದರಿಂದ ಅಭೇದನಯದಿಂದ ಜೀವರಲ್ಲಿ ಭೇದವಿರುವುದಿಲ್ಲವೆಂದು ತಿಳಿಯಬೇಕು.

ಈ ಲೋಕವು ಸೂಕ್ಷ್ಮಗಳಾದ ಪೃಥ್ವೀಕಾಯ, ಜಲಕಾಯ, ಅಗ್ನಿಕಾಯ, ವಾಯುಕಾಯ, ನಿತ್ಯನಿಗೋದ ಮತ್ತು ಇತರನಿಗೋದ ಈ ಆರು ಪ್ರಕಾರವಾದ ಸೂಕ್ಷ್ಮಜೀವರುಗಳಿಂದ ನಿರಂತರ(ನಿಬಿಡವಾಗಿ) ತುಂಬಿರುತ್ತದೆ. ಬಾದರಗಳಾದ ಪೃಥ್ವೀಕಾಯ, ಜಲಕಾಯ, ಅಗ್ನಿಕಾಯ, ವಾಯುಕಾಯ, ನಿತ್ಯನಿಗೋದ, ಇತರನಿಗೋದ ಮತ್ತು ಪ್ರತ್ಯೇಕವನಸ್ಪತಿ ಈಜೀವರುಗಳೂ ದ್ವೀಂದ್ರಿಯ, ತ್ರೀಂದ್ರಿಯ, ಚತುರಿಂದ್ರಿಯ ಮತ್ತು ಪಂಚೇಂದ್ರಿಯಗಳಾದ ತ್ರಸಜೀವರುಗಳು ಲೋಕದಲ್ಲಿ ಆಧಾರವಶದಿಂದ (ಕೆಲವುಕಡೆಗಳಲ್ಲಿ) ಇರುತ್ತವೆ. ಈ ಎಲ್ಲಾ ಜೀವರು ಶುದ್ಧಪಾರಿಣಾಮಿಕಭಾವಗ್ರಾಹಕವಾದ ಶುದ್ಧದ್ರವ್ಯಾರ್ಥಿಕನಯದಿಂದ(ಶಕ್ತಿಯ ಅಪೇಕ್ಷೆಯಿಂದ) ಕೇವಲಜ್ಞಾನಾದಿ ಗುಣರೂಪರಾಗಿರುತ್ತಾರೆ. ಅತಏವ ಈ ಜೀವರಾಶಿ(ಜೀವಸಮೂಹ)ಯು ವ್ಯವಹಾರದಿಂದ ಕರ್ಮಾಧೀನವಾಗಿರುತ್ತಿದ್ದರೂ ನಿಶ್ಚಯದಿಂದ ಶಕ್ತಿರೂಪದಿಂದ ಪರಮಬ್ರಹ್ಮಸ್ವರೂಪವೆಂದೂ ಪರಮವಿಷ್ಣುವೆಂದೂ ಪರಮಶಿವನೆಂದೂ ಹೇಳಲ್ಪಡುತ್ತದೆ. ಈ ಕಾರಣದಿಂದಲೇ ಅನಂತಜೀವರಾಶಿಯಿಂದ ತುಂಬಿರುವ ಈ ಜಗತ್ತು(ಲೋಕವು)ಪರಮಬ್ರಹ್ಮಮಯವೆಂದೂ ಪರಮವಿಷ್ಣುಮಯವೆಂದೂ ಪರಮಶಿವಮಯವೆಂದೂ ಹೇಳಲ್ಪಡುತ್ತದೆ. ಹೀಗೆ ಪೂರ್ವೋಕ್ತನಯವಿಭಾಗದಿಂದ ಕೇವಲಜ್ಞಾನಾದಿಗುಣಗಳ ಅಪೇಕ್ಷೆಯಿಂದ ವೀತರಾಗಸರ್ವಜ್ಞಪ್ರಣೀತಮಾರ್ಗಾನುಸಾರವಾಗಿ "ಜಗತ್ತು ಬ್ರಹ್ಮಮಯವಾಗಿದೆ" ಎಂದು ಮೊದಲಾಗಿ ತಿಳಿಯುವುದು ದೋಷವಲ್ಲ. ಆದರೆ, ಪರಮತೀಯರ ಮಾನ್ಯತೆಯಂತೆ ಜಗತ್ತಿನ ಸೃಷ್ಟಿಸ್ಥಿತಿಲಯಕರ್ತನಾದ ಈಶ್ವರ(ವ್ಯಕ್ತಿವಿಶೇಷ)ನ ಅಪೇಕ್ಷೆಯಿಂದ ಜಗತ್ತನ್ನು ಬ್ರಹ್ಮವಿಷ್ಣ್ವಾದಿಮಯವನ್ನಾಗಿ ತಿಳಿಯುವುದೂ ಈಶ್ವರನು ಜಗತ್ ಸೃಷ್ಟ್ಯಾದಿಗಳಿಗೆ ಕರ್ತನೆಂದು ತಿಳಿಯುವುದೂ ಪ್ರತ್ಯಕ್ಷಾದಿಪ್ರಮಾಣಗಳಿಂದ ಬಾಧಿತವಾಗಿರುವುದರಿಂದ ಹಾಗೂ ಆಗಮವಿರುದ್ಧವಾಗಿರುವುದರಿಂದ ದೋಷ(ಅನುಚಿತ) ವೆಂದಭಿಪ್ರಾಯವು. ಈಶ್ವರಸೃಷ್ಟಿಕರ್ತೃತ್ವಾದಿಗಳ ವಿವೇಚನೆಯನ್ನು ಜಿಜ್ಞಾಸುಗಳು ತರ್ಕಶಾಸ್ತ್ರ(ನ್ಯಾಯಗ್ರಂಥ)ಗಳಿಂದ ತಿಳಿಯಬೇಕು. ಇದು ಅಧ್ಯಾತ್ಮಶಾಸ್ತ್ರವಾಗಿರುವುದರಿಂದ ಆ ವಿಷಯವನ್ನಿಲ್ಲಿ ವಿವೇಚಿಸುವುದಿಲ್ಲ.

ಈ ಪ್ರಕಾರವಾಗಿ ಮೋಕ್ಷ–ಮೋಕ್ಷಫಲ–ಮೋಕ್ಷಮಾರ್ಗಾದಿಪ್ರತಿಪಾದಕದ್ವಿತೀಯಮಹಾಧಿಕಾರದ ಮಧ್ಯದಲ್ಲಿ ಶುದ್ಧೋಪಯೋಗಾದಿಗಳ ನಿರೂಪಣೆಯ ಮುಖ್ಯತೆಯಿಂದ (ಪೂರ್ವೋಕ್ತಪ್ರಕಾರ) ನಲ್ವತ್ತೊಂದು ಸೂತ್ರಗಳು ಮುಗಿದುವು.

ಇನ್ನು ಮುಂದೆ **"ಪರು ಜಾಣಂತು ವಿ"** ಇತ್ಯಾದಿ (ಪ್ರಕ್ಷೇಪಕಗಳ ಹೊರತು)

ಒಂದು ನೂರ ಏಳು ಸೂತ್ರಗಳಿಂದ ದ್ವಿತೀಯಮಹಾಧಿಕಾರವನ್ನು (ಹಾಗೂ ಗ್ರಂಥ ವನ್ನು) ಪೂರ್ತಿಗೊಳಿಸುತ್ತಾರೆ.

**ಪರು ಜಾಣಂತು ವಿ ಪರಮಮುಣಿ, ಪರಸಂಸಗ್ಗು ಚಯಂತಿ ।**
**ಪರಸಂಗಇಂ ಪರಮಪ್ಪಯಹಂ, ಲಕ್ಖಹಂ ಜೇಣ ಚಲಂತಿ ॥ ೧೦೮ ॥**

"ಪರಂ ಜಾನಂತೋಽಪಿ ಪರಮಮುನಯಃ ಪರಸಂಸರ್ಗಂ ತ್ಯಜಂತಿ ।
ಪರಸಂಗೇನ ಪರಮಾತ್ಮನಃ ಲಕ್ಷ್ಯಸ್ಯ ಯೇನ ಚಲಂತಿ ॥ ೧೧೮ ॥"

**ಅನ್ವಯಾರ್ಥ:— ಪರಮಮುಣಿ**— ಪರಮಮುನಿಗಳು **ಪರು ಜಾಣಂತು ವಿ** ಪರದ್ರವ್ಯವನ್ನು(ಅಥವಾ ಉತ್ಕೃಷ್ಟ ಆತ್ಮದ್ರವ್ಯವನ್ನು)ತಿಳಿಯುವವರಾಗಿದ್ದರೂ **ಪರ ಸಂಸಗ್ಗು**–ಪರದ್ರವ್ಯಗಳ(ಅಥವಾ ಉತ್ಕೃಷ್ಟ ಆತ್ಮದ್ರವ್ಯದ) ಸಂಸರ್ಗವನ್ನು **ಚಯಂತಿ** ಬಿಡುತ್ತಾರೆ **ಜೇಣ**–ಯಾವಕಾರಣದಿಂದ (ಏಕಂದರೆ) **ಪರಸಂಗಇಂ**— ಪರದ್ರವ್ಯಗಳ ಸಂಸರ್ಗದಿಂದ **ಲಕ್ಖಹಂ**— ಲಕ್ಷ್ಯವಾದ (ಧ್ಯಾನಯೋಗ್ಯವಾದ) **ಪರಮಪ್ಪಉ**— ಪರ ಮಾತ್ಮದ್ರವ್ಯದಿಂದ **ಚಲಂತಿ**— ವಿಚಲಿತ(ಚಲಾಯಮಾನ)ರಾಗುತ್ತಾರೆ

**ಭಾವಾರ್ಥ:**— ಶುದ್ಧೋಪಯೋಗಿಗಳಾದ ಪರಮಮುನಿಗಳು ವೀತರಾಗಸ್ವ-ಸಂವೇದನಜ್ಞಾನರತರಾಗಿ ಪರದ್ರವ್ಯಗಳ ಮತ್ತು ಆತ್ಮದ್ರವ್ಯದ ಸ್ವರೂಪವನ್ನು ತಿಳಿದವ ರಾಗಿ ಪರದ್ರವ್ಯಗಳ ಸಂಸರ್ಗ(ಸಂಬಂಧ)ವನ್ನು ಬಿಡುತ್ತಾರೆ. ಅಂತರಂಗದ ವಿಕಾರ ರೂಪವಾದ ರಾಗಾದಿಭಾವಕರ್ಮಗಳೂ ಬಹಿರಂಗದ ಶರೀರಾದಿಗಳೂ ಪರದ್ರವ್ಯಗಳೆ ನಿಸುತ್ತವೆ. ಹಾಗೆಯೇ ಮಿಥ್ಯಾತ್ವರಾಗಾದಿಪರಿಣತರಾದ ಮನುಷ್ಯರೂ ಅರ್ಥಾತ್ ರಾಗದ್ವೇಷಯುಕ್ತರೂ ಮಿಥ್ಯಾತ್ವಿಗಳೂ ಅಸಂಯಮಿಗಳೂ ಆದ ಜೀವರೂ ಪರದ್ರವ್ಯ ರೂಪರಾಗಿರುತ್ತಾರೆ ಈ ಪರದ್ರವ್ಯಗಳ ಸಂಸರ್ಗದಿಂದ ಮುನಿಗಳು ಪರಮಧ್ಯೇಯ ವಾದ ಪರಮಾತ್ಮತತ್ತ್ವದಿಂದ ವಿಚಲಿತರಾಗುತ್ತಾರೆ ಅರ್ಥಾತ್ ತ್ರಿಗುಪ್ತಿರೂಪವಾದ ಪರಮಸಮಾಧಿಯಿಂದ ಚ್ಯುತರಾಗುತ್ತಾರೆ. ಅತಏವ ಸ್ವಸಂವೇದನಜ್ಞಾನಿಗಳಾದ ಮುನಿ ಗಳು ಪರಸಂಸರ್ಗವನ್ನು ತ್ಯಜಿಸುತ್ತಾರೆಂದಭಿಪ್ರಾಯವು. ಇಲ್ಲಿ "ಪರ" ಶಬ್ದಕ್ಕೆ ಪರ ದ್ರವ್ಯವೆಂದೂ ಪರಮಾತ್ಮದ್ರವ್ಯವೆಂದೂ ಎರಡು ಅರ್ಥಗಳನ್ನು ಕಲ್ಪಿಸಬಹುದಾಗಿದೆ. ಪರಮಾತ್ಮದ್ರವ್ಯವೆಂಬ ಅರ್ಥದಿಂದ "ಉತ್ಕೃಷ್ಟ ಆತ್ಮದ್ರವ್ಯವನ್ನು ತಿಳಿದವರಾಗಿಯೂ ಪರಮಾತ್ಮದ್ರವ್ಯದ ಸಂಸರ್ಗವನ್ನು ಬಿಡುತ್ತಾರೆ" ಎಂಬಲ್ಲಿ ವಿರೋಧಾಭಾಸಾಲಂಕಾರ ವಾಗುತ್ತದೆ· "ಪರದ್ರವ್ಯದ ಸಂಸರ್ಗವನ್ನು" ಎಂಬ ಅರ್ಥದಿಂದ ವಿರೋಧಪರಿಹಾರ ವಾಗುತ್ತದೆ. ಅತಏವ ಪರಶಬ್ದದ ಎರಡನೆಯ ಅರ್ಥವು ಆವರಣದಲ್ಲಿ ಕೊಡಲ್ಪಟ್ಟಿದೆ. (ಇದು ಅಲಂಕಾರಶಾಸ್ತ್ರದ ವಿಷಯವು.)

**ಜೋ ಸಮಭಾವಹಂ ಬಾಹಿರಉ, ತಿಂ ಸಹು ಮಂ ಕರಿ ಸಂಗು ।**
**ಚಿಂತಾಸಾಯರಿ ಪಡಹಿ ಪರ, ಅಣ್ಣು ವಿ ಡಜ್ಝಇ ಅಂಗು ॥ ೧೦೯ ॥**

"ಯಃ ಸಮಭಾವಾತ್ ಬಾಹ್ಯಃ ತೇನ ಸಹ ಮಾ ಕುರು ಸಂಗಮ್ ।
ಚಿಂತಾಸಾಗರೇ ಪತಸಿ ಪರಂ ಅನ್ಯದಪಿ ದಹ್ಯತೇ ಅಂಗಃ ॥ ೧೦೯ ॥"

**ಅನ್ವಯಾರ್ಥ:**— **ಜೋ**— ಯಾವುದು **ಸಮಭಾವಹಂ**— ಸಮಭಾವ(ನಿಜ ಭಾವ)ದಿಂದ **ಬಾಹಿರಉ**— ಬಾಹ್ಯ(ಪರಪದಾರ್ಥ)ವಾಗಿರುವುದೋ **ತಿಂ ಸಹು**— ಅದ ರೊಡನೆ **ಮಂ ಕರಿ ಸಂಗು**— ಸಂಸರ್ಗವನ್ನು ಮಾಡಬೇಡ. ಏಕೆಂದರೆ, ಆ ಪರ ಪದಾರ್ಥಗಳ ಸಂಸರ್ಗದಿಂದ **ಪರಂ**— ನಿಶ್ಚಯದಿಂದ **ಚಿಂತಾಸಾಯರಿ**— ಚಿಂತಾ ರೂಪವಾದ ಸಮುದ್ರದಲ್ಲಿ **ಪಡಹಿ**— ಬೀಳುತ್ತಿ **ಅಣ್ಣು ವಿ**— ಮತ್ತೂ **ಅಂಗು ಡಜ್ಝಇ**— ಶರೀರವು ಸುಡಲ್ಪಡುತ್ತದೆ ಅರ್ಥಾತ್ ವ್ಯಾಕುಲವಾಗುತ್ತದೆ

**ಭಾವಾರ್ಥ:**— ಜೀವನೇ! ಜೀವಿತಮರಣಲಾಭಾಲಾಭಾದಿಗಳಲ್ಲಿ ಸಮತಾಭಾವ ರೂಪವೂ ವಿಶುದ್ಧಜ್ಞಾನದರ್ಶನಸ್ವಭಾವವುಳ್ಳ ಪರಮಾತ್ಮದ್ರವ್ಯದ ಸಮ್ಯಕ್-ಶ್ರದ್ಧಾನ ಜ್ಞಾನಾನುಷ್ಠಾನರೂಪವೂ ಆದ ಸಮಭಾವಕ್ಕಿಂತ ಭಿನ್ನಗಳಾದ ಸಮಸ್ತಪರಭಾವ(ಪರ ದ್ರವ್ಯ)ಗಳ ಸಂಸರ್ಗವನ್ನು ಸರ್ವಥಾ ತ್ಯಾಗಮಾಡು ಇಲ್ಲವಾದರೆ ನೀನು ಪರದ್ರವ್ಯ ಗಳ ಸಂಸರ್ಗದಿಂದ ರಾಗದ್ವೇಷಾದಿರೂಪವಾದ ಕಲ್ಲೋಲ(ತೆರೆಮಾಲೆ)ಗಳಿಂದ ವ್ಯಾಕುಲ ವಾಗಿರುವ ಚಿಂತಾರೂಪವಾದ ಸಮುದ್ರದಲ್ಲಿ ಬೀಳುವೆ ಹಾಗೂ ಈ ಚಿಂತಾಗ್ನಿ ಯಿಂದ ಶರೀರವನ್ನೂ ದಹಿಸಿಕೊಳ್ಳುವೆ ಇಲ್ಲಿ ಪರದ್ರವ್ಯಗಳೆಂದರೆ ನಿಶ್ಚಯನಯದಿಂದ ವೀತರಾಗನಿರ್ವಿಕಲ್ಪಸಮಾಧಿಗೆ ಪ್ರತಿಕೂಲಗಳಾದ ತನ್ನ (ಆತ್ಮನ)ರಾಗಾದಿಪರಿಣಾಮ ಗಳೆಂದೂ ವ್ಯವಹಾರನಯದಿಂದ ಮಿಥ್ಯಾತ್ವರಾಗಾದಿಪರಿಣತರಾದ ಪುರುಷರೆಂದೂ ತಿಳಿ ಯಬೇಕು. ಹೀಗೆ ಪರದ್ರವ್ಯಗಳ ಸಂಬಂಧ(ಸಂಸರ್ಗ)ವು ಸರ್ವಥಾ ದುಃಖವನ್ನೇ ಉಂಟುಮಾಡುತ್ತದಲ್ಲದೆ ಎಂದಿಗೂ ಸುಖವನ್ನುಂಟುಮಾಡುವುದಿಲ್ಲವೆಂದು ಭಾವವು.

**ಭಲ್ಲಾಹಂ ವಿ ಣಾಸಂತಿ ಗುಣ, ಜಹಂ ಸಂಸಗ್ಗ ಖಲೇಹಿಂ ।**
**ವಇಸಾಣರು ಲೋಹಹಂ ಮಿಲಿಉ, ತೇಂ ಪಿಟ್ಟಿಯಇ ಘಣೇಹಿಂ ॥೧೧೦॥**

"ಭದ್ರಾಣಾಮಪಿ ನಶ್ಯಂತಿ ಗುಣಾಃ ಯೇಷಾಂ ಸಂಸರ್ಗಃ ಖಲೈಃ ।
ವೈಶ್ವಾನರೋ ಲೋಹೇನ ಮಿಲಿತಃ ತೇನ ಪಿಟ್ಟ್ಯತೇ ಘನೈಃ ॥ ೧೧೦ ॥"

**ಅನ್ವಯಾರ್ಥ:**— **ಖಲೇಹಿಂ**— ದುಷ್ಟರೊಡನೆ **ಜಹಂ ಸಂಸಗ್ಗ**— ಯಾವ ಜೀವರ ಸಂಸರ್ಗವಿರುತ್ತದೋ ಅಂತಹ **ಭಲ್ಲಾಹಂ**— ಭದ್ರ(ಉತ್ತಮ, ವಿವೇಕಿ)ಜೀವರ **ಗುಣವಿ**— ಗುಣಗಳೂ ಕೂಡ **ಣಾಸಂತಿ**— ನಾಶವಾಗುತ್ತವೆ ಹೇಗೆಂದರೆ, **ವಇಸಾ ಣರು**— ಅಗ್ನಿ(ಬೆಂಕಿ)ಯು **ಲೋಹಹಂ ಮಿಲಿಉ**— ಲೋಹದೊಡನೆ ಸೇರಿದ್ದಾಗಿ **ತೇಂ**— ಆ ಕಾರಣದಿಂದ (ಲೋಹದೊಡನೆ ಸೇರಿರುವುದರಿಂದ) **ಘಣೇಹಿಂ**— ಚಮ್ಮಟಿಗೆ ಮೊದಲಾದ ಘನವಸ್ತುಗಳಿಂದ **ಪಿಟ್ಟಿಯಇ**— ಹೊಡೆಯಲ್ಪಡುತ್ತದೆ ಅಥವಾ ಚೂರ್ಣ (ಪುಡಿ) ಮಾಡಲ್ಪಡುತ್ತದೆ.

**ಭಾವಾರ್ಥ:**— ಬೆಂಕಿಯನ್ನು ಚಮ್ಮಟಿಗೆ ಮೊದಲಾದುವುಗಳಿಂದ ಪುಡಿಮಾಡಲಾಗುವುದಿಲ್ಲ. ಆದರೆ ಅದು ಲೋಹದೊಡನೆ ಸೇರಿದುದಾದರೆ ಆ ಲೋಹದೊಡನೆ ಪುಡಿಮಾಡಲ್ಪಡುತ್ತದೆ. ಅದರಂತೆಯೇ ಅವಿವೇಕಿಗಳೂ ಮಿಥ್ಯಾತ್ವಿಗಳೂ ಆದ ದುಷ್ಟರೊಡನೆ ಸೇರುವುದರಿಂದ (ಅವರ ಸಂಸರ್ಗದಿಂದ) ವಿವೇಕಿಗಳಾದ ಜೀವರುಗಳ ಸಂಯಮಶೀಲಾದಿಗುಣಗಳು ನಾಶವಾಗುತ್ತವೆ. ಅಥವಾ ಮಿಥ್ಯಾತ್ವರಾಗಾದಿ ಅಶುದ್ಧ ಭಾವಗಳ ಸಂಬಂಧದಿಂದ ಆತ್ಮನ ನಿಜಗುಣಗಳು ಮಲಿನತೆಯನ್ನು ಹೊಂದುತ್ತವೆ. ಅತಏವ ಆಕುಲತಾರಹಿತವಾದ ಸುಖವನ್ನು ಘಾತಿಸುವ ನಿದಾನಬಂಧಾದಿ ದುಷ್ಪರಿಣಾಮರೂಪವಾದ ದುಷ್ಟಸಂಸರ್ಗವನ್ನು ಹಾಗೂ ಅನೇಕದೋಷಯುಕ್ತರೂ ರಾಗದ್ವೇಷಿಗಳೂ ಆದ ದುಷ್ಟಜನರ ಸಂಸರ್ಗವನ್ನು ಎಂದಿಗೂ ಮಾಡಬಾರದೆಂದು ತಾತ್ಪರ್ಯವು.

**ಜೋಇಯ ಮೋಹು ಪರಿಚ್ಚಯಹಿ, ಮೋಹು ಣ ಭಲ್ಲಉ ಹೋಇ ।**
**ಮೋಹಾಸತ್ತಉ ಸಯಲು ಜಗು, ದುಕ್ಖು ಸಹಂತಉ ಜೋಇ ॥ ೧೧೧ ॥**

"ಯೋಗಿನ್ ಮೋಹಂ ಪರಿತ್ಯಜ ಮೋಹೋ ನ ಭದ್ರೋ ಭವತಿ ।
ಮೋಹಾಸಕ್ತಂ ಸಕಲಂ ಜಗತ್ ದುಃಖಂ ಸಹಮಾನಂ ಪಶ್ಯ ॥ ೧೧೧ ॥"

**ಅನ್ವಯಾರ್ಥ:**— **ಜೋಇಯ**— ಎಲೈ ಯೋಗಿಯೇ! **ಮೋಹು ಪರಿಚ್ಚಯಹಿ**— ಮೋಹವನ್ನು ಪರಿತ್ಯಜಿಸು. **ಮೋಹು**— ಮೋಹವು **ಣ ಭಲ್ಲಉ ಹೋಇ**— ಒಳ್ಳೆಯದಾಗಿರುವುದಿಲ್ಲ. **ಮೋಹಾಸತ್ತಉ**— ಮೋಹಾಸಕ್ತವಾದ (ಮೋಹದಿಂದ ಕೂಡಿದ) ಅತಏವ **ದುಕ್ಖು ಸಹಂತಉ**— ದುಃಖವನ್ನು ಸಹಿಸುತ್ತಿರುವ ಅರ್ಥಾತ್ ಕ್ಲೇಶವನ್ನನುಭವಿಸುತ್ತಿರುವ **ಸಯಲು ಜಗು**— ಸಕಲ ಜಗತ್ತನ್ನು ಅರ್ಥಾತ್ ಜಗತ್ತಿನ ಸಕಲ ಜೀವಿಗಳನ್ನು **ಜೋಇ**— ನೋಡು.

**ಭಾವಾರ್ಥ:**— ಯೋಗಿಯೇ! ಜಗತ್ತಿನ ಪ್ರಾಣಿಗಳು ಮೋಹವಶದಿಂದ ಕ್ಲೇಶಪಡುತ್ತಿರುವುದನ್ನು ನೋಡಿ ನೀನು ಮೋಹವನ್ನು ಸರ್ವಥಾ ತ್ಯಾಗಮಾಡು. ಬಾಹ್ಯಸಂಬಂಧವುಳ್ಳ ಸ್ತ್ರೀಪುತ್ರಾದಿಗಳ ಮೋಹವಂತಿರಲಿ. ಆ ಪರವಸ್ತುಗಳನ್ನು ಮೊದಲೇ ಬಿಟ್ಟಿರುವ ನೀನು ಅವುಗಳ ಸ್ಮರಣರೂಪವಾದ ಮೋಹವನ್ನೂ ಮಾಡಲಾಗದು. ಶುದ್ಧಾತ್ಮಭಾವನಾರೂಪತಪಶ್ಚರಣೆಗೆ ಸಾಧಕವಾದ ಶರೀರದ ಸ್ಥಿತಿಗೋಸ್ಕರ ಸೇವಿಸುವ ಅನ್ನಪಾನಾದಿಗಳಲ್ಲಿಯೂ ಸಂಯಮೋಪಕರಣ ಜ್ಞಾನೋಪಕರಣಗಳಾದ ಪಿಂಛಕಮಂಡಲು ಮೊದಲಾದುವುಗಳಲ್ಲಿಯೂ ಕಿಂಚಿತ್ತಾದರೂ ಮೋಹವನ್ನು ಮಾಡಬಾರದು. ಸಾರಾಂಶತಃ ಬಾಹ್ಯಾಭ್ಯಂತರಗಳಲ್ಲಿ ಸರ್ವಥಾ ನಿರ್ಮೋಹಿಯಾಗಿರಬೇಕೆಂದು ಭಾವವು.

ಮುಂದೆ ಆಹಾರದ ಮೋಹವನ್ನು ನಿರಾಕರಿಸುವ ಮುಖ್ಯತೆಯಿಂದ ಮೂರು ಪ್ರಕ್ಷೇಪಕಸೂತ್ರಗಳನ್ನು ಹೇಳುತ್ತಾರೆ:—

**ಕಾಊಣ ಣಗ್ಗರೂವಂ, ಬೀಭಸ್ಸಂ ದಡ್ಢಮಡಯಸಾರಿಚ್ಛಂ ।**
**ಅಹಿಲಸಸಿ ಕಿಂ ಣ ಲಜ್ಜಸಿ, ಭಿಕ್ಖಾಏ ಭೋಯಣಂ ಮಿಟ್ಠಂ ॥ ೧೧೧*೨ ॥**

"ಕೃತ್ವಾ ನಗ್ನರೂಪಂ ಬೀಭತ್ಸಂ ದಗ್ಧಮೃತಕಸದೃಶಮ್ ।
ಅಭಿಲಷಸಿ ಕಿಂ ನ ಲಜ್ಜಸೇ ಭಿಕ್ಷಾಯಾಂ ಭೋಜನಂ ಮಿಷ್ಟಮ್ ॥ ೧೧೧*೨ ॥"

**ಅನ್ವಯಾರ್ಥ:**— ಎಲೈ ಸಾಧುವೇ! **ಬೀಭಸ್ಸಂ**— ಜುಗುಪ್ಸೆ(ಹೇಸಿಕೆ)ಯನ್ನುಂಟುಮಾಡುವ **ದಡ್ಢಮಡಯಸಾರಿಚ್ಛಂ**— ಸುಟ್ಟಹೆಣಕ್ಕೆ(ಶವಕ್ಕೆ) ಸಮಾನವಾದ ರೂಪವುಳ್ಳ **ಣಗ್ಗರೂವಂ**— ನಗ್ನ(ದಿಗಂಬರ)ರೂಪವನ್ನು **ಕಾಊಣ**— ಮಾಡಿ ಅರ್ಥಾತ್ ಧರಿಸಿ **ಭಿಕ್ಖಾಏ**— ಭಿಕ್ಷೆ(ಆಹಾರಗ್ರಹಣೆ)ಯಲ್ಲಿ **ಮಿಟ್ಠಂ ಭೋಯಣಂ**— ಮಿಷ್ಟ(ರುಚಿಕರ)ವಾದ ಭೋಜನವನ್ನು **ಅಹಿಲಸಸಿ**— ಇಚ್ಛಿಸುತ್ತಿ ಅಥವಾ ರುಚಿಕರವಾದ ಭೋಜನದಲ್ಲಿ ಅಭಿಲಾಷೆಯನ್ನು ಹೊಂದುತ್ತಿ. ಇದರಿಂದ **ಕಿಂ ಣ ಲಜ್ಜಸಿ**— ಏಕೆ ನಾಚಿಕೆಪಡುವುದಿಲ್ಲ?

**ಭಾವಾರ್ಥ:**— ಸಾಧುವೇ! ನೀನು ಸಂಸಾರಶರೀರಭೋಗಗಳಿಂದ ವಿರಕ್ತನಾಗಿ ದಿಗಂಬರನಾಗಿರುವೆ ಸ್ನಾನಾದಿಸಂಸ್ಕಾರಗಳಿಲ್ಲದೆಯೂ ಕಾಯಕ್ಲೇಶದಿಂದಲೂ ನಿನ್ನ ನಗ್ನಶರೀರವು ಮಲಿನವೂ ನೋಡುವವರಿಗೆ ಜುಗುಪ್ಸೆಯನ್ನುಂಟುಮಾಡುವುದೂ ಆಗಿರುತ್ತದೆ. ಹೀಗೆ ಆತ್ಮಹಿತಸಾಧನೆಗಾಗಿ ಅರೆಸುಟ್ಟಹೆಣದಂತಿರುವ ನಗ್ನಶರೀರವನ್ನು (ದಿಗಂಬರತ್ವವನ್ನು) ಧರಿಸಿರುವ ನೀನು ಆಹಾರಕ್ಕಾಗಿ ಪರಗೃಹದ್ವಾರಗಳಲ್ಲಿ ಭ್ರಾಮರೀವೃತ್ತಿಯಿಂದ ಅಲೆಯುವವನಾಗಿ ಜಿಹ್ವಾಚಾಪಲ್ಯದಿಂದ ರುಚಿಕರವಾದ ಭೋಜನವನ್ನು ಪಡೆಯಲಿಚ್ಛಿಸುವೆ ಇದು ನಿನಗೆ ಲಜ್ಜಾಸ್ಪದವಲ್ಲವೇ? ಶರೀರದ ಮಮತೆಯನ್ನು ತೊರೆದಿರುವ ನಿನಗೆ ಈ ಮಿಷ್ಟಭೋಜನದ ಅಭಿಲಾಷೆಯೇಕೆ? ಆದುದರಿಂದ ಕೇವಲ ಶರೀರಸ್ಥಿತಿಗಾಗಿ ಶ್ರಾವಕರಿಂದ ವಿಧಿಪೂರ್ವಕ ಕೊಡಲ್ಪಟ್ಟ ಅಲ್ಪ ಹಾಗೂ ನೀರಸ ಆಹಾರವನ್ನು ಅನಾಸಕ್ತಿಯಿಂದ ಸ್ವೀಕರಿಸುವುದು ನಿನಗುಚಿತವಾಗಿದೆ. ಶ್ರಾವಕರೂ ಮುನಿಗಳಿಗೆ ನಿರ್ದೋಷವಾದ ಆಹಾರ, ಅಭಯ, ಭೈಷಜ್ಯ, ಶಾಸ್ತ್ರ ಈ ಚತುರ್ವಿಧದಾನಗಳನ್ನು ಭಕ್ತಿಪೂರ್ವಕವಾಗಿ ಮಾಡಬೇಕು. ಮುನಿಗಳಿಗೆ ನಿರ್ದೋಷ ಆಹಾರವನ್ನು ದಾನಮಾಡುವುದರಿಂದ ತಪಸ್ಸನ್ನೇ ದಾನಮಾಡಿದಂತಾಗುತ್ತದೆ. ಹೇಗೆಂದರೆ, ನಿಜಶುದ್ಧಾತ್ಮಭಾವನೆಯೇ ನಿಶ್ಚಯತಪವು. ದ್ವಾದಶವಿಧಬಾಹ್ಯಾಭ್ಯಂತರತಪಗಳು ಶುದ್ಧಾತ್ಮಾನುಭೂತಿಗೆ ಸಾಧಕಗಳಾಗಿವೆ. ದಿಗಂಬರಮುನಿಯ ಶರೀರವು ತಪಸ್ಸಿನ ಸಾಧನವಾಗಿದೆ. ಆ ಶರೀರದ ಸ್ಥಿತಿಯು ಆಹಾರವನ್ನವಲಂಬಿಸಿರುತ್ತದೆ. ಅತಏವ ಮುನಿಗಳಿಗೆ ಆಹಾರದಾನವನ್ನು ಮಾಡುವ ಶ್ರಾವಕನು ತಪಸ್ಸನ್ನೇ ದಾನಮಾಡುತ್ತಾನೆಂದು ತಿಳಿಯಬೇಕು. ಆದುದರಿಂದ ನಿಶ್ಚಯವ್ಯವಹಾರರತ್ನತ್ರಯಸಾಧಕನಾದ ತಪಸ್ವಿಯು ತಪಶ್ಚರಣೆಗೆ ಬಹಿರಂಗಸಾಧನವಾದ ಶರೀರದ ಸ್ಥಿತಿಗಾಗಿ ನೀರಸಆಹಾರವನ್ನು ಸ್ವೀಕರಿಸುವಲ್ಲಿ ಆಹಾರದ ಮೋಹವನ್ನು ಬಿಡಬೇಕೆಂದು ಭಾವವು.

**ಜಇ ಇಚ್ಛಸಿ ಭೋ ಸಾಹೂ, ಬಾರಹವಿಹತವಹಲಂ ಮಹಾವಿಉಲಂ ।**
**ತೋ ಮಣವಯಣೇ ಕಾಏ, ಭೋಯಣಗಿದ್ಧೀ ವಿವಜ್ಜೇಸು ॥ ೧೧೧*೩ ॥**

---

* ಪ್ರಕ್ಷೇಪಕಗಳು

"ಯದಿ ಇಚ್ಛಸಿ ಭೋ ಸಾಧೋ ದ್ವಾದಶವಿಧತಪಃಫಲಂ ಮಹಾವಿಪುಲಮ್ ।
ತತಃ ಮನೋವಚನಯೋಃ ಕಾಯೇ ಭೋಜನಗೃದ್ಧಿಂ ವಿವರ್ಜಯಸ್ವ॥೧೧೧*೩॥"

**ಅನ್ವಯಾರ್ಥಃ—ಭೋಸಾಹೂ**— ಎಲೈ ಸಾಧುವೇ! (ನಿರ್ದೋಷಪರಮಾತ್ಮಪದವಿಯ ಸಾಧಕನೇ!) ನೀನು **ಮಹಾವಿಉಲಂ**— ಬಹಳ ಹೆಚ್ಚಾದ **ಬಾರಹವಿಹತವಹಲಂ**—(ಬಾಹ್ಯಾಭ್ಯಂತರರೂಪದಿಂದ) ಹನ್ನೆರಡುವಿಧವಾದ ತಪಸ್ಸಿನ ಫಲವನ್ನು (ಸ್ವರ್ಗಾಪವರ್ಗವನ್ನು) **ಇಚ್ಛಸಿ ಜಇ**— ಇಚ್ಛಿಸುತ್ತಿಯಾದರೆ **ತೋ**— ಆ ಕಾರಣದಿಂದ (ಅವಕ್ಕಾಗಿ) **ಮಣವಯಣೇ ಕಾಏ**— ಮನವಚನಗಳಿಂದಲೂ ಕಾಯದಿಂದಲೂ **ಭೋಯಣಗಿದ್ಧೀ**— ಭೋಜನದ ಅಭಿಲಾಷೆ (ಲೋಲುಪತೆ)ಯನ್ನು **ವಿವಜ್ಜೇಸು**— ತ್ಯಾಗ ಮಾಡು.

**ಭಾವಾರ್ಥಃ**—†ಅನಶನ, ಅವಮೋದರ್ಯ, ವೃತ್ತಿಪರಿಸಂಖ್ಯಾನ, ರಸಪರಿತ್ಯಾಗ, ವಿವಿಕ್ತಶಯ್ಯಾಸನ ಮತ್ತು ಕಾಯಕ್ಲೇಶ ಇವು ಆರು ಬಾಹ್ಯತಪಗಳು. ಪ್ರಾಯಶ್ಚಿತ್ತ, ವಿನಯ, ವೈಯ್ಯಾವೃತ್ಯ, ಸ್ವಾಧ್ಯಾಯ, ವ್ಯುತ್ಸರ್ಗ ಮತ್ತು ಧ್ಯಾನ ಇವಾರು ಅಭ್ಯಂತರ ತಪಗಳು. ಹೀಗೆ ಬಾಹ್ಯಾಭ್ಯಂತರಭೇದದಿಂದ ಹನ್ನೆರಡು ಪ್ರಕಾರವಾದ ತಪಸ್ಸುಗಳನ್ನಾಚರಿಸುವುದರಿಂದ ಸ್ವರ್ಗಾಪವರ್ಗಗಳು ಲಭಿಸುತ್ತವೆ ಅರ್ಥಾತ್ ಸ್ವರ್ಗಾಪವರ್ಗಗಳ ಪ್ರಾಪ್ತಿಯು ದ್ವಾದಶವಿಧತಪಶ್ಚರಣೆಯ ಮಹತ್ಫಲವಾಗಿರುತ್ತದೆ. ಆದುದರಿಂದ ಯೋಗಿಯೇ! ಈ ಬಾಹ್ಯಾಭ್ಯಂತರತಪಶ್ಚರಣೆಯ ನಿಜವಾದ ಫಲವು ನಿನಗೆ ಲಭಿಸಬೇಕೆಂದಿದ್ದರೆ ನೀನು ವೀತರಾಗನಿಜಾನಂದೈಕಸುಖರಸಾಸ್ವಾದಾನುಭವದಿಂದ ಸಂತೃಪ್ತನಾಗಿ ಮನೋವಾಕ್ಕಾಯಗಳಿಂದ ಇಷ್ಟಭೋಜನದ ಲಾಲಸೆಯನ್ನು ಬಿಡು. ಹೀಗೆ ಆಚಾರ್ಯರು ಉಪದೇಶಿಸುತ್ತಾರೆಂದಭಿಪ್ರಾಯವು.

**ಜೇ ಸರಸಿಂ ಸಂತುಟ್ಠಮಣ, ವಿರಸಿ ಕಸಾಉ ವಹಂತಿ ।**
**ತೇ ಮುಣಿ ಭೋಯಣಘಾರ ಗಣಿ, ಣವಿ ಪರಮತ್ಥು ಮುಣಂತಿ**
**॥ ೧೧೧*೪ ॥**

"ಯೋ ಸರಸೇನ ಸಂತುಷ್ಟಮನಸಃ ವಿರಸೇ ಕಷಾಯಂ ವಹಂತಿ ।
ತೇ ಮುನಯಃ ಭೋಜನಗೃಧ್ರಾಃ ಗಣಯ ನೈವ ಪರಮಾರ್ಥಂ ಮನ್ಯಂತೇ
॥ ೧೧೧*೪ ॥"

**ಅನ್ವಯಾರ್ಥಃ—ಜೇ**— ಯಾವ ಯೋಗಿಗಳು **ಸರಸಿಂ**— ಸರಸ (ಸ್ವಾದಿಷ್ಟ)ವಾದ ಭೋಜನದಿಂದ **ಸಂತುಟ್ಠಮಣ**— ಸಂತುಷ್ಟವಾದ ಮನಸ್ಸುಳ್ಳವರಾಗುತ್ತಾರೋ

---

* ಪ್ರಕ್ಷೇಪಕಗಳು

"ಅನಶನಾವಮೋದರ್ಯವೃತ್ತಿಪರಿಸಂಖ್ಯಾನರಸಪರಿತ್ಯಾಗವಿವಿಕ್ತಶಯ್ಯಾಸನಕಾಯಕ್ಲೇಶಾ ಬಾಹ್ಯಂ ತಪಃ ॥ ಪ್ರಾಯಶ್ಚಿತ್ತವಿನಯವೈಯ್ಯಾವೃತ್ಯಸ್ವಾಧ್ಯಾಯಧ್ಯಾನಾನ್ಯುತ್ತರಮ್ ॥"

—ತತ್ತ್ವಾರ್ಥಸೂತ್ರ, ಅಧ್ಯಾಯ-೯, ಸೂತ್ರ-೧೯-೨೦.

ಮತ್ತು **ವಿರಸಿ**— ವಿರಸವಾದ (ನೀರಸ) ಆಹಾರದಲ್ಲಿ **ಕಸಾಉ ವಹಂತಿ**— ಕ್ರೋಧಾದಿ ಕಷಾಯಗಳನ್ನು ಹೊಂದುತ್ತಾರೋ **ತೇ ಮುಣಿ**– ಆ ಮುನಿಗಳು **ಭೋಯಣ ಘಾರ**— ಭೋಜನಲಾಲಸರಾಗಿ ಅಥವಾ ಭೋಜನದಲ್ಲಿ ಗೃಧ್ರಕ್ಕೆ (ಹದ್ದಿಗೆ) ಸಮಾನ ರಾಗಿ **ಣವಿ ಪರಮತ್ಥು ಮುಣಂತಿ** ಪರಮಾರ್ಥ (ಪರಮಾತ್ಮತತ್ತ್ವ)ವನ್ನು ನಿಶ್ಚಯ ವಾಗಿಯೂ ತಿಳಿಯುವುದಿಲ್ಲ.

**ಭಾವಾರ್ಥ:**— ಸಾಧುಗಳಾಗಿದ್ದರೂ ವೀತರಾಗಮಾರ್ಗದಿಂದ ವಿಮುಖರಾದ ಕೆಲವು ಮುನಿಗಳು ಸ್ವಾದಿಷ್ಟ(ರುಚಿಕರ)ವಾದ ಆಹಾರವನ್ನು ಪಡೆಯುವುದರಿಂದ ಸಂತುಷ್ಟರಾಗುತ್ತಾರೆ ಹಾಗೂ ಅಂತಹ ಆಹಾರವನ್ನು ಕೊಟ್ಟ ಶ್ರಾವಕರ ಮೇಲೆ ಪ್ರಸನ್ನ ರಾಗುತ್ತಾರೆ ಅವರನ್ನು ಪ್ರಶಂಸಿಸುತ್ತಾರೆ ಹಾಗೆಯೇ ನೀರಸಾಹಾರ ದೊರೆತು ದಾದರೆ ಕ್ರೋಧ(ಕಷಾಯಭಾವ)ವನ್ನು ಹೊಂದುತ್ತಾರೆ ಮತ್ತು ಅದನ್ನಿತ್ತ ಶ್ರಾವಕರನ್ನು ದೂಷಿಸುತ್ತಾರೆ. ಇಂತಹ ತಪೋಧನರು ಗೃಧ್ರಗಳಂತೆ ಆಹಾರಲೋಲುಪರಾಗಿರುತ್ತಾರೆ. ಹೀಗೆ ಆಹಾರಾಭಿಲಾಷೆಯಿಂದ ದೇಹಮಮತೆಯನ್ನೂ ಹೊಂದಿದವರಾಗಿ ಅವರು ಪರ ಮಾತ್ಮಪದಾರ್ಥವನ್ನು ತಿಳಿಯದವರಾಗುತ್ತಾರೆ ಅರ್ಥಾತ್ ಪರಮಾತ್ಮಭಾವನೆಯಿಂದ ಪರಾಙ್ಮುಖರಾಗುತ್ತಾರೆ. ಮುನಿಗಳಿಗೆ ಆಹಾರದಾನಾದಿಗಳನ್ನು ಮಾಡುವುದೇ ಗೃಹಸ್ಥ (ಶ್ರಾವಕ)ರ ಪರಮಧರ್ಮವಾಗಿದೆ. ಏಕೆಂದರೆ ಶುದ್ಧೋಪಯೋಗವೇ ಪರಮಧರ್ಮವು. ಆದರೆ ನಿರಂತರ ವಿಷಯಕಷಾಯಾಧೀನರಾಗಿರುವುದರಿಂದ ಆರ್ತರೌದ್ರಧ್ಯಾನರತರಾಗಿ ರುವ ಗೃಹಸ್ಥರಿಗೆ ನಿಶ್ಚಯರತ್ನತ್ರಯರೂಪವಾದ ಶುದ್ಧೋಪಯೋಗ-ಪರಮಧರ್ಮವನ್ನು ಹೊಂದಲವಕಾಶವಿರುವುದಿಲ್ಲ. ಆದುದರಿಂದ ಶುದ್ಧೋಪಯೋಗಿಗಳಾದ ತಪಸ್ವಿಗಳಿಗೆ ಆಹಾರಾದಿದಾನಗಳನ್ನು ಮಾಡುವುದು ಗೃಹಸ್ಥರ ಧರ್ಮವಾಗಿದೆ ಹಾಗೂ ಈ ದಾನವು ಪುಣ್ಯಬಂಧಕ್ಕೂ ಪರಂಪರೆಯಿಂದ ಮೋಕ್ಷಕ್ಕೂ ಕಾರಣವಾಗಿರುತ್ತದೆ. ಇಲ್ಲಿ ತಪೋಧನ ರಾದ ಮುನಿಗಳು ಆಹಾರವಿಷಯದಲ್ಲಿ ರಾಗದ್ವೇಷವನ್ನು ತಾಳದೆ ಹಾಗೂ ಮಾನಾಪ ಮಾನಗಳಲ್ಲಿ ಸಮತಾಭಾವವುಳ್ಳವರಾಗಿ ಯಥಾಲಾಭದಿಂದ (ಯಾವ ಆಹಾರವು ಎಷ್ಟು ದೊರೆಯಿತೋ ಅಷ್ಟರಿಂದ) ಸಂತೃಪ್ತರಾಗಬೇಕೆಂದು ಭಾವಾರ್ಥವು.

**ರೂವಿ ಪತಂಗಾ ಸದ್ದಿ ಮಯು, ಗಯ ಫಾಸಹಿ ಣಾಸಂತಿ ।**
**ಅಲಿಉಲ ಗಂಧಇಂ ಮಚ್ಛ ರಸಿ, ಕಿಮ ಅಣುರಾಉ ಕರಂತಿ ॥ ೧೧೨ ॥**

"ರೂಪೇ ಪತಂಗಾಃ ಶಬ್ದೇ ಮೃಗಾಃ ಗಜಾಃ ಸ್ಪರ್ಶೈಃ ನಶ್ಯಂತಿ ।
ಅಲಿಕುಲಾನಿ ಗಂಧೇನ ಮತ್ಸ್ಯಾಃ ರಸೇ ಕಿಂ ಅನುರಾಗಂ ಕುರ್ವಂತಿ ॥ ೧೧೨ ॥

**ಅನ್ವಯಾರ್ಥ:**— **ರೂವಿ ಪತಂಗಾ**— ರೂಪದಲ್ಲಿ ಪತಂಗಹುಳಗಳೂ **ಸದ್ದಿ ಮಯು**— ಶಬ್ದದಲ್ಲಿ ಮೃಗ(ಜಿಂಕೆ)ಗಳೂ **ಗಯ ಫಾಸಹಿ**— ಸ್ಪರ್ಶಗಳಿಂದ ಆನೆಗಳೂ **ಗಂಧಇಂ ಅಲಿಉಲ**— ಗಂಧದಿಂದ ಅಲಿಕುಲ(ತುಂಬಿಗಳ ಸಮೂಹ)ವೂ **ರಸಿ ಮಚ್ಛ**- ರಸದಲ್ಲಿ ಮತ್ಸ್ಯ(ಮೀನು)ಗಳೂ **ಣಾಸಂತಿ**— ನಾಶವಾಗುತ್ತವೆ ಅರ್ಥಾತ್ ಮರಣವನ್ನು ಹೊಂದುತ್ತವೆ. ಹೀಗಿರುತ್ತಿರಲು ವಿವೇಕಿಗಳಾದ ಜೀವರು ಪಂಚೇಂದ್ರಿಯ ವಿಷಯ

ಗಳಲ್ಲಿ **ಕಿಮಣುರಾಉ ಕರಂತಿ**—ಅನುರಾಗ(ಪ್ರೀತಿ)ವನ್ನು ಮಾಡುತ್ತಾರೋ ಏನು? (ಅಥವಾ ಹೇಗೆ ಅನುರಾಗವನ್ನು ಮಾಡುತ್ತಾರೆ?) ಅರ್ಥಾತ್ ಅನುರಾಗವನ್ನು ಮಾಡುವುದಿಲ್ಲವೆಂದರ್ಥವು.

**ಭಾವಾರ್ಥ:**— ಇಲ್ಲಿ ಪಂಚೇಂದ್ರಿಯವಿಷಯಾಭಿಲಾಷೆಯಿಂದುಂಟಾಗುವ ಹಾನಿಯನ್ನು ದೃಷ್ಟಾಂತಪೂರ್ವಕ ನಿರೂಪಿಸುತ್ತಾರೆ. ನೇತ್ರೇಂದ್ರಿಯವಿಷಯವಾದ ರೂಪದ ಅಭಿಲಾಷೆಯಿಂದ ಪತಂಗ(ದೀಪದ ಹುಳು)ಗಳು ದೀಪದಲ್ಲಿ ಬಿದ್ದು ಸಾಯುತ್ತವೆ. ಕರ್ಣೇಂದ್ರಿಯವಿಷಯವಾದ ಶಬ್ದದಲ್ಲಿ ಆಸಕ್ತಗಳಾದ ಹರಿಣ(ಜಿಂಕೆ)ಗಳು ವ್ಯಾಧರ ಬಾಣಗಳಿಂದ ಕೊಲ್ಲಲ್ಪಡುತ್ತವೆ. ಸ್ಪರ್ಶನೇಂದ್ರಿಯವಿಷಯವಾದ ಸ್ಪರ್ಶಾಭಿಲಾಷೆಯಿಂದ ಆನೆಗಳು ಗರ್ತ(ಹೊಂಡ)ದಲ್ಲಿ ಬೀಳುತ್ತವೆ ಘ್ರಾಣೇಂದ್ರಿಯವಿಷಯವಾದ ಗಂಧ(ಸುಗಂಧ, ಪರಿಮಳ)ಕ್ಕೆ ಮರುಳಾದ ತುಂಬಿಗಳು ಮುಳ್ಳುಗಳಿಂದ ಅಥವಾ ಕಮಲಗಳ ಮಧ್ಯದಲ್ಲಿ ಬಿದ್ದು (ಕಮಲವು ಮುಚ್ಚಿಕೊಳ್ಳುತ್ತಿರಲು) ಪ್ರಾಣವನ್ನು ಕಳೆಕೊಳ್ಳುತ್ತವೆ. ಹಾಗೆಯೇ ರಸನೇಂದ್ರಿಯವಿಷಯವಾದ ರಸದ ಲೋಭದಿಂದ ಮೀನುಗಳು ಬೆಸ್ತರ ಗಾಳಕ್ಕೆ ಬಾಯಿಕ್ಕಿ ಮರಣವನ್ನು ಹೊಂದುತ್ತವೆ. ಹೀಗೆ ಒಂದೊಂದು ಇಂದ್ರಿಯವಿಷಯಗಳ ಲೋಭದಿಂದ ಪ್ರಾಣಿಗಳು ನಾಶವಾಗುತ್ತಿರಲು ಐದೂ ಇಂದ್ರಿಯಗಳ ವಿಷಯಗಳಲ್ಲಾಸಕ್ತರಾದ ಜೀವರುಗಳ ದುರವಸ್ಥೆಯನ್ನು ಹೇಳಬೇಕಾದುದೇನು? ಹೀಗಿರಲು ವಿವೇಕಿಗಳಾದ ಜೀವರು ಈ ಪಂಚೇಂದ್ರಿಯವಿಷಯ-ಭೋಗಗಳನ್ನು ಎಂದಾದರೂ ಬಯಸುವರೇ? ಎಂದೂ ಬಯಸಲಾರರೆಂದು ಭಾವವು. ಪರಂತು ವೀತರಾಗ ಚಿದಾನಂದೈಕಸ್ವರೂಪವುಳ್ಳ ಪರಮಾತ್ಮತತ್ತ್ವವನ್ನರಿಯದ ಹಾಗೂ ವೀತರಾಗನಿರ್ವಿಕಲ್ಪ ಸಮಾಧಿಯಿಂದ ಪರಾಙ್ಮುಖರಾದ ಅಜ್ಞಾನಿಗಳು ಪಂಚೇಂದ್ರಿಯವಿಷಯಕಷಾಯಗಳಲ್ಲಿ ಆಸಕ್ತರಾಗಿ ನರಕಾದಿದುರ್ಗತಿಗಳನ್ನು ಹೊಂದಿ ಅನೇಕವಿಧವಾದ ದುಃಖಗಳಿಗೆ ಭಾಜನರಾಗುತ್ತಾರೆ ಹಾಗೆಯೇ ವಿಷಯರಾಗರಹಿತರಾಗಿ ವೀತರಾಗನಿರ್ವಿಕಲ್ಪಪರಮಸಮಾಧಿಯಲ್ಲಿ ಮಗ್ನರಾದ ಜೀವರು ಲೀಲಾಮಾತ್ರದಿಂದ ಸಂಸಾರಸಾಗರದ ಪಾರವನ್ನು ಪಡೆಯುತ್ತಾರೆ ಅರ್ಥಾತ್ ಮುಕ್ತರಾಗುತ್ತಾರೆಂದು ತಾತ್ಪರ್ಯವು.

**ಜೋಇಯ ಲೋಹು ಪರಿಚ್ಚಯಹಿ, ಲೋಹು ಣ ಭಲ್ಲಉ ಹೋಇ।**
**ಲೋಹಾಸತ್ತಉ ಸಯಲು ಜಗು, ದುಕ್ಖು ಸಹಂತಉ ಜೋಇ ॥೧೧೩॥**

"ಯೋಗಿನ್ ಲೋಭಂ ಪರಿತ್ಯಜ ಲೋಭೋ ನ ಭದ್ರಃ ಭವತಿ ।
ಲೋಭಾಸಕ್ತಂ ಸಕಲಂ ಜಗತ್ ದುಃಖಂ ಸಹಮಾನಂ ಪಶ್ಯ ॥ ೧೧೩ ॥"

**ಅನ್ವಯಾರ್ಥ:**—**ಜೋಇಯ**—ಎಲೈ ಯೋಗಿಯೇ! **ಲೋಹು**—ಲೋಭ(ಆಶೆ, ಲೋಭಕಷಾಯ)ವನ್ನು **ಪರಿಚ್ಚಯಹಿ**—ಪರಿತ್ಯಜಿಸು(ಬಿಡು) ಏಕಂದರೆ **ಲೋಹು**—ಲೋಭವು **ಣ ಭಲ್ಲಉ ಹೋಇ**—ಒಳ್ಳೆಯ(ಉತ್ತಮ)ದಾಗಿರುವುದಿಲ್ಲ. **ಲೋಹಾಸತ್ತಉ**—ಲೋಭದಲ್ಲಾಸಕ್ತವಾದ, ಆದುದರಿಂದಲೇ **ದುಕ್ಖು ಸಹಂತು**—ದುಃಖ

ವನ್ನು ಸಹಿಸು(ಅನುಭವಿಸು)ತ್ತಿರುವ **ಸಯಲು ಜಗು**–ಸಮಸ್ತಲೋಕವನ್ನು ಅರ್ಥಾತ್ **ಲೋ**ಕದಲ್ಲಿರುವ ಜೀವಿಗಳನ್ನು **ಜೋಇ**— ನೋಡು.

**ಭಾವಾರ್ಥ.**— ಯೋಗಿಯೇ! ಲೋಭವು ಒಳ್ಳೆಯದಲ್ಲ. ಲೋಭಾಸಕ್ತರಾದ ಜೀವರುಗಳು ಭವಭವದಲ್ಲಿ ಅನೇಕ ದುಃಖಗಳನ್ನನುಭವಿಸುತ್ತಾರೆ. ಅತಏವ ನೀನು ಲೋಭಕಷಾಯರಹಿತವಾದ ಪರಮಾತ್ಮಸ್ವರೂಪವನ್ನು ತಿಳಿದವನಾಗಿ ಪರಮಾತ್ಮಸ್ವರೂಪಕ್ಕೆ ವಿಪರೀತವಾದ ಹಾಗೂ ಜನ್ಮಜನ್ಮಾಂತರಗಳಲ್ಲಿ ದುಃಖವನ್ನುಂಟು ಮಾಡುವ ಇಹಪರಭವಗಳ ಹಾಗೂ ಧನಧಾನ್ಯಾದಿಗಳ ಲೋಭವನ್ನು ಸರ್ವಥಾ ತ್ಯಾಗಮಾಡು. ಏಕೆಂದರೆ ಈ ಲೋಕದಲ್ಲಿ ಲೋಭದಿಂದುಂಟಾಗುವ ದುಃಖಪರಂಪರೆಯನ್ನು ನೀನು ಪ್ರತ್ಯಕ್ಷವಾಗಿ ಕಾಣುತ್ತಿರುವೆ.

**ತಲಿ ಅಹಿರಣಿ ವರಿ ಘಣವಡಣು, ಸಂಡಸ್ಸಯಲುಂಚೋಡು ।**
**ಲೋಹಹಂ ಲಗ್ಗಿವಿ ಹುಯವಹಹಂ, ಪಿಕ್ಖು ಪಡಂತಉ**
**ತೋಡು ॥ ೧೧೪ ॥**

"ತಲೇ ಅಧಿಕರಣಂ ಉಪರಿ ಘನಪಾತನಂ ಸಂದಶಕಲುಂಚನಮ್ ।
ಲೋಹಂ ಲಗಿತ್ವಾ ಹುತವಹಸ್ಯ ಪಶ್ಯ ಪತಂತಂ ತ್ರೋಟನಮ್ ॥ ೧೧೪ ॥"

**ಅನ್ವಯಾರ್ಥ:–ಲೋಹಹಂ ಲಗ್ಗಿವಿ**— ಲೋಹ(ಕಬ್ಬಿಣ)ವನ್ನು ಸೇರಿ **ಹುಯವಹಹಂ**— ಅಗ್ನಿಗೆ **ತಲಿ ಅಹಿರಣಿ**— ಕೆಳಗಡೆ ಆಧಾರವನ್ನೂ **ವರಿ**— ಮೇಲಿನಿಂದ ಪಡಂತಉ— ಬೀಳುತ್ತಿರುವ **ಘಣವಡಣು**— ಘನ(ಚಮ್ಮಟಿಗೆ)ದ ಬೀಳುವಿಕೆ (ಆಘಾತ)ಯನ್ನೂ **ಸಂಡಸ್ಸಯಲುಂಚೋಡು**— ಇಕ್ಕುಳ(ಅಥವಾ ತಂಡಾಸ)ದಿಂದ ಎಳೆಯುವಿಕೆಯನ್ನೂ **ಪಿಕ್ಖು**— ನೋಡು.

**ಭಾವಾರ್ಥ.**— ಲೋಭಕಷಾಯದಿಂದುಂಟಾಗುವ ಹಾನಿಯನ್ನು ಅಗ್ನಿಯ ದೃಷ್ಟಾಂತದಿಂದ ವಿಶದೀಕರಿಸುತ್ತಾರೆ. ಕಮ್ಮಾರರು ಲೋಹಪಿಂಡವನ್ನು ಬೆಂಕಿಯಲ್ಲಿ ಕಾಯಿಸಿ ಇಕ್ಕುಳದಿಂದ ಹಿಡಿದು ಅದನ್ನು ದೃಢವಾದ ಆಧಾರ(ಅಡಿಗಲ್ಲು)ದ ಮೇಲಿಟ್ಟು ಚಮ್ಮಟಿಗೆಯಿಂದ ಹೊಡೆದು ಚೇಣದಿಂದ ತುಂಡುಮಾಡಿ ತಮಗೆ ಬೇಕಾದ ಆಕಾರಕ್ಕೆ ತರುತ್ತಾರೆ. ಹೀಗೆ ಲೋಹದ ಲೋಭದಿಂದ ಅದರೊಡನೆ ಸೇರಿಕೊಂಡಿರುವ(ದೇವತೆಯೆಂದು ಲೋಕಪ್ರಸಿದ್ಧವಾದ)ಅಗ್ನಿಯೂ ಚಮ್ಮಟ್ಟಿಗೆಯ ಹೊಡೆತಮೊದಲಾದುವುಗಳನ್ನನುಭವಿಸುತ್ತದೆ. ಅದೇ ಪ್ರಕಾರವಾಗಿ ಲೋಭಕಷಾಯದಿಂದ ಪಂಚೇಂದ್ರಿಯ ವಿಷಯಾಸಕ್ತಿಯುಳ್ಳವನಾದ ಹಾಗೂ ನಿರ್ಲೋಭಪರಮಾತ್ಮಭಾವನಾಶೂನ್ಯನಾದ ಜೀವನು ಪಂಚೇಂದ್ರಿಯಮಯವಾದ ಶರೀರದ ಸಂಬಂಧದಿಂದ ಘನಪಾತಾದಿ(ಚಮ್ಮಟಿಗೆ ಪೆಟ್ಟು ಮೊದಲಾದುವು)ಗಳಿಗೆ ಸಮಾನವಾದ ನಾರಕಾದಿ ಅನಂತದುಃಖಗಳನ್ನು ಬಹುಕಾಲ ಅನುಭವಿಸುತ್ತಾನೆ. ಅತಏವ ನಿರ್ಲೋಭಪರಮಾತ್ಮಭಾವನೆಯಿಂದ ಲೋಭಕಷಾಯವನ್ನು ತ್ಯಜಿಸಬೇಕೆಂದು ಭಾವವು.

**ಜೋಇಯ ಣೇಹು ಪರಿಚ್ಚಯಹಿ, ಣೇಹು ಣ ಭಲ್ಲಉ ಹೋಇ ।**
**ಣೇಹಾಸತ್ತಉ ಸಯಲು ಜಗು, ದುಕ್ಖು ಸಹಂತಉ ಜೋಇ ॥ ೧೧೫ ॥**

"ಯೋಗಿನ್ ಸ್ನೇಹಂ ಪರಿತ್ಯಜ ಸ್ನೇಹೋ ನ ಭದ್ರೋ ಭವತಿ ।
ಸ್ನೇಹಾಸಕ್ತಂ ಸಕಲಂ ಜಗತ್ ದುಃಖಂ ಸಹಮಾನಂ ಪಶ್ಯ ॥ ೧೧೫ ॥"

**ಅನ್ವಯಾರ್ಥ:— ಜೋಇಯ—** ಎಲೈ ಯೋಗಿಯೇ! **ಣೇಹು ಪರಿಚ್ಚಯಹಿ—** ಸ್ನೇಹ(ಪ್ರೇಮ, ಪ್ರೀತಿ)ವನ್ನು ಬಿಡು. **ಣೇಹು ಣ ಭಲ್ಲಉ ಹೋಇ—** ಸ್ನೇಹವು ಒಳ್ಳೆಯ(ಸಮೀಚೀನ)ದಾಗಿರುವುದಿಲ್ಲ **ಣೇಹಾಸತ್ತಉ—** ಸ್ನೇಹದಲ್ಲಾಸಕ್ತವಾದ **ಸಯಲುಜಗು—** ಸಮಸ್ತಲೋಕವು **ದುಕ್ಖು ಸಹಂತಉ—** ದುಃಖವನ್ನು ಸಹಿಸು(ಅನುಭವಿಸು)ತ್ತಿರುವುದನ್ನು **ಜೋಇ—** ನೋಡು

**ಭಾವಾರ್ಥ:—** ಈ ಸಂಸಾರಿಜೀವರು ಶುದ್ಧಾತ್ಮಭಾವನಾರಹಿತರಾಗಿರುವುದರಿಂದ ದೇಹಾದಿಗಳಲ್ಲಿ ಸ್ನೇಹವನ್ನು ತಾಳಿ ಅನೇಕದುಃಖಗಳನ್ನನುಭವಿಸುತ್ತಾರೆ. ಸ್ನೇಹವನ್ನು ತ್ಯಾಗಮಾಡಿರುವ ಜೀವರೇ ಸುಖಿಗಳಾಗಿರುತ್ತಾರೆ. ಹೀಗೆಂದು ಗ್ರಂಥಾಂತರದಲ್ಲಿಯೂ ಹೇಳಲ್ಪಟ್ಟಿದೆ:—**"ತಾವದೇವ ಸುಖೀ ಜೀವೋ ಯಾವನ್ನ ಸ್ನಿಹ್ಯತೇ ಕ್ವಚಿತ್ । ಸ್ನೇಹಾನುವಿದ್ಧಹೃದಯಂ ದುಃಖಮೇವ ಪದೇ ಪದೇ ॥"** ಅರ್ಥಾತ್ ಎಂದಿನವರೆಗೆ ಜೀವನು ಯಾವುದೊಂದು ವಿಷಯದಲ್ಲಿಯೂ ಸ್ನೇಹಪಡುವುದಿಲ್ಲವೋ ಅಂದಿನ ವರೆಗೆ ಮಾತ್ರ ಅವನು ಸುಖಿಯು. ಸ್ನೇಹದಿಂದ ಕೂಡಿದ (ಸ್ನೇಹಬದ್ಧವಾದ) ಹೃದಯವು ಪದೇಪದೇದುಃಖವನ್ನೇ ಅನುಭವಿಸುತ್ತದೆ. ಆದುದರಿಂದ ಯಾವುದೊಂದು ಪದಾರ್ಥದಲ್ಲಿಯೂ ಸ್ನೇಹವುಳ್ಳವನಾಗಬಾರದೆಂದಭಿಪ್ರಾಯವು ಇಲ್ಲಿ (ಪ್ರಕರಣಾನುಸಾರವಾಗಿ) ಭೇದಾಭೇದರತ್ನತ್ರಯರೂಪವಾದ ಮೋಕ್ಷಮಾರ್ಗದಿಂದ ವಿಮುಖನಾಗಿ ಮಿಥ್ಯಾತ್ವರಾಗಾದಿಗಳಲ್ಲಿ ಸ್ನೇಹವನ್ನು ಮಾಡಬಾರದೆಂದು ಭಾವವು.

**ಜಲಸಿಂಚಣು ಪಯಣಿದ್ದಲಣು, ಪುಣು ಪುಣು ಪೀಲಣದುಕ್ಖು ।**
**ಣೇಹಹಂ ಲಗ್ಗಿವಿ ತಿಲಣಿಯರು, ಜಂತಿ ಸಹಂತಉ ಪಿಕ್ಖು ॥ ೧೧೬ ॥**

"ಜಲಸಿಂಚನಂ ಪಾದನಿರ್ದಲನಂ ಪುನಃ ಪುನಃ ಪೀಡನದುಃಖಮ್ ।
ಸ್ನೇಹಂ ಲಗಿತ್ವಾ ತಿಲನಿಕರಂ ಯಂತ್ರೇಣ ಸಹಮಾನಂ ಪಶ್ಯ ॥ ೧೧೬ ॥"

**ಅನ್ವಯಾರ್ಥ:— ತಿಲಣಿಯರು—** ಎಳ್ಳುಗಳ ಸಮೂಹವು **ಣೇಹಹಂ ಲಗ್ಗಿವಿ—** ಸ್ನೇಹ(ಎಣ್ಣೆ)ವನ್ನು ಸೇರಿ ಅರ್ಥಾತ್ ಎಣ್ಣೆಯ ಸಂಬಂಧದಿಂದ **ಜಲಸಿಂಚಣು—** ನೀರಿನ ಸೇಚನೆ(ನೀರಿನಲ್ಲಿ ನೆನೆಸುವಿಕೆ)ಯನ್ನೂ **ಪಯಣಿದ್ದಲಣು—** ಕಾಲಿನ ತುಳಿಯುವಿಕೆ (ತಿಕ್ಕುವಿಕೆ)ಯನ್ನೂ **ಜಂತಿ—** ಯಂತ್ರ(ಗಾಣ)ದಲ್ಲಿ **ಪುಣು ಪುಣು—** ಬಾರಿಬಾರಿಗೂ **ಪೀಲಣದುಕ್ಖು—** ಪೀಡಿಸುವಿಕೆಯ ದುಃಖವನ್ನೂ **ಸಹಂತಉ—** ಸಹಿಸುತ್ತಿರುವುದನ್ನು **ಪಿಕ್ಖು—** ನೋಡು.

**ಭಾವಾರ್ಥ:—** ಸ್ನೇಹದಿಂದುಂಟಾಗುವ ಹಾನಿಯ ದೃಷ್ಟಾಂತಪೂರ್ವಕವರ್ಣನೆಯಿದು. "ಸ್ನೇಹ" ಎಂಬ ಶಬ್ದಕ್ಕೆ ಎಣ್ಣೆ (ಜಿಗುಟುಳ್ಳುದು)ಯೆಂದೂ ಅರ್ಥವಿರುತ್ತದೆ.

ಎಳ್ಳಿನಕಾಳಿನಲ್ಲಿ ಸ್ನೇಹ(ಎಣ್ಣೆ)ವಿರುವುದರಿಂದ ಅದು ಸ್ನೇಹವನ್ನು ಅರ್ಥಾತ್ ಸ್ನೇಹದ ಸಂಬಂಧವನ್ನು ಹೊಂದಿರುತ್ತದೆ. ಆದಕಾರಣ ಎಳ್ಳಿನ ರಾಶಿಯನ್ನು ಗಾಣಿಗರು (ಎಣ್ಣೆ ತೆಗೆಯುವುದಕ್ಕಾಗಿ) ನೀರಿನಿಂದ ನೆನೆಸಿ (ಅಥವಾ ನೀರು ತಣಿಸಿ) ಅದನ್ನು ಕಾಲಿನಿಂದ ತುಳಿದು ತಿಕ್ಕುತ್ತಾರೆ ಆ ಮೇಲೆ ಅದನ್ನು ಗಾಣಕ್ಕೆ ಹಾಕಿ ಬಾರಿಬಾರಿಗೆ ಹಿಂಡುತ್ತಾ ಅದರಿಂದ ಎಣ್ಣೆಯನ್ನು ತೆಗೆಯುತ್ತಾರೆ. ಸ್ನೇಹಯುಕ್ತನಾದ ಜೀವನನ್ನು ಈ ಎಳ್ಳಿನರಾಶಿಗೆ ಹೋಲಿಸಿದ್ದಾರೆ. ಹೇಗೆ ಎಳ್ಳಿನರಾಶಿಯು ಸ್ನೇಹ(ಎಣ್ಣೆ)ಯುಕ್ತವಾಗಿರುವುದರಿಂದ ನೀರಿನ ಸಿಂಚನ, ಕಾಲಿನ ತುಳಿತ ಹಾಗೂ ತೈಲಯಂತ್ರ(ಗಾಣ)ದಿಂದ ಪೀಡಿಸುವಿಕೆ ಮೊದಲಾದ ದುಃಖಗಳನ್ನನುಭವಿಸುತ್ತದೋ ಹಾಗೆಯೇ ಲೋಕದಲ್ಲಿ ಚಿದಾನಂದೈಕಸ್ವಭಾವವುಳ್ಳ ಪರಮಾತ್ಮತತ್ತ್ವವನ್ನು ತಿಳಿಯದೆ ಪಂಚೇಂದ್ರಿಯವಿಷಯಗಳಲ್ಲಾಸಕ್ತರೂ ಮಿಥ್ಯಾ ಮಾರ್ಗದಲ್ಲಿ ಪ್ರೀತಿ (ಸ್ನೇಹ)ಯುಳ್ಳವರೂ ಆದ ಜೀವರು ಇಹಪರಜನ್ಮಗಳಲ್ಲಿ ಚಿರಕಾಲ ಅನೇಕದುಃಖಗಳನ್ನನುಭವಿಸುತ್ತಾರೆಂದು ಭಾವವು.

**ತೇ ಚಿಯ ಧಣ್ಣಾ ತೇ ಚಿಯ, ಸಪ್ಪುರಿಸಾ ತೇ ಜಿಯಂತು ಜಿಯಲೋಏ।**
**ವೊದ್ದಹದಹಮ್ಮಿ ಪಡಿಯಾ, ತರಂತಿ ಜೇ ಚೇವ ಲೀಲಾಏ ॥ ೧೧೭ ॥**

"ತೇ ಚೈವ ಧನ್ಯಾಃ ತೇ ಚೈವ ಸತ್ಪುರುಷಾಃ ತೇ ಜೀವಂತು ಜೀವಲೋಕೇ ।
ಯೌವನದ್ರಹೇ[?] ಪತಿತಾಃ ತರಂತಿ ಯೇ ಚೈವ ಲೀಲಯಾ ॥ ೧೧೭ ॥"

**ಅನ್ವಯಾರ್ಥ:**— **ಜೇ**— ಯಾವ ಜೀವರು **ವೊದ್ದಹದಹಮ್ಮಿ**— ಯೌವನ (ತಾರುಣ್ಯ)ವೆಂಬ ದೊಡ್ಡ ಸರೋವರದಲ್ಲಿ **ಪಡಿಯಾ**-ಬಿದ್ದವರಾಗಿ **ಲೀಲಾಏ ಚೇವ**- ಲೀಲೆಯಿಂದಲೇ (ಕಷ್ಟವಿಲ್ಲದೆ, ಸುಲಭವಾಗಿ) **ತರಂತಿ**— ದಾಟುತ್ತಾರೋ **ತೇ ಚಿಯ**- ಅವರೇ (ಆ ಜೀವರೇ) **ಧಣ್ಣಾ**— ಧನ್ಯರು **ತೇ ಚಿಯ ಸಪ್ಪುರಿಸಾ**— ಅವರೇ ಸತ್ಪುರುಷರು **ತೇ**— ಆ ಜೀವರು **ಜಿಯಲೋಏ**— ಈ ಜೀವಲೋಕದಲ್ಲಿ **ಜಿಯಂತು** ಜೀವಿಸಲಿ (ಅಥವಾ ಜೀವಿಸುತ್ತಾರೆ)

**ಭಾವಾರ್ಥ:**— ಜೀವರಿಗೆ ಯೌವನಾವಸ್ಥೆಯಲ್ಲಿ ವಿಷಯಾಸಕ್ತಿಯು ಪ್ರಬಲ ವಾಗಿರುತ್ತದೆ. ಆದುದರಿಂದಲೇ ಯೌವನವು ಸರ್ವಾನರ್ಥಗಳಿಗೆ ಕಾರಣವಾದುದೆಂದು ಹೇಳುತ್ತಾರೆ. ಯಾವ ಜೀವರು ಇಂತಹ ಯೌವನಾವಸ್ಥೆಯಲ್ಲಿಯೂ ಪರಮಾತ್ಮಭಾವನೆ ಯಿಂದ ಕೂಡಿದವರಾಗಿ ವಿಷಯಾಭಿಲಾಷೆಯನ್ನು ಬಿಡುತ್ತಾರೆಯೋ ಅವರೇ ಈ ಜಗತಿ ನಲ್ಲಿ ಧನ್ಯರು. ಇದನ್ನೇ ಇಲ್ಲಿ ಆಲಂಕಾರಿಕವಾಗಿ ಪ್ರತಿಪಾದಿಸಿರುವರು ಅರ್ಥಾತ್ ಯಾವ ಜೀವರು ವಿಷಯಲಾಂಛಾರೂಪವಾದ ಸ್ನೇಹಜಲದ ಪ್ರವೇಶವಿಲ್ಲದುದೂ ಸಮ್ಯಗ್ದರ್ಶನ ಜ್ಞಾನಚಾರಿತ್ರಗಳೆಂಬ ಅಮೂಲ್ಯರತ್ನಗಳಿಂದ ತುಂಬಿದುದೂ ಆದ ನಿಜಶುದ್ಧಾತ್ಮಭಾವನೆ ಯೆಂಬ ಜಲಯಾನ(ದೋಣಿ)ದಿಂದ ಯೌವನವೆಂಬ ದೊಡ್ಡ ಜಲಾಶಯ(ಸರೋವರ)ನ್ನು ಸುಲಭವಾಗಿ ದಾಂಟುತ್ತಾರೋ ಅವರೇ ಧನ್ಯರು ಹಾಗೂ ಸತ್ಪುರುಷರು. ಅಂಥವರು ಲೋಕದಲ್ಲಿ ಚಿರಕಾಲ ಬಾಳಲೆಂದು ಭಾವವು.

**ಮೊಕ್ಖು ಜಿ ಸಾಹಿಉ ಜಿಣವರಹಿಂ, ಛಂಡಿವಿ ಬಹುವಿಹು ರಜ್ಜು ।**
**ಭಿಕ್ಖಭರೋಡಾ ಜೀವ ತುಹುಂ, ಕರಹಿ ಣ ಅಪ್ಪಉ ಕಜ್ಜು ॥ ೧೧೮ ॥**

"ಮೋಕ್ಷಃ ಏವ ಸಾಧಿತಃ ಜಿನವರ್ಯೈಃ ತ್ಯಕ್ತ್ವಾ ಬಹುವಿಧಂ ರಾಜ್ಯಮ್ ।
ಭಿಕ್ಷಾಭೋಜನ ಜೀವ ತ್ವಂ ಕರೋಷಿ ನ ಆತ್ಮೀಯಂ ಕಾರ್ಯಮ್ ॥ ೧೧೮ ॥"

**ಅನ್ವಯಾರ್ಥ — ಜಿಣವರಹಿಂ**–ಜಿನಶ್ರೇಷ್ಠ(ಜಿನೇಂದ್ರದೇವ)ರಿಂದ **ಬಹುವಿಹು ರಜ್ಜು**— ಅನೇಕವಿಧವಾದ ರಾಜ್ಯ(ರಾಜ್ಯವೈಭವ)ವನ್ನು **ಛಂಡವಿ**— ಬಿಟ್ಟು **ಮೊಕ್ಖು ಜಿ ಸಾಹಿಉ**— ಮೋಕ್ಷವೇ ಸಾಧಿಸಲ್ಪಟ್ಟಿತು **ಜೀವ**— ಎಲೈ ಜೀವನೇ! **ಭಿಕ್ಖ ಭರೋಡಾ**— ಭಿಕ್ಷೆಯಿಂದ ಭೋಜನಮಾಡುವ **ತುಹುಂ**— ನೀನು **ಅಪ್ಪಉ ಕಜ್ಜು**— ತನ್ನ ಕಾರ್ಯವನ್ನು ಅರ್ಥಾತ್ ಆತ್ಮಕಲ್ಯಾಣದ ಕಾರ್ಯವನ್ನು **ಕರಹಿ ಣ** — ಮಾಡು ವುದಿಲ್ಲ.

**ಭಾವಾರ್ಥಃ** — ತೀರ್ಥಂಕರವರಮದೇವರು ರಾಜಮಂತ್ರಿಸೇನಾದಿ-ಸಪ್ತಾಂಗ ವುಳ್ಳುದೂ ಉತ್ಕೃಷ್ಟವೂ ಆದ ರಾಜ್ಯವಿಭೂತಿಯನ್ನು ತೊರೆದು ಆತ್ಮಹಿತಸಾಧಕರಾಗಿ **"ನಿರವಶೇಷನಿರಾಕೃತಕರ್ಮಕಲಂಕಸ್ಯಾತ್ಮನ ಆತ್ಯಂತಿಕಸ್ವಾಭಾವಿಕಜ್ಞಾನಾದಿಗು ಣಾಸ್ಪದಮವಸ್ಥಾಂತರಂ ಮೋಕ್ಷಃ"** ಅರ್ಥಾತ್ ನಿಶ್ಶೇಷ(ಸಂಪೂರ್ಣ)ವಾಗಿ ನಾಶ ಮಾಡಲ್ಪಟ್ಟ ಕರ್ಮರೂಪವಾದ ಕಲಂಕವುಳ್ಳ ಆತ್ಮನ ಸ್ವಾಭಾವಿಕವೂ ಜ್ಞಾನಾದಿಗುಣ ಗಳಿಗೆ ಆಸ್ಪದಭೂತವೂ ಕೊನೆಯದೂ ಆದ ಅವಸ್ಥಾಂತರ(ಸಂಸಾರಾವಸ್ಥೆಯಿಂದ ಭಿನ್ನವಾದ ಅವಸ್ಥೆ) ರೂಪವಾದ ಮೋಕ್ಷವನ್ನು ಸಾಧಿಸಿದರು. ಆದರೆ ಜೀವನೇ! ನೀನು ದರಿದ್ರನು, ಭಿಕ್ಷಾಭೋಜಿಯು ಅರ್ಥಾತ್ ಭಿಕ್ಷಾಟನೆಯಿಂದ ಭೋಜನ ಮಾಡುವವನು. ತೀರ್ಥಂಕರರು ಮೊದಲಾದ ಮಹಾಪುರುಷರು ಅತುಲಸಂಪತ್ತಿ ಯನ್ನೂ ತೃಣಸಮಾನವನ್ನಾಗಿ ತಿಳಿದು ನಿರ್ಗ್ರಂಥ (ಪರಿಗ್ರಹರಹಿತ)ರಾಗಿ ಆತ್ಮಕಲ್ಯಾಣ ವನ್ನು ಸಾಧಿಸುತ್ತಿರಲು ನೀನು ನಿರ್ಧನನಾಗಿದ್ದೂ ಆತ್ಮಕಲ್ಯಾಣದ ಕಾರ್ಯದಲ್ಲೇಕೆ ಪ್ರವರ್ತಿಸುವುದಿಲ್ಲ? ಹೀಗೆ ಆತ್ಮಹಿತಸಾಧನೆಯಿಂದ ವಿಮುಖನಾಗುವುದು ಸರ್ವಥಾ ಅನುಚಿತವು. ಅತಏವ ನೀನು ಆ ಮಹಾತ್ಮರುಗಳಂತೆಯೇ ಬಾಹ್ಯಾಭ್ಯಂತರಪರಿಗ್ರಹ ಗಳನ್ನು ತೊರೆದು ವೀತರಾಗನಿರ್ವಿಕಲ್ಪಸಮಾಧಿಯಲ್ಲಿ ಮಗ್ನನಾಗಿ ವಿಶಿಷ್ಟತಪಶ್ಚರಣೆ ಯಿಂದ ಜ್ಞಾನಾವರಣಾದ್ಯಷ್ಟಕರ್ಮಗಳನ್ನು ನಿರ್ಮೂಲಗೊಳಿಸಿ ಪರಮಪುರುಷಾರ್ಥ ವಾದ ಮೋಕ್ಷವನ್ನು ಸಾಧಿಸಬೇಕೆಂದು ಭಾವವು.

**ಪಾವಹಿ ದುಕ್ಖು ಮಹಂತು ತುಹುಂ, ಜಿಯ ಸಂಸಾರಿ ಭಮಂತು ।**
**ಅಟ ವಿ ಕಮ್ಮಇಂ ಣಿದ್ದಲಿವಿ, ವಚ್ಚಹಿ ಮುಕ್ಖು ಮಹಂತು ॥ ೧೧೯ ॥**

"ಪ್ರಾಪ್ನೋಷಿ ದುಃಖಂ ಮಹತ್ ತ್ವಂ ಜೀವ ಸಂಸಾರೇ ಭ್ರಮನ್ ।
ಅಷ್ಟಾಪಿ ಕರ್ಮಾಣಿ ನಿರ್ದಲ್ಯ ವ್ರಜ ಮೋಕ್ಷಂ ಮಹಾಂತಮ್ ॥ ೧೧೯ ॥"

**ಅನ್ವಯಾರ್ಥಃ— ಜಿಯ**— ಎಲೈ ಜೀವನೇ! **ತುಹುಂ**— ನೀನು **ಸಂಸಾರಿ ಭಮಂತು**— ಸಂಸಾರದಲ್ಲಿ ಭ್ರಮಿಸುತ್ತಿರುವವನಾಗಿ **ದುಕ್ಖು ಮಹಂತು**— ಹೆಚ್ಚಾದ

ದುಃಖವನ್ನು **ಪಾವಹಿ**— ಹೊಂದುತ್ತಿ. ಆದುದರಿಂದ **ಅಟ್ಠ ವಿ ಕಮ್ಮಾಇಂ**— ಜ್ಞಾನಾವರಣಾದ್ಯಷ್ಟಕರ್ಮಗಳನ್ನೂ **ಣಿದ್ದಲಿವಿ**- ನಿರ್ಮೂಲಿಸಿ(ನಾಶಮಾಡಿ) **ಮುಕ್ಖ ಮಹಂತು**— ಸರ್ವೋತ್ತಮವಾದ ಮೋಕ್ಷವನ್ನು **ಪಚ್ಚಹಿ**— ಹೊಂದು.

**ಭಾವಾರ್ಥ:**— ಎಲೈ ಜೀವನೇ! ನೀನು ಚತುರ್ಗತಿಭ್ರಮಣರೂಪವೂ ದ್ರವ್ಯಕ್ಷೇತ್ರ ಕಾಲಭವಭಾವಭೇದದಿಂದ ಪಂಚಪ್ರಕಾರವಾದುದೂ ಆದ ಸಂಸಾರದಲ್ಲಿ ಕರ್ಮವಶದಿಂದ ಭ್ರಮಿಸುತ್ತಿರುವವನಾಗಿ ನಿರಂತರ ಅಸಹ್ಯದುಃಖಗಳನ್ನನುಭವಿಸುತ್ತಿರುವೆ ಆದ ಕಾರಣ ನೀನು ಶುದ್ಧಾತ್ಮಾವಲಂಬನದ ಬಲದಿಂದ ಜ್ಞಾನಾವರಣಾದ್ಯಷ್ಟವಿಧಕರ್ಮಗಳನ್ನು ನಿರ್ಮೂಲಗೈದು ಸ್ವಾತ್ಮೋಪಲಬ್ಧಿರೂಪವಾದ ಸಿದ್ಧಿ(ಮೋಕ್ಷ)ಯನ್ನು ಹೊಂದುವವನಾಗು. ಮುಕ್ತಿ ಅಥವಾ ಸ್ವಾತ್ಮೋಪಲಬ್ಧಿರೂಪವಾದ ಸಿದ್ಧಿಯ ಸ್ವರೂಪವನ್ನು ಶ್ರೀ ಪೂಜ್ಯಪಾದಾಚಾರ್ಯರು ಹೀಗೆ ಹೇಳಿರುವರು —"ಸಿದ್ಧಿಃ **ಸ್ವಾತ್ಮೋಪಲಬ್ಧಿಃ ಪ್ರಗುಣಗುಣಗಣಾಚ್ಛಾದಿದೋಷಾಪಹಾರಾ-। ದ್ಯೋಗ್ಯೋಪಾದಾನಯುಕ್ತ್ಯಾ ದೃಷದ ಇಹ ಯಥಾ ಹೇಮಭಾವೋಪಲಬ್ಧಿಃ ॥**" ಅಂದರೆ ಯೋಗ್ಯವಾದ ಉಪಾದಾನ (ದ್ರಾವಕಾದಿ)ಗಳ ನೇರಿಸುವಿಕೆಯಿಂದ ಲೋಕದಲ್ಲಿ ಬಂಗಾರದ ಕಲ್ಲಿನಲ್ಲಿರುವ ಬಂಗಾರವು ಬೇರೆಯಾಗಿ ದೊರಕುವಂತೆ ಆತ್ಮನ ಸ್ವಾಭಾವಿಕ ಅನಂತಜ್ಞಾನಾದಿಗುಣಗಳನ್ನಾವರಿಸಿರುವ ಜ್ಞಾನಾವರಣಾದಿದೋಷಗಳನ್ನು ನಾಶಮಾಡುವುದರಿಂದ (ಕರ್ಮಕ್ಷಯದಿಂದ) ಅನಂತಜ್ಞಾನಾದಿಸ್ವರೂಪದ ಪ್ರಾಪ್ತಿಯಾಗುವುದು. ಅದೇ ಸ್ವಾತ್ಮೋಪಲಬ್ಧಿರೂಪವಾದ ಸಿದ್ಧಿಯು ಅರ್ಥಾತ್ ಮುಕ್ತಿಯು ಸಾರಾಂಶತಃ ಆತ್ಮನು ಕರ್ಮಮಲಗಳಿಂದ ಬಿಡುಗಡೆಯನ್ನು ಹೊಂದುವುದೇ ಸಿದ್ಧಿ ಅಥವಾ ಮೋಕ್ಷವು. ಅಂತಹ ಮೋಕ್ಷವೇ ಸರ್ವಥಾ ಉಪಾದೇಯವಾಗಿರುತ್ತದೆಂದಭಿಪ್ರಾಯವು.

**ಜಿಯ ಅಣುಮಿತ್ತು ವಿ ದುಕ್ಖಡಾ, ಸಹಣ ಣ ಸಕ್ಕಹಿ ಜೋಇ ।**
**ಚಉಗಇದುಕ್ಖಹಂ ಕಾರಣಇಂ, ಕಮ್ಮಾಇಂ ಕುಣಹಿ ಕಿಂ ತೋಇ ॥೧೨೦॥**

"ಜೀವ ಅಣುಮಾತ್ರಾಣ್ಯಪಿ ದುಃಖಾನಿ ಸೋಢುಂ ನ ಶಕ್ನೋಷಿ ಪಶ್ಯ ।
ಚತುರ್ಗತಿದುಃಖಾನಾಂ ಕಾರಣಾನಿ ಕರ್ಮಾಣಿ ಕರೋಷಿ ಕಿಂ ತಥಾಪಿ ॥೧೨೦॥"

**ಅನ್ವಯಾರ್ಥ:**— **ಜಿಯ**— ಎಲೈ ಜೀವನೇ! **ಜೋಇ**— ನೋಡು, ನೀನು **ಅಣುಮಿತ್ತು ವಿ ದುಕ್ಖಡಾ**— ಅಣುಮಾತ್ರ(ಅತ್ಯಲ್ಪ)ವಾದ ದುಃಖವನ್ನೂ **ಸಹಣ ಣ ಸಕ್ಕಹಿ**— ಸಹಿಸಲು ಸಮರ್ಥನಾಗಿರುವುದಿಲ್ಲ. **ತೋಇ**— ಹಾಗಾದರೂ **ಚಉಗಇದುಕ್ಖಹಂ ಕಾರಣಇಂ**— ಚತುರ್ಗತಿಗಳ ಸಂಬಂಧವಾದ ದುಃಖಗಳಿಗೆ ಕಾರಣಗಳಾದ **ಕಮ್ಮಾಇಂ ಕಿಂ ಕುಣಹಿ**— ಕರ್ಮಗಳನ್ನೇಕೆ ಮಾಡುತ್ತಿರುವೆ?

**ಭಾವಾರ್ಥ:**— ಜೀವನೇ! ನೀನು ಅಲ್ಪದುಃಖವನ್ನೂ ಸಹಿಸಲಸಮರ್ಥನಾಗಿರುವೆ, ಹಾಗೂ ದುಃಖಗಳಿಂದ ಬಹಳವಾಗಿ ಹೆದರುತ್ತಿರುವೆ. ಹೀಗಿದ್ದರೂ ನರನಾರಕಾದಿದುಃಖಗಳಿಗೆ ಕಾರಣಗಳಾದ ಕರ್ಮಗಳನ್ನೇಕೆ ಮಾಡುತ್ತಿರುವೆ. ಆದುದರಿಂದ ಕರ್ಮಗಳೇ

ದುಃಖದ ಕಾರಣಗಳೆಂದರಿತು ಕರ್ಮಾಸ್ರವಪ್ರತಿಬಂಧಕವೂ ರಾಗಾದಿವಿಕಲ್ಪಜಾಲರಹಿತವೂ ಆದ ನಿಜಶುದ್ಧಾತ್ಮಭಾವನೆಯನ್ನೇ ನಿರಂತರ ಮಾಡುತ್ತಿರುವವನಾಗು ಇದರಿಂದ ನೀನು ದುಃಖಕಾರಣಗಳಾದ ಕರ್ಮಗಳಿಂದ ಬಿಡಲ್ಪಟ್ಟವನಾಗಿ ಶಾಶ್ವತಸುಖವನ್ನು ಪಡೆಯುವೆ. ಹೀಗೆ ಆಚಾರ್ಯರು ಶಿಷ್ಯನಿಗೆ ಉಪದೇಶವೀಯುತ್ತಾರೆಂದು ಭಾವವು.

**ಧಂಧಇ ಪಡಿಯಉ ಸಯಲು ಜಗು, ಕಮ್ಮಇಂ ಕರಇ ಅಯಾಣಿ ।**
**ಮೊಕ್ಖಹಂ ಕಾರಣು ಎಕ್ಕು ಖಣು, ಣ ವಿ ಚಿಂತಇ ಅಪ್ಪಾಣು ॥ ೧೨೧ ॥**

"ಧಾಂಧೇ[?] ಪತಿತಂ ಸಕಲಂ ಜಗತ್ ಕರ್ಮಾಣಿ ಕರೋತಿ ಅಜ್ಞಾನಿ ।
ಮೋಕ್ಷಸ್ಯ ಕಾರಣಂ ಏಕ ಕ್ಷಣಂ ನೈವ ಚಿಂತಯತಿ ಆತ್ಮಾನಮ್ ॥ ೧೨೧ ॥"

**ಅನ್ವಯಾರ್ಥ:—ಧಂಧಇ ಪಡಿಯಉ**—ಜಗತ್ತಿನ ಬಾಹ್ಯವ್ಯವಹಾರಗಳಲ್ಲಿ ಅಥವಾ ಆರ್ತರೌದ್ರಾದಿದುರ್ಧ್ಯಾನದಲ್ಲಿ ಬಿದ್ದಿರುವ (ಆಸಕ್ತವಾಗಿರುವ) **ಅಯಾಣಿ**—ಅಜ್ಞಾನಿಯಾದ **ಸಯಲು ಜಗು**—ಸಕಲಜಗತ್ತು **ಕಮ್ಮಇಂ ಕರಇ**—ಜ್ಞಾನಾವರಣಾದಿಕರ್ಮಗಳನ್ನು ಮಾಡುತ್ತದೆ. **ಮೊಕ್ಖಹಂ ಕಾರಣು**—ಮೋಕ್ಷಕ್ಕೆ ಕಾರಣನಾದ **ಅಪ್ಪಾಣು**—ಆತ್ಮ(ಶುದ್ಧಾತ್ಮ)ನನ್ನು **ಎಕ್ಕು ಖಣು**—ಒಂದು ಕ್ಷಣವೂ **ಣವಿ ಚಿಂತಇ**— ಚಿಂತಿಸು(ಧ್ಯಾನಿಸು)ವುದಿಲ್ಲ.

**ಭಾವಾರ್ಥ:**—ಭೇದವಿಜ್ಞಾನರಹಿತರಾದ ಜಗತ್ತಿನ ಜೀವರು ಶುದ್ಧಾತ್ಮಭಾವನೆಯಿಂದ ಪರಾಙ್ಮುಖರಾಗಿರುವುದರಿಂದ ವ್ಯಾವಹಾರಿಕವಿಷಯಗಳಲ್ಲೇ ಮಗ್ನರಾಗಿ ಆರ್ತರೌದ್ರಾದಿದುರ್ಧ್ಯಾನಗಳಿಂದ ಕರ್ಮಬಂಧವನ್ನು ಮಾಡಿಕೊಳ್ಳುತ್ತಿರುತ್ತಾರೆ ಅಂತಹ ಅಜ್ಞಾನಿಜೀವರು ಕ್ಷಣಕಾಲವಾದರೂ ಅನಂತಜ್ಞಾನಾದಿಸ್ವರೂಪವುಳ್ಳ ಮೋಕ್ಷಕ್ಕೆ ಕಾರಣವಾದ ನಿಜಶುದ್ಧಾತ್ಮಚಿಂತನೆ(ಧ್ಯಾನ)ಯನ್ನು ಮಾಡಲಾರರು ಅಥವಾ ಆತ್ಮನ ವಿಚಾರವನ್ನೇ ಮಾಡಲಾರರು

**ಜೋಣಿಲಕ್ಖಇಂ ಪರಿಭಮಇ, ಅಪ್ಪಾ ದುಕ್ಖು ಸಹಂತು ।**
**ಪುತ್ತಕಲತ್ತಹಿಂ ಮೋಹಿಯಉ, ಜಾವ ಣ ಣಾಣು ಮಹಂತು ॥ ೧೨೨ ॥**

"ಯೋನಿಲಕ್ಷಾಣಿ ಪರಿಭ್ರಮತಿ ಆತ್ಮಾ ದುಃಖಂ ಸಹಮಾನಃ ।
ಪುತ್ರಕಲತ್ರೈಃ ಮೋಹಿತಃ ಯಾವನ್ನ ಜ್ಞಾನಂ ಮಹತ್ ॥ ೧೨೨ ॥"

**ಅನ್ವಯಾರ್ಥ:—ಜಾವ**—ಎಂದಿನವರೆಗೆ ಜೀವನಲ್ಲಿ **ಣಾಣುಣ ಮಹಂತು**—ಹೆಚ್ಚಾದ (ಮಹತ್ತರವಾದ, ಶ್ರೇಷ್ಠವಾದ) ಜ್ಞಾನವಿರುವುದಿಲ್ಲವೋ ಅಂದಿನವರೆಗೆ **ಅಪ್ಪಾ**—ಈ ಜೀವನು **ಪುತ್ತಕಲತ್ತಹಿಂ**—ಪುತ್ರಕಲತ್ರಾದಿಗಳಿಂದ **ಮೋಹಿಯಉ**—ಮೋಹಿತ (ಮೋಹಗೊಂಡವ)ನಾಗಿ **ದುಕ್ಖುಸಹಂತು**—ಅನೇಕ ದುಃಖಗಳನ್ನು ಸಹಿಸು (ಅನುಭವಿಸು)ತ್ತಿರುವವನಾಗಿ **ಜೋಣಿಲಕ್ಖಇಂ**—ಲಕ್ಷ (ಎಂಭತ್ತನಾಲ್ಕು ಲಕ್ಷ) ಯೋನಿಗಳಲ್ಲಿ **ಪರಿಭಮಇ**—ಪರಿಭ್ರಮಿಸುತ್ತಾನೆ.

**ಭಾವಾರ್ಥ:**— ಮೋಕ್ಷಕ್ಕೆ ಸಾಧನವಾದ ವೀತರಾಗನಿರ್ವಿಕಲ್ಪಸ್ವಸಂವೇದನ ಜ್ಞಾನರಹಿತನಾದ ಜೀವನು ಎಂದಿನ ತನಕ ಅಂತಹ ಪರಮೋತ್ಕೃಷ್ಟವಾದ ಜ್ಞಾನ ವನ್ನು ಪಡೆಯುವುದಿಲ್ಲವೋ ಅಂದಿನ ತನಕ ವೀತರಾಗ ಪರಮಾನಂದ ರೂಪವೂ ನಿರ್ವ್ಯಾಕುಲವೂ ಆದ ಅತೀಂದ್ರಿಯ ಸುಖದಿಂದ ವಂಚಿತನಾಗಿ ಹಾಗೂ ತನ್ನ ತಂದೆ, ತಾಯಿ, ಬಂಧು, ಬಳಗ, ಹೆಂಡತಿ, ಮಕ್ಕಳು ಮೊದಲಾದವರಲ್ಲಿ ಮೋಹ (ಮಮತೆ)ವುಳ್ಳವನಾಗಿ ಎಂಭತ್ತನಾಲ್ಕು ಲಕ್ಷ ಯೋನಿ (ಉತ್ಪತ್ತಿಸ್ಥಾನ)ಗಳಲ್ಲಿ ಅನೇಕ ಪ್ರಕಾರವಾದ ಶಾರೀರಿಕ ಮಾನಸಿಕ ದುಃಖಗಳನ್ನು ಅನುಭವಿಸುವವನಾಗಿ ಭ್ರಮಿಸು ತ್ತಿರುತ್ತಾನೆ. ಹೀಗೆ ಅಜ್ಞಾನ (ಪೂರ್ವೋಕ್ತ ಸ್ವಸಂವೇದನಜ್ಞಾನದ ಅಭಾವ)ವೇ ಸಂಸಾರಪರಿಭ್ರಮಣೆಗೆ ಕಾರಣವಾಗಿರುವುದರಿಂದ ಆ ಜ್ಞಾನವನ್ನೇ ನಿರಂತರ ಆರಾಧಿಸ (ಭಾವಿಸ)ಬೇಕೆಂದು ತಾತ್ಪರ್ಯವು.

**ಜೀವ ಮ ಜಾಣಹಿ ಅಪ್ಪಣಉಂ, ಘರು ಪರಿಯಣು ತಣು ಇಟ್ಠು ।**
**ಕಮ್ಮಾಯತ್ತಉ ಕಾರಿಮಉ, ಆಗಮಿ ಜೋಇಹಿಂ ದಿಟ್ಠು ॥ ೧೨೩ ॥**

"ಜೀವ ಮಾ ಜಾನೀಹಿ ಆತ್ಮೀಯಂ ಗೃಹಂ ಪರಿಜನಂ ತನುಃ ಇಷ್ಟಮ್ ।
ಕರ್ಮಾಯತ್ತಂ ಕೃತ್ರಿಮಂ ಆಗಮೇ ಯೋಗಿಭಿಃ ದೃಷ್ಟಮ್ ॥ ೧೨೩ ॥

**ಅನ್ವಯಾರ್ಥ:**— **ಜೀವ**— ಎಲೈ ಜೀವನೇ! **ಘರು**— ಮನೆ **ಪರಿಯಣು**— ಪರಿಜನ (ಪರಿವಾರ) **ತಣು**— **ಶರೀರ ಇಟ್ಠು**— ಇಷ್ಟವಸ್ತು (ಅಥವಾ ಇಷ್ಟಮಿತ್ರಾದಿ ಗಳು) ಇವೆಲ್ಲವನ್ನೂ **ಅಪ್ಪಣಉಂ ಮ ಜಾಣಹಿ**— ತನ್ನದನ್ನಾಗಿ ತಿಳಿಯಬೇಡ. ಏಕೆಂದರೆ, ಇದೆಲ್ಲವೂ **ಕಮ್ಮಾಯತ್ತಉ**— ಕರ್ಮಾಧೀನವಾದುದೆಂದು ಮತ್ತು **ಕಾರಿಮಉ**— ಕೃತ್ರಿಮ (ನಶ್ವರ)ವಾದುದೆಂದು **ಜೋಇಹಿಂ**— ಯೋಗಿಗಳಿಂದ **ಆಗಮಿ**— ಪರಮಾಗಮನ (ಸಿದ್ಧಾಂತ, ಶಾಸ್ತ್ರ)ದಲ್ಲಿ **ದಿಟ್ಠು**— ಕಾಣಲ್ಪಟ್ಟಿದೆ.

**ಭಾವಾರ್ಥ:**— ಜೀವನಿಗೆ ಈ ಮನೆ, ಪರಿಜನ, ದೇಹಾದಿಗಳ ಸಂಬಂಧವು ಶುದ್ಧಚೇತನಸ್ವಭಾವವುಳ್ಳ ಹಾಗೂ ಅಮೂರ್ತನಾದ ಆತ್ಮನಿಂದ ಭಿನ್ನಗಳಾದ ಶುಭಾ ಶುಭಕರ್ಮಗಳ ಉದಯದಿಂದ ಉಂಟಾದುದು ಮತ್ತು ಶುದ್ಧಾತ್ಮದ್ರವ್ಯಕ್ಕಿಂತ ವಿಪ ರೀತವೂ ಕೃತ್ರಿಮ(ಸ್ವಾಭಾವಿಕವಲ್ಲದುದು)ವೂ ಆಗಿರುವುದರಿಂದ ವಿನಶ್ವರವಾದುದು. ಈ ಪ್ರಕಾರವಾದ ದೇಹಾದಿಪರದ್ರವ್ಯಗಳ ಸ್ವರೂಪವನ್ನು ಪರಮಜ್ಞಾನಸಂಪನ್ನರಾದ ಪರಮಯೋಗಿಗಳು ವೀತರಾಗಸರ್ವಜ್ಞಪ್ರಣೀತವಾದ ಪರಮಾಗಮದಿಂದ ತಿಳಿದಿರು ವರು. ಅತಏವ ಜೀವನೇ! ನೀನು ಆತ್ಮಭಿನ್ನಗಳಾದ ಈ ಗೃಹಪರಿಜನದೇಹಾದಿಗಳಲ್ಲಿ ಎಂದೂ ಆತ್ಮೀಯತ್ವೆ(ತನ್ನದೆಂಬ ಭಾವ)ಯನ್ನು ಹೊಂದಬೇಡ. ಇವೆಲ್ಲವೂ ತನ್ನಿಂದ ಬೇರೆಯಾದುವುಗಳು ಹಾಗೂ ಅನಿತ್ಯವಾದುವುಗಳೆಂದು ತಿಳಿದು ಗೃಹದೇಹಾದಿಗಳ ಮಮತೆಯನ್ನು ತೊರೆದು ನಿತ್ಯಾನಂದರೂಪವಾದ ನಿಜಶುದ್ಧಾತ್ಮಸ್ವಭಾವದ ಭಾವನೆ ಯಲ್ಲಿ ನಿರತನಾಗೆಂದು ಭಾವವು.

**ಮುಕ್ಖು ಣ ಪಾವಹಿ ಜೀವ ತುಹುಂ, ಘರು ಪರಿಯಣು ಚಿಂತಂತು ।**
**ತೋ ವರಿ ಚಿಂತಹಿ ತಉ ಜಿ ತಉ, ಪಾವಹಿ ಮೊಕ್ಖು ಮಹಂತು ॥೧೨೪॥**

"ಮೋಕ್ಷಂ ನ ಪ್ರಾಪ್ನೋಷಿ ಜೀವ ತ್ವಂ ಗೃಹಂ ಪರಿಜನಂ ಚಿಂತಯನ್ ।
ತತಃ ಪರಂ ಚಿಂತಯ ತಪಃ ಏವ ತಪಃ ಪ್ರಾಪ್ನೋಷಿ ಮೋಕ್ಷಂ
ಮಹಾಂತಮ್ ॥ ೧೨೪ ॥"

**ಅನ್ವಯಾರ್ಥ:—ಜೀವ**—ಎಲೈ ಜೀವನೇ! **ತುಹುಂ**—ನೀನು **ಘರು ಪರಿಯಣು**—ಮನೆ ಪರಿಜನ ಇತ್ಯಾದಿಗಳನ್ನು **ಚಿಂತಂತು**—ಚಿಂತಿಸುವವನಾಗಿ **ಮುಕ್ಖು ಣ ಪಾವಹಿ**—ಮೋಕ್ಷವನ್ನು ಹೊಂದುವುದಿಲ್ಲ(ಹೊಂದಲಾರೆ) **ತೋ**—ಆದುದರಿಂದ **ವರಿ**—ಉತ್ತಮವಾದ **ತಉ ಜಿ ತಉ**—ತಪಸ್ಸೇ ತಪಸ್ಸನ್ನು (ಬಾರಿಬಾರಿಗೆ) **ಚಿಂತಹಿ**—ಚಿಂತಿಸು. ಏಕೆಂದರೆ, ಆ ತಪಸ್ಸಿನಿಂದಲೇ **ಮೊಕ್ಖು ಮಹಂತು**—ಉತ್ತಮವಾದ ಮೋಕ್ಷವನ್ನು **ಪಾವಹಿ**—ಹೊಂದುತ್ತಿ(ಹೊಂದುವೆ)

**ಭಾವಾರ್ಥ·**—ಗೃಹಾದಿಪರವಸ್ತುಗಳನ್ನೇ ಚಿಂತಿಸುತ್ತಿರುವ ನೀನು ಕರ್ಮಕಲಂಕರಹಿತವೂ ಕೇವಲಜ್ಞಾನಾದ್ಯನಂತಗುಣಸಹಿತವೂ ಆದ ಮೋಕ್ಷವನ್ನೆಂದೂ ಪಡೆಯಲಾರೆ ಮಾತ್ರವಲ್ಲದೆ ಮೋಕ್ಷಮಾರ್ಗವಾದ ನಿಶ್ಚಯವ್ಯವಹಾರರತ್ನತ್ರಯವನ್ನೂ ಪಡೆಯಲಾರೆ. ಈ ಗೃಹಾದಿಗಳ ಚಿಂತನೆಯಿಂದ ಭವಕಾನನದಲ್ಲಿಯೇ ಭ್ರಮಿಸುತ್ತಿರಬೇಕಾಗುವುದು ಅತಏವ ಗೃಹಾದಿಪರವಸ್ತುಗಳ ಚಿಂತನೆಯನ್ನು ಸರ್ವಥಾ ತ್ಯಾಗಮಾಡಿ ಬಾಹ್ಯಾಭ್ಯಂತರಭೇದದಿಂದ ಹನ್ನೆರಡುಪ್ರಕಾರವಾದ ತಪಶ್ಚರಣೆಯನ್ನೇ ಬಾರಿಬಾರಿಗೆ ಚಿಂತಿಸು. ಹಾಗೂ ಅದನ್ನೇ ಆಚರಿಸು ಏಕೆಂದರೆ ಈ ತಪಶ್ಚರಣೆಯಿಂದಲೇ ನೀನು ತೀರ್ಥಂಕರಪರಮದೇವರೇ ಮೊದಲಾದ ಮಹಾಪುರುಷರಿಂದ ಆಶ್ರಯಿಸಲ್ಪಟ್ಟಿರುವುದರಿಂದಸರ್ವೋತ್ಕೃಷ್ಟವೂ ಅನುಪಮವೂ ವೀತರಾಗಪರಮಾನಂದರೂಪವೂ ಆದ ಮೋಕ್ಷಸುಖವನ್ನು ಪಡೆಯುವೆ. ಇಲ್ಲಿ ಶುದ್ಧಾತ್ಮಭಾವನಾರೂಪ ನಿಶ್ಚಯತಪವು ಉಪಾದೇಯವಾಗಿರುತ್ತದೆಂದು ತಾತ್ಪರ್ಯವು.

**ಮಾರಿವಿ ಜೀವಹಂ ಲಕ್ಖಡಾ, ಜಂ ಜಿಯ ಪಾಉ ಕರೀಸಿ ।**
**ಪುತ್ತಕಲತ್ತಹಂ ಕಾರಣಇಂ, ತಂ ತುಹುಂ ಏಕ್ಕು ಸಹೀಸಿ ॥ ೧೨೫ ॥**

"ಮಾರಯಿತ್ವಾ ಜೀವಾನಾಂ ಲಕ್ಷಾಣಿ ಯತ್ ಜೀವ ಪಾಪಂ ಕರಿಷ್ಯಸಿ ।
ಪುತ್ರಕಲತ್ರಾಣಾಂ ಕಾರಣೇನ ತತ್ ತ್ವಂ ಏಕಃ ಸಹಿಷ್ಯಸೇ ॥ ೧೨೫ ॥"

**ಅನ್ವಯಾರ್ಥ:—ಜಿಯ**—ಎಲೈ ಜೀವನೇ! **ಪುತ್ತಕಲತ್ತಹಂ ಕಾರಣಇಂ**—ಪುತ್ರಕಲತ್ರಾದಿಗಳ ಕಾರಣದಿಂದ **ಜೀವಹಂಲಕ್ಖಡಾ**—ಜೀವರುಗಳ ಲಕ್ಷಗಳನ್ನು ಅರ್ಥಾತ್ ಲಕ್ಷಾಂತರಜೀವರುಗಳನ್ನು **ಮಾರಿವಿ**—ಹಿಂಸಿಸಿ **ಜಂ ಪಾಉ ಕರೀಸಿ**—ಯಾವಪಾಪವನ್ನು ಮಾಡುವೆಯೋ **ತಂ**—ಅದನ್ನು ಅರ್ಥಾತ್ ಆ ಪಾಪದ ಫಲವನ್ನು

**ತುಹುಂ**— ನೀನು **ಎಕ್ಕು ಸಹೀಸಿ**— ಏಕಾಕಿಯಾಗಿ (ಒಬ್ಬನೇ) ನಹಿಸುವೆ ಅರ್ಥಾತ್ ಅನುಭವಿಸುವೆ

**ಭಾವಾರ್ಥ:**— ಜೀವನೇ! ನೀನು ಅಜ್ಞಾನದಿಂದ (ಭೇದಜ್ಞಾನರಹಿತನಾಗಿ) ವುತ್ರ, ಕಲತ್ರ, ಬಂಧು, ಬಾಂಧವರು, ವರಿಜನರು ಮೊದಲಾದವರು ಆತ್ಮೀಯರೆಂದು ತಿಳಿದು ಅವರಿಗಾಗಿ ಜೀವಹಿಂನಾದಿ(ದ್ರವ್ಯ-ಭಾವಹಿಂನಾದಿ) ಅನೇಕ ವಾವಗಳನ್ನು ಮಾಡು ತ್ತಿರುವೆ ಆದರೆ ಆ ವಾವಗಳ ಫಲವನ್ನು ನೀನೊಬ್ಬನೇ ಅನುಭವಿಸುವೆ ನೀನು ಯಾರಿಗಾಗಿ ಅನೇಕ ವಾವಕಾರ್ಯಗಳನ್ನು ಮಾಡುತ್ತಿಯೋ ಆ ವುತ್ರಕಲತ್ರಾದಿಗಳು ನೀನು ಆ ವಾವದ ಫಲವನ್ನು ಅನುಭವಿಸುವಾಗ ನಿನಗೆ ನಹಾಯಕರಾಗಲಾರರು. ಏಕೆಂದರೆ ನೀನು ಮಾಡಿದ ಶುಭಾಶುಭಕರ್ಮಗಳ ಫಲವಾದ ಸುಖದುಃಖಗಳನ್ನು ನೀನೊಬ್ಬನೇ ಅನುಭವಿನಬೇಕಾಗುವುದು ನೀನು ಕರ್ಮವಶದಿಂದ ಈ ಜನ್ಮವನ್ನು ಬಿಟ್ಟು ಜನ್ಮಾಂತರ ವನ್ನು ಹೊಂದುವ ನಮಯ ನೀನು ಆತ್ಮೀಯರೆಂದು ಭಾವಿಸಿರುವ ನಿನ್ನ ಬಂಧುಗಳು ಸ್ಮಶಾನದವರೆಗೆ ಮಾತ್ರ ಬರುವರು ನೀನು ಕಷ್ಟದಿಂದ ಸಂವಾದಿಸಿರುವ ಧನವು ಮನೆಯಲ್ಲೇ ಉಳಿಯುವುದು ನೀನು ಬಹುಜಾಗ್ರತೆಯಿಂದ ವೋಷಿಸಿದ ನಿನ್ನ ಶರೀರವು ಸುಡಲ್ಪಟ್ಟು ಭಸ್ಮವಾಗುವುದು. ಹೀಗೆ ಇವೊಂದೂ ನಿನ್ನೊಡನೆ ಬರಲಾರವು ಆದರೆ ನೀನು ಮಾಡಿರುವ ವುಣ್ಯವಾವರೂವವಾದ ಕರ್ಮಗಳು ಮಾತ್ರ ನಿನ್ನನ್ನು ಬಿಡದೆ ನಿನ್ನೊಡನೆಯೇ ಬರುವುವು ಅರ್ಥಾತ್ ಆ ವುಣ್ಯವಾವಗಳ ಫಲವನ್ನು ಮಾತ್ರ ನೀನೊಬ್ಬನೇ ಅನುಭವಿನಬೇಕಾಗುವುದು.

* "ತತ್ತ್ವಾರ್ಥಸೂತ್ರ"ದಲ್ಲಿ **"ಪ್ರಮತ್ತಯೋಗಾತ್ಪ್ರಾಣವ್ಯವರೋವಣಂ ಹಿಂಸಾ"** ಎಂದು ಹೇಳಿರುವಂತೆ †ವ್ರಮಾದದಿಂದ ಕೂಡಿರುವ ಮನವಚನಕಾಯಗಳಿಂದ ವ್ರಾಣಿಗಳ ದ್ರವ್ಯ-ಭಾವರೂವಗಳಾದ ವ್ರಾಣಗಳನ್ನು ನಾಶಮಾಡುವುದು ಹಿಂಸೆಯಾ ಗಿದೆ. ಆತ್ಮಘಾತ ಮತ್ತು ವರಘಾತವೆಂದು ಹಿಂಸೆಯು ಎರಡು ಪ್ರಕಾರವಾಗಿರುತ್ತದೆ. ಮಿಥ್ಯಾತ್ವರಾಗಾದಿಗಳ ನಿಮಿತ್ತದಿಂದ ದೃಷ್ಟಶ್ರುತಾನುಭೂತಭೋಗಾಕಾಂಕ್ಷಾರೂಪವಾದ ತೀಕ್ಷ್ಣಶಸ್ತ್ರದಿಂದ ತನ್ನ (ಆತ್ಮನ) ಜ್ಞಾನಾದಿವ್ರಾಣಗಳನ್ನು ಘಾತಿಸು(ಹಿಂಸಿಸು)ವಿಕೆಯು ನಿಶ್ಚಯಹಿಂಸೆಯಾಗಿರುವುದು. ಅಂದರೆ ರಾಗಾದಿವಿಭಾವಗಳಿಂದ ನಿಜಭಾವಗಳು ಘಾತಿ ಸಲ್ಪಡುವುದರಿಂದ ಆ ರಾಗಾದಿಗಳ ಉತ್ಪತ್ತಿಯು ನಿಶ್ಚಯಹಿಂಸೆಯಾಗಿರುತ್ತದೆ. ಇದೇ ಆತ್ಮಘಾತವು. ಪ್ರಮಾದಯೋಗದಿಂದ ಅವಿವೇಕಿಯಾಗಿ ಏಕೇಂದ್ರಿಯದ್ವೀಂದ್ರಿಯಾದಿ

---

* ತತ್ತ್ವಾರ್ಥಸೂತ್ರ, ಅಧ್ಯಾಯ—೭, ಸೂತ್ರ—೧೩

† "ಏಕಹಾ ತಹಾ ಕಸಾಯಾ । ಇಂದಿಯಣಿದ್ದಾ ತಹೇವ ಪಣಯೋ ಯ ॥ ಚದು ಚದು ಪಣಮೇಗೇಗಂ । ಹೊಂತಿ ಪಮಾದಾ ಹು ಪಣ್ಣರಸ ॥"— ಅರ್ಥಾತ್, ಸ್ತ್ರೀಕಥಾ, ಭೋಜನಕಥಾ, ರಾಷ್ಟ್ರಕಥಾ, ರಾಜಕಥಾ, ಕ್ರೋಧ, ಮಾನ, ಮಾಯಾ, ಲೋಭ, ಸ್ಪರ್ಶನೇಂದ್ರಿಯ, ರಸ ನೇಂದ್ರಿಯ, ಘ್ರಾಣೇಂದ್ರಿಯ, ಚಕ್ಷುರಿಂದ್ರಿಯ ಶ್ರೋತ್ರೇಂದ್ರಿಯ, ನಿದ್ರೆ, ಬಾಹ್ಯವಿಷಯಪ್ರೀತಿ ಈ ಹದಿನೈದು ವಿಧವಾದ ಮನೋಭಾವಗಳಿಗೆ "ಪ್ರಮಾದ"ಗಳೆಂದು ಹೆಸರು.

ಜೀವರುಗಳನ್ನು ಹಿಂಸಿಸುವಿಕೆಯು ಪರಘಾತವು ಪರಜೀವಿಗಳ ಹಿಂಸೆಯ ಭಾವನೆ ಯಿಂದ ತನ್ನ(ಆತ್ಮನ) ಪರಿಣಾಮವು ಮಲಿನವಾಗುತ್ತದೆ. ಪರಿಣಾಮದ ಈ ಮಲಿನತೆಯೇ ನಿಶ್ಚಯಹಿಂಸೆಯಾಗಿರುತ್ತದೆ ಆದುದರಿಂದ ಪರಘಾತರೂಪವಾದ ಹಿಂಸೆಯು ಆತ್ಮಘಾತಕ್ಕೆ ಕಾರಣವಾಗಿರುತ್ತದೆ. ಹಿಂಸಕನಾದ ಜೀವನು ಪರಜೀವಿಗಳನ್ನು ಹಿಂಸಿಸುವುದರಿಂದ ತನ್ನ ಹಿಂಸೆಯನ್ನೇ (ಪರಿಣಾಮದ ಮಲಿನತೆಯಿಂದ) ಮಾಡಿಕೊಳ್ಳುತ್ತಾನೆ ಇದನ್ನು ಗ್ರಂಥಾಂತರದಲ್ಲಿ ಹೀಗೆ ಹೇಳಿದ್ದಾರೆ.—**"ರಾಗಾದೀಣಮಣುಪ್ಪಾ ಅಹಿಂಸಗತ್ತೈತ್ತಿ ದೇಸಿದಂ ಸಮಯೇ। ತೇಸಿ ಚೇವುಪ್ಪತ್ತೀ ಹಿಂಸೇತಿ ಜಿಣೇಹಿಂ ಣಿದ್ದಿಟ್ಠಂ ॥"** ಅರ್ಥಾತ್ ರಾಗಾದಿಗಳ ಅನುತ್ಪತ್ತಿ(ಉಂಟಾಗದಿರುವಿಕೆ, ಅಭಾವ)ಯು "ಅಹಿಂಸೆ"ಯೆಂದು ಶಾಸ್ತ್ರದಲ್ಲಿ ಉಪದೇಶಿಸಲ್ಪಟ್ಟಿದೆ. ಹಾಗೂ ಆ ರಾಗಾದಿಗಳ ಉತ್ಪತ್ತಿಯು "ಹಿಂಸೆ"ಯಾಗಿರುತ್ತದೆಂದು ಜಿನೇಂದ್ರರಿಂದ ನಿರೂಪಿಸಲ್ಪಟ್ಟಿದೆ. ಹೀಗಿದು ನಿಶ್ಚಯಹಿಂಸೆ ಮತ್ತು ಅಹಿಂಸೆಯ ಲಕ್ಷಣವಾಗಿದೆ ಅತಏವ ರಾಗಾದಿಪರಿಣಾಮ ರೂಪವಾದ ಹಿಂಸೆಯು ತ್ಯಾಜ್ಯವಾಗಿರುತ್ತದೆಂದೂ ರಾಗಾದ್ಯಭಾವರೂಪವಾದ ಅಹಿಂಸೆಯು ಉಪಾದೇಯವಾಗಿರುತ್ತದೆಂದೂ ತಾತ್ಪರ್ಯಾರ್ಥವು

**ಮಾರಿವಿ ಚೂರಿವಿ ಜೀವಡಾ, ಜಂ ತುಹುಂ ದುಕ್ಖು ಕರೀಸಿ ।**
**ತಂ ತಹ ಪಾಸಿ ಅಣಂತಗುಣು, ಅವಸಇಂ ಜೀವ ಲಹೀಸಿ ॥ ೧೨೬ ॥**

"ಮಾರಯಿತ್ವಾ ಚೂರ್ಣಯಿತ್ವಾ ಜೀವಾನ್ ಯತ್ ತ್ವಂ ದುಃಖಂ ಕರಿಷ್ಯಸಿ ।
ತತ್ತದಪೇಕ್ಷಯಾ ಅನಂತಗುಣಂ ಅವಶ್ಯಮೇವ ಜೀವ ಲಭಸೇ ॥ ೧೨೬ ॥"

**ಅನ್ವಯಾರ್ಥಃ**—**ಜೀವ**—ಎಲೈ ಜೀವನೇ! **ತುಹುಂ**—ನೀನು **ಜೀವಡಾ**—ಜೀವರುಗಳನ್ನು **ಮಾರಿವಿ**—ಹಿಂಸಿಸಿ(ಕೊಂದು) **ಚೂರಿವಿ**—ಚೂರ್ಣಮಾಡಿ(ಅಂಗೋಪಾಂಗಗಳನ್ನು ಛೇದಿಸಿ) ಆ ಜೀವರಿಗೆ **ಜಂ ದುಕ್ಖು ಕರೀಸಿ**—ಯಾವ ದುಃಖವನ್ನುಂಟು ಮಾಡುವೆಯೋ **ತಂ**—ಆಕಾರಣದಿಂದ **ತಹ ಪಾಸಿ**—ಅದರ (ಆ ದುಃಖದ) ಅಪೇಕ್ಷೆಯಿಂದ **ಅಣಂತಗುಣು**—ಅನಂತಗುಣವಾದ (ಅನಂತಪಾಲು ಹೆಚ್ಚಾದ) ದುಃಖವನ್ನು **ಅವಸಇಂ**—ಅವಶ್ಯವಾಗಿಯೂ **ಲಹೀಸಿ**—ಪಡೆಯುವೆ.

**ಭಾವಾರ್ಥಃ**—ಜೀವನೇ! ನೀನು ಪ್ರಮಾದವಶೀಭೂತನಾಗಿ ಪ್ರಾಣಿಗಳ ಪ್ರಾಣ ವಿಯೋಜನರೂಪವಾದ ಹಿಂಸೆಯನ್ನು ಮಾಡಿ ಅಥವಾ ಅವುಗಳ ಹಸ್ತಪಾದಾದಿಗಳನ್ನು ಕತ್ತರಿಸಿ ಆ ಪ್ರಾಣಿಗಳಿಗೆ ಯಾವ ದುಃಖವನ್ನುಂಟುಮಾಡುವೆಯೋ ಆ ದುಃಖಕ್ಕಿಂತ ಅನಂತಗುಣ ದುಃಖವನ್ನು ನೀನು ಅವಶ್ಯವಾಗಿ ಅನುಭವಿಸುವೆ ಜೀವಹಿಂಸೆಯಲ್ಲಿ ಉದ್ಯುಕ್ತನಾದ ನೀನು ಮಿಥ್ಯಾತ್ವರಾಗಾದಿಗಳೆಂಬ ತೀಕ್ಷ್ಣ-ಶಸ್ತ್ರದಿಂದ ಮೊದಲು ನಿನ್ನ ಶುದ್ಧಾತ್ಮಾನುಭೂತಿರೂಪವಾದ ನಿಶ್ಚಯಪ್ರಾಣಗಳನ್ನು ನಾಶಮಾಡುವೆ ಅರ್ಥಾತ್ ಕೆಡಿಸಿಕೊಳ್ಳುವೆ. ಈ ಕಾರಣದಿಂದ ನೀನು ಆತ್ಮಘಾತಕನಾಗುವೆ ಆ ಮೇಲೆ ನಿನ್ನಿಂದ ಪರಪ್ರಾಣಿಗಳ ಹಿಂಸೆಯು ಆಗಲಿ ಆಗದಿರಲಿ, ನೀನಂತೂ ಹಿಂಸಕನೇ

ಆಗುವೆ. ಹಾಗೂ ಆ ಹಿಂಸೆಯ ಫಲವಾದ ಅನಂತದುಃಖಗಳನ್ನು ಅವಶ್ಯವಾಗಿ ಅನುಭವಿಸುವೆ ಇದೇ ಆಶಯವನ್ನು ಗ್ರಂಥಾಂತರದಲ್ಲಿಯೂ ಹೇಳಿರುವರು·—"**ಸ್ವಯಮೇವಾತ್ಮನಾತ್ಮಾನಂ ಹಿನಸ್ತ್ಯಾತ್ಮಾ ಕಷಾಯವಾನ್ । ಪೂರ್ವಂ ಪ್ರಾಣ್ಯಂತರಾಣಾಂ ತು ಪಶ್ಚಾತ್ ಸ್ಯಾದ್ವಾ ನ ವಾ ವಧಃ ॥**" ಅರ್ಥಾತ್ ಕ್ರೋಧಾದಿ ಕಷಾಯಗಳಿಂದ ಕೂಡಿರುವ ಜೀವನು ಮೊದಲು ತಾನು ತನ್ನಿಂದ ತನ್ನನ್ನು (ತನ್ನ ಶುದ್ಧಪರಿಣಾಮವನ್ನು) ಹಿಂಸಿಸುತ್ತಾನೆ. ಆ ಮೇಲೆ ಅನ್ಯಪ್ರಾಣಿಗಳ ಹಿಂಸೆಯು ಆಗಲೂ ಬಹುದು. ಆಗದಿರಲೂ ಬಹುದು ಅಂತೂ ಕಷಾಯವಶೀಭೂತನಾದ ಆ ಜೀವನು ಹಿಂಸಕ(ಆತ್ಮಘಾತಿ)ನಾಗುತ್ತಾನೆಂದಭಿಪ್ರಾಯವು ಬೆಂಕಿಯಲ್ಲಿಟ್ಟು ಕೆಂಪಗೆ ಕಾಯಿಸಿದ ಕಬ್ಬಿಣದ ಗುಂಡನ್ನು ಇತರರ ಮೇಲೆಸೆದು ಹಿಂಸಿಸುವುದಕ್ಕಾಗಿ ಅದನ್ನು (ಲೋಹಪಿಂಡವನ್ನು) ಕೈಯಿಂದ ಹಿಡಿಯಲು ತನ್ನ ಕೈಯೇ ಮೊದಲು ಸುಡುವಂತೆ ಇತರಪ್ರಾಣಿಗಳ ಹಿಂಸೆಗೆ ಕಾರಣಗಳಾದ ಕ್ರೋಧಾದಿಕಷಾಯಗಳು ಮೊದಲು ಆತ್ಮನನ್ನೇ (ತನ್ನನ್ನೇ-ತನ್ನಪರಿಣಾಮವನ್ನೇ)ಹಿಂಸಿಸುತ್ತವೆ ಅತಏವ ಕಷಾಯವುಳ್ಳವನು ಆತ್ಮಘಾತಕನಾಗುತ್ತಾನೆಂದು ಭಾವಾರ್ಥವು.

**ಜೀವ ವಹಂತಹಂ ಣರಯಗಇ, ಅಭಯಪದಾಣೇಂ ಸಗ್ಗು ।**
**ಬೇ ಪಹ ಜವಲಾ ದರಿಸಿಯಾ, ಜಹಿಂ ರುಚ್ಚಇ ತಹಿಂ ಲಗ್ಗು ॥ ೧೨೭ ॥**

"ಜೀವಂ ಘ್ನತಾಂ ನರಕಗತಿಃ ಅಭಯಪ್ರದಾನೇನ ಸ್ವರ್ಗಃ ।
ದ್ವೌ ಪಂಥಾನೌ ಸಮೀಪೌ ದರ್ಶಿತೌ ಯತ್ರ ರೋಚತೇ ತತ್ರ ಲಗ ॥ ೧೨೭ ॥"

**ಅನ್ವಯಾರ್ಥ·—ಜೀವ ವಹಂತಹಂ**—ಜೀವನನ್ನು ಹಿಂಸಿಸುವವರಿಗೆ **ಣರಯಗಇ**—ನರಕಗತಿಯುಂಟಾಗುತ್ತದೆ **ಅಭಯಪದಾಣೇಂ**—(ಜೀವರಿಗೆ)ಅಭಯವನ್ನು ಕೊಡುವುದರಿಂದ **ಸಗ್ಗು**—ಸ್ವರ್ಗವುಂಟಾಗುತ್ತದೆ ಹೀಗೆ **ಜವಲಾ**—ಸಮೀಪಗಳಾದ **ಬೇ ಪಹ ದರಿಸಿಯಾ**—ಎರಡು ದಾರಿ(ಮಾರ್ಗ)ಗಳು ತೋರಿಸಲ್ಪಟ್ಟಿವೆ ಆದುದರಿಂದ ಎಲೈ ಜೀವನೇ! ನಿನಗೆ **ಜಹಿಂ ರುಚ್ಚಇ**—ಎಲ್ಲಿ ರುಚಿಸುತ್ತದೋ **ವಹಿಂ ಲಗ್ಗು**—ಅಲ್ಲಿ ಆಸಕ್ತನಾಗು ಅರ್ಥಾತ್ ನಿನಗೆ ನರಕಸ್ವರ್ಗಗಳ ಎರಡು ದಾರಿಗಳಲ್ಲಿ ಯಾವುದು ಹಿತವೆಂದು ಕಾಣುತ್ತದೊ ಅದನ್ನನುಸರಿಸು.

**ಭಾವಾರ್ಥಃ**—ಜೀವನೇ! ನಿಶ್ಚಯನಯದಿಂದ ವಿಷಯಕಷಾಯಾದಿ ಪರಿಣಾಮರೂಪವಾದ ಆತ್ಮಹಿಂಸೆ ಮತ್ತು ವ್ಯವಹಾರನಯದಿಂದ ಇಂದ್ರಿಯ, ಬಲ, ಆಯುಷ್ಯ ಮತ್ತು ಶ್ವಾಸೋಚ್ಛ್ವಾಸಪ್ರಾಣಗಳ ವಿನಾಶರೂಪವಾದ ಅನ್ಯಜೀವಹಿಂಸೆ ಇವುಗಳಿಂದ ನರಕಗತಿಯು ಪ್ರಾಪ್ತವಾಗುತ್ತದೆ ಆದುದರಿಂದ ಹಿಂಸೆಯು ನರಕಗತಿಯ ಮಾರ್ಗ(ಕಾರಣ)ವಾಗಿರುತ್ತದೆ. ಹಾಗೆಯೇ ನಿಶ್ಚಯನಯದಿಂದ ವೀತರಾಗನಿರ್ವಿಕಲ್ಪಸ್ವಸಂವೇದನಪರಿಣಾಮರೂಪವಾದ ಅಭಯದಾನವನ್ನು ತನ್ನಾತ್ಮನಿಗೂ, ವ್ಯವಹಾರದಿಂದ ಇತರಪ್ರಾಣಿಗಳಿಗೆ ಪ್ರಾಣರಕ್ಷಣಾರೂಪವಾದ ಅಭಯದಾನವನ್ನೂ ಮಾಡುವುದರಿಂದ–ಸ್ವಾತ್ಮಾ

ಭಯದಾನದಿಂದ ಮೋಕ್ಷವೂ ಅನ್ಯಜೀವರುಗಳಿಗೆ ಅಭಯದಾನವನ್ನು ಮಾಡುವುದರಿಂದ ಸ್ವರ್ಗವೂ ಪ್ರಾಪ್ತವಾಗುತ್ತದೆ ಆದುದರಿಂದ ಅಭಯದಾನವು(ವ್ಯವಹಾರದಿಂದ) ಸ್ವರ್ಗಕ್ಕೆ ಮಾರ್ಗ(ಕಾರಣ)ವಾಗಿರುತ್ತದೆ. ಹೀಗೆ ಪರಸ್ಪರ ಭಿನ್ನಸ್ವರೂಪವುಳ್ಳ ನರಕ ಮತ್ತು ಸ್ವರ್ಗ ಇವೆರಡು ಸ್ಥಾನಗಳನ್ನು ತಲಪುವ ಈ ಎರಡು (ಹಿಂಸೆ ಮತ್ತು ಅಭಯ ದಾನ) ಮಾರ್ಗಗಳೂ ನಿನ್ನ ಸಮೀಪದಲ್ಲಿವೆ. ಇವುಗಳಲ್ಲಿ ನೀನು ನಿನ್ನ ಇಚ್ಛಾನು ಸಾರವಾಗಿ ಯಾವಮಾರ್ಗವನ್ನಾದರೂ ಅನುಸರಿಸಬಹುದು ಅತಏವ ಇವೆರಡರಲ್ಲಿ ಯಾವ ಮಾರ್ಗವು ನಿನಗೆ ಉಚಿತವೆಂದು ಕಾಣುವುದೋ ಅದೇ ಮಾರ್ಗವನ್ನು ನೀನು ಅನುಸರಿಸು.

ಇಲ್ಲಿ, ಪೂರ್ವೋಕ್ತ ಇಂದ್ರಿಯಾದಿಪ್ರಾಣಗಳು ಜೀವನಿಂದ ಅಭಿನ್ನವಾದುವು ಗಳೋ ಭಿನ್ನವಾದುವುಗಳೋ? ಅಭಿನ್ನವಾದುವುಗಳಾದರೆ ಜೀವನಂತೆ ಪ್ರಾಣಗಳಿಗೂ ನಾಶವಿರಲಾರದು ಜೀವನಿಂದ ಭಿನ್ನವಾದುವುಗಳಾಗಿರುವುವಾದರೆ ಪ್ರಾಣಘಾತದಿಂದ ಜೀವಹಿಂಸೆಯಾಗಲಾರದು. ಹೀಗೆ ಜೀವಹಿಂಸೆಯೇ ಇಲ್ಲದಿರಲು ಪಾಪಬಂಧವು ಹೇಗುಂಟಾಗುವುದು? ಎಂಬ ಶಂಕೆಗೆ ಸಮಾಧಾನವಿದು·—ಜೀವ ಮತ್ತು ಪ್ರಾಣಗಳ ಸಂಬಂಧದಲ್ಲಿ ಕಥಂಚಿತ್ ಭೇದಾಭೇದವಿರುತ್ತದೆ. ಅರ್ಥಾತ್ ಸರ್ವಥಾ (ಏಕಾಂತ ದಿಂದ) ಭೇದಾಭೇದವಿರುವುದಿಲ್ಲ. ಹೇಗೆಂದರೆ, ಜೀವನಿಗೆ ತನ್ನ ಪ್ರಾಣಗಳು ಅಪಹರಿಸಲ್ಪಡುತ್ತಿರಲು ದುಃಖವುಂಟಾಗುತ್ತದೆಂಬುದು ಪ್ರತ್ಯಕ್ಷವಾಗಿ ಕಾಣುತ್ತದೆ. ಈ ಕಾರಣದಿಂದ ವ್ಯವಹಾರನಯದಿಂದ (ಜೀವಪ್ರಾಣಗಳೊಳಗೆ) ಅಭೇದವಿರುತ್ತದೆ. ಈ ದುಃಖದ ಉತ್ಪತ್ತಿ (ಉಂಟಾಗುವಿಕೆ)ಯೇ ಹಿಂಸೆಯು. ಅದರಿಂದಲೇ ಪಾಪಬಂಧ ವಾಗುತ್ತದೆ. ಒಂದುವೇಳೆ ಜೀವನಿಂದ ಪ್ರಾಣಗಳು ಸರ್ವಥಾ (ಏಕಾಂತದಿಂದ) ಭಿನ್ನ ವಾದುವುಗಳಾಗಿದ್ದರೆ ಇತರಶರೀರದ ಘಾತದಿಂದ ತನಗೆ ದುಃಖವುಂಟಾಗದಿರುವಂತೆ ತನ್ನ ಶರೀರ (ಅಥವಾ ಪ್ರಾಣ) ಘಾತದಿಂದಲೂ ತನಗೆ ದುಃಖವುಂಟಾಗಲಾರದು. ಆದುದರಿಂದ ವ್ಯವಹಾರದಿಂದ ಜೀವ-ಪ್ರಾಣಗಳಲ್ಲಿ ಏಕತ್ವವು ಕಂಡುಬರುತ್ತದೆ. ಪರಂತು ನಿಶ್ಚಯನಯದಿಂದ ಏಕತ್ವ(ಅಭೇದ)ವಿರುವುದಿಲ್ಲ. ನಿಶ್ಚಯದಿಂದಲೂ ಏಕತ್ವ ವಿರುವುದಾದರೆ ದೇಹವು ನಾಶವಾಗುತ್ತಿರಲು ಜೀವನು ನಾಶವನ್ನು ಹೊಂದಬೇಕಾಗು ವುದು. ಆದರೆ ವಸ್ತುತಃ ಹಾಗಿರುವುದಿಲ್ಲ. ಜೀವನು ಅವಿನಾಶಿಯು. ಜೀವನು ಈ ದೇಹವನ್ನು ಬಿಟ್ಟು ಪರಭವವನ್ನು ಪಡೆಯುವಾಗ ದೇಹವು ಅವನ್ನನುಸರಿಸುವುದಿಲ್ಲ. ಈ ಕಾರಣದಿಂದ ಜೀವ ಮತ್ತು ಶರೀರಗಳಲ್ಲಿ(ಅಥವಾ ಇಂದ್ರಿಯಾದಿಗಳಲ್ಲಿ)ಭಿನ್ನ ತೆಯೂ ಇರುತ್ತದೆ. ಸಾರಾಂಶತಃ ವ್ಯವಹಾರನಯದಿಂದ ಜೀವ ಮತ್ತು ಇಂದ್ರಿಯಾದಿ ಪ್ರಾಣಗಳಲ್ಲಿ(ಇಂದ್ರಿಯಾದಿಗಳ ಸಮೂಹವೇ ದೇಹವಾಗಿರುವದರಿಂದ ಇಲ್ಲಿ ದೇಹ ವೆಂದರೂ ಒಂದೇ ಅಭಿಪ್ರಾಯವಾಗುತ್ತದೆ.) ಅಭಿನ್ನತೆ(ಏಕತ್ವ)ಯೂ ನಿಶ್ಚಯನಯ ದಿಂದ ಭಿನ್ನತೆಯೂ ಇರುತ್ತದೆಂದು ತಿಳಿಯಬೇಕು. ಹಾಗೆಯೇ ವ್ಯವಹಾರದಿಂದ ಪ್ರಾಣವಿಯೋಜನೆಯಿಂದುಂಟಾಗುವ ದುಃಖವೇ ಹಿಂಸೆಯು. ಆ ಹಿಂಸೆಯು ಪಾಪ

ಬಂಧಕ್ಕೆ ಕಾರಣವಾಗುತ್ತದೆ. ಹೀಗೆ ಪಾಪವೂ ಅದರ ಫಲವಾದ ನರಕಾದಿದುಃಖವೂ ವ್ಯವಹಾರದಿಂದಲೇ ಇರುತ್ತದೆ. ನಿಶ್ಚಯನಯದಿಂದ ಪಾಪಬಂಧದುಃಖಾದಿಗಳಿರುವುದಿಲ್ಲ. ಈ ಪ್ರಕಾರವಾಗಿ ನಯವಿವಕ್ಷೆಯಿಂದ ಭೇದಾಭೇದಗಳನ್ನು ತಿಳಿಯಬೇಕಲ್ಲದೆ ಸರ್ವಥಾ ಏಕಾಂತಪಕ್ಷವನ್ನವಲಂಬಿಸಬಾರದೆಂದಭಿಪ್ರಾಯವು.

**ಮೂಢಾ ಸಯಲು ವಿ ಕಾರಿಮಉ, ಭುಲ್ಲಉ ಮಂ ತುಸ ಕಂಡಿ ।**
**ಸಿವಪಹಿ ಣಿಮ್ಮಲಿ ಕರಹಿ ರಇ, ಘರು ಪರಿಯಣು ಲಹು ಛಂಡಿ ॥ ೧೨೮ ॥**

"ಮೂಢ ಸಕಲಮಪಿ ಕೃತ್ರಿಮಂ ಭ್ರಾಂತಃ ಮಾ ತುಷಂ ಕಂಡಯ[?] ।
ಶಿವಪಥೇ ನಿರ್ಮಲೇ ಕುರು ರತಿಂ ಗೃಹಂ ಪರಿಜನಂ ಲಘು ತ್ಯಜ ॥ ೧೨೮ ॥"

**ಅನ್ವಯಾರ್ಥ** — **ಮೂಢಾ**-ಎಲೈ ಮೂರ್ಖನಾದ ಜೀವನೇ! **ಸಯಲು ವಿ**-ಶುದ್ಧಾತ್ಮನ ಹೊರತು ಇತರ ಪಂಚೇಂದ್ರಿಯವಿಷಯಾದಿಗಳೆಲ್ಲವೂ **ಕಾರಿಮಉ**-ಕೃತ್ರಿಮವಾದುದು ಅರ್ಥಾತ್ ವಿನಶ್ವರವಾದುದು. ಆದುದರಿಂದ ನೀನು **ಭುಲ್ಲಉ**-ಭ್ರಾಂತನಾಗಿ **ಮಂ ತುಸ ಕಂಡಿ**-ಧಾನ್ಯದ ಸಿಪ್ಪೆಯನ್ನು ಖಂಡಿಸಬೇಡ(ಕುಟ್ಟಬೇಡ) **ಣಿಮ್ಮಲಿ ಸಿವಪಹಿ**— ಪರಮಪವಿತ್ರವಾದ ಮೋಕ್ಷಪಥ(ಮಾರ್ಗ)ದಲ್ಲಿ **ಕರಹಿ ರಇ**-ಪ್ರೀತಿಯನ್ನು ಮಾಡು(ಅಥವಾ ಆಸಕ್ತಿಯನ್ನು ಹೊಂದು) **ಘರು ಪರಿಯಣು**—ಮನೆಯನ್ನೂ ಪರಿಜನರನ್ನೂ **ಲಹು ಛಂಡಿ**— ಬೇಗನೆ ಬಿಡು.

**ಭಾವಾರ್ಥ:**— ಶುದ್ಧಾತ್ಮನೊಬ್ಬನ ಹೊರತು ಇತರ ಪಂಚೇಂದ್ರಿಯವಿಷಯಾದಿ ಸಮಸ್ತಪದಾರ್ಥಗಳೂ ಅನಿತ್ಯ(ನಶ್ವರ)ವಾದವುಗಳು. ಆದಕಾರಣ ಮೂಢಜೀವನೇ! ಧಾನ್ಯವಿಲ್ಲದ ಬರೀ ಸಿಪ್ಪೆಯನ್ನು ಪುಡಿಮಾಡುವ(ಕುಟ್ಟುವ)ಪ್ರಯಾಸವು ನಿಷ್ಫಲವಾಗಿರುವಂತೆ ನೀನು ಭ್ರಾಂತಿಯಿಂದ ಪಂಚೇಂದ್ರಿಯವಿಷಯಾದಿಗಳಿಂದ ಸುಖವುಂಟಾಗುವುದೆಂದು ತಿಳಿಯುವವನಾಗಿ ಅವುಗಳನ್ನು ಪಡೆಯಲು ವ್ಯರ್ಥವಾಗಿ ಶ್ರಮಪಡಬೇಡ. ಮೋಕ್ಷಪದಪ್ರಾಪ್ತಿಗೆ ವಿಘ್ನವನ್ನುಂಟುಮಾಡುವ ಗೃಹಪತ್ನೀಪುತ್ರಬಂಧುಮೊದಲಾದವರ ಮಮತೆ(ಮೋಹ)ಯನ್ನು ತೊರೆದು ನಿಜಶುದ್ಧಾತ್ಮನ ಸಮ್ಯಕ್‌ಶ್ರದ್ಧಾನಜ್ಞಾನಾನುಷ್ಠಾನರೂಪವಾದ ಮೋಕ್ಷಮಾರ್ಗದಲ್ಲಿಯೇ ಪ್ರೀತಿಯುಳ್ಳವನಾಗಿ ಅದರಲ್ಲಿಯೇ ಆಸಕ್ತನಾಗು.

**ಜೋಇಯ ಸಯಲು ವಿ ಕಾರಿಮಉ, ಣಿಕ್ಕಾರಿಮಉ ಣ ಕೋಇ ।**
**ಜೀವಿಂ ಜಂತಿಂ ಕುಡಿ ಣ ಗಯ, ಇಹು ಪಡಿಛಂದಾ ಜೋಇ ॥ ೧೨೯ ॥**

"ಯೋಗಿನ್ ಸಕಲಮಪಿ ಕೃತ್ರಿಮಂ ನಿಃಕೃತ್ರಿಮಂ ನ ಕಿಮಪಿ ।
ಜೀವೇನ ಯಾತೇನ ದೇಹೋ ನ ಗತಃ ಇಮಂ ದೃಷ್ಟಾಂತಂ ಪಶ್ಯ ॥ ೧೨೯ ॥"

**ಅನ್ವಯಾರ್ಥ.**— **ಜೋಇಯ**— ಎಲೈ ಯೋಗಿಯೇ! (ಶುದ್ಧಾತ್ಮನ ಹೊರತು ಇತರ) **ಸಯಲು ವಿ**— ಎಲ್ಲವೂ **ಕಾರಿಮಉ**— ವಿನಶ್ವರ(ಅನಿತ್ಯ)ವಾದುದು. **ಣಿಕ್ಕಾ**

ಣಿಮುಉ— ಅವಿನಶ್ವರ (ನಿತ್ಯ)ವಾದುದು **ಣ ಕೋಇ—** ಯಾವುದೂ ಇರುವುದಿಲ್ಲ. **ಜಂತಿಂ ಜೀವಿಂ—**(ಗತ್ಯಂತರವನ್ನುಕುರಿತು)ಹೋದ ಜೀವನೊಡನೆ **ಕುಡಿ ಣ ಗೆಯ—** ದೇಹವು ಹೋಗಲಿಲ್ಲ. **ಇಹು ಪಡಿಛಂಡಾ—** ಈ ದೃಷ್ಟಾಂತವನ್ನು **ಜೋಇ—** ನೋಡು

**ಭಾವಾರ್ಥ:—** ಯೋಗಿಯೇ! ಅನಂತಜ್ಞಾನಾದಿಗುಣಮಯನೂ ವೀತರಾಗ ನಿತ್ಯಾನಂದೈಕಸ್ವರೂಪವುಳ್ಳವನೂ ಆದ ಶುದ್ಧಾತ್ಮನೊಬ್ಬನೇ ಅವಿನಶ್ವರ(ನಾಶವಿಲ್ಲದವ) ನಾಗಿರುತ್ತಾನೆ ಇಂತಹ ಶುದ್ಧಾತ್ಮನಂತೆ ನಾಶವಿಲ್ಲದ ಯಾವುದೊಂದು ವಸ್ತುವೂ ಲೋಕದಲ್ಲಿರುವುದಿಲ್ಲ ಅರ್ಥಾತ್ ಮನೋವಾಕ್ಕಾಯವ್ಯಾಪಾರರೂಪವಾದ ಸಮಸ್ತ ಕಾರ್ಯಗಳೂ ದೇಹಾದಿಸಮಸ್ತಸಾಮಗ್ರಿಗಳೂ ವಿನಶ್ವರ(ನಾಶವುಳ್ಳವು)ಗಳಾಗಿರುತ್ತವೆ. ಜೀವನು ಶುದ್ಧಾತ್ಮಭಾವನಾರಹಿತನಾಗಿ ಮಿಥ್ಯಾತ್ವವಿಷಯಕಷಾಯಾದಿಭಾವಗಳಿಂದ ತಾನು ಸಂಪಾದಿಸಿದ ಕರ್ಮದ ನಿಮಿತ್ತ(ಕಾರಣ)ದಿಂದ ಗತ್ಯಂತರ (ಒಂದುಗತಿಯನ್ನು ಬಿಟ್ಟು ಮತ್ತೊಂದುಗತಿ)ವನ್ನು ಪಡೆಯುತ್ತಾನೆ. ಹೀಗೆ ಆತನು ಇನ್ನೊಂದು ಗತಿಯನ್ನು ಕುರಿತು ಹೋಗುವಾಗ ಆತನ ಶರೀರವು ಆತನೊಡನೆ ಹೋಗುವುದಿಲ್ಲ. ಪ್ರತ್ಯಕ್ಷ ವಾದೀ ದೃಷ್ಟಾಂತದಿಂದ ದೇಹಾದಿಪರವಸ್ತುಗಳೆಲ್ಲವೂ ಅನಿತ್ಯವಾಗಿರುತ್ತವೆಂದು ತಿಳಿದು ದೇಹಾದಿಗಳ ಮಮತ್ವವನ್ನು ತೊರೆದು ನಿಜಶುದ್ಧಾತ್ಮಪದಾರ್ಥದ ಭಾವನೆಯನ್ನು ಮಾಡಬೇಕೆಂದು ಭಾವವು

**ದೇಉಲು ದೇಉ ವಿ ಸತ್ಥು ಗುರು, ತಿತ್ಥು ವಿ ವೇಉ ವಿ ಕವ್ವು ।**
**ವಚ್ಛು ಜು ದೀಸಇ ಕುಸುಮಿಯಉ, ಇಂಧಣು,ಹೋಸಇ ಸವ್ವು ॥೧೩೦॥**

"ದೇವಕುಲಂ ದೇವೋಽಪಿ ಶಾಸ್ತ್ರಂ ಗುರುಃ ತೀರ್ಥಮಪಿ ವೇದೋಽಪಿ ಕಾವ್ಯಮ್ ।
ವೃಕ್ಷಃ ಯತ್ ದೃಶ್ಯತೇ ಕುಸುಮಿತಂ ಇಂಧನಂ ಭವಿಷ್ಯತಿ ಸರ್ವಮ್ ॥ ೧೩೦ ॥"

**ಅನ್ವಯಾರ್ಥ·—** **ಜು**-ಯಾವ **ದೇಉಲು**— ದೇವಾಲಯವೂ **ದೇಉ ವಿ—** ದೇವರ ಪ್ರತಿಮೆಯೂ **ಸತ್ಥು ಗುರು—** ಶಾಸ್ತ್ರವೂ ಗುರುವೂ **ತಿತ್ಥು ವಿ—** ತೀರ್ಥವೂ **ವೇಉ ವಿ ಕವ್ವು—** ವೇದವೂ ಕಾವ್ಯವೂ **ವಚ್ಛು—** ವೃಕ್ಷವೂ **ಕುಸುಮಿಯಉ—** ಪುಷ್ಪಿತ(ವಿಕಸಿತ ಅಥವಾ ಶೋಭಾಯಮಾನ)ವಾಗಿ **ದೀಸಇ—** ಕಾಣಲ್ಪಡುತ್ತದೋ **ಸವ್ವು—** ಅದೆಲ್ಲವೂ **ಇಂಧಣು ಹೋಸಇ—**(ಕಾಲರೂಪವಾದ ಅಗ್ನಿಗೆ)ಸೌದೆ(ಕಟ್ಟಿಗೆ) ಯಾಗುತ್ತದೆ. ಅರ್ಥಾತ್ ಕಾಲವನ್ನು ಹೊಂದಿ ನಾಶವಾಗುತ್ತದೆ.

**ಭಾವಾರ್ಥ:—** ದೇವಕುಲ(ದೇವಾಲಯ)ಮೊದಲಾದ ಸರ್ವವಸ್ತುಗಳು ಕಾಲ ಕ್ರಮದಿಂದ ನಾಶವನ್ನು ಹೊಂದುತ್ತವೆಂದು ಇಲ್ಲಿ ಅಧ್ರುವತ್ವ(ಅಧ್ರುವಾನುಪ್ರೇಕ್ಷೆ) ವನ್ನು ನಿರೂಪಿಸುತ್ತಾರೆ. **"ದೇವಾಲಯ"—** ನಿರ್ದೋಷಪರಮಾತ್ಮರಾದ ಜಿನೇಂದ್ರ (ಅರ್ಹಂತ)ದೇವರ ಪ್ರತಿಮೆಯನ್ನು ಸ್ಥಾಪಿಸಲು ನಿರ್ಮಿಸಿದ ಜಿನಾಲಯ, ಅಥವಾ

ಮಿಥ್ಯಾದೇವತೆಗಳ ದೇವಸ್ಥಾನ. **'ದೇವ'**—ಪೂರ್ವೋಕ್ತ ಪರಮಾತ್ಮದೇವರ ಅನಂತ ಜ್ಞಾನಾದಿಗುಣಗಳ ಸ್ಮರಣೆಗಾಗಿಯೂ ಧರ್ಮಪ್ರಭಾವನೆಗಾಗಿಯೂ ಸ್ಥಾಪಿಸಿರುವ ಜಿನಪ್ರತಿಮೆ, ಅಥವಾ ರಾಗಾದಿಪರಣತರಾದ ಮಿಥ್ಯಾದೇವತೆಗಳ ಮೂರ್ತಿ(ಪ್ರತಿಮೆ) **"ಶಾಸ್ತ್ರ":**— ವೀತರಾಗನಿರ್ವಿಕಲ್ಪ-ಆತ್ಮತತ್ತ್ವವೇ ಮೊದಲಾದ ಜೀವಾಜೀವಾದಿ-ಸಮಸ್ತ ಪದಾರ್ಥಗಳ ಸ್ವರೂಪವನ್ನು ಪ್ರತಿಪಾದಿಸುವ ಜಿನಾಗಮ(ದ್ವಾದಶಾಂಗರೂಪವಾದ ಸಿದ್ಧಾಂತ), ಅಥವಾ ಮಿಥ್ಯಾಶಾಸ್ತ್ರ **"ಗುರು":**— ಜಿನದೀಕ್ಷೆಯನ್ನು ಕೊಡುವವರೂ ತಮ್ಮ ವಚನಗಳೆಂಬ ಸೂರ್ಯಕಿರಣಗಳಿಂದ ಮಿಥ್ಯಾತ್ವರಾಗಾದಿಪರಿಣತರೂಪವಾದ ಜಗತ್ತಿನ ಅಜ್ಞಾನವೆಂಬ ಘೋರಾಂಧಕಾರವನ್ನು ಕ್ಷಣಮಾತ್ರದಿಂದ ನಿವಾರಿಸಲು ಸಮರ್ಥರೂ ಆದ ನಿರ್ಗ್ರಂಥಪರಮಗುರುಗಳು, ಅಥವಾ ಮಿಥ್ಯಾಗುರು(ಮಿಥ್ಯಾ ಸನ್ಯಾಸಿ)ಗಳು. **"ತೀರ್ಥ":**— ಸಂಸಾರಸಾಗರವನ್ನು ದಾಂಟಲು ಕಾರಣವಾದ ನಿಜ ಶುದ್ಧಾತ್ಮತತ್ತ್ವಭಾವನಾರೂಪವಾದ ನಿಶ್ಚಯತೀರ್ಥದಲ್ಲಾಸಕ್ತರಾದ ಪರಮತಪಸ್ವಿಗಳ ನಿವಾಸಸ್ಥಾನ ಹಾಗೂ ಮುಕ್ತಿಸ್ಥಾನಗಳಾದ ಸಮ್ಮೇದಾಚಲ, ಊರ್ಜಯಂತಗಿರಿಮೊದಲಾದ ತೀರ್ಥಸ್ಥಾನಗಳು, ಅಥವಾ ಮಿಥ್ಯಾತೀರ್ಥಗಳು. **"ವೇದ"** — ನಿರ್ದೋಷ ಪರಮಾತ್ಮನಿಂದ ಉಪದೇಶಿಸಲ್ಪಟ್ಟ ವೇದವೆಂದು ಹೇಳಲ್ಪಡುವ ಸಿದ್ಧಾಂತ, ಅಥವಾ ಪರಕಲ್ಪಿತ (ಮಿಥ್ಯಾ)ವೇದಗಳು. **"ಕಾವ್ಯ".**— ಶುದ್ಧಜೀವಾದಿಪದಾರ್ಥಗಳನ್ನು ವರ್ಣಿಸುವ ಗದ್ಯಪದ್ಯಮಯವಾದ ಗ್ರಂಥರಚನೆ ಹಾಗೂ ಸಂಸ್ಕೃತಪ್ರಾಕೃತಕರ್ಣಾಟಕಾದಿ ಭಾಷೆಗಳಲ್ಲಿ ತೀರ್ಥಂಕರರು ಮೊದಲಾದ ಪುಣ್ಯಪುರುಷರ ವಿಚಿತ್ರಕಥೆಗಳ ಗದ್ಯಪದ್ಯ ಮಯವಾದ ಕೃತಿಗಳು, ಅಥವಾ ದುಷ್ಟಕವಿಗಳಿಂದ ರಚಿಸಲ್ಪಟ್ಟ ಕುಕಾವ್ಯಗಳು. **"ವೃಕ್ಷ":**— ಪರಮಾತ್ಮಭಾವನಾರಹಿತನಾದ ಜೀವನಿಂದ ಸಂಪಾದಿಸಲ್ಪಟ್ಟ ವನಸ್ಪತಿ ನಾಮಕರ್ಮೋದಯದಿಂದುಂಟಾದ ವೃಕ್ಷಾದಿಗಳು. (ಉಪಲಕ್ಷಣದಿಂದ ಸಮಸ್ತಪದಾರ್ಥಗಳು) ಹೀಗೆ ಉತ್ತಮವಾದ ಹಾಗೂ ಅನುತ್ತಮ(ಕೆಟ್ಟದು)ವಾದ ಸರ್ವವಸ್ತುಗಳೂ ಕಾಲವೆಂಬ ಅಗ್ನಿಯಲ್ಲಿ ಸೌದೆಗಳಂತೆ ಸುಡಲ್ಪಡುತ್ತವೆ ಅರ್ಥಾತ್ ಒಂದು ಸಮಯ ನಾಶವಾಗುತ್ತವೆ(ನಶ್ವರವಾಗಿರುತ್ತವೆ). ಪೂರ್ವೋಕ್ತ ವಿವರಣೆಯಲ್ಲಿ ದ್ವಾದಶಾಂಗರೂಪವಾದ ಸಿದ್ಧಾಂತ(ಶಾಸ್ತ್ರ ಅಥವಾ ವೇದ)ವು ಸನಾತನ(ಅವಿನಶ್ವರ)ವಾಗಿರುವುದಾದರೂ ಕ್ಷೇತ್ರದ ಅಪೇಕ್ಷೆಯಿಂದ ವಿನಶ್ವರವಾಗಿದೆ. ಅದು ಕೆಲವುಕ್ಷೇತ್ರಗಳಲ್ಲಿರುತ್ತದೆ, ಕೆಲವುಕ್ಷೇತ್ರಗಳಲ್ಲಿರುವುದಿಲ್ಲ. ಭರತೈರಾವತಕ್ಷೇತ್ರಗಳಲ್ಲಿ ಒಂದು ಕಾಲದಲ್ಲಿ ಪ್ರಕಟವಾಗುತ್ತದೆ, ಇನ್ನೊಂದುಕಾಲದಲ್ಲಿ ಲುಪ್ತವಾಗುತ್ತದೆ. ಮಹಾವಿದೇಹ ಕ್ಷೇತ್ರದಲ್ಲಿ ಸದಾ ಪ್ರವಾಹಿತವಾಗಿ ಶಾಶ್ವತವಾಗಿರುವುದಾದರೂ ವಕ್ತೃಗಳ ಹಾಗೂ ಶ್ರೋತೃಗಳ ಅಪೇಕ್ಷೆಯಿಂದ ವಿನಶ್ವರವಾಗಿರುತ್ತದೆ. ಸಾರಾಂಶತಃ ಸಂಸಾರದ ಸಮಸ್ತ ವಸ್ತುಗಳೂ ಕ್ಷಣಭಂಗುರವಾದುವುಗಳೆಂದು ತಿಳಿದು ಪಂಚೇಂದ್ರಿಯವಿಷಯಾದಿಗಳಲ್ಲಿ ಮೋಹಪಡಬಾರದು ಅರ್ಥಾತ್ ವಿಷಯರಾಗವನ್ನು ಸರ್ವಥಾ ತ್ಯಾಗಮಾಡಬೇಕೆಂದಭಿ

ಪ್ರಾಯವು. ಯದ್ಯಪಿ ಪ್ರಥಮಾವಸ್ಥೆಯಲ್ಲಿ ಧರ್ಮಪ್ರವೃತ್ತಿಗಾಗಿ ಜಿನಮಂದಿರ ಜಿನ ಪ್ರತಿಮೆ ಜೈನತೀರ್ಥಾದಿಗಳನ್ನು ಸೇವಿಸುವುದು ಉಚಿತವಾಗಿರುವುದಾದರೂ ಶುದ್ಧಾತ್ಮ ಭಾವನೆಯ ಸಮಯದಲ್ಲಿ ಈ ಧರ್ಮಾನುರಾಗವೂ ಅನುಚಿತವೆಂದು ತಿಳಿಯಬೇಕು. ಅಲ್ಲಿ ಕೇವಲ ವೀತರಾಗಭಾವವೇ ಉಚಿತವೂ ಪ್ರಾಮುಖ್ಯವೂ ಆಗಿರುತ್ತದೆ.

**ಎಕ್ಕು ಜಿ ಮೆಲ್ಲಿವಿ ಬಂಭು ಪರು, ಭುವಣು ವಿ ಏಹು ಅಸೇಸು ।**
**ಪುಹವಿಹಿಂ ಣಿಮ್ಮಿಉ ಭಂಗುರಉ, ಏಹಉ ಬುಜ್ಝಿ ವಿಸೇಸು ॥ ೧೩೦ ॥**

"ಏಕಮೇವ ಮುಕ್ತ್ವಾ ಬ್ರಹ್ಮ ಪರಂ ಭುವನಮಪಿ ಏತತ್ ಅಶೇಷಮ್ ।
ಪೃಥಿವ್ಯಾಂ ನಿರ್ಮಾಪಿತಂ ಭಂಗುರಂ ಏತತ್ ಬುಧ್ಯಸ್ವ ವಿಶೇಷಮ್ ॥ ೧೩೦ ॥"

**ಅನ್ವಯಾರ್ಥ:**—ಜೀವನೇ! **ಎಕ್ಕು ಜಿ ಬಂಭು ಪರು**—ಕೇವಲ ಪರಬ್ರಹ್ಮ ವೆಂದು ಹೇಳಲ್ಪಡುವ ಶುದ್ಧಜೀವದ್ರವ್ಯವೊಂದನ್ನು **ಮೆಲ್ಲಿವಿ**—ಬಿಟ್ಟು **ಪುಹವಿಹಿಂ**—ಪೃಥ್ವಿಯಲ್ಲಿ(ಲೋಕದಲ್ಲಿ) **ಣಿಮ್ಮಿಉ**—ನಿರ್ಮಿಸಲ್ಪಟ್ಟ ಸರ್ವ ವಸ್ತುಗಳು **ಏಹು ಅಸೇಸು ಭುವಣು ವಿ**—ಈ(ಪ್ರತ್ಯಕ್ಷವಾದ)ಸಮಸ್ತ ಲೋಕವೂ **ಭಂಗುರಉ**—ವಿನ ಶ್ವರವಾದುದು **ಏಹಉ ಬುಜ್ಝಿ ವಿಸೇಸು**—ಈ ವಿಶೇಷವನ್ನು ತಿಳಿ ಅಥವಾ ಈ ವಿಷಯವನ್ನು ವಿಶೇಷವಾಗಿ(ಚೆನ್ನಾಗಿ) ತಿಳಿ.

**ಭಾವಾರ್ಥ:**—ಅನೇಕವೃಕ್ಷಗಳಿಂದ ನಿಬಿಡವಾಗಿರುವ ವನವನ್ನು ವನವೆಂದು ಒಂದೇ ಹೆಸರಿನಿಂದ ಹೇಳುವಂತೆ ಶುದ್ಧಸಂಗ್ರಹನಯದಿಂದ ಸಮಸ್ತಜೀವರಾಶಿಯು ಒಂದೇ ಶುದ್ಧಜೀವದ್ರವ್ಯವೆಂದು ಹೇಳಲ್ಪಡುತ್ತದೆ. ಈ ಜೀವರಾಶಿಯು ಅವಿನಾಶಿ ಯಾಗಿದೆ. ಈ ಜಗತ್ತಿನಲ್ಲಿ ಶುಭಾಶುಭಕರ್ಮಗಳಿಂದ ರಚಿಸಲ್ಪಟ್ಟಿರುವ (ಆತ್ಮಭಿನ್ನ ಗಳಾದ)ದೇಹಾದಿಸರ್ವವಸ್ತುಗಳೂ ವಿನಶ್ವರ(ನಾಶವುಳ್ಳುವು)ಗಳಾಗಿವೆ. ಆದುದರಿಂದ ಜೀವನೊಬ್ಬನೇ ನಿತ್ಯನೆಂದೂ ಇತರ ದೇಹಾದಿಗಳೆಲ್ಲವೂ ಅನಿತ್ಯವಾದವುಗಳೆಂದೂ ತಿಳಿ ಯಬೇಕು, ಹಾಗೂ ನಿರ್ಮಲಜ್ಞಾನದರ್ಶನಸ್ವಭಾವವುಳ್ಳ ಪರಬ್ರಹ್ಮ(ಶುದ್ಧಜೀವ ತತ್ತ್ವ)ನ ಹೊರತು ಮಿಕ್ಕ ಪಂಚೇಂದ್ರಿಯವಿಷಯಾದಿಗಳು ಕ್ಷಣಭಂಗುರ(ಕ್ಷಣದಲ್ಲಿ ನಾಶವಾಗುವುವು)ವಾದವುಗಳೆಂದು ತಿಳಿದು ವಿಷಯಾದಿಗಳ ಮೋಹವನ್ನು ತೊರೆದು ನಿಜಶುದ್ಧಾತ್ಮತತ್ತ್ವವನ್ನೇ ಆರಾಧಿಸ(ಆಶ್ರಯಿಸ)ಬೇಕೆಂದು ಭಾವಾರ್ಥವು.

**ಜೇ ದಿಟ್ಠಾ ಸೂರುಗ್ಗಮಣಿ, ತೇ ಅತ್ಥವಣಿ ಣ ದಿಟ್ಠ ।**
**ತೇಂ ಕಾರಣಿಂ ವಢ ಧಮ್ಮು ಕರಿ, ಧಣಿ ಜೊವ್ವಣಿ ಕಉ ತಿಟ್ಠ ॥೧೩೧॥**

"ಯೇ ದೃಷ್ಟಾಃ ಸೂರ್ಯೋದ್ಗಮನೇ ತೇ ಅಸ್ತಮನೇ ನ ದೃಷ್ಟಾಃ ।
ತೇನ ಕಾರಣೇನ ವತ್ಸ ಧರ್ಮಂ ಕುರು ಧನೇ ಯೌವನೇ ಕಾ ತೃಷ್ಣಾ ॥ ೧೩೧ ॥"

**ಅನ್ವಯಾರ್ಥ:**—**ವಢ**—ಎಲೈ ಶಿಷ್ಯನೇ! **ಜೇ**—ಯಾವುವು(ಯಾವವಸ್ತುಗಳು) **ಸೂರುಗ್ಗಮಣಿ**-ಸೂರ್ಯೋದಯದಲ್ಲಿ **ದಿಟ್ಠಾ**-ಕಾಣಲ್ಪಟ್ಟುವೋ **ತೇ**-ಅವುಗಳು **ಅತ್ಥ**

**ವಣಿ**— ಸೂರ್ಯನ ಅಸ್ತಮಾನದಲ್ಲಿ **ಣ ದಿಟ್ಠ**— ಕಾಣಲ್ಪಡುವುದಿಲ್ಲ. **ತೇಂ ಕಾರಣೇಂ**— ಆ ಕಾರಣದಿಂದ **ಧಮ್ಮು ಕರಿ**— ಧರ್ಮವನ್ನು ಮಾಡು. **ಧಣಿ ಜೊವ್ವಣಿ**— ಧನದಲ್ಲಿ ಮತ್ತು ಯೌವನದಲ್ಲಿ **ಕಉ ತಿಟ್ಠ**- ಯಾವ ತೃಷ್ಣೆ(ಲಾಲಸೆ, ಅಭಿಲಾಷೆ)ಯು ಅಂದರೆ ತೃಷ್ಣೆಪಡಲಾಗದೆಂದರ್ಥವು.

**ಭಾವಾರ್ಥ:**— ಧನ, ಧಾನ್ಯ, ಗೃಹ, ಪತ್ನಿ, ಪುತ್ರ, ಮಿತ್ರ, ಪಶು ಮೊದಲಾದುವು ಬೆಳಗ್ಗೆ ಕಾಣಲ್ಪಟ್ಟುವು, ಸಂಜೆ ಕಾಣಲ್ಪಡುವುದಿಲ್ಲ, ಅರ್ಥಾತ್ ನಷ್ಟವಾಗುತ್ತವೆ. ಶಿಷ್ಯನೇ! ಹೀಗೆ ಜಗತ್ತಿನ ಸರ್ವಪದಾರ್ಥಗಳನ್ನೂ ವಿನಶ್ವರವಾದುವುಗಳನ್ನಾಗಿ ತಿಳಿದು ಅವುಗಳ ಮೇಲಿನ ಅಭಿಲಾಷೆಯನ್ನು ಬಿಡು ಹಾಗೂ ಸಾಗಾರ-ಅನಾಗಾರ ರೂಪವಾದ ಧರ್ಮವನ್ನಾಚರಿಸು. ಪ್ರಥಮಾವಸ್ಥೆ ಅರ್ಥಾತ್ ಗೃಹಸ್ಥಾವಸ್ಥೆಯಲ್ಲಿ ಭೇದಾಭೇದರತ್ನತ್ರಯಾರಾಧಕರಾದ ಮುನಿಗಳಿಗೆ ಆಹಾರಾದಿ ಚತುರ್ವಿಧದಾನಗಳು *ದೇವಪೂಜಾದಿಗಳು ಮೊದಲಾದ ಧರ್ಮಕಾರ್ಯಗಳನ್ನು ಮಾಡು ಮತ್ತು ಆತ್ಮಶಕ್ತಿಯು ವೃದ್ಧಿಯಾಗಲು ಸರ್ವಸಂಗ(ಪರಿಗ್ರಹ)ವನ್ನು ತೊರೆದು ಮುನಿವ್ರತವನ್ನು ಸ್ವೀಕರಿಸಿ ನಿರ್ವಿಕಲ್ಪಸಮಾಧಿಯಲ್ಲಿ ಮಗ್ನನಾಗು. ಯೌವನಾವಸ್ಥೆಯಲ್ಲಿ ಯೌವನೋದ್ರೇಕದಿಂದುಂಟಾದ ವಿಷಯಾನುರಾಗವನ್ನು ತೊರೆದು ವಿಷಯಾನುರಾಗಕ್ಕೆ ಪ್ರತಿಪಕ್ಷ(ವಿರುದ್ಧ)ವಾದುದೂ ವೀತರಾಗಚಿದಾನಂದೈಕಸ್ವರೂಪವುಳ್ಳುದೂ ಆದ ಶುದ್ಧಾತ್ಮತತ್ತ್ವವನ್ನೇ ನಿರಂತರಭಾವಿಸಬೇಕೆಂದು ಭಾವಾರ್ಥವು.

**ಧಮ್ಮು ಣ ಸಂಚಿಉ ತಉ ಣ ಕಿಉ, ರುಕ್ಖೇಂ ಚಮ್ಮಮಏಣ ।**
**ಖಜ್ಜಿವಿ ಜರಉದ್ದೇಹಿಯಏ, ಣರಇ ಪಡಿವ್ವಉ ತೇಣ ॥ ೧೩೩ ॥**

"ಧರ್ಮೋ ನ ಸಂಚಿತಃ ತಪೋ ನ ಕೃತಂ ವೃಕ್ಷೇಣ ಚರ್ಮಮಯೇನ ।
ಖಾದಯಿತ್ವಾ ಜರೋದ್ರೇಹಿಕಯಾ ನರಕೇ ಪತಿತವ್ಯಂ ತೇನ ॥ ೧೩೩ ॥"

**ಅನ್ವಯಾರ್ಥ:**— ಯಾವ ಜೀವನಿಂದ **ಚಮ್ಮಮಏಣ ರುಕ್ಖೇಂ**— ಮನುಷ್ಯಶರೀರವೆಂಬ ಚರ್ಮಮಯವಾದ ವೃಕ್ಷ(ಮರ)ದಿಂದ **ಧಮ್ಮು ಣ ಸಂಚಿಉ**— ಧರ್ಮವು ಸಂಪಾದಿಸಲ್ಪಡಲಿಲ್ಲವೋ **ತಉ ಣ ಕಿಉ**— ತಪಶ್ಚರಣೆಯು ಮಾಡಲ್ಪಡಲಿಲ್ಲವೋ ಆತನ ಶರೀರರೂಪವೃಕ್ಷವು **ಜರಉದ್ದೇಹಿಯಏ**— ಜರೆ(ಮುದಿತನ)ಯೆಂಬ ಗೆದ್ದಲುಹುಳುಗಳಿಂದ **ಖಜ್ಜಿವಿ**— ತಿನ್ನಲ್ಪಟ್ಟು **ತೇಣ**— ಆ ಜೀವನಿಂದ **ಣರಇ ಪಡಿವ್ವಉ**— ನರಕದಲ್ಲಿ ಬೀಳಲ್ಪಡಬೇಕು ಅರ್ಥಾತ್ ಅವನು ನರಕದಲ್ಲಿ ಬೀಳಬೇಕಾಗುವುದು.

**ಭಾವಾರ್ಥ:**— ಯಾವ ಜೀವನು ಮನುಷ್ಯಶರೀರವನ್ನು ಪಡೆದು ಗೃಹಸ್ಥಾವಸ್ಥೆಯಲ್ಲಿ ಸಮ್ಯಕ್ತ್ವಪೂರ್ವಕವಾದ ದಾನ, ಶೀಲ, ಪೂಜಾ, ಉಪವಾಸಾದಿರೂಪವಾದ

---

*ದೇವಪೂಜೆ, ಗುರೂಪಾಸ್ತಿ, ಶಾಸ್ತ್ರಸ್ವಾಧ್ಯಾಯ, ವ್ರತಾಚರಣೆ, ಉಪವಾಸಾದಿತಪಶ್ಚರಣೆ, ಚತುರ್ವಿಧದಾನ— ಇವಾರು: ಗೃಹಸ್ಥರ ದೈನಿಕಕ್ರಿಯೆಗಳು.

ಗೃಹಸ್ಥಧರ್ಮವನ್ನು ಮತ್ತು ದರ್ಶನಪ್ರತಿಮೆ, ವ್ರತಪ್ರತಿಮೆ ಮೊದಲಾದ ಹನ್ನೊಂದು ಪ್ರಕಾರವಾದ ಶ್ರಾವಕಧರ್ಮವನ್ನು ಧರಿಸ(ಆಚರಿಸ)ಲಿಲ್ಲವೋ, ಮುನಿಅವಸ್ಥೆಯಲ್ಲಿ ಸಮಸ್ತಪರದ್ರವ್ಯಗಳ ಇಚ್ಛೆಯನ್ನು ನಿರೋಧಿಸಿ ಅನಶನಮೊದಲಾದ ಹನ್ನೆರಡುವಿಧ ವಾದ ತಪಶ್ಚರಣೆಯುಬಲದಿಂದ ನಿಜಶುದ್ಧಾತ್ಮಧ್ಯಾನದಲ್ಲಿ ಲೀನನಾದವನಾಗಿ ನಿರಂತರ ನಿಜಶುದ್ಧಾತ್ಮಭಾವನೆಯನ್ನು ಮಾಡಲಿಲ್ಲವೋ ಆ ಜೀವನ ಮನುಷ್ಯಶರೀರವೆಂಬ ವೃಕ್ಷವು ಜರೆಯೆಂಬ ಗೆದ್ದಲುಹುಳುಗಳಿಂದ ತಿನ್ನಲ್ಪಟ್ಟುದಾಗಿ ಅರ್ಥಾತ್ ಜರಾಕ್ರಾಂತ ವಾಗಿ ವ್ಯರ್ಥವಾಗಿ ನಾಶವಾಗುವುದು. ಇದರಿಂದ ಆ ಜೀವನು ನರಕಾದಿದುರ್ಗತಿ ಗಳಲ್ಲಿ ಬಿದ್ದು ಅಸಹ್ಯದುಃಖಗಳನ್ನನುಭವಿಸಬೇಕಾಗುವುದು. ಆದುದರಿಂದ ***"ಅನ ಶ್ವರಸುಖಾವಾಪ್ತೌ ಸತ್ಯಾಂ ನಶ್ವರಕಾಯತಃ । ಕಿಂ ವೃಥೈವ ನಯಸ್ಯಾತ್ಮನ್! ಕ್ಷಣಂ ವಾ ಸಫಲಂ ನಯ ॥"** ಎಂದು ಶ್ರೀಮದ್ವಾದೀಭಸಿಂಹಸೂರಿಗಳು ಹೇಳು ವಂತೆ ನಶ್ವರವಾದೀ ಮನುಷ್ಯಶರೀರದಿಂದ ಮಾಡಿದ ತಪಶ್ಚರಣೆ ಹಾಗೂ ನಿಜಶುದ್ಧಾತ್ಮ ಧ್ಯಾನಾದಿಗಳಿಂದ ಅನಶ್ವರವಾದ ಮೋಕ್ಷಸುಖವು ಲಭಿಸುತ್ತಿರಲು ಜೀವನೇ! ನೀನು ಅಜ್ಞಾನದಿಂದ ಪರವಸ್ತುಗಳಲ್ಲಿ ಮೋಹಗೊಂಡವನಾಗಿ ನಿನ್ನೀ ಮನುಷ್ಯದೇಹವನ್ನು ಏಕೆ ವ್ಯರ್ಥವಾಗಿ ಕಳಕೊಳ್ಳುವೆ? ಈ ಶರೀರದಿಂದ ಸಾಗಾರ-ಅನಾಗಾರಧರ್ಮ ಗಳನ್ನು ಆಚರಿಸಿ ಆತ್ಮಕಲ್ಯಾಣವನ್ನು ಸಾಧಿಸು. ಇದರಿಂದಲೇ ನಿನ್ನ ದುರ್ಲಭ ವಾದೀ ಮನುಷ್ಯಜನ್ಮ(ಹಾಗೂಮನುಷ್ಯಶರೀರ)ವು ಸಫಲವಾಗುವುದಲ್ಲದೆ ಅನ್ಯಥಾ ನಿಷ್ಫಲವಾಗುವುದೆಂದು ಭಾವವು.

**ಅರಿ ಜಿಯ ಜಿಣಪಇ ಭತ್ತಿ ಕರಿ, ಸುಹಿ ಸಜ್ಜಣು ಅವಹೇರಿ ।**
**ತಿಂ ಬಪ್ಪೇಣ ವಿ ಕಜ್ಜು ಣವಿ, ಜೋ ಪಾಡಇ ಸಂಸಾರಿ ॥ ೧೩೪ ॥**

"ಅರೇ ಜೀವ ಜಿನಪದೇ ಭಕ್ತಿಂ ಕುರು ಸುಖಂ ಸ್ವಜನಂ ಅಪಹರ ।
ತೇನ ಪಿತ್ರಾಪಿ ಕಾರ್ಯಂ ನೈವ ಯಃ ಪಾತಯತಿ ಸಂಸಾರೇ ॥ ೧೩೪ ॥"

**ಅನ್ವಯಾರ್ಥ:— ಅರಿ ಜಿಯ—** ಎಲೈ ಭವ್ಯಜೀವನೇ! **ಜಿಣಪಇ ಭತ್ತಿ ಕರಿ—** ಜಿನಪದದಲ್ಲಿ(ಜಿನೇಂದ್ರರವಾದಕಮಲಗಳಲ್ಲಿ ಅಥವಾ ಜಿನೋಪದಿಷ್ಟವಾದ ಧರ್ಮ ದಲ್ಲಿ) ಭಕ್ತಿಯನ್ನು(ಪ್ರೀತಿಯನ್ನು) ಮಾಡು. **ಸುಹಿ ಸಜ್ಜಣು—** ಸಾಂಸಾರಿಕಸುಖ ವನ್ನೂ ಆ ಸುಖಕ್ಕೆ ಸಹಕಾರಿಕಾರಣರಾದ ಸ್ವಜನರನ್ನೂ **ಅವಹೇರಿ—** ತ್ಯಾಗಮಾಡು. **ಜೋ—** ಯಾವನು **ಸಂಸಾರಿ ಪಾಡಇ—** (ಮೋಹವನ್ನುಂಟುಮಾಡುವುದರಿಂದ) ಸಂಸಾ ರದಲ್ಲಿ ಬೀಳಿಸುತ್ತಾನೋ **ತಿಂ ಬಪ್ಪೇಣ ವಿ—** ಆ ತಂದೆಯಿಂದಲೂ **ಕಜ್ಜು ಣವಿ—** ಕಾರ್ಯವಿರುವುದಿಲ್ಲ; ಅರ್ಥಾತ್ ಪಿತೃಪ್ರೀತಿಯೂ ಬಿಡಲುಯೋಗ್ಯವಾಗಿರುತ್ತದೆಂದಭಿ ಪ್ರಾಯವು.

---

*** ಕ್ಷತ್ರಚೂಡಾಮಣಿ. ಲಂಬ—೧೧, ಶ್ಲೋಕ ೩೨.**

**ಭಾವಾರ್ಥ:**— ಎಲೈ ಭವ್ಯಜೀವನೇ! ನೀನು ಅನಾದಿಕಾಲದಿಂದ ದುರ್ಲಭವೂ ವೀತರಾಗಸರ್ವಜ್ಞೋಪದಿಷ್ಟವೂ ರಾಗದ್ವೇಷಮೋಹರಹಿತವಾದ ಜೀವಪರಿಣಾಮಲಕ್ಷಣ ವುಳ್ಳುದೂ ಆದ ಶುದ್ಧೋಪಯೋಗರೂಪನಿಶ್ಚಯಧರ್ಮದಲ್ಲಿಯೂ, ಷಡಾವಶ್ಯಕಾದಿ ಲಕ್ಷಣವುಳ್ಳ ಅಥವಾ ಗೃಹಸ್ಥಾಪೇಕ್ಷೆಯಿಂದ ದಾನಪೂಜಾದಿಲಕ್ಷಣವುಳ್ಳ ಶುಭೋಪ ಯೋಗರೂಪವಾದ ಧರ್ಮದಲ್ಲಿಯೂ ಭಕ್ತಿ(ಪ್ರೀತಿ)ಯನ್ನು ಮಾಡು. ಇಂತಹ ಧರ್ಮಕ್ಕೆ ಪ್ರತಿಕೂಲರಾದ ಸ್ವಜನರನ್ನಾದರೂ ಬಿಡು ಹಾಗೂ ಧರ್ಮಾನುಕೂಲರಾದ ಪರಜನರನ್ನಾದರೂ ಸ್ವೀಕರಿಸು. ಸಾರಾಂಶತಃ ಈ ಜೀವನು ವಿಷಯಸುಖಗಳನ್ನು ಪ್ರೀತಿಸುವಂತೆ ಜಿನಧರ್ಮವನ್ನು ಪ್ರೀತಿಸಿದುದಾದರೆ ಆತನು ಭವಕಾನನದಲ್ಲಿ ಭ್ರಮಿ ಸಲಾರನು. ಇದೇ ಆಶಯವನ್ನು ಗ್ರಂಥಾಂತರದಲ್ಲಿ ಹೀಗೆ ಹೇಳಿದ್ದಾರೆ:—**"ವಿಸ ಯುಹಂ ಕಾರಣಿ ಸವ್ವು ಜಿಣು ಜಮು ಅಣುರಾಉ ಕರೇಇ। ತಿಮು ಜಿಣಭಾಸಿವಿ ಧಮ್ಮಿ ಜಇ ಣ ಉ ಸಂಸಾರಿ ಪಡೇಇ॥"** ಅರ್ಥಾತ್ ಜನರು ಇಂದ್ರಿಯವಿಷಯ ಗಳಲ್ಲಿ ಹೇಗೆ ಅನುರಾಗವನ್ನು ಮಾಡುತ್ತಾರೋ ಹಾಗೆ ಅವರು ಜಿನೋಪದಿಷ್ಟವಾದ ಧರ್ಮದಲ್ಲಿ ಅನುರಾಗ(ಪ್ರೀತಿ)ವನ್ನಿಟ್ಟುದುದಾದರೆ ಸಂಸಾರಸಾಗರದಲ್ಲಿ ಬೀಳಲಾರರು. ಅತಏವ ಜಿನೋಪದಿಷ್ಟವಾದ ಧರ್ಮವು ಉಪಾದೇಯವಾಗಿರುತ್ತದೆಂದು ಭಾವಾರ್ಥವು.

**ಜೇಣ ಣ ಚಿಣ್ಣಉ ತವಯರಣು, ಣಿಮ್ಮಲು ಚಿತ್ತು ಕರೇವಿ।**
**ಅಪ್ಪಾ ವಂಚಿಉ ತೇಣ ಪರ, ಮಾಣುಸಜಮ್ಮು ಲಹೇವಿ ॥ ೧೩೫ ॥**

"ಯೇನ ನ ಚೀರ್ಣಂ ತಪಶ್ಚರಣಂ ನಿರ್ಮಲಂ ಚಿತ್ತಂ ಕೃತ್ವಾ।
ಆತ್ಮಾ ವಂಚಿತಃ ತೇನ ಪರಂ ಮನುಷ್ಯಜನ್ಮ ಲಬ್ಧ್ವಾ ॥ ೧೩೫ ॥"

**ಅನ್ವಯಾರ್ಥ:**— **ಜೇಣ**— ಯಾವ ಮನುಷ್ಯನಿಂದ **ಚಿತ್ತು ಣಿಮ್ಮಲು ಕರೇವಿ** ಮನಸ್ಸನ್ನು ನಿರ್ಮಲಗೊಳಿಸಿ **ತವಯರಣು**— ತಪಶ್ಚರಣೆಯು **ಣ ಚಿಣ್ಣಉ**— ಮಾಡಲ್ಪಡಲಿಲ್ಲವೋ(ಆಚರಿಸಲ್ಪಡಲಿಲ್ಲವೋ) **ತೇಣ**— ಅವನಿಂದ **ಮಾಣುಸಜಮ್ಮು ಲಹೇವಿ**— ಮನುಷ್ಯಜನ್ಮವನ್ನು ಪಡೆದು **ಪರ**— ನಿಶ್ಚಯವಾಗಿ **ಅಪ್ಪಾ ವಂಚಿಉ**— ತನ್ನಾತ್ಮನು ವಂಚಿಸಲ್ಪಟ್ಟನು.

**ಭಾವಾರ್ಥ:**— ಅನಾದಿಸಂಸಾರದಲ್ಲಿ ಭ್ರಮಿಸುತ್ತಿರುವ ಜೀವನಿಗೆ ಮನುಷ್ಯಜನ್ಮ (ಭವ)ದ ಪ್ರಾಪ್ತಿಯು ದುರ್ಲಭವಾದುದು. ಅದರಲ್ಲೂ ಆರ್ಯಕ್ಷೇತ್ರ, ಉತ್ತಮ ಕುಲ, ಸತ್ಸಂಗ, ಧರ್ಮಶ್ರವಣ, ಧರ್ಮಾಚರಣೆ ಇವು ಮೊದಲಾದುವುಗಳ ಪ್ರಾಪ್ತಿಯು ಅತಿದುರ್ಲಭವು. ಆತ್ಮಜ್ಞಾನವುಂಟಾಗುವುದಂತೂ ಎಲ್ಲಕ್ಕಿಂತಲೂ ದುರ್ಲಭವು. ಇಂತಹ ದುರ್ಲಭವಾದ ಮನುಷ್ಯಜನ್ಮವನ್ನು ಪಡೆದೂ ಯಾವ ಜೀವನು ತನ್ನ ಚಿತ್ತ ವನ್ನು ನಿರ್ಮಲಗೊಳಿಸಿ ಅರ್ಥಾತ್ ಕಾಮಕ್ರೋಧಾದಿಭಾವಗಳನ್ನು ತೊರೆಯುವುದ ರಿಂದ ನಿರ್ಮಲವಾದ ಮನಸ್ಸುಳ್ಳವನಾಗಿ ಬಾಹ್ಯಾಭ್ಯಂತರತಪಶ್ಚರಣೆಯನ್ನು ಮಾಡುವುದಿ ಲ್ಲವೋ ಆತನು ನಿಜವಾಗಿಯೂ ಆತ್ಮವಂಚಕನಾಗುತ್ತಾನೆ. ಆದುದರಿಂದ ದುರ್ಲಭ

ವಾದೀ ಮನುಷ್ಯಜನ್ಮವನ್ನು ಪಡೆದು ಬಾಹ್ಯಾಭ್ಯಂತರತಪಸ್ಸುಗಳನ್ನಾಚರಿಸುವವನಾಗಿ ನಿರ್ವಿಕಲ್ಪಸಮಾಧಿಯ ಬಲದಿಂದ ಚಿತ್ತಶುದ್ಧಿಯನ್ನು ಪಡೆಯಬೇಕು. ಏಕೆಂದರೆ ಚಿತ್ತಶುದ್ಧಿಯೇ ಮುಕ್ತಿಗೆ ಕಾರಣವಾಗಿರುತ್ತದೆಂದು ಗ್ರಂಥಾಂತರದಲ್ಲಿ ಹೇಳಲ್ಪಟ್ಟಿದೆ:- **"ಚಿತ್ತೇ ಬದ್ಧೇ ಬದ್ಧೋ ಮುಕ್ಕೇ ಮುಕ್ಕೊತ್ತಿ ಣತ್ಥಿ ಸಂದೇಹೋ । ಅಪ್ಪಾ ವಿಮಲಸಹಾವೋ ಮಇಲಿಜ್ಜಇ ಮಇಲಿಏ ಚಿತ್ತೇ ॥"** ಅಂದರೆ ಚಿತ್ತವು ಬದ್ಧವಾಗುತ್ತಿರಲು ಅರ್ಥಾತ್ ಧನಧಾನ್ಯಾದಿಪರಿಗ್ರಹಗಳಲ್ಲಿ ಆಸಕ್ತವಾಗುತ್ತಿರಲು ಜೀವನು ಕರ್ಮಗಳಿಂದ ಬಂಧಿಸಲ್ಪಡು(ಬದ್ಧನಾಗು)ತ್ತಾನೆ, ಹಾಗೂ ಚಿತ್ತವು ಪರಿಗ್ರಹೇಚ್ಛೆಯಿಂದ ಬಿಡಲ್ಪಡುತ್ತಿರಲು ಮುಕ್ತನಾಗುತ್ತಾನೆ. ಇದರಲ್ಲಿ ಸಂದೇಹವಿಲ್ಲ. ನಿರ್ಮಲಸ್ವಭಾವವುಳ್ಳ ಆತ್ಮನು ಚಿತ್ತದ ಮಲಿನತೆಯಿಂದ ಮಲಿನತ್ವವನ್ನು ಹೊಂದುತ್ತಾನೆಂದಭಿಪ್ರಾಯವು.

**ಏ ಪಂಚಿಂದಿಯಕರಹಡಾ, ಜಿಯ ಮೊಕ್ಕಲಾ ಮ ಚಾರಿ ।**
**ಚರಿವಿ ಅಸೇಸು ವಿ ವಿಸಯವಣು, ಪುಣು ಪಾಡಹಿಂ ಸಂಸಾರಿ ॥ ೧೩೬ ॥**

"ಏತೇ ಪಂಚೇಂದ್ರಿಯಕರಭಕಾಃ ಜೀವ ಮುಕ್ತಾನ್ ಮಾ ಚಾರಯ ।
ಚರಿತ್ವಾ ಅಶೇಷಂ ಅಪಿ ವಿಷಯವನಂ ಪುನಃ ಪಾತಯಂತಿ ಸಂಸಾರೇ ॥ ೧೩೬ ॥"

**ಅನ್ವಯಾರ್ಥ:— ಜಿಯ**- ಎಲೈ ಜೀವನೇ! **ಪಂಚಿಂದಿಯಕರಹಡಾ**- ಪಂಚೇಂದ್ರಿಯಗಳೆಂಬ ಒಂಟೆಗಳನ್ನು **ಮೊಕ್ಕಲಾ**— ಬಂಧನವಿಲ್ಲದವುಗಳನ್ನಾಗಿ(ಸ್ವೇಚ್ಛೆಯಾಗಿ, ನಿರಂಕುಶವಾಗಿ) **ಮ ಚಾರಿ**— ನಡೆಯಿಸಬೇಡ ಅಥವಾ ಮೇಯಿಸಬೇಡ. **ಏ**- ಇವುಗಳು **ಅಸೇಸು ವಿ ವಿಸಯವಣು**— ಸಂಪೂರ್ಣವಾದ ವಿಷಯಗಳೆಂಬ ವನವನ್ನು **ಚರಿವಿ**— ಸಂಚರಿಸಿ ಅಥವಾ ಭಕ್ಷಿಸಿ **ಪುಣು**- ಮರಳಿ **ಸಂಸಾರಿ ಪಾಡಹಿಂ**—(ಜೀವನನ್ನು) ಸಂಸಾರದಲ್ಲಿ ಬೀಳಿಸುತ್ತವೆ.

**ಭಾವಾರ್ಥ:**— ಇಲ್ಲಿ ಇಂದ್ರಿಯಜಯ(ಜಿತೇಂದ್ರಿಯತ್ವ)ವನ್ನು ಪ್ರತಿಪಾದಿಸುವುದಕ್ಕಾಗಿ ಸ್ಪರ್ಶನ ಮೊದಲಾದೈದು ಇಂದ್ರಿಯಗಳನ್ನು ಒಂಟೆಗಳಿಗೆ ಹೋಲಿಸುತ್ತಾರೆ. ವನದಲ್ಲಿ ಸ್ವೇಚ್ಛೆಯಾಗಿ ಸಂಚರಿಸಲು ಹಾಗೂ ಮೇಯಲು ಬಿಟ್ಟಿರುವ ಒಂಟೆಗಳು ಇಡೀ ವನದಲ್ಲಿ ಸಂಚರಿಸಿ ಆ ವನದಲ್ಲಿರುವ ತೃಣಲತಾದಿಗಳನ್ನು ಸಂಪೂರ್ಣವಾಗಿ ಭಕ್ಷಿಸುವಂತೆ ಸ್ವೇಚ್ಛೆಯಾಗಿ ಬಿಡಲ್ಪಟ್ಟ ಇಂದ್ರಿಯಗಳು ಸಾಂಸಾರಿಕವಿಷಯಭೋಗಗಳನ್ನು ಅನುಭವಿಸಿ ಜೀವನನ್ನು ಪುನಃ ಪುನಃ ಸಂಸಾರದಲ್ಲಿ ಬೀಳಿಸುತ್ತವೆಂದಭಿಪ್ರಾಯವು. ಅತಏವ ಜೀವನೇ! ನೀನು ಸ್ವಶುದ್ಧಾತ್ಮಭಾವನೆಯಿಂದುಂಟಾದ ವೀತರಾಗಪರಮಾನಂದೈಕರೂಪವಾದ ಆತ್ಮೀಯಸುಖದಿಂದ ಪರಾಙ್ಮುಖನಾಗಿ ಮೋಹವಶದಿಂದ ಪರಮಾತ್ಮಸ್ವರೂಪಕ್ಕೆ ವಿಪರೀತಗಳಾದ ಪಂಚೇಂದ್ರಿಯಗಳನ್ನು ಸ್ವೇಚ್ಛೆಯಾಗಿ ಬಿಡಬೇಡ. ಅವುಗಳನ್ನು ತನ್ನ ಸ್ವಾಧೀನದಲ್ಲಿಟ್ಟುಕೊಳ್ಳುವವನಾಗಿ ಜಿತೇಂದ್ರಿಯನಾಗು.

ಇಲ್ಲವಾದರೆ ವಿಷಯುಗಳಲ್ಲಿ ಸ್ವಚ್ಛಂದವಾಗಿ ಪ್ರವರ್ತಿಸುವ ಆ ಇಂದ್ರಿಯುಗಳು ನಿನ್ನನ್ನು ದ್ರವ್ಯ, ಕ್ಷೇತ್ರ, ಕಾಲ, ಭವ, ಭಾವರೂಪದಿಂದ ಪಂಚಪ್ರಕಾರವಾದ ಸಂಸಾರ ದಲ್ಲಿ ಪುನಃ ಪುನಃ(ಬಾರಿಬಾರಿಗೆ) ಬೀಳಿಸುವುವು.

**ಜೋಇಯ ವಿಸಮಾ ಜೋಯಗಇ, ಮಣು ಸಂಠವಣ ಣ ಜಾಇ ।**
**ಇಂದಿಯವಿಸಯ ಜಿ ಸುಕ್ಖಡಾ, ತಿತ್ಥು ಜಿ ವಲಿ ವಲಿ ಜಾಇ ॥ ೧೩೭ ॥**

"ಯೋಗಿನ್ ವಿಷಮಾ ಯೋಗಗತಿಃ ಮನಃ ಸಂಸ್ಥಾಪಿತುಂ ನ ಯಾತಿ ।
ಇಂದ್ರಿಯವಿಷಯೇಷು ಏವ ಸುಖಾನಿ ತತ್ರ ಏವ ಪುನಃ ಪುನಃ ಯಾತಿ ॥ ೧೩೭ ॥"

**ಅನ್ವಯಾರ್ಥ:— ಜೋಇಯ**— ಎಲೈ ಯೋಗಿಯೇ! **ಜೋಯಗಇ**-ಯೋಗ (ಧ್ಯಾನ)ದ ಗತಿಯು **ವಿಸಮಾ**— ವಿಷಮ(ಕಠಿನ)ವಾದುದು. ಏಕಂದರೆ **ಮಣು**— ಚಿತ್ತವು **ಸಂಠವಣ ಣ ಜಾಇ**— ಸ್ಥಿರಗೊಳಿಸಲು ಬರುವುದಿಲ್ಲ. ಅದು **ಇಂದಿಯ ವಿಸಯ ಜಿ**— ಇಂದ್ರಿಯವಿಷಯುಗಳಲ್ಲಿಯೇ **ಸುಕ್ಖಡಾ**— ಸುಖಗಳನ್ನು ತಿಳಿದು **ತಿತ್ಥು ಜಿ**— ಅಲ್ಲಿಯೇ ಅರ್ಥಾತ್ ಇಂದ್ರಿಯವಿಷಯುಗಳಲ್ಲೇ **ವಲಿ ವಲಿ ಜಾಇ**— ಪುನಃ ಪುನಃ ಹೋಗು(ಪ್ರವರ್ತಿಸು)ತ್ತದೆ.

**ಭಾವಾರ್ಥ:**— ಮನವೆಂಬ ಮರ್ಕಟವು ಅತ್ಯಂತಚಪಲವಾದುದು. ಅದನ್ನು ನಿಜಶುದ್ಧಾತ್ಮನಲ್ಲಿ ಸ್ಥಿರಗೊಳಿಸುವುದು ಅತಿಕಠಿನವು. ಏಕಂದರೆ ವೀತರಾಗಪರಮಾನಂದ ಸಮರಸೀಭಾವರೂಪವಾದ ಸುಖದಿಂದ ರಹಿತರಾದ ಸಂಸಾರಿಜೀವರು ಅನಾದಿಕಾಲ ದಿಂದ ಸಂಬಂಧಿಸಿ (ಅನುಸರಿಸಿ) ಬಂದಿರುವ ಅಜ್ಞಾನದಿಂದ ಕೂಡಿದವರಾಗಿರುವರು. ಈ ಕಾರಣದಿಂದ ಪಂಚೇಂದ್ರಿಯವಿಷಯಸುಖವೇ ನಿಜವಾದ ಸುಖವೆಂದು ತಿಳಿದಿರುವ ಅವರ ಚಿತ್ತವು (ಮನಸ್ಸು) ಆ ವಿಷಯುಗಳಲ್ಲೇ ಬಾರಿಬಾರಿಗೂ ಆಸಕ್ತವಾಗುತ್ತದಲ್ಲದೆ ನಿಜಸ್ವರೂಪದಲ್ಲಾಸಕ್ತಿಯನ್ನು ಹೊಂದುವುದಿಲ್ಲ. ಅತಏವ ಧ್ಯಾನಗತಿ (ಧ್ಯಾನದಲ್ಲಿ ಪ್ರವರ್ತಿಸುವಿಕೆ)ಯು ಅತ್ಯಂತ ಕಠಿನವಾದುದೆಂದು ಭಾವವು. ಮುಂದೆ ಪ್ರಕ್ಷೇಪಕ ಗಾಥೆಯೊಂದನ್ನು ಹೇಳುತ್ತಾರೆ:—

**ಸೋ ಜೋಇಉ ಜೋ ಜೋಗವಇ, ದಂಸಣು ಣಾಣು ಚರಿತ್ತು ।**
**ಹೋಯವಿ ಪಂಚಹಂ ಬಾಹಿರಉ, ಝಾಯಂತಉ**
**ಪರಮತ್ಥು ॥ ೧೩೭*೫ ॥**

"ಸ ಯೋಗೀ ಯಃ ಪಾಲಯತಿ[?] ದರ್ಶನಂ ಜ್ಞಾನಂ ಚಾರಿತ್ರಮ್ ।
ಭೂತ್ವಾ ಪಂಚಭ್ಯಃ ಬಾಹ್ಯಃ ಧ್ಯಾಯನ್ ಪರಮಾರ್ಥಮ್ ॥ ೧೩೭*೫ ॥"

**ಅನ್ವಯಾರ್ಥ:— ಜೋ**— ಯಾವನು **ಪಂಚಹಂ**— ಪಂಚೇಂದ್ರಿಯುಗಳಿಂದ **ಬಾಹಿರಉ ಹೋಯವಿ**— ಬಾಹ್ಯ(ದೂರ)ನಾಗಿ ಮತ್ತು **ಪರಮತ್ಥು ಝಾಯಂತಉ**—

---

* ಪ್ರಕ್ಷೇಪಕ.

ಪರಮಾರ್ಥವೆಂದು ಹೇಳಲ್ಪಡುವ ಪರಮಾತ್ಮನನ್ನು ಧ್ಯಾನಿಸುವವನಾಗಿ **ದಂಸಣು ಣಾಣು ಚರಿತ್ತು**— ದರ್ಶನ ಜ್ಞಾನ ಚಾರಿತ್ರ(ರತ್ನತ್ರಯ)ಗಳನ್ನು **ಜೋಗವಇ**— ಪಾಲಿಸುತ್ತಾನೋ **ಸೋ ಜೋಇಉ**— ಆತನು ಯೋಗಿಯು.

**ಭಾವಾರ್ಥ:**— ಯಾವನು ಪಂಚಪರಮೇಷ್ಠಿಭಾವನಾಪ್ರತಿಕೂಲಗಳೂ ಪಂಚಮ ಗತಿ(ಮೋಕ್ಷ)ಯ ಸುಖಕ್ಕೆ ವಿಘ್ನವನ್ನುಂಟುಮಾಡುವುವೂ ಆದ ಪಂಚೇಂದ್ರಿಯಗಳನ್ನು (ಇಂದ್ರಿಯವಿಷಯಗಳನ್ನು) ತೊರೆದು ವಿಶುದ್ಧಜ್ಞಾನದರ್ಶನಸ್ವಭಾವವುಳ್ಳ ಪರಮಾತ್ಮನನ್ನು ಧ್ಯಾನಿಸುವವನಾಗಿ ನಿಜಶುದ್ಧಾತ್ಮದ್ರವ್ಯದ ಸಮ್ಯಕ್ಶ್ರದ್ಧಾನಜ್ಞಾನಾನುಷ್ಠಾನ ರೂಪವಾದ ನಿಶ್ಚಯರತ್ನತ್ರಯವನ್ನು ರಕ್ಷಿಸುತ್ತಾನೋ ಆತನೇ ನಿಜವಾದ ಯೋಗಿ (ಧ್ಯಾನಿ)ಯು ಇಲ್ಲಿ 'ಸಮಾಧಿ' ಎಂಬ ಅರ್ಥವುಳ್ಳ 'ಯುಜ್' ಧಾತುವಿನಿಂದುಟಾದ 'ಯೋಗ' ಶಬ್ದದಿಂದ ವೀತರಾಗನಿರ್ವಿಕಲ್ಪಸಮಾಧಿಯು ಗ್ರಾಹ್ಯವಾಗಿರುತ್ತವೆ. ಅಥವಾ ಅನಂತಜ್ಞಾನಾದಿಗುಣರೂಪನಾದ ಸ್ವಶುದ್ಧಾತ್ಮನಲ್ಲಿ ಯೋಜನೆಯು ಅರ್ಥಾತ್ ತದ್ರೂಪವಾಗಿ ಪರಿಣಮಿಸುವಿಕೆಯು ಯೋಗವು ಆ ಯೋಗವುಳ್ಳವನೇ ಯೋಗಿಯು, ಧ್ಯಾನಿಯು ಹಾಗೂ ತಪೋಧನನಾಗಿರುವನು.

**ವಿಸಯಸುಹಇಂ ಬೇ ದಿವಹಡಾ, ಪುಣು ದುಕ್ಖಹಂ ಪರಿವಾಡಿ ।**
**ಭುಲ್ಲಉ ಜೀವ ಮ ವಾಹಿ ತುಹುಂ, ಅಪ್ಪಣ ಖಂಧಿ ಕುಹಾಡಿ ॥ ೧೩೮ ॥**

"ವಿಷಯಸುಖಾನಿ ದ್ವೇ ದಿವಸಕೇ ಪುನಃ ದುಃಖಾನಾಂ ಪರಿಪಾಟೀ ।
ಭ್ರಾಂತ ಜೀವ ಮಾ ವಾಹಯ ತ್ವಂ ಆತ್ಮನಃ ಸ್ಕಂಧೇ ಕುಠಾರಮ್ ॥ ೧೩೮ ॥"

**ಅನ್ವಯಾರ್ಥ**— **ವಿಸಯಸುಹಇಂ**— ವಿಷಯಸುಖಗಳು **ಬೇ ದಿವಹಡಾ**— ಎರಡು ದಿವಸದವುಗಳು **ಪುಣು**— ಮರಳಿ(ಆ ಮೇಲೆ) **ದುಕ್ಖಹಂ ಪರಿವಾಡಿ**— ದುಃಖಗಳ ಪರಿಪಾಟಿಯು ಅರ್ಥಾತ್ ವಿಷಯಗಳು ದುಃಖದ ಪರಂಪರೆಗೆ ಕಾರಣಗಳಾಗುತ್ತವೆ. ಅತಏವ **ಭುಲ್ಲಉ ಜೀವ**— ಭ್ರಾಂತನಾದ ಜೀವನೇ! **ತುಹುಂ**— ನೀನು **ಅಪ್ಪಣ ಖಂಧಿ**— ತನ್ನ ಸ್ಕಂಧ(ಹೆಗಲು)ದಲ್ಲಿ **ಕುಡಾಹಿ**— ಕೊಡಲಿಯನ್ನು **ಮ ವಾಹಿ**— ಇಟ್ಟುಕೊಳ್ಳಬೇಡ ಅರ್ಥಾತ್ ಪ್ರಯೋಗಿಸಬೇಡ.

**ಭಾವಾರ್ಥ:**— ವಿಷಯಸುಖವು ಸ್ಥಿರವಾದುದಲ್ಲ. ಅದು ಕ್ಷಣಭಂಗುರವಾದುದು ಹಾಗೂ ಬಾರಿಬಾರಿಗೆ ದುರ್ಗತಿದುಃಖವನ್ನುಂಟುಮಾಡುವಂತಹುದು. ಆದುದರಿಂದ ವಿಷಯಗಳನ್ನು ಸೇವಿಸುವುದೆಂದರೆ ತನ್ನ ಹೆಗಲಿಗೆ ತಾನು ಕೊಡಲಿಯಿಂದ ಹೊಡೆದುಕೊಂಡಂತೆಯೇ ಸರಿ. ವಸ್ತುತಃ ವಿಷಯಸುಖವೆಂಬುದು ದುಃಖವೇ ಆಗಿರುತ್ತವೆ. ಇದನ್ನು ಗ್ರಂಥಾಂತರದಲ್ಲಿ ಹೀಗೆ ಹೇಳಿದ್ದಾರೆ— **"ಅಪಾತಮಾತ್ರರಸಿಕಾ ವಿಷಯಾ ವಿಷದಾರುಣಾಃ । ತದುದ್ಭವಂ ಸುಖಂ ನೄಣಾಂ ಕಚ್ಛೂಕಂಡೂಯನೋಪಮಮ್ ॥"** ಅರ್ಥಾತ್ ವಿಷಯಗಳು ಆರಂಭದಲ್ಲಿ ಮಾತ್ರ ಅಲ್ಪಸುಖವನ್ನುಂಟುಮಾಡುವುವು. ಮುಂದೆ ಅವು ವಿಷದಂತೆ ಭಯಂಕರವಾದ ಘೋರದುಃಖ

ವನ್ನುಂಟುಮಾಡುವುವು. ಆದುದರಿಂದ ಮನುಷ್ಯರಿಗೆ ವಿಷಯುಗಳಿಂದುಂಟಾದ ಸುಖವು ತುರಿಕೆ (ಗಜಕರ್ಣ, ತದ್ದು)ಯನ್ನು ತುರಿಸಿದುದಕ್ಕೆ ಸಮಾನವಾದುದು ಅರ್ಥಾತ್ ಗಜಕರ್ಣ ಮೊದಲಾದುವುಗಳನ್ನು ತುರಿಸುವುದರಿಂದ ಮೊದಲು ಸುಖವಾದಂತೆ ಕಾಣುತ್ತದೆ ಆದರೆ ಆ ಮೇಲೆ ಅದರಿಂದ ಉರಿಯುಂಟಾಗಿ ಬಹಳ ದುಃಖವಾಗುತ್ತದೆ. ಅದರಂತೆಯೇ ಇಂದ್ರಿಯಸುಖವೂ ಪ್ರಾರಂಭದಲ್ಲಿ ಸುಖವಾಗಿ ಕಾಣುತ್ತಿದ್ದು ಆ ಮೇಲೆ ಮಹತ್ತರವಾದ ದುಃಖವನ್ನುಂಟುಮಾಡುತ್ತದೆ. ಅತಏವ ವಿಷಯಸುಖಾಭಿಲಾಷೆಯನ್ನು ತೊರೆದು ಜಿತೇಂದ್ರಿಯನಾಗಿ ಅನಶ್ವರಸುಖದ ಪ್ರಾಪ್ತಿಗಾಗಿ ನಿರಂತರ ವೀತರಾಗಪರಮಸುಖಮಯನಾದ ಪರಮಾತ್ಮನ ಭಾವನೆಯನ್ನು ಮಾಡಬೇಕೆಂದು ಭಾವವು.

**ಸಂತಾ ವಿಸಯ ಜು ಪರಿಹರಇ, ಬಲಿ ಕಿಜ್ಜಉಂ ಹಉಂ ತಾಸು ।**
**ಸೋ ದಇವೇಣ ಜಿ ಮುಂಡಿಯಉ, ಸೀಸು ಖಡಿಲ್ಲಉ ಜಾಸು ॥ ೧೩೯ ॥**

"ಸತಃ ವಿಷಯಾನ್ ಯಃ ಪರಿಹರತಿ ಬಲಿಂ ಕರೋಮಿ ಅಹಂ ತಸ್ಯ ।
ಸ ದೈವೇನ ಏವ ಮುಂಡಿತಃ ಶೀರ್ಷಂ ಖಲ್ವಾಟಂ ಯಸ್ಯ ॥ ೧೩೯ ॥"

**ಅನ್ವಯಾರ್ಥ:**— **ಜು**— ಯಾವನೋರ್ವ ಜ್ಞಾನಿಯು **ಸಂತಾ ವಿಸಯ**— ವಿದ್ಯಮಾನ(ತನ್ನಲ್ಲಿರುತ್ತಿರುವ) ವಿಷಯಗಳನ್ನು **ಪರಿಹರಇ**— ಬಿಡುತ್ತಾನೋ **ಹಉಂ**— ನಾನು **ತಾಸು ಬಲಿ ಕಿಜ್ಜಉಂ**— ಅವನ ಪೂಜೆಯನ್ನು ಮಾಡುತ್ತೇನೆ(ಆತನನ್ನು ಪೂಜಿಸುತ್ತೇನೆ.) **ಜಾಸು ಸೀಸು**— ಯಾವನ ಶಿರ(ತಲೆ)ವು **ಖಡಿಲ್ಲಉ**—(ಕೇವಲ) ಬೋಳಾಗಿ (ಕೇಶರಹಿತವಾಗಿ)ರುವುದೋ **ಸೋ ದಇವೇಣ ಜಿ ಮುಂಡಿಯಉ**— ಅವನು ದೈವದಿಂದಲೇ ಮುಂಡಿಸಲ್ಪಟ್ಟವ (ಬೋಳಿಸಲ್ಪಟ್ಟ)ವನು ಅರ್ಥಾತ್ ವಸ್ತುತಃ ಆತನು ಮುಂಡಿತನೆಂದು ಹೇಳಲ್ಪಡುವುದಿಲ್ಲ. ವಿಷಯಗಳ ತ್ಯಾಗರೂಪವಾದ ಮನೋಮುಂಡನವನ್ನು ಮಾಡಿಕೊಂಡಿರುವವನೇ ನಿಜವಾದ ಮುಂಡಿತನೆಂದರ್ಥವು.

**ಭಾವಾರ್ಥ:**— ಪ್ರಥಮಾನುಭವದಲ್ಲಿ ಮನೋಜ್ಞಗಳಾಗಿ ಕಾಣುವುವೂ ಆದರೆ ಉತ್ತರಕಾಲದಲ್ಲಿ ವಿಷಕ್ಕೆ ಸಮಾನವಾದುವುಗಳಾಗಿ ಅಸಹ್ಯದುಃಖವನ್ನುಂಟುಮಾಡುವುವೂ ಆದ ವರ್ತಮಾನ (ಇರುವ) ವಿಷಯಗಳನ್ನು ಜ್ಞಾನಿಗಳಾದ ಯಾವ ಮಹಾಪುರುಷರು ತ್ಯಾಗಮಾಡುತ್ತಾರೋ ಅವರೇ ಲೋಕದಲ್ಲಿ ಧನ್ಯರು. ಅವರನ್ನು ನಾನು ಬಾರಿಬಾರಿಗೆ ಪೂಜಿಸು(ಆದರಿಸು)ತ್ತೇನೆಂದು ಶ್ರೀಯೋಗೀಂದು ದೇವರು ತಮ್ಮ ಗುಣಾನುರಾಗವನ್ನು ವ್ಯಕ್ತಪಡಿಸುತ್ತಾರೆ.

ಪೂರ್ವಕಾಲದಲ್ಲಿ ಈ ಭರತಕ್ಷೇತ್ರದಲ್ಲಿ ದೇವಾಗಮನ (ದೇವತೆಗಳ ಬರುವಿಕೆ) ವಿದ್ದುದರಿಂದ ಅದನ್ನು ನೋಡಿ ಜನರಲ್ಲಿ ಧರ್ಮಶ್ರದ್ಧೆಯುಂಟಾಗುತ್ತಿದ್ದಿತು. ನಾನಾ ಪ್ರಕಾರವಾದ ಋದ್ಧಿಧಾರಿಗಳಾದ ಮುನಿಗಳ ಅತಿಶಯವನ್ನು ಕಂಡು ಜ್ಞಾನವುಂಟಾಗುತ್ತಿದ್ದಿತು. ಮುನಿಗಳಿಗೆ (ಅಥವಾ ಜೀವರಿಗೆ) ಅವಧಿ ಮನಃಪರ್ಯಯ ಕೇವಲ

ಜ್ಞಾನಗಳುಂಟಾಗುವುದನ್ನು ನೋಡಿ ಸಮ್ಯಕ್ತ್ವವುಂಟಾಗುತ್ತಿದ್ದಿತು. ಹಾಗೂ ಅನೇಕ ರಾಜಾಧಿರಾಜರುಗಳಿಂದ ನಮಸ್ಕರಿಸಲ್ಪಡುತ್ತಿರುವ ಭರತ, ಸಗರ, ರಾಮ, ಪಾಂಡವರು ಮೊದಲಾದ ಅನೇಕ ಚಕ್ರವರ್ತಿಗಳೂ ಬಲಭದ್ರರು, ನಾರಾಯಣರು ಮತ್ತು ಅನೇಕ ರಾಜರುಗಳು ತಮ್ಮ ರಾಜ್ಯಾದಿಸಮಸ್ತವೈಭವಗಳನ್ನು ತ್ಯಾಗಮಾಡಿ ಜಿನಸಧರ್ಮಾಸಕ್ತ ರಾಗುವುದನ್ನು ಕಂಡು ಭವ್ಯಜೀವರಿಗೆ ಧರ್ಮದಲ್ಲಿ ಪ್ರೀತಿಯುಂಟಾಗುತ್ತಿದ್ದಿತು. ಆ ಭವ್ಯರು ಗೃಹಸ್ಥಾಶ್ರಮದಲ್ಲಿರುವವರೆಗೆ ದಾನಪೂಜಾದಿ ಶುಭಕ್ರಿಯಗಳನ್ನಾಚರಿಸು ತ್ತಿದ್ದರು ಹಾಗೂ ಮುಂದೆ ಪರಮಾತ್ಮಭಾವನೆಯಲ್ಲಿ ಆಸಕ್ತಿಯುಳ್ಳವರಾಗಿ ಸರ್ವ ವಿಷಯಗಳನ್ನು ತೊರೆದು (ಸರ್ವಸಂಗಪರಿತ್ಯಾಗಿಗಳಾಗಿ) ನಿಶ್ಚಯಮೋಕ್ಷಮಾರ್ಗ ವನ್ನವಲಂಬಿಸುತ್ತಿದ್ದರು. ಹೀಗೆ ಹಿಂದಿನಕಾಲ(ಚತುರ್ಥಕಾಲ)ದಲ್ಲಿ ಜ್ಞಾನೋತ್ಪತ್ತಿಗೆ ಅನೇಕ ಸಾಧನ(ಕಾರಣ)ಗಳಿರುತ್ತಿದ್ದುದರಿಂದ ಅಂದು ಭವ್ಯಜೀವರು ಸರ್ವೇಂದ್ರಿಯ ವಿಷಯಗಳನ್ನು ತ್ಯಾಗಮಾಡಿದುದರಲ್ಲೇನೂ ಆಶ್ಚರ್ಯವಿಲ್ಲ. ಆದರೆ, **"ದೇವಾಗಮ ಪರಿಹೀಣೇ ಕಾಲೇऽತಿಶಯವರ್ಜಿತೇ । ಕೇವಲೋತ್ಪತ್ತಿಹೀನೇ ತು ಹಲಚಕ್ರ ಧರೋಜ್ಝಿತೇ॥"** ಎಂಬಂತೆ ದೇವಾಗಮನರಹಿತವೂ ಯಾವುದೊಂದು ಧರ್ಮಾತಿಶಯವೂ ಇಲ್ಲದುದೂ ಕೇವಲಜ್ಞಾನೋತ್ಪತ್ತಿಯಿಲ್ಲದುದೂ ಬಲಭದ್ರಚಕ್ರವರ್ತ್ಯಾದಿಗಳ ಉತ್ಪತ್ತಿ ರಹಿತವೂ ಆದ ಈ ಕಾಲ(ಪಂಚಮಕಾಲ)ದಲ್ಲಿ ಜೀವರುಗಳು ಧರ್ಮಾಸಕ್ತರಾಗಿ ಶ್ರಾವಕ ವ್ರತಗಳನ್ನಾಚರಿಸುವುದೂ ಇಂದ್ರಿಯವಿಷಯಗಳನ್ನು ತ್ಯಾಗಮಾಡಿ ಯೋಗಿಗಳಾಗುವುದೂ ಆಶ್ಚರ್ಯಕರವಾದುದು. ಆದುದರಿಂದ ಈ ಕಾಲದಲ್ಲೂ ವಿಷಯರಾಗವನ್ನು ತೊರೆಯುವ ಆ ತ್ಯಾಗಿಗಳೇ ಧನ್ಯರು ಹಾಗೂ ಪರಮಾದರಣೀಯರು. ಶ್ರೀಮದ್ವಾದೀಭಸಿಂಹ ಸೂರಿಗಳು ಹೇಳುವಂತೆ **"*ಅತಏವ ಹಿ ಯೋಗೀಂದ್ರಾ ಅಪೀಂದ್ರತ್ವಾರ್ಹಸಂಪ ದಮ್ । ತ್ಯಕ್ತ್ವಾ ತಪಾಂಸಿ ತಪ್ಯಂತೇ ಮುಕ್ತ್ಯೈ ತೇಭ್ಯೋ ನಮೋನಮಃ ॥"** ಅತಏವ ಯಾವ ಯೋಗೀಂದ್ರರುಗಳು ಇಂದ್ರೈಶ್ವರ್ಯಕ್ಕೆ ಸಮಾನವಾದ ಸಂಪತ್ತನ್ನೂ ತೊರೆದವರಾಗಿ ಮುಕ್ತಿಗೋಸ್ಕರ ಬಾಹ್ಯಾಭ್ಯಂತರತಪಶ್ಚರಣೆಯನ್ನು ಮಾಡುತ್ತಾರೋ ಅಂತಹ ಮಹಾತ್ಮರಾದ ಯೋಗಿಪುಂಗವರಿಗೆ ಬಾರಿಬಾರಿಗೆ(ಅನೇಕಶಃ)ನಮಸ್ಕಾರವು.

**ಪಂಚಹಂ ಣಾಯಕು ವಸಿಕರಹು, ಜೇಣ ಹೋಂತಿ ವಸಿ ಅಣ್ಣ ।**
**ಮೂಲ ವಿಣಟ್ಠ ಇ ತರುವರಹಂ, ಅವಸಇಂ ಸುಕ್ಕಹಿಂ ಪಣ್ಣ ॥ ೧೪೦ ॥**

"ಪಂಚಾನಾಂ ನಾಯಕಂ ವಶೀಕುರುತ ಯೇನ ಭವಂತಿ ವಶೇ ಅನ್ಯಾನಿ ।
ಮೂಲೇ ವಿನಷ್ಟೇ ತರುವರಸ್ಯ ಅವಶ್ಯಂ ಶುಷ್ಯಂತಿ ಪರ್ಣಾನಿ ॥ ೧೪೦ ॥"

**ಅನ್ವಯಾರ್ಥ:**—ಭವ್ಯಜೀವರುಗಳೇ! **ಪಂಚಹಂ ಣಾಯಕು**—ಐದು ಇಂದ್ರಿಯ ಗಳ ನಾಯಕ(ಸ್ವಾಮಿ)ನಂತಿರುವ ಚಿತ್ತವನ್ನು **ವಸಿಕರಹು**—ವಶವನ್ನಾಗಿ ಮಾಡಿ ಕೊಳ್ಳಿರಿ ಅರ್ಥಾತ್ ವಶದಲ್ಲಿಡಿರಿ. **ಜೇಣ**—ಯಾವುದರಿಂದ(ಮನಸ್ಸನ್ನು ವಶದಲ್ಲಿಟ್ಟು

*ಕ್ಷತ್ರಚೂಡಾಮಣಿ. ಲಂಬ—೩, ಶ್ಲೋಕ ೨೫.

ಕೊಳ್ಳುವುದರಿಂದ) **ಅಣ್ಣ ವಸಿ ಹೊಂತಿ**— ಇತರ ಪಂಚ ಇಂದ್ರಿಯಗಳು ವಶವಾಗುತ್ತವೆ ಹೇಗಂದರೆ, **ತರುವರಹಂ**— ಉತ್ತಮವೃಕ್ಷದ **ಮೂಲ ವಿಣಟ್ಠಇ**— ಮೂಲವು (ಬುಡ, ಬೇರು) ನಾಶವಾಗುತ್ತಿರಲು **ಪಣ್ಣ**— ಎಲೆಗಳು **ಅವಸಇಂ ಸುಕ್ಕಹಿಂ**— ಅವಶ್ಯವಾಗಿ ಒಣಗುತ್ತವೆ. ಅದರಂತೆಯೇ ಪಂಚೇಂದ್ರಿಯಗಳಿಗೆ ಮೂಲವಾದ ಮನಸ್ಸು ಜಯಿಸಲ್ಪಡುತ್ತಿರಲು ಪಂಚೇಂದ್ರಿಯಗಳು ಜಯಿಸಲ್ಪಡುತ್ತವೆಂದರ್ಥವು.

**ಭಾವಾರ್ಥ:**— ಸ್ಪರ್ಶನ, ರಸನ, ಘ್ರಾಣ, ಚಕ್ಷು ಮತ್ತು ಶ್ರೋತ್ರಗಳೆಂಬ ಪಂಚ ಇಂದ್ರಿಯಗಳಿಗೆ ಮನಸ್ಸು ನಾಯಕನಂತಿರುತ್ತದೆ ಈ ಮನಸ್ಸು ರಾಗಾದಿವಿಕಲ್ಪರಹಿತ ಪರಮಾತ್ಮಭಾವನೆಯಿಂದ ವಿಮುಖವೂ ದೃಷ್ಟಶ್ರುತಾನುಭೂತಭೋಗಾಕಾಂಕ್ಷಾರೂಪ-ಆರ್ತರೌದ್ರಾದಿದುರ್ಧ್ಯಾನಗಳೇ ಮೊದಲಾದ ಅನೇಕ ವಿಕಲ್ಪಜಾಲಗಳಿಂದ ಚಂಚಲವೂ ಆಗಿರುತ್ತದೆ. ಇಂತಹ ಮನಸ್ಸೆಂಬ ಮದ್ದಾನೆಯನ್ನು ಭೇದವಿಜ್ಞಾನರೂಪವಾದ ಅಂಕುಶದಿಂದ ನಿಯಂತ್ರಿಸಿ ವಶಪಡಿಸಿಕೊಳ್ಳುವುದರಿಂದ ಸರ್ವಇಂದ್ರಿಯಗಳೂ ವಶವಾಗುತ್ತವೆ. ಅತಏವ ನಿಜಶುದ್ಧಾತ್ಮಭಾವನೆಗಾಗಿ ಸರ್ವಪ್ರಯತ್ನದಿಂದ ಮನಸ್ಸನ್ನು ನಿಗ್ರಹಿಸ(ಜಯಿಸ) ಬೇಕೆಂದಭಿಪ್ರಾಯವು. ಹೀಗೆಯೇ ಗ್ರಂಥಾಂತರದಲ್ಲಿ,—“**ಯೇನೋಪಾಯೇನ ಶಕ್ಯೇತ ಸನ್ನಿಯಂತುಂ ಚಲಂ ಮನಃ । ಸ ಏವೋಪಾಸನೀಯೋऽತ್ರ ನ ಚೈವ ವಿರಮೇತ್ತತಃ ॥**” ಅರ್ಥಾತ್ ಯಾವ ಉಪಾಯದಿಂದ ಚಂಚಲವಾದ ಮನಸ್ಸನ್ನು ನಿಯಂತ್ರಿಸಲು ಸಾಧ್ಯವಾಗುವುದೋ ಅಂತಹ ಉಪಾಯವನ್ನೇ ಕೈಕೊಳ್ಳಬೇಕು ಹಾಗೂ ಮನಸ್ಸು ಸ್ವಾಧೀನವಾಗುವ ತನಕ ಪ್ರಯತ್ನವನ್ನು ಬಿಡಬಾರದೆಂದು ಹೇಳಿರುವರು.

**ವಿಸಯಾಸತ್ತಉ ಜೀವ ತುಹುಂ, ಕಿತ್ತಿಉ ಕಾಲು ಗಮಿಾಸಿ ।**
**ಸಿವಸಂಗಮು ಕರಿ ಣಿಚ್ಚಲಉ, ಅವಸಇಂ ಮುಕ್ಖು ಲಹೀಸಿ ॥ ೧೪೧ ॥**

“ವಿಷಯಾಸಕ್ತಃ ಜೀವ ತ್ವಂ ಕಿಯಂತಂ ಕಾಲಂ ಗಮಿಷ್ಯಸಿ ।
ಶಿವಸಂಗಮಂ ಕುರು ನಿಶ್ಚಲಂ ಅವಶ್ಯಂ ಮೋಕ್ಷಂ ಲಭಸೇ ॥ ೧೪೧ ॥”

**ಅನ್ವಯಾರ್ಥ:**—**ಜೀವ**— ಎಲೈ ಜೀವನೇ! **ತುಹುಂ**— ನೀನು **ವಿಸಯಾಸತ್ತಉ**- ವಿಷಯಗಳಲ್ಲಿ ಆಸಕ್ತನಾಗಿ **ಕಿತ್ತಿಉ ಕಾಲು**- ಎಷ್ಟು ಕಾಲವನ್ನು **ಗಮಿಾಸಿ**— ಕಳೆಯುವೆ? **ಣಿಚ್ಚಲಉ**— ನಿಶ್ಚಲ(ದೃಢ)ವಾಗಿ **ಸಿವಸಂಗಮು ಕರಿ**— ಶಿವನೆಂದು ಹೇಳಲ್ಪಡುವ ತನ್ನ ಶುದ್ಧಾತ್ಮನ ಸಂಸರ್ಗ(ಅನುಭವ)ವನ್ನು ಮಾಡು. ಇದರಿಂದ **ಅವಸಇಂ**— ಅವಶ್ಯವಾಗಿ **ಮುಕ್ಖು ಲಹೀಸಿ**— ಮೋಕ್ಷವನ್ನು ಪಡೆಯುವೆ.

**ಭಾವಾರ್ಥ:**— ಅಜ್ಞಾನಿಯಾದ ಜೀವನೇ! ನೀನು ಶುದ್ಧಾತ್ಮಭಾವನೆಯಿಂದುಂಟಾದುದೂ ರಾಗದ್ವೇಷರಹಿತವಾದ(ವೀತರಾಗ)ಪರಮಾನಂದರೂಪವೂ ಅವಿನಾಶಿಯೂ ಆದ ಸುಖದ ಅನುಭವವಿಲ್ಲದವನಾಗಿ ಕೇವಲ ವಿಷಯಗಳಲ್ಲೇ ನಿರಂತರ ಆಸಕ್ತನಾಗಿ ಅದೆಷ್ಟುಕಾಲ ಸಂಸಾರಕಾನನದಲ್ಲಿ ಭ್ರಮಿಸುವೆ? ಹಿಂದೆ ಅನಾದಿಕಾಲದಿಂದ ಭ್ರಮಿಸುತ್ತಿರುವುದು ಸಾಲದೆ ಇನ್ನೆಷ್ಟು ಕಾಲ ಭ್ರಮಿಸಲಿಚ್ಛಿಸುವೆ? **ಈಗಲಾದರೂ**

ವಿಷಯಾಸಕ್ತಿಯನ್ನು ತೊರೆದು ಕೇವಲಜ್ಞಾನದರ್ಶನಮಯನಾದ ನಿಜಶುದ್ಧಾತ್ಮನ ಅನುಭವವನ್ನು ಪಡೆದು ನಿಜಭಾವಗಳ ಸಂಬಂಧವನ್ನು ಹೊಂದು. ಘೋರ ಉಪ ಸರ್ಗಗಳೂ ಇಪ್ಪತ್ತೆರಡು ವಿಧವಾದ ಪರೀಷಹಗಳೂ ಉಂಟಾದರೂ ಸುಮೇರುವಿನಂತೆ ನಿಶ್ಚಲವಾಗಿರುವ ಆತ್ಮಧ್ಯಾನವನ್ನು ಅವಲಂಬಿಸು. ಈ ಧ್ಯಾನದ ಬಲದಿಂದಲೇ ನೀನು ಅನಂತಚತುಷ್ಟಯಗಳಿಗೆ ನಿವಾಸಭೂತವಾದ ಮೋಕ್ಷವನ್ನು ಅವಶ್ಯವಾಗಿ ಪಡೆಯುವೆ.

**ಇಹು ಸಿವಸಂಗಮು ಪರಿಹರಿವಿ, ಗುರುವಡ ಕಹಿಂ ವಿ ಮ ಜಾಹಿ ।**
**ಜೇ ಸಿವಸಂಗಮಿ ಲೀಣ ಣವಿ, ದುಕ್ಖು ಸಹಂತಾ ವಾಹಿ ॥ ೧೪೨ ॥**

"ಇಮಂ ಶಿವಸಂಗಮಂ ಪರಿಹೃತ್ಯ ಗುರುವರ ಕ್ವಾಪಿ ಮಾ ಗಚ್ಛ ।
ಯೇ ಶಿವಸಂಗಮೇ ಲೀನಾ ನೈವ ದುಃಖಂ ಸಹಮಾನಾಃ ಪಶ್ಯ ॥ ೧೪೨ ॥"

**ಅನ್ವಯಾರ್ಥ:—ಗುರುವಡ**–ಎಲೈ ಗುರುವರ(ತಪೋಧನ)ನೇ! **ಇಹು ಸಿವ ಸಂಗಮು**—ಈ ನಿಜಶುದ್ಧಾತ್ಮಸಂಸರ್ಗವನ್ನು **ಪರಿಹರಿವಿ**—ಬಿಟ್ಟು **ಕಹಿಂ ವಿ**—ಎಲ್ಲಿಯೂ(ಯಾವ ವಿಷಯದಲ್ಲಿಯೂ) **ಮ ಜಾಹಿ**—ಹೋಗಬೇಡ(ಪ್ರವರ್ತಿಸಬೇಡ) ಏಕೆಂದರೆ, **ಸಿವಸಂಗಮಿ**—ನಿಜಶುದ್ಧಾತ್ಮನ ಸಂಸರ್ಗದಲ್ಲಿ **ಣವಿ ಲೀಣ**—ಲೀನ (ಆಸಕ್ತ)ರಾಗದವರಾಗಿ **ಜೇ**—ಯಾವ ಅಜ್ಞಾನಿಜೀವರು **ದುಕ್ಖು ಸಹಂತಾ**—ದುಃಖ ವನ್ನು ಸಹಿಸುವವರಾಗಿರುವರೋ ಅವರನ್ನು **ವಾಹಿ**—ನೋಡು

**ಭಾವಾರ್ಥ:**—ನಿಜಶುದ್ಧಾತ್ಮಾನುಭವವೇ ಸಂಸಾರಸಾಗರವನ್ನು ದಾಂಟಲು ಸಾಧನ(ಉಪಾಯ)ವಾಗಿದೆ. ಅತಏವ ಎಲೈ ತಪಸ್ವಿಯೇ! ನೀನು ಶುದ್ಧಾತ್ಮಾನು ಭೂತಿಗೆ ಪ್ರತಿಪಕ್ಷ(ವಿರುದ್ಧ, ಶತ್ರು)ಗಳಾದ ಮಿಥ್ಯಾತ್ವರಾಗಾದಿಗಳಲ್ಲಿ ಯಾವುದೊಂದ ರಲ್ಲಿಯೂ ಪ್ರವರ್ತಿಸಬೇಡ. ಕೇವಲ ಆತ್ಮಸ್ವರೂಪದಲ್ಲೇ ಮಗ್ನನಾಗು. ಅಜ್ಞಾನಿ ಜೀವರು ವಿಷಯಕಷಾಯಗಳಿಗೆ ವಶೀಭೂತರಾಗಿರುವುದರಿಂದ ನಿಜಾತ್ಮಸಂಸರ್ಗವನ್ನು ಪಡೆಯದವರಾಗಿ ಭವಕಾನನ(ಸಂಸಾರಾರಣ್ಯ)ದಲ್ಲಿ ದುಃಖಗಳನ್ನನುಭವಿಸುತ್ತ ಚಿರ ಕಾಲದಿಂದ ಭ್ರಮಿಸುತ್ತಿರುವುದನ್ನು ನೋಡು. ಇಲ್ಲಿ "ಶಿವ" ಎಂಬ ಶಬ್ದಕ್ಕೆ ತನ್ನ ದೇಹದಲ್ಲಿಯೇ ನಿಶ್ಚಯನಯದಿಂದಿರುವ ಕೇವಲಜ್ಞಾನಾದ್ಯನಂತಗುಣಸಹಿತನಾದ "ಪರ ಮಾತ್ಮ"ನೆಂದು ಅಥವಾ "ಮೋಕ್ಷ"ವೆಂದರ್ಥವು.

**ಕಾಲು ಅಣಾಇ ಅಣಾಇ ಜಿಉ, ಭವಸಾಯರು ವಿ ಅಣಂತು ।**
**ಜೀವಿಂ ಬಿಣ್ಣಿ ಣ ಪತ್ತಾಇಂ, ಜಿಣು ಸಾಮಿಉ ಸಮ್ಮತ್ತು ॥ ೧೪೩ ॥**

"ಕಾಲಃ ಅನಾದಿಃ ಅನಾದಿಃ ಜೀವಃ ಭವಸಾಗರೋಽಪಿ ಅನಂತಃ ।
ಜೀವೇನ ದ್ವೇ ನ ಪ್ರಾಪ್ತೇ ಜಿನಃ ಸ್ವಾಮಿ ಸಮ್ಯಕ್ತ್ವಮ್ ॥ ೧೪೩ ॥"

**ಅನ್ವಯಾರ್ಥ:—ಕಾಲು ಅಣಾಇ**—ಕಾಲವು ಅನಾದಿಯಾದುದು. **ಜಿಉ ಅಣಾಇ**—ಜೀವನು ಅನಾದಿಯಾದವನು. **ಭವಸಾಯರು ವಿ ಅಣಂತು**—ಭವಸಾಗರ(ಸಂಸಾರವೆಂಬ ಸಮುದ್ರ)ವೂ ಅನಂತವಾದುದು(ಕೊನೆಯಿಲ್ಲದುದು). ಆದರೆ,

**ಜೀವಿಂ**— ಈ ಜೀವನಿಂದ **ಜಿಣು ಸಾಮಿಉ ಸಮ್ಮತ್ತು**— ಜಿನಸ್ವಾಮಿಯು ಮತ್ತು ಸಮ್ಯಕ್ತ್ವವು **ಬಿಣ್ಣಿ ಣ ಪತ್ತಾಇಂ**— ಇವೆರಡು ಪಡೆಯ(ಹೊಂದ)ಲ್ಪಡಲಿಲ್ಲವು

**ಭಾವಾರ್ಥ:**— ಕಾಲ, ಜೀವ ಮತ್ತು ಸಂಸಾರ ಇವು ಮೂರೂ ಅನಾದಿಯಾದುವುಗಳು ಅನಾದಿಕಾಲದಿಂದೀ ಸಂಸಾರಿಜೀವನು ಮಿಥ್ಯಾತ್ವರಾಗಾದಿಗಳಿಗೆ ಅಧೀನನಾಗಿ ನರನಾರಕಾದಿ ಚತುರ್ಗತಿಗಳಲ್ಲಿ ಭ್ರಮಿಸುತ್ತಿರುವನು ಹೀಗೆ ಈ ಜೀವನು ಸಂಸಾರದ ಎಲ್ಲ ಪದಾರ್ಥಗಳನ್ನೂ ಸುಖದುಃಖಗಳನ್ನೂ ಅನೇಕಬಾರಿ ಪಡೆದಿರುವನು. ಆದರೆ ಇಂದಿನವರೆಗೂ ಆತ್ಮಕಲ್ಯಾಣಸಾಧಕಗಳಾದ ಎರಡು ವಿಷಯಗಳನ್ನು ಮಾತ್ರ ಪಡೆಯಲಿಲ್ಲ ಅರ್ಥಾತ್ ಅನಂತಚತುಷ್ಟಯಸಹಿತರೂ ಕ್ಷುಧಾದ್ಯಷ್ಟಾದಶ ದೋಷರಹಿತರೂ ಆದ ಭಗವದರ್ಹತ್ಪರಮೇಶ್ವರ(ಜಿನೇಂದ್ರದೇವ)ರನ್ನು ಮತ್ತು ನಿಶ್ಚಯದಿಂದ ಶುದ್ಧಾತ್ಮಾನುಭೂತಿರೂಪವೂ ವ್ಯವಹಾರದಿಂದ ತತ್ತ್ವಾರ್ಥಶ್ರದ್ಧಾನರೂಪವೂ ಆದ ಸಮ್ಯಕ್ತ್ವವನ್ನು ಪಡೆಯಲಿಲ್ಲ. ಈ ಗಾಥೆಯ ನಾಲ್ಕನೆಯ ಪಾದದಲ್ಲಿ **"ಸಿವಸಂಗಮು ಸಮ್ಮತ್ತು"** ಎಂದು ಪಾಠಾಂತರವಿರುತ್ತದೆ. ಇಲ್ಲಿ "ಸಿವಸಂಗಮು" ಎಂಬುದಕ್ಕೆ ಶಿವನ ಅರ್ಥಾತ್ ಜಿನೇಂದ್ರದೇವನ ಸಂಸರ್ಗವೆಂದೇ ಅರ್ಥವು.

**ಘರವಾಸಉ ಮಾ ಜಾಣಿ ಜಿಯ, ದುಕ್ಕಿಯವಾಸಉ ಏಹು ।**
**ಪಾಸು ಕಯಂತೇಂ ಮಂಡಿಯಉ, ಅವಿಚಲು ಣಿಸ್ಸಂದೇಹು ॥ ೧೪೪ ॥**

"ಗೃಹವಾಸಂ ಮಾ ಜಾನೀಹಿ ಜೀವ ದುಷ್ಕೃತವಾಸ ಏಷಃ ।
ಪಾಶಃ ಕೃತಾಂತೇನ ಮಂಡಿತಃ ಅವಿಚಲಃ ನಿಸ್ಸಂದೇಹಮ್ ॥ ೧೪೪ ॥"

**ಅನ್ವಯಾರ್ಥ:**— **ಜಿಯ**— ಎಲೈ ಜೀವನೇ! **ಘರವಾಸಉ**— ಗೃಹವಾಸ(ಮನೆಯಲ್ಲಿ ವಾಸಮಾಡುವಿಕೆ)ವು **ಮಾ ಜಾಣಿ**— ಹಿತವಾದುದೆಂದು ತಿಳಿಯಬೇಡ **ಏಹು**— ಈ ಗೃಹವಾಸವು **ದುಕ್ಕಿಯವಾಸಉ**— ಸಮಸ್ತ ಪಾಪಗಳ ವಾಸಸ್ಥಾನವು **ಣಿಸ್ಸಂದೇಹು**— ನಿಸ್ಸಂಶಯವಾಗಿ (ನಿಶ್ಚಯವಾಗಿ) **ಕಯಂತೇಂ**— ಯಮನಿಂದ **ಮಂಡಿಯಉ**— ರಚಿಸಲ್ಪಟ್ಟ ಅಥವಾ ಮುಂದುಮಾಡಲ್ಪಟ್ಟ **ಅವಿಚಲು**— ನಿಶ್ಚಲ(ದೃಢ)ವಾದ **ಪಾಸು**— ಪಾಶ(ಹಗ್ಗ)ವಿದು.

**ಭಾವಾರ್ಥ:**— ಇಲ್ಲಿ 'ಗೃಹ' ಶಬ್ದದಿಂದ ಮುಖ್ಯವಾಗಿ ಸ್ತ್ರೀ(ಪತ್ನಿ)ಯೆಂಬ ಅರ್ಥವನ್ನು ಗ್ರಹಣಮಾಡಬೇಕು. ಸ್ತ್ರೀಯ ಹೊರತು ಗೃಹ(ಮನೆ)ವು ಗೃಹವೆಂದು ಹೇಳಲ್ಪಡುವುದಿಲ್ಲ. ಆದುದರಿಂದಲೇ **"ನ ಗೃಹಂ ಗೃಹಮಿತ್ಯಾಹುರ್ಗೃಹಿಣೀ ಗೃಹಮುಚ್ಯತೇ"** ಅರ್ಥಾತ್ ಮನೆಯನ್ನು ಮನೆಯೆಂದು ಹೇಳುವುದಿಲ್ಲ. ಗೃಹಿಣಿ(ಪತ್ನಿ)ಯೇ ಮನೆಯೆಂದು ಹೇಳಲ್ಪಡುತ್ತಾಳೆ. ಈ ಕಾರಣದಿಂದ ಗೃಹದಲ್ಲಿ ಪತ್ನೀಸಹಿತನಾಗಿ ವಾಸಮಾಡುವಿಕೆಯು 'ಗೃಹವಾಸ'ವೆಂದು ತಿಳಿಯಬೇಕು. ಈ ಅಪೇಕ್ಷೆಯಿಂದ ಪತ್ನಿಯನ್ನು ತ್ಯಾಗಮಾಡಿರುವವ(ಬ್ರಹ್ಮಚಾರಿ)ನೇ ಗೃಹತ್ಯಾಗಿಯೆನಿಸುವನು. ಅತಏವ ಜೀವನೇ! ಗೃಹವಾಸವು ಆತ್ಮಕಲ್ಯಾಣಸಾಧಕವಾದುದೆಂದು ತಿಳಿಯಬೇಡ.

ಗೃಹವಾಸವು ಅನೇಕ ಪಾಪಗಳಿಗೆ ಕಾರಣವಾದುದು. ಏಕೆಂದರೆ, **"ಗೃಹವಾಸೋ ವಿನಾರಂಭಾನ್ನಚಾರಂಭೋ ವಿನಾ ವಧಾತ್"** ಅರ್ಥಾತ್ ಕೃಷ್ಯಾದ್ಯಾರಂಭಗಳ ಹೊರತು ಗೃಹವಾಸವು ಅಸಾಧ್ಯವಾದುದು ಹಾಗೂ ಪ್ರಾಣಿಹಿಂಸಾದಿಗಳ ಹೊರತು ಆರಂಭವಾಗದು. ಅತಏವ ಗೃಹವಾಸವು ಪಾಪಗಳ ನಿವಾಸವಾಗಿದೆ. ಮತ್ತು ಈ ಗೃಹವಾಸವೆಂಬುದು ಕರ್ಮವೆಂಬ ಯಮನಿಂದ ಅಜ್ಞಾನಿಜೀವರುಗಳನ್ನು ಬಂಧಿಸಿ ನರಕಾದಿದುರ್ಗತಿಗಳಿಗೊಯ್ಯಲು ನಿರ್ಮಿಸಲ್ಪಟ್ಟ ದೃಢವಾದ ಪಾಶ (ಹಗ್ಗ)ವೆಂದು ನೀನು ನಿಶ್ಚಯವಾಗಿ ತಿಳಿ ಸಾರಾಂಶತಃ ಕಷಾಯೇಂದ್ರಿಯಗಳಿಂದ ವ್ಯಾಕುಲವಾದ ಮನಸ್ಸುಳ್ಳ ಗೃಹಸ್ಥರಿಗೆ ಮನಶ್ಶುದ್ಧಿಯಿಲ್ಲದಿರುವುದರಿಂದ ತಪೋಧನ(ಮುನಿ)ರಂತೆ ಶುದ್ಧಾತ್ಮಭಾವನೆಯನ್ನು ಮಾಡಲು ಸಾಧ್ಯವಾಗುವುದಿಲ್ಲ ಇದೇ ಅಭಿಪ್ರಾಯವನ್ನು ಗ್ರಂಥಾಂತರದಲ್ಲಿಯೂ ಹೇಳಿದ್ದಾರೆ — **"ಕಷಾಯೈರಿಂದ್ರಿಯೈರ್ದುಷ್ಟೈರ್ವ್ಯಾಕುಲೀಕ್ರಿಯತೇ ಮನಃ । ಯತಃ ಕರ್ತುಂ ನ ಶಕ್ಯೇತ ಭಾವನಾ ಗೃಹಮೇಧಿಭಿಃ ॥"** ಅರ್ಥಾತ್ ಗೃಹಸ್ಥರ ಮನಸ್ಸು ದುಷ್ಟವಾದ ಕಷಾಯಗಳಿಂದಲೂ ಇಂದ್ರಿಯಗಳಿಂದಲೂ ವ್ಯಾಕುಲತೆಯುಳ್ಳದ್ದಾಗಿ ಮಾಡಲ್ಪಡುತ್ತದೆ. ಆದಕಾರಣ ಗೃಹಸ್ಥರಿಂದ ಶುದ್ಧಾತ್ಮಭಾವನೆಯು ಮಾಡಲಶಕ್ಯವಾಗಿದೆ ಅತಏವ ಶುದ್ಧಾತ್ಮಭಾವನೆಯ ಪ್ರಾಪ್ತಿಗಾಗಿ ಗೃಹತ್ಯಾಗವನ್ನು ಮಾಡಬೇಕೆಂದಭಿಪ್ರಾಯವು.

**ದೇಹು ವಿ ಜಿತ್ಥು ಣ ಅಪ್ಪಣಉ, ತಹಿಂ ಅಪ್ಪಣಉ ಕಿಂ ಅಣ್ಣು ।**
**ಪರಕಾರಿಣಿ ಮಣ ಗುರುವ ತುಹುಂ, ಸಿವಸಂಗಮು ಅವಗಣ್ಣು ॥ ೧೪೫ ॥**

"ದೇಹೋಽಪಿ ಯತ್ರ ನಾತ್ಮೀಯಃ ತತ್ರಾತ್ಮೀಯಂ ಕಿಮನ್ಯತ್ ।
ಪರಕಾರಣೇ ಮಾ ಮುಹ್ಯ [?] ತ್ವಂ ಶಿವಸಂಗಮಂ ಅವಗಣ್ಯ ॥ ೧೪೫ ॥"

**ಅನ್ವಯಾರ್ಥ:**— **ಜಿತ್ಥು**— ಯಾವಸಂಸಾರದಲ್ಲಿ **ದೇಹು ವಿ**— ದೇಹವು ಕೂಡ **ಣ ಅಪ್ಪಣಉ**— ತನ್ನದಲ್ಲವೋ **ತಹಿಂ**— ಅಲ್ಲಿ **ಅಣ್ಣು ಕಿಂ ಅಪ್ಪಣಉ**— ಬೇರೆ ಯಾವುದು ತನ್ನದಾಗಿರುವುದು? ಆದುದರಿಂದ ಜೀವನೇ! **ತುಹುಂ**— ನೀನು **ಸಿವಸಂಗಮು ಅವಗಣ್ಣು**— ಶುದ್ಧಾತ್ಮಸಂಸರ್ಗವನ್ನು ಬಿಟ್ಟು(ಉಪೇಕ್ಷಿಸಿ) **ಪರಕಾರಿಣಿ ಮಣ ಗುರುವ [?]**— ದೇಹಕ್ಕಿಂತಲೂ ಭಿನ್ನಗಳಾದ ಸ್ತ್ರೀ, ಪುತ್ರ, ವಸ್ತ್ರ, ಆಭೂಷಣ ಮತ್ತು ಉಪಕರಣಾದಿಗಳಲ್ಲಿ ಮೋಹಪಡಬೇಡ.

**ಭಾವಾರ್ಥ:**–ಅಮೂರ್ತನೂ ವೀತರಾಗಸ್ವಭಾವವುಳ್ಳವನೂ ಆದ ನಿಜಶುದ್ಧಾತ್ಮನೊಡನೆ ವ್ಯವಹಾರದಿಂದ ಕ್ಷೀರನೀರದಂತೆ (ಹಾಲು—ನೀರುಬೆರೆತಂತೆ) ಏಕೀಭೂತವಾಗಿರುವ ದೇಹವು ಸಹ ಜೀವಸ್ವರೂಪವಾಗಿರುವುದಿಲ್ಲ ಅರ್ಥಾತ್ ಜೀವನ ಸ್ವರೂಪಕ್ಕಿಂತ ಭಿನ್ನಸ್ವರೂಪವುಳ್ಳುದಾಗಿದೆ. ಹೀಗೆ ದೇಹವೇ ಜೀವನದ್ದಾಗಿರುವುದಿಲ್ಲವೆಂದ ಮೇಲೆ ಇತರ ಸ್ತ್ರೀಪುತ್ರಧನಧಾನ್ಯಾದಿಗಳು ಹೇಗೆ ಜೀವನದ್ದಾಗಿರುವುವು? ಅತಏವ ಬಾಹ್ಯಪದಾರ್ಥಗಳ ಮಮತೆಯನ್ನು ಸರ್ವಥಾ ತೊರೆದು ಶುದ್ಧಾತ್ಮಾನುಭೂತಿರೂಪವಾದ

ನಿರ್ವಿಕಲ್ಪಸಮಾಧಿಯಲ್ಲಿ ಮಗ್ನನಾಗಿ ಶುದ್ಧೋಪಯೋಗಭಾವನೆಯಿಂದ ಆತ್ಮಕಲ್ಯಾಣ ವನ್ನು ಸಾಧಿಸಬೇಕೆಂದು ತಾತ್ಪರ್ಯವು.

**ಕರಿ ಸಿವಸಂಗಮು ಎಕ್ಕು ಪರ, ಜಹಿಂ ಪಾವಿಜ್ಜಇ ಸುಕ್ಖು ।**
**ಜೋಇಯ ಅಣ್ಣು ಮ ಚಿಂತಿ ತುಹುಂ, ಜೇಣ ಣ ಲಬ್ಭಇ ಮುಕ್ಖು ॥೧೪೬॥**

"ಕುರು ಶಿವಸಂಗಮಂ ಏಕಂ ಪರಂ ಯತ್ರ ಪ್ರಾಪ್ಯತೇ ಸುಖಮ್ ।
ಯೋಗಿನ್ ಅನ್ಯಂ ಮಾ ಚಿಂತಯ ತ್ವಂ ಯೇನ ನ ಲಭ್ಯತೇ ಮೋಕ್ಷಃ ॥ ೧೪೬ ॥"

**ಅನ್ವಯಾರ್ಥ:— ಜೋಇಯ—** ಎಲೈ ಯೋಗಿಯೇ! **ತುಹುಂ—** ನೀನು **ಜಹಿಂ—** ಯಾವುದರಲ್ಲಿ **ಸುಕ್ಖು ಪಾವಿಜ್ಜಇ—** ಸುಖವು ಪ್ರಾಪ್ತವಾಗುವುದೋ ಅಂತಹ **ಪರ ಸಿವಸಂಗಮು ಎಕ್ಕು—** ಕೇವಲ ನಿಜಶುದ್ಧಾತ್ಮಸಂಸರ್ಗ (ಭಾವನೆ)ವೊಂದನ್ನೇ **ಕರಿ—** ಮಾಡು. ಮತ್ತು **ಜೇಣ**-ಯಾವುದರಿಂದ **ಮುಕ್ಖು ಣ ಲಬ್ಭಇ**-ಮೋಕ್ಷವು ಲಭಿಸುವುದಿಲ್ಲವೋ ಅಂತಹ **ಅಣ್ಣು ಮ ಚಿಂತಿ—** ಇತರ ಯಾವ ವಿಷಯವನ್ನೂ ಚಿಂತಿಸಬೇಡ.

**ಭಾವಾರ್ಥ:—** ಯೋಗಿಯೇ! ನೀನು ಕೇವಲ ಶುದ್ಧಬುದ್ಧೈಕಸ್ವಭಾವವುಳ್ಳ ನಿಜಶುದ್ಧಾತ್ಮಭಾವನೆಯೊಂದನ್ನೇ ನಿರಂತರ ಮಾಡುತ್ತಿರು ಹೀಗೆ ನೀನು ಶಿವಸಂಗ (ನಿಜಶುದ್ಧಾತ್ಮಸಂಸರ್ಗ)ವನ್ನು ಮಾಡಿದುದಾದರೆ ನಿಜವಾಗಿಯೂ ಅಕ್ಷಯವೂ ಅನಂತವೂ ಆದ ಪರಮಸುಖವನ್ನು ಪಡೆಯುವೆ. ಮೋಕ್ಷವನ್ನು ಪಡೆಯಲು ನಿಜಶುದ್ಧಾತ್ಮ ಭಾವನೆಯ ಹೊರತು ಬೇರಾವ ಉಪಾಯವೂ ಇರುವುದಿಲ್ಲ. ಆದಕಾರಣ ನೀನು ಯಾವಪರವಸ್ತುವನ್ನೂ ಚಿಂತಿಸದಿರು. ಪರವಸ್ತುಗಳ ಚಿಂತನೆಯಿಂದ ಅವ್ಯಾಬಾಧವೂ ಅನಂತಸುಖರೂಪವೂ ಆದ ಮೋಕ್ಷವು ಎಂದಿಗೂ ಲಭಿಸದೆಂದು ನಿಶ್ಚಯವಾಗಿ ತಿಳಿ. ಆತಏವ ನಿಜಶುದ್ಧಾತ್ಮಸ್ವರೂಪದ ಚಿಂತನೆ(ಧ್ಯಾನ)ಯೇ ಉಪಾದೇಯವಾಗಿರುತ್ತದೆಂದು ಭಾವವು.

**ಬಲಿ ಕಿಉ ಮಾಣುಸಜಮ್ಮಡಾ, ದೆಕ್ಖಂತಹಂ ಪರ ಸಾರು ।**
**ಜಇ ಉಟ್ಠಬ್ಭಇ ತೋ ಕುಹಇ, ಅಹ ಡಜ್ಝಇ ತೋ ಛಾರು ॥ ೧೪೭ ॥**

"ಬಲಿಃ ಕ್ರಿಯತೇ ಮನುಷ್ಯಜನ್ಮ ಪಶ್ಯತಾಂ ಪರಂ ಸಾರಮ್ ।
ಯದಿ ಅವಷ್ಟಭ್ಯತೇ ತತಃ ಕ್ವಥತಿ ಅಥ ದಹ್ಯತೇ ತರ್ಹಿ ಕ್ಷಾರಃ ॥ ೧೪೭ ॥"

**ಅನ್ವಯಾರ್ಥ:— ದೆಕ್ಖಂತಹಂ—** ನೋಡುವವರಿಗೆ (ನೋಡಲು) **ಪರ ಸಾರು**-ಕೇವಲ ಸಾರವಾದ (ಸಾರವುಳ್ಳುದಾಗಿ ಕಾಣಲ್ಪಡುವ) **ಮಾಣುಸಜಮ್ಮಡಾ**-ಮನುಷ್ಯ ಜನ್ಮವು **ಬಲಿ ಕಿಉ—** ಬಲಿಮಾಡಲ್ಪಡುತ್ತದೆ ಅಥವಾ ಬಲಿಕೊಡಲ್ಪಡಲಿ (ಅರ್ಥಾತ್ ತಲೆಯಮೇಲೆ ನಿವಾಳಿಸಿ ತೆಗೆದು ಬಿಸಾಡುವ ಬಲಿಯಂತೆ ನಿಸ್ಸಾರವಾದುದೆಂದರ್ಥ) ಏಕೆಂದರೆ ಈ ಮನುಷ್ಯದೇಹವು **ಜಇ ಉಟ್ಠಬ್ಭಇ—** ಒಂದುವೇಳೆ ಭೂಮಿಯಲ್ಲಿ ಹೂಳಲ್ಪಟ್ಟುದಾದರೆ **ತೋ ಕುಹಇ—** ಆಗ ಕೊಳೆಯುತ್ತದೆ (ಕೊಳೆತು ನಾರುತ್ತದೆ)

ಅಹ ಡಜ್ಝಇ ತೋ— ಅಥವಾ ಸುಡಲ್ಪಟ್ಟದುದಾದರೆ **ಛಾರು**— ಭಸ್ಮ (ಬೂದಿ) ವಾಗುತ್ತದೆ

**ಭಾವಾರ್ಥ:**— ಹೊರಗಿನಿಂದ ನೋಡುವಾಗ ಈ ಮನುಷ್ಯದೇಹವು ಸಾರವುಳ್ಳುದಾಗಿ ಕಾಣುತ್ತದೆ. ಆದರೆ ದೇಹದ ಸ್ವರೂಪವನ್ನು ವಿಚಾರಮಾಡಿದುದಾದರೆ ಅದರಲ್ಲೇನೂ ಸಾರವಿರುವುದಿಲ್ಲ. ಜೀವರಹಿತ (ಮೃತ)ವಾದ ಶರೀರವನ್ನು ಭೂಮಿಯಲ್ಲಿ ಹೂಳಿಟ್ಟರೆ ಅಥವಾ ಸುಡದೆ ಹಾಗೆಯೇ ಬಿಟ್ಟರೆ ಅದು ಕೊಳೆತು ನಾರುತ್ತದೆ. ಸುಟ್ಟದುದಾದರೆ ಭಸ್ಮವಾಗಿಹೋಗುತ್ತದೆ. ಇಂತಹ ಶರೀರದಲ್ಲಿ ಸಾರವೆಲ್ಲಿಯದು? ಆದರೆ ಕ್ರಿಮಿಗಳಿಂದ ಭಕ್ಷಿಸಲ್ಪಟ್ಟು ನಿಸ್ಸಾರವಾದ ಇಕ್ಷುದಂಡ (ಕಬ್ಬಿನಕೋಲು)ವಿಂದಲೂ ಬೀಜವನ್ನು ತೆಗೆದು ಒಳ್ಳೆಯ ಭೂಮಿಯಲ್ಲಿ ನೆಡುವುದರಿಂದ ಒಳ್ಳೆಯ ಕಬ್ಬು ದೊರಕುವಂತೆ ನಿಸ್ಸಾರವಾದ ಮನುಷ್ಯಶರೀರದಿಂದ ಶುಭಾನುಷ್ಠಾನಗಳ ಮೂಲಕ ಪರಲೋಕಸುಖದ ಬೀಜವನ್ನು ಬಿತ್ತುವುದರಿಂದ ಸ್ವರ್ಗಾಪವರ್ಗರೂಪವಾದ ಫಲವನ್ನು ಪಡೆಯಬಹುದಾಗಿದೆ. ಆದುದರಿಂದ "ಎಲೈ ಜೀವನೇ! ನೀನು ನಿಸ್ಸಾರವಾದೀ ಮನುಷ್ಯಶರೀರದಿಂದ ವೀತರಾಗಸಹಜಾನಂದೈಕಸ್ವಭಾವವುಳ್ಳ ನಿಜಶುದ್ಧಾತ್ಮತತ್ತ್ವದ ಸಮ್ಯಕ್‌ಶ್ರದ್ಧಾನಜ್ಞಾನಾನುಚರಣರೂಪವಾದ ನಿಶ್ಚಯರತ್ನತ್ರಯವನ್ನೂ ನಿಶ್ಚಯರತ್ನತ್ರಯಸಾಧಕವಾದ ವ್ಯವಹಾರರತ್ನತ್ರಯವನ್ನೂ ಪಡೆದು ತನ್ಮೂಲಕ ಸ್ವರ್ಗಾಪವರ್ಗಫಲವನ್ನು ಪಡೆಯುವುದರಿಂದ ತನ್ನೀ ಮನುಷ್ಯಜನ್ಮವನ್ನು ಸಾರ್ಥಕಗೊಳಿಸಬೇಕೆ"ಂದು ತಾತ್ಪರ್ಯಾರ್ಥವು.

ಮುಂದೆ ಆರು ಸೂತ್ರಗಳಿಂದ ದೇಹದ ಅಶುಚಿತ್ವ ಅನಿತ್ಯತ್ವಾದಿಗಳನ್ನು ನಿರೂಪಿಸುತ್ತಾರೆ.

**ಉವ್ವಲಿ ಚೊಪ್ಪಡಿ ಚಿಟ್ಠ ಕರಿ, ದೇಹಿ ಸುಮಿಟ್ಠಾಹಾರ ।**
**ದೇಹಹಂ ಸಯಲ ಣಿರತ್ಥ ಗಯ, ಜಿಮು ದುಜ್ಜಣಿ ಉವಯಾರ ॥ ೧೪೮ ॥**

"ಉದ್ವರ್ತಯ ಮ್ರಕ್ಷಯ ಚೇಷ್ಟಾಂ ಕುರು ದೇಹಿ ಸುಮೃಷ್ಟಾಹಾರಾನ್ ।
ದೇಹಸ್ಯ ಸಕಲಂ ನಿರರ್ಥಂ ಗತಂ ಯಥಾ ದುರ್ಜನೇ ಉಪಕಾರಾಃ ॥ ೧೪೮ ॥"

**ಅನ್ವಯಾರ್ಥ:— ದೇಹಹಂ**— ಈ ಶರೀರಕ್ಕೆ **ಉವ್ವಲಿ**— ಉದ್ವರ್ತನೆ (ಸುಗಂಧದ್ರವ್ಯಾದಿಗಳ ಲೇಪನೆ)ಯನ್ನು ಮಾಡು. **ಚೊಪ್ಪಡಿ**— ತೈಲಾದಿಗಳನ್ನು ಹಚ್ಚಿ ಮರ್ದಿಸು. **ಚಿಟ್ಠ ಕರಿ**— ವಿವಿಧವಸ್ತ್ರಾಭೂಷಣಾದಿಗಳಿಂದ ಶೃಂಗರಿಸುವ (ಅಲಂಕರಿಸುವ) ಚೇಷ್ಟೆಯನ್ನು ಮಾಡು ಮತ್ತು **ಸುಮಿಟ್ಠಾಹಾರ ದೇಹಿ**— ಬಹುಮಧುರ ಹಾಗೂ ರುಚಿಕರವಾದ ಆಹಾರಗಳನ್ನು ಕೊಡು. ಆದರೆ, **ಸಯಲ**— ಇದೆಲ್ಲವೂ **ದುಜ್ಜಣಿ ಉವಯಾರ ಜಿಮು**— ದುರ್ಜನ (ದುಷ್ಟಮನುಷ್ಯ)ನಲ್ಲಿ ಮಾಡಿದ ಉಪಕಾರಗಳು ಹೇಗೋ (ಹೇಗೆ ನಿರರ್ಥಕವಾಗುವವೋ) ಹಾಗೆ **ಣಿರತ್ಥ ಗಯ**— ನಿರರ್ಥಕವಾದುದು ಅರ್ಥಾತ್ ಪ್ರಯೋಜನವಿಲ್ಲದೆ ಹೋಗುವುದು.

**ಭಾವಾರ್ಥ:**—ದುರ್ಜನ (ನೀಚ)ರಿಗೆ ಮಾಡಿದ ಉಪಕಾರವು ನಿಷ್ಪ್ರಯೋಜನ ವಾಗುತ್ತದೆ ಮಾತ್ರವಲ್ಲದೆ, **"ಉಪಕಾರೋಽಪಿ ನೀಚಾನಾಮುಪಕಾರಾಯ ಕಲ್ಪತೇ। ಪನ್ನಗೇನ ಪಯಃ ಪೀತಂ ವಿಷಸ್ಯೈವ ಹಿ ವರ್ಧನಮ್॥"** ಅರ್ಥಾತ್ ಸರ್ಪದಿಂದ ಕುಡಿಯಲ್ಪಟ್ಟ (ಅಥವಾ ಸರ್ಪಕ್ಕೆ ಎರೆದ) ಹಾಲು ವಿಷದ ವೃದ್ಧಿಯನ್ನೇ ಮಾಡುವಂತೆ ನೀಚರಿಗೆ ಮಾಡಿದ ಉಪಕಾರವು ಅಪಕಾರವನ್ನೇ ಉಂಟುಮಾಡುತ್ತದೆ ಅದರಂತೆಯೇ ಈ ಶರೀರವನ್ನು ಉದ್ವರ್ತನ, ಅಭ್ಯಂಜನ, ಮಿಷ್ಟಾಹಾರದಾನಾದಿಗಳಿಂದ ಪ್ರಯತ್ನ ಪೂರ್ವಕವಾಗಿ ಪೋಷಿಸಿದರೂ ಅದು ತನ್ನ (ಆತ್ಮನ)ದಾಗುವುದಿಲ್ಲ. ಕ್ಷಣಮಾತ್ರದಲ್ಲಿ ಆತ್ಮನನ್ನು ಬಿಟ್ಟುಹೋಗುತ್ತದೆ. ಆದುದರಿಂದ ಅದರ ಪೋಷಣೆಗಾಗಿ ಮಾಡಿದ ಸರ್ವ ಪ್ರಯತ್ನಗಳೂ ನಿಷ್ಫಲವಾಗುತ್ತವೆ ಮಾತ್ರವಲ್ಲದೆ ಈ ಶರೀರವು ಇಂದ್ರಿಯವಿಷಯಾಭಿಲಾಷಾದಿಗಳನ್ನುಂಟುಮಾಡುವುದರಿಂದ ಅನಾಕುಲತಾರೂಪವಾದ ಆತ್ಮಪರಿಣಾಮವನ್ನು ಕೆಡಿಸುವುದರ ಮೂಲಕ ಆತ್ಮನಿಗೆ ಅಪಕಾರವನ್ನೇ ಉಂಟುಮಾಡುತ್ತದೆ. ಆದಕಾರಣ ಚೇತನಾಮಯನಾದ ಆತ್ಮನಿಗಿಂತ ಸರ್ವಥಾ ಭಿನ್ನಸ್ವರೂಪವುಳ್ಳ (ಅಚೇತನವಾದ) ಶರೀರದ ಮೇಲಿನ ಆಸಕ್ತಿಯಿಂದ ಪೌಷ್ಟಿಕಾಹಾರಾದಿಗಳಿಂದ ಅದನ್ನು ಪೋಷಿಸದೆ ಕೇವಲ ಆದರ ಸ್ಥಿತಿಗಾಗಿ ಅಲ್ಪ ಹಾಗೂ ನೀರಸಾಹಾರವನ್ನು ಸೇವಿಸಬೇಕು ಮತ್ತು ಸಪ್ತಧಾತುಮಯವೂ ವಿನಶ್ವರವೂ ಆದೀ ಶರೀರದಿಂದ ಪವಿತ್ರ—ಶುದ್ಧಾತ್ಮಸ್ವರೂಪವನ್ನಾರಾಧಿಸಿ ತನ್ಮೂಲಕ ಅವಿನಶ್ವರವಾದ ಕೇವಲಜ್ಞಾನಾದಿಗುಣಗಳನ್ನು ಸಾಧಿಸಬೇಕು. ಈ ಮನುಷ್ಯಶರೀರವು ಕೇವಲ ಇಂದ್ರಿಯವಿಷಯಭೋಗಗಳನ್ನನುಭವಿಸುವುದಕ್ಕೆ ದೊರೆ ಕುವದಲ್ಲವೆಂದೂ ಯೋಗಸಾಧನೆಯ ಮೂಲಕ ಅವಿನಶ್ವರಪದ (ಮುಕ್ತಿ)ವನ್ನು ದೊರಕಿಸಿಕೊಳ್ಳುವುದಕ್ಕಾಗಿ ಪ್ರಾಪ್ತವಾದುದೆಂದೂ ತಿಳಿಯಬೇಕೆಂದು ಭಾವವು. ಇದೇ ಅಭಿಪ್ರಾಯವನ್ನು ಗ್ರಂಥಾಂತರದಲ್ಲಿ ಹೀಗೆ ಹೇಳಿದ್ದಾರೆ—**"ಅಥಿರೇಣ ಥಿರಾ ಮಲಿಣೇಣ ಣಿಮ್ಮಲಾ ಣಿಗ್ಗುಣೇಣ ಗುಣಸಾರಂ। ಕಾಏಣ ಜಾ ವಿಢಪ್ಪಇ ಸಾ ಕಿರಿಯಾ ಕಿಣ್ಣ ಕಾಯವ್ವಾ॥"** ಅರ್ಥಾತ್ ಕ್ಷಣಭಂಗುರವಾದ ಶರೀರದಿಂದ ಸ್ಥಿರ (ಅವಿನಶ್ವರ, ನಿತ್ಯ)ವಾದ ಮೋಕ್ಷಪದವೂ, ಶುಕ್ರಶೋಣಿತಗಳಿಂದುಂಟಾದುದೂ ಸಪ್ತ ಧಾತುಮಯವೂ ಆಗಿರುವುದರಿಂದ ಮಲಿನವಾದ ಶರೀರದಿಂದ ನಿರ್ಮಲವಾದ ವೀತ ರಾಗತ್ವ (ಶುದ್ಧಭಾವ)ವೂ, ಜ್ಞಾನಾದಿಗುಣರಹಿತ (ಜಡ)ವಾದೀ ಶರೀರದಿಂದ ಸಾರಭೂತಗಳಾದ ಕೇವಲಜ್ಞಾನಾದಿಗುಣಗಳೂ ಪಡೆಯಲು ಯೋಗ್ಯಗಳಾಗಿರುತ್ತಿರಲು ಈ ಶರೀರದಿಂದ ಅಂತಹ ಗುಣಾದಿಗಳ ಪ್ರಾಪ್ತಿಗಾಗಿ ತಪಸ್ಸಂಯಮಾದಿ ಕ್ರಿಯೆಗಳನ್ನೇಕೆ ಮಾಡಬಾರದು? ಅವಶ್ಯವಾಗಿ ಮಾಡಬೇಕೆಂದಭಿಪ್ರಾಯವು.

**ಜೇಹಉ ಜಜ್ಜರು ಣರಯಘರು, ತೇಹಉ ಜೋಇಯ ಕಾಉ।**
**ಣರಇ ಣಿರಂತರು ಪೂರಿಯಉ, ಕಿಮ ಕಿಜ್ಜಇ ಅಣುರಾಉ ॥ ೧೪೯ ॥**

"ಯಥಾ ಜರ್ಜರಂ ನರಕಗೃಹಂ ತಥಾ ಯೋಗಿನ್ ಕಾಯಃ।
ನರಕೇ ನಿರಂತರಂ ಪೂರಿತಂ ಕಿಂ ಕ್ರಿಯತೇ ಅನುರಾಗಃ ॥ ೧೪೯ ॥"

**ಅನ್ವಯಾರ್ಥ:— ಜೋಇಯು**— ಎಲೈ ಯೋಗಿಯೇ! **ಜೇಹಲು**— ಹೇಗೆ **ಣರ ಯುಘರು**— ನರಕಗೃಹ (ನರಕವೆಂಬ ಮನೆ)ವು **ಜಜ್ಜರು**-ಜರ್ಜರವಾಗಿ (ಜೀರ್ಣವಾಗಿ, ಅನೇಕ ಛಿದ್ರಗಳುಳ್ಳದಾಗಿ) ಇರುವುದೋ **ತೇಹಲು ಕಾಲು**— ಹಾಗೆಯೇ (ಜರ್ಜರ ವಾಗಿ) ಶರೀರವಿರುತ್ತದೆ ಮತ್ತು **ಣಿರಂತರು**— ನಿರಂತರವಾಗಿ **ಣರಇ ಪೂರಿಯುಉ**— ಮಲಮೂತ್ರಾದಿನರಕ (ನಿಕೃಷ್ಟ)ವಸ್ತುಗಳಿಂದ ತುಂಬಲ್ಪಟ್ಟುದಾಗಿರುತ್ತದೆ. ಇಂತಹ ಶರೀರದಮೇಲೆ **ಅಣುರಾಉ**-ಅನುರಾಗ (ಪ್ರೀತಿ)ಯು **ಕಿಮ ಕಿಜ್ಜಇ**-ಏಕೆ ಅಥವಾ ಹೇಗೆ ಮಾಡಲ್ಪಡುತ್ತದೆ? ಸರ್ವಥಾ ಪ್ರೀತಿಯು ಮಾಡಲ್ಪಡಬಾರದೆಂದರ್ಥವು.

**ಭಾವಾರ್ಥ:**— ಇಲ್ಲಿ ಆಚಾರ್ಯರು ಶರೀರದ ಅಶುಚಿತ್ವವನ್ನು ನಿರೂಪಿಸುತ್ತಾರೆ. ನರಕಗೃಹವು ಶತಜೀರ್ಣವಾಗಿರುವಂತೆ ಅಥವಾ ಶತಛಿದ್ರಗಳುಳ್ಳದಾಗಿರುವಂತೆ ಈ ಶರೀರವು ನವದ್ವಾರಗಳಿಂದ ಛಿದ್ರಗಳುಳ್ಳದಾಗಿದೆ. ನರಕಗೃಹವು ನಿಕೃಷ್ಟನಾರಕಿಜೀವರು ಗಳಿಂದ ತುಂಬಿರುವಂತೆ ಈ ಶರೀರವು ನವದ್ವಾರಗಳಿಂದ ಸುರಿಯುತ್ತಿರುವ ಮಲ ಮೂತ್ರಾದಿ ನಿಕೃಷ್ಟವಸ್ತುಗಳಿಂದ ತುಂಬಿಕೊಂಡಿದೆ. ಆದರೆ ಆತ್ಮನು ಶರೀರದ ಈ ಸ್ವರೂಪಕ್ಕಿಂತ ಭಿನ್ನ ಸ್ವರೂಪವುಳ್ಳವನಾಗಿದ್ದಾನೆ. ಅರ್ಥಾತ್ ಪರಮಾತ್ಮನು ಜನ್ಮ ಜರಾಮರಣಾದಿ ಛಿದ್ರದೋಷರಹಿತನಾಗಿರುವನು ಹಾಗೂ ಶುದ್ಧಾತ್ಮನು ಭಾವಕರ್ಮ-ದ್ರವ್ಯಕರ್ಮ-ನೋಕರ್ಮರೂಪವಾದ ಮಲಗಳಿಂದ ರಹಿತನಾಗಿರುವನು. ಹೀಗೆ ದೇಹಾತ್ಮರ ಭೇದವನ್ನರಿತು ದೇಹಮಮತ್ವವನ್ನು ಬಿಟ್ಟು ವೀತರಾಗನಿರ್ವಿಕಲ್ಪಸಮಾಧಿಯಲ್ಲಿ ಮಗ್ನನಾಗಿ ನಿರಂತರ ಶುದ್ಧಾತ್ಮಭಾವನೆಯನ್ನು ಮಾಡಬೇಕೆಂದು ಭಾವವು.

**ದುಕ್ಖಇಂ ಪಾವಇಂ ಅಸುಚಿಯುಇಂ, ತಿಹುಯಣಿ ಸಯುಲಇಂ ಲೇವಿ ।**
**ಏಯುಹಿಂ ದೇಹು ವಿಣಿಮ್ಮಿಯುಉ, ವಿಹಿಣಾ ವಇರು ಮುಣೇವಿ ॥ ೧೫೦ ॥**

"ದುಃಖಾನಿ ಪಾಪಾನಿ ಅಶುಚೀನಿ ತ್ರಿಭುವನೇ ಸಕಲಾನಿ ಲಾತ್ವಾ ।
ಏತೈಃ ದೇಹಃ ವಿನಿರ್ಮಿತಃ ವಿಧಿನಾ ವೈರಂ ಮತ್ವಾ ॥ ೧೫೦ ॥

**ಅನ್ವಯಾರ್ಥ:— ವಿಹಿಣಾ**— ವಿಧಿ(ಕರ್ಮ)ಯಿಂದ **ವಇರು ಮುಣೇಇ**— ವೈರವನ್ನು ತಿಳಿದು **ತಿಹುಯಣಿ**— ತ್ರಿಭುವನ (ಮೂಲೋಕ)ದಲ್ಲಿರುವ **ಸಯುಲಇಂ**— ಸಮಸ್ತವಾದ **ದುಕ್ಖಇಂ**— ದುಃಖಗಳನ್ನು **ಪಾವಇಂ**— ಪಾಪಗಳನ್ನು ಮತ್ತು **ಅಸುಚಿಯುಇಂ**— ಅಶುಚಿಪದಾರ್ಥಗಳನ್ನು **ಲೇವಿ**-ತೆಗೆದುಕೊಂಡು (ತಂದು) **ಏಯುಹಿಂ**— ಇವುಗಳಿಂದ **ದೇಹು ವಿಣಿಮ್ಮಿಯುಉ**— ಶರೀರವು ನಿರ್ಮಿಸಲ್ಪಟ್ಟಿದೆ.

**ಭಾವಾರ್ಥ:**— ವಿಧಾತ (ಕರ್ಮ)ನು ಶರೀರದ ಮೇಲಿನ ತನ್ನ ವೈರವನ್ನು ಸಾಧಿಸುವುದಕ್ಕಾಗಿ ಲೋಕತ್ರಯದಲ್ಲಿರುವ ಸಮಸ್ತ ದುಃಖಗಳನ್ನು ಪಾಪಗಳನ್ನು ಹಾಗೂ ಅಪವಿತ್ರವಸ್ತುಗಳನ್ನು ಸಂಗ್ರಹಿಸಿ ಅವುಗಳಿಂದ ಈ ಶರೀರವನ್ನು ಸೃಷ್ಟಿಸಿದ್ದಾನೆಂದು ಶರೀರದ ಮಲಿನತೆಯ ವರ್ಣನೆಯಿದು. ಈ ಪ್ರಕಾರವಾಗಿ ಈ ಶರೀರವು ತ್ರಿಭುವನದಲ್ಲಿರುವ ದುಃಖಗಳಿಂದ ನಿರ್ಮಿಸಲ್ಪಟ್ಟಿರುವುದರಿಂದ ದುಃಖರೂಪವಾಗಿದು

ತ್ತದೆ. ಆದರೆ ಪರಮಾತ್ಮನು ವ್ಯವಹಾರನಯದಿಂದ ದೇಹದಲ್ಲಿರುವವನಾಗಿದ್ದರೂ ನಿಶ್ಚಯನಯದಿಂದ ದೇಹದಿಂದ ಭಿನ್ನನಾಗಿರುವಕಾರಣ ಅನಾಕುಲತಾರೂಪವಾದ ಸುಖ ಸ್ವಭಾವವುಳ್ಳವನು. ತ್ರಿಲೋಕದಲ್ಲಿರುವ ಪಾಪಗಳಿಂದ ನಿರ್ಮಿಸಲ್ಪಟ್ಟಿರುವುದರಿಂದ ಶರೀರವು ಪಾಪರೂಪವಾದುದು ಪರಂತು ಶುದ್ಧಾತ್ಮನು ವ್ಯವಹಾರನಯದಿಂದ ದೇಹಸ್ಥನಾಗಿರುವನಾದರೂ ನಿಶ್ಚಯನಯದಿಂದ ದೇಹದಿಂದ ಭಿನ್ನನಾಗಿರುವನು ಅತಏವ ಅತ್ಯಂತಪವಿತ್ರನಾಗಿರುವನು. ಶರೀರವಿದು ಜಗತ್ತ್ರಯದಲ್ಲಿರುವ ಅಪವಿತ್ರ (ಅಶುಚಿ) ದ್ರವ್ಯಗಳಿಂದುಂಟುಮಾಡಲ್ಪಟ್ಟುದರಿಂದ ಅಶುಚಿರೂಪವಾದುದು ಆದರೆ ಶುದ್ಧಾತ್ಮನು ಯದ್ಯಪಿ ವ್ಯವಹಾರನಯದಿಂದ ದೇಹಸಹಿತನಾಗಿರುವನಾದರೂ ನಿಶ್ಚಯದೃಷ್ಟಿ (ನಯ)ಯಿಂದ ದೇಹದಿಂದ ಬೇರೆಯಾದವನಾಗಿರುವುದರಿಂದ ಅತ್ಯಂತ ನಿರ್ಮಲ (ಪವಿತ್ರ)ನಾಗಿರುವನು. ಹೀಗೆ ದೇಹಾತ್ಮಭೇದವಿಜ್ಞಾನದಿಂದ ದೇಹ ಮತ್ತು ಆತ್ಮನಲ್ಲಿರುವ ಭೇದವನ್ನರಿತು ದೇಹಮಮತ್ವವನ್ನು ತೊರೆದು ಶುದ್ಧಾತ್ಮಭಾವನಾಪರನಾಗಬೇಕೆಂದಭಿಪ್ರಾಯವು.

**ಜೋಇಯ ದೇಹು ಘಿಣಾವಣಉ, ಲಜ್ಜಹಿ ಕಿಂ ಣ ರಮಂತು ।**
**ಣಾಣಿಯ ಧಮ್ಮೇ ರಇ ಕರಹಿ, ಅಪ್ಪಾ ವಿಮಲು ಕರಂತು ॥ ೧೫೧ ॥**

“ಯೋಗಿನ್ ದೇಹಃ ಘೃಣಾಸ್ಪದಃ ಲಜ್ಜಸೇ ಕಿಂ ನ ರಮಮಾಣಃ ।
ಜ್ಞಾನಿನ್ ಧರ್ಮೇಣ ರತಿಂ ಕುರು ಆತ್ಮಾನಂ ವಿಮಲಂ ಕುರ್ವನ್ ॥ ೧೫೧ ॥”

**ಅನ್ವಯಾರ್ಥ:— ಜೋಇಯ**— ಎಲೈ ಯೋಗಿಯೇ! **ದೇಹು**— ಶರೀರವು **ಘಿಣಾವಣಉ**— ಘೃಣಾಸ್ಪದವಾದುದು. ಅಂತಹ ಶರೀರದಲ್ಲಿ **ರಮಂತು**— ರಮಿಸು (ಆಸಕ್ತನಾಗು)ವವನಾಗಿ **ಕಿಂ ಣ ಲಜ್ಜಹಿ**— ಏಕೆ ಲಜ್ಜೆ(ನಾಚಿಕೆ)ಪಡುವುದಿಲ್ಲ? **ಣಾಣಿಯ**— ಜ್ಞಾನಿಯೇ! ನೀನು **ಅಪ್ಪಾ**— ಆತ್ಮನನ್ನು **ವಿಮಲುಕರಂತು**— ನಿರ್ಮಲನನ್ನಾಗಿ ಮಾಡುವವನಾಗಿ **ಧಮ್ಮೇ ಕರಇ ರಹಿ**— ಧರ್ಮದಲ್ಲಿ ರತಿ(ಪ್ರೀತಿ)ಯನ್ನು ಮಾಡು

**ಭಾವಾರ್ಥ:**— ಯೋಗಿಯೇ! ಈ ಶರೀರವು ಸರ್ವಥಾ ಘೃಣಾಸ್ಪದವಾದುದು. ಅತಏವ ಹೇಯವಾದೀ ಶರೀರದಲ್ಲಿ ಆಸಕ್ತಿಯನ್ನು ಹೊಂದುವುದರಲ್ಲಿ ನೀನೇಕೆ ಲಜ್ಜಿತನಾಗುವುದಿಲ್ಲ? ಏಕಂದರೆ ಹೇಯವಾದ ವಸ್ತುವನ್ನು ಗ್ರಹಣೆಮಾಡುವಿಕೆಯು ನಿಂದ್ಯಕಾರ್ಯವಾಗಿರುತ್ತದೆ. ಅಂತಹ ನಿಂದ್ಯಕಾರ್ಯದಿಂದ ನೀನು ಲಜ್ಜಿತನಾಗಿರಲೇ ಬೇಕು. ಅರ್ಥಾತ್ ಅಂತಹ ಕಾರ್ಯವನ್ನು ಮಾಡಬಾರದು ಅತಏವ ವಿಶಿಷ್ಟಭೇದಜ್ಞಾನವುಳ್ಳವನಾದ ನೀನು ವೀತರಾಗನಿಜಾನಂದೈಕಸ್ವಭಾವವುಳ್ಳ ನಿಜಾತ್ಮನನ್ನು ಆರ್ತರೌದ್ರಧ್ಯಾನಾದಿ ಸಮಸ್ತವಿಕಲ್ಪಜಾಲಗಳನ್ನು ಬಿಡುವುದರ ಮೂಲಕ ನಿರ್ಮಲ(ಪವಿತ್ರ)ಗೊಳಿಸುವವನಾಗಿ ವೀತರಾಗಚಾರಿತ್ರರೂಪವಾದ ನಿಶ್ಚಯಧರ್ಮದಲ್ಲಿ ಆಸಕ್ತಿ(ಪ್ರೀತಿ)ಯುಳ್ಳವನಾಗು.

**ಜೋಇಯ ದೇಹು ಪರಿಚ್ಚಯಹಿ, ದೇಹು ಣ ಭಲ್ಲಉ ಹೋಇ ।**
**ದೇಹವಿಭಿಣ್ಣಉ ಣಾಣಮಉ, ಸೋ ತುಹುಂ ಅಪ್ಪಾ ಜೋಇ ॥ ೧೫೨ ॥**

"ಯೋಗಿನ್ ದೇಹಂ ಪರಿತ್ಯಜ ದೇಹೋ ನ ಭದ್ರಃ ಭವತಿ ।
ದೇಹವಿಭಿನ್ನಂ ಜ್ಞಾನಮಯಂ ತಂ ತ್ವಂ ಆತ್ಮಾನಂ ಪಶ್ಯ ॥ ೧೫೨ ॥"

**ಅನ್ವಯಾರ್ಥಃ—ಜೋಇಯ—** ಎಲೈ ಯೋಗಿಯೇ! **ದೇಹು ಪರಿಚ್ಚಯಹಿ—** ದೇಹವನ್ನು(ದೇಹದ ಮಮತೆಯನ್ನು) ತ್ಯಾಗಮಾಡು. **ದೇಹು—** ದೇಹವು **ಣ ಭಲ್ಲಉ ಹೋಇ—** ಕಲ್ಯಾಣಕರ(ಒಳ್ಳೆಯದು)ವಾಗಿರುವುದಿಲ್ಲ. ಆದುದರಿಂದ **ತುಹುಂ—**ನೀನು **ದೇಹವಿಭಿಣ್ಣವು—**ದೇಹದಿಂದ ಭಿನ್ನನೂ **ಣಾಣಮಉ—**ಜ್ಞಾನಮಯನೂ ಆದ **ಸೋ ಅಪ್ಪಾ ಜೋಇ—**ಆ(ಅಂತಹ) ಆತ್ಮನನ್ನು ನೋಡು, ಅರ್ಥಾತ್ ತಿಳಿ.

**ಭಾವಾರ್ಥಃ—** ಯೋಗಿಯೇ! ದೇಹವು ಆತ್ಮನಿಗೆ ಹಿತವನ್ನುಂಟುಮಾಡುವುದಿಲ್ಲ. ಅದು ನಿರ್ಮಲ-ನಿತ್ಯಾನಂದ-ಅಖಂಡಸ್ವಭಾವವುಳ್ಳ ಶುದ್ಧಾತ್ಮಸ್ವರೂಪದಿಂದ ಸರ್ವಥಾ ಭಿನ್ನಸ್ವರೂಪವುಳ್ಳುದು ಅರ್ಥಾತ್ ಅಪವಿತ್ರವೂ ದುಃಖಕ್ಕೆ ಕಾರಣವೂ ಆಗಿರುವುದು. ಆದುದರಿಂದ ನೀನು ದೇಹದ ಮಮತೆಯನ್ನು ಬಿಟ್ಟು ಹಾಗೂ ಕೃಷ್ಣ, ನೀಲ, ಕಾಪೋತ ಗಳೆಂಬ ಮೂರು ಅಶುಭಲೇಶ್ಯೆಗಳನ್ನು ತೊರೆದವನಾಗಿ ಕೇವಲ ನಿಜಾತ್ಮಸ್ವರೂಪವನ್ನೇ ಧ್ಯಾನಿಸು.

*ಯಾವುದರಿಂದ ಆತ್ಮನು ಸ್ವಯಂ ಪುಣ್ಯಪಾಪಗಳನ್ನು ಸ್ವೀಕರಿಸುತ್ತಾನೋ ಅದುಲೇಶ್ಯೆಯು ಲೇಶ್ಯೆಯು ಭಾವಲೇಶ್ಯೆಯೆಂದೂ ದ್ರವ್ಯಲೇಶ್ಯೆಯೆಂದೂ ಎರಡುವಿಧ. ಕಷಾಯಗಳ ಉದಯದಿಂದ ಅನುರಂಜಿತವಾದ(ಕೂಡಿರುವ)ಯೋಗ(ಮನ, ವಚನ, ಕಾಯ)ಗಳ ಪ್ರವೃತ್ತಿಯು ಭಾವಲೇಶ್ಯೆಯೆಂದೂ ದೇಹದ ಕಾಂತಿ(ಅಥವಾ ವರ್ಣ)ಯು ದ್ರವ್ಯಲೇಶ್ಯೆಯೆಂದೂ ಹೇಳಲ್ಪಡುತ್ತದೆ. ಹೀಗೆ ದ್ರವ್ಯಭಾವರೂಪವಾದ ಲೇಶ್ಯೆಯು ಕೃಷ್ಣ, ನೀಲ, ಕಾಪೋತ, ಪೀತ, ಪದ್ಮ ಮತ್ತು ಶುಕ್ಲವೆಂದು ಆರು ಭೇದಗಳುಳ್ಳು ದಾಗಿದೆ. ಈ ಆರು ವಿಧವಾದ ಭಾವಲೇಶ್ಯೆಯುಳ್ಳ ಜೀವರುಗಳ ಸಾಮಾನ್ಯದೃಷ್ಟಾಂತವು ಈ ರೀತಿಯಾಗಿದೆ—†ಫಲವನ್ನು ಅಪೇಕ್ಷಿಸುವ ಆರು ಜನರಲ್ಲಿ ಕೃಷ್ಣಲೇಶ್ಯೆಯುಳ್ಳ ಮನುಷ್ಯನು ಫಲವಿರುವ ವೃಕ್ಷದ ಬುಡವನ್ನೇ ಕಡಿದು ಫಲವನ್ನು ಪಡೆಯಲಿಚ್ಛಿಸು ತ್ತಾನೆ. ನೀಲಲೇಶ್ಯೆಯುಳ್ಳವನು ಮರದ ಸ್ಕಂಧ(ಕಾಂಡ)ವನ್ನು ಕಡಿಯಲಿಚ್ಛಿಸು ತ್ತಾನೆ ಕಾಪೋತಲೇಶ್ಯೆಯುಳ್ಳ ಮನುಷ್ಯನು ಮರದ ಶಾಖೆ(ಕೊಂಬೆ)ಯನ್ನು ಕಡಿ ಯಲುದ್ಯುಕ್ತನಾಗುತ್ತಾನೆ. ಪೀತಲೇಶ್ಯೆಯುಳ್ಳವನು ಮರದ ಉಪಶಾಖೆ(ಸಣ್ಣಕೊಂಬೆ) ಯನ್ನು ಮುರಿಯಲಿಚ್ಛಿಸುತ್ತಾನೆ. ಪದ್ಮಲೇಶ್ಯೆಯುಳ್ಳವನು ಫಲಗಳನ್ನು ಕೊಯ್ಯಲು

---

* ಲಿಂಪತ್ಯಾತ್ಮೀಕರೋತ್ಯಾತ್ಮಾ, ಪುಣ್ಯಪಾಪೇ ಯಯಾ ಸ್ವಯಮ್ । ಸಾ ಲೇಶ್ಯೇತ್ಯು ಚ್ಯತೇ ಸದ್ಭಿರ್ದ್ವಿವಿಧಾ ದ್ರವ್ಯಭಾವತಃ ॥ ೧ ॥ ಪ್ರವೃತ್ತಿರ್ಯೌಗಿಕೀ ಲೇಶ್ಯಾ, ಕಷಾಯೋದಯ ರಂಜಿತಾ । ಭಾವತೋ ದ್ರವ್ಯತೋ ದೇಹಚ್ಛವಿಃ ಷೋಢೋಭಯೀ ಮತಾ ॥ ೨ ॥

† ನಿರ್ಮೂಲಸ್ಕಂಧಯೋಃ ಛೇತ್ತುಂ, ಭಾವಾಃ ಶಾಖೋಪಶಾಖಯೋಃ । ಉಚ್ಛ್ರಯೇ ಪತಿತಾದಾನೇ ಭಾವಲೇಶ್ಯಾ ಫಲಾರ್ಥಿನಾಮ್ ॥

ಬಯಸುತ್ತಾನೆ ಹಾಗೂ ಶುಕ್ಲಲೇಶ್ಯೆಯುಳ್ಳವನಾದ ಮನುಷ್ಯನು ಕೆಳಗೆ ಬಿದ್ದಿರುವ ಫಲಗಳನ್ನು ಹೆಕ್ಕಿ ತೆಗೆದುಕೊಳ್ಳಲಿಚ್ಛಿಸುತ್ತಾನೆ ಹೀಗೆ ಇವಾರು ಲೇಶ್ಯೆಗಳಲ್ಲಿ ಮೊದಲಿನ ಮೂರು(ಕೃಷ್ಣ, ನೀಲ, ಕಾಪೋತ)ಅಶುಭಲೇಶ್ಯೆಗಳನ್ನು ತೊರೆದು ಕೇವಲ ಆತ್ಮಧ್ಯಾನದಲ್ಲಿಯೇ ಆಸಕ್ತನಾಗಬೇಕೆಂದು ಮುಖ್ಯಾಭಿಪ್ರಾಯವು.

**ದುಕ್ಖಹಂ ಕಾರಣು ಮುಣಿವಿ ಮಣಿ, ದೇಹು ವಿ ಏಹು ಚಯಂತಿ ।**
**ಜಿತ್ಥು ಣ ಪಾವಹಿಂ ಪರಮುಸುಹು, ತಿತ್ಥು ಕಿ ಸಂತ ವಸಂತಿ ॥ ೧೫೩ ॥**

"ದುಃಖಸ್ಯ ಕಾರಣಂ ಮತ್ವಾ ಮನಸಿ ದೇಹಮಪಿ ಏತತ್ ತ್ಯಜಂತಿ ।
ಯತ್ರ ನ ಪ್ರಾಪ್ನುವಂತಿ ಪರಮಸುಖಂ ತತ್ರ ಕಿಂ ಸಂತಃ ವಸಂತಿ ॥ ೧೫೩ ॥"

**ಅನ್ವಯಾರ್ಥ:**— ದೇಹಾತ್ಮಭೇದವಿಜ್ಞಾನಿಗಳಾದ ಸಾಧುಗಳು **ದುಕ್ಖಹಂ ಕಾರಣು**— ದುಃಖಕ್ಕೆ ಕಾರಣವನ್ನಾಗಿ **ಮಣಿ**— ಮನಸ್ಸಿನಲ್ಲಿ **ಮುಣಿವಿ**— ತಿಳಿದು **ಏಹು ದೇಹು ವಿ**- ಈ(ಪ್ರತ್ಯಕ್ಷವಾದ) ದೇಹವನ್ನು **ಸಹ ಚಯಂತಿ**— ಬಿಡುತ್ತಾರೆ. ಏಕಂದರೆ **ಜಿತ್ತು**— ಯಾವದೇಹದಲ್ಲಿ **ಪರಮುಸುಹು**— ಉತ್ತಮಸುಖವನ್ನು **ಣ ಪಾವಹಿಂ**— ಹೊಂದು(ಪಡೆಯು)ವುದಿಲ್ಲವೋ **ತಿತ್ಥು**— ಅಲ್ಲಿ(ಆ ದೇಹದಲ್ಲಿ) **ಸಂತ**— ಸತ್ಪುರುಷರು **ಕಿ ವಸಂತಿ**— ವಾಸಮಾಡುತ್ತಾರೋ ಏನು? (ಅಥವಾ ಏಕೆ ವಾಸಮಾಡುತ್ತಾರೆ?)

**ಭಾವಾರ್ಥ:**— ವೀತರಾಗಚಿದಾನಂದಸ್ವರೂಪವುಳ್ಳ ಶುದ್ಧಾತ್ಮೀಯಸುಖಕ್ಕೆ ವಿಪರೀತವಾದ ನರಕಾದಿದುಃಖಗಳಿಗೆ ಕಾರಣವಾಗಿರುವುದರಿಂದ ಈ ಶರೀರವು ಹೇಯವಾದುದು ಜೀವನು ಈ ಶರೀರದಿಂದ ಸುಖಲೇಶವನ್ನೂ ಪಡೆಯಲಾರನು. ಏಕಂದರೆ ಇಂದ್ರಿಯವಿಷಯಜನಿತಸುಖವು ಕೇವಲ ಸುಖಾಭಾಸವಾಗಿರುವುದಲ್ಲದೆ ನಿಜವಾದ ಸುಖವಾಗಿರುವುದಿಲ್ಲ. ಹೀಗೆಂದು ಭೇದಜ್ಞಾನದಿಂದ ದೇಹಾತ್ಮಭಿನ್ನತೆಯನ್ನು ಚೆನ್ನಾಗಿ ತಿಳಿದಿರುವ ಸತ್ಪುರುಷರು ದೇಹದ ಮಮತೆಯನ್ನು ಬಿಡುತ್ತಾರೆ ಯಾವ ಶರೀರದಿಂದ ಅವರು ಶುದ್ಧಾತ್ಮಾನುಭೂತಿಯಿಂದುಂಟಾಗುವ ಪರಮಸುಖವನ್ನು ಪಡೆಯಲಾರರೋ ಅಂತಹ ಶರೀರಪಮೇಲೆ ಅವರೇಕೆ ಆಸಕ್ತರಾಗುವರು? ಸರ್ವಥಾ ಆಸಕ್ತರಾಗಲಾರರು. ಅತಏವ ಆ ಮಹಾಪುರುಷರು ದೇಹಮಮತೆಯನ್ನು ಬಿಟ್ಟು ಶುದ್ಧಾತ್ಮಭಾವನೆಯಲ್ಲಾಸಕ್ತರಾಗುತ್ತಾರೆಂದು ಭಾವವು.

**ಅಪ್ಪಾಯತ್ತಉ ಜಂ ಜಿ ಸುಹು, ತೇಣ ಜಿ ಕರಿ ಸಂತೋಸು ।**
**ಪರ ಸುಹು ವಢ ಚಿಂತಂತಾಹಂ, ಹಿಯಇ ಣ ಫಿಟ್ಟಇ ಸೋಸು ॥ ೧೫೪ ॥**

"ಆತ್ಮಾಯತ್ತಂ ಯದೇವ ಸುಖಂ ತೇನೈವ ಕುರು ಸಂತೋಷಮ್ ।
ಪರಂ ಸುಖಂ ವತ್ಸ ಚಿಂತಯತಾಂ ಹೃದಯೇ ನ ನಶ್ಯತಿ ಶೋಷಃ ॥ ೧೫೪ ॥"

**ಅನ್ವಯಾರ್ಥ:— ವಢ**— ವತ್ಸ(ಶಿಷ್ಯ)ನೇ! **ಜಂ ಜಿ ಸುಹು**— ಯಾವ ಸುಖವು **ಅಪ್ಪಾಯತ್ತಉ**— ಆತ್ಮಾಧೀನವಾಗಿರುವುದೋ **ತೇಣ ಜಿ**— ಆ ಸುಖದಿಂದಲೇ(ಸುಖ

ದಲ್ಲಿಯೇ) **ಸಂತೋಸು ಕರಿ**— ಸಂತೋಷವನ್ನು ಮಾಡು (ಸಂತೋಷಪಡು) ಏಕೆಂದರೆ, **ಪರಸುಹು ಚಿಂತಂತಾಹಂ**— ಇಂದ್ರಿಯಾಧೀನವಾದ ಪರಸುಖವನ್ನು ಚಿಂತಿಸುವವರ **ಹಿಯುಇ**— ಹೃದಯದಲ್ಲಿ **ಸೋಸು**— ಶೋಷ ಅರ್ಥಾತ್ ಅಂತರ್ದಾಹವು **ಣ ಫಿಟ್ಟೈಇ**— ನಾಶವಾಗುವುದಿಲ್ಲ.

**ಭಾವಾರ್ಥ:**— ಆತ್ಮಾಧೀನವಾದ ಸುಖವು ಆತ್ಮಾನುಭವದಿಂದಲೇ ಉಂಟಾಗುತ್ತದೆ. ಇಂತಹ ಸುಖವು ಸ್ವಾಧೀನವೂ ವಿಚ್ಛೇದರಹಿತವೂ ವಿಘ್ನರಹಿತವೂ ಆಗಿರುತ್ತದೆ. ಇದಕ್ಕೆ ವಿಪರೀತವಾದ ಇಂದ್ರಿಯಾಧೀನವಾದ ಸುಖವು ಪರಾಧೀನವೂ ವಿಚ್ಛೇದಸಹಿತ(ನಶ್ವರ)ವೂ ಅನೇಕ ವಿಘ್ನಗಳುಳ್ಳದೂ ಆಗಿರುತ್ತದೆ. ಇಂದ್ರಿಯಭೋಗಾನುಭವದಿಂದ ಅತೃಪ್ತಿ ಅಥವಾ ಆಕುಲತೆಯೇ ಉಂಟಾಗುತ್ತದಲ್ಲದೆ ಎಂದೂ ತೃಪ್ತಿಯುಂಟಾಗುವುದಿಲ್ಲ. ಇದನ್ನೇ ಗ್ರಂಥಾಂತರದಲ್ಲಿ ಹೀಗೆ ಹೇಳಿದ್ದಾರೆ —"**ತಿಣಕಟ್ಠೇಣ ವ ಅಗ್ಗೀ, ಲವಣಸಮುದ್ದೋ ಣದೀ-ಸಹಸ್ಸೇಹಿಂ । ಣ ಇಮೋ ಜೀವೋ ಸಕ್ಕೋ, ತಿಪ್ಪೇದುಂ ಕಾಮಭೋಗೇಹಿಂ ॥**" ಅರ್ಥಾತ್ ಅಗ್ನಿಯು ತೃಣಕಾಷ್ಠಗಳಿಂದ ತೃಪ್ತಿಯನ್ನು ಪಡೆಯಲಾರದು. ಲವಣಸಮುದ್ರವು ಸಾವಿರಾರು ನದಿಗಳಿಂದಲೂ ತೃಪ್ತವಾಗಲಾರದು. ಹಾಗೆಯೇ ಈ ಜೀವನು ಕಾಮಭೋಗಗಳಿಂದ ಎಂದೂ ತೃಪ್ತಿಯನ್ನು ಹೊಂದಲಾರನು. ಅತಏವ ಶಿಷ್ಯನೇ! ನೀನು ಭೋಗಸುಖಾಸಕ್ತಿಯನ್ನು ತೊರೆದು "ಸಮಯಸಾರ"ದಲ್ಲಿ ಹೇಳಿರುವಂತೆ—"**ಏದಮ್ಹಿ ರದೋ ಣಿಚ್ಚಂ, ಸಂತುಟ್ಠೋ ಹೋಹಿ ಣಿಚ್ಚಮೇದಮ್ಹಿ । ಏದೇಣ ಹೋಹಿ ತಿತ್ತೋ, ತೋ ಹೋಹದಿ ಉತ್ತಮಂ ಸುಕ್ಖಂ ॥**" ಅರ್ಥಾತ್ ಈ ಆತ್ಮಸ್ವರೂಪದಲ್ಲಿಯೇ ಸದಾ ಲೀನನಾಗಿರು. ಇದರಲ್ಲಿಯೇ ಸರ್ವದಾ ಸಂತುಷ್ಟನಾಗಿರು ಇದರಿಂದಲೇ ನೀನು ತೃಪ್ತಿಯನ್ನು ಪಡೆಯುವೆ (ಸಂತೃಪ್ತನಾಗುವೆ) ಹಾಗೂ ಇದರಿಂದಲೇ ನಿನಗೆ ಉತ್ತಮಸುಖದ ಪ್ರಾಪ್ತಿಯುಂಟಾಗುವುದು. ಹೀಗೆ ತಿಳಿದು ನಿರಂತರ ಅಧ್ಯಾತ್ಮಸುಖದಲ್ಲಿಯೇ ಆಸಕ್ತನಾಗಬೇಕೆಂದು ಮುಖ್ಯಾಭಿಪ್ರಾಯವು ಇಲ್ಲಿ "**ಅಧ್ಯಾತ್ಮ**" ಎಂಬ ಶಬ್ದಕ್ಕೆ ಮಿಥ್ಯಾತ್ವವಿಷಯಕಷಾಯಾದಿಬಹಿರ್ದ್ರವ್ಯಗಳ ಅವಲಂಬನೆ(ಆಶ್ರಯ)ಯನ್ನು ತೊರೆದು ಕೇವಲ ಆತ್ಮನಲ್ಲೇ ತಲ್ಲೀನತೆಯನ್ನು ಹೊಂದುವುದೆಂದರ್ಥವು

**ಅಪ್ಪಹಂ ಣಾಣು ಪರಿಚ್ಚಯವಿ, ಅಣ್ಣು ಣ ಅತ್ಥಿ ಸಹಾಉ ।**
**ಇಉ ಜಾಣೇವಿಣು ಜೋಇಯಹು ಪರಹಂ ಮ ಬಂಧಉ ರಾಉ ॥೧೫೫॥**

"ಆತ್ಮನಃ ಜ್ಞಾನಂ ಪರಿತ್ಯಜ್ಯ ಅನ್ಯೋ ನ ಅಸ್ತಿ ಸ್ವಭಾವಃ ।
ಇದಂ ಜ್ಞಾತ್ವಾ ಯೋಗಿನ್ ಪರಸ್ಮಿನ್ ಮಾ ಬಧಾನ ರಾಗಮ್ ॥ ೧೫೫ ॥"

**ಅನ್ವಯಾರ್ಥ:**— **ಣಾಣು ಪರಿಚ್ಚಯವಿ**— ವೀತರಾಗಸ್ವಸಂವೇದನಜ್ಞಾನವನ್ನು ಬಿಟ್ಟು (ಜ್ಞಾನದ ಹೊರತು) **ಅಪ್ಪಹಂ**— ಆತ್ಮನ **ಅಣ್ಣು ಸಹಾಉ**–ಬೇರೆ ಸ್ವಭಾವವು **ಣ ಅತ್ಥಿ**— ಇರುವುದಿಲ್ಲ. **ಇಉ ಜಾಣೇವಿಣು**— ಇದನ್ನು(ಹೀಗೆಂದು) ತಿಳಿದು

**ಜೋಇಯಹು**— ಎಲೈ ಯೋಗಿಯೇ! ನೀನು **ಪರಹಂ**— ದೇಹಾದಿಪರವಸ್ತುವಿನಲ್ಲಿ **ರಾಉ ಮ ಬಂಧಉ**— ರಾಗ(ಪ್ರೀತಿ)ವನ್ನು ಬಂಧಿಸಬೇಡ ಅರ್ಥಾತ್ ಪ್ರೀತಿಯನ್ನು ಮಾಡಬೇಡ.

**ಭಾವಾರ್ಥ:**— ಯೋಗಿಯೇ! ಆತ್ಮನು ಕೇವಲಜ್ಞಾನಸ್ವಭಾವವುಳ್ಳವನು. ಆತ್ಮನ ಈಸ್ವಭಾವವನ್ನರಿತು ಶುದ್ಧಾತ್ಮನಿಂದ ಭಿನ್ನಗಳಾದ ದೇಹಾದಿ ಪರವಸ್ತುಗಳಲ್ಲಿ ನೀನು ಪ್ರೀತಿಯನ್ನು ಮಾಡಬೇಡ. ನಿರಂತರ ಶುದ್ಧಾತ್ಮಭಾವನೆಯನ್ನೇ ಮಾಡುತ್ತಿರು. ಇದ ರಿಂದ ನೀನು ನಿಶ್ಚಯವಾಗಿ ಆತ್ಮಕಲ್ಯಾಣವನ್ನು ಸಾಧಿಸುವೆ.

ಮುಂದೆ ಚಿತ್ತವನ್ನು ಸ್ಥಿರಗೊಳಿಸುವುದಕ್ಕಾಗಿ ಐದು ಸೂತ್ರಗಳಿಂದ ಉಪದೇಶ ವೀಯುತ್ತಾರೆ —

**ವಿಸಯಕಸಾಯಹಿಂ ಮಣಸಲಿಲು, ಣವಿ ಡಹುಲಿಜ್ಜಇ ಜಾಸು ।**
**ಅಪ್ಪಾ ಣಿಮ್ಮಲು ಹೋಇ ಲಹು, ವಢ ಪಚ್ಚಕ್ಖು ವಿ ತಾಸು ॥ ೧೫೬ ॥**

"ವಿಷಯಕಷಾಯೈಃ ಮನಃಸಲಿಲಂ ನೈವ ಕ್ಷುಭ್ಯತಿ ಯಸ್ಯ ।
ಆತ್ಮಾ ನಿರ್ಮಲೋ ಭವತಿ ಲಘು ವತ್ಸ ಪ್ರತ್ಯಕ್ಷೋಽಪಿ ತಸ್ಯ ॥ ೧೫೬ ॥"

**ಅನ್ವಯಾರ್ಥ:**— **ವಢ**— ಎಲೈ ಶಿಷ್ಯನೇ! **ಜಾಸು**— ಯಾವನ **ಮಣಸಲಿಲು**— ಮನೋರೂಪವಾದ (ಮನಸ್ಸೆಂಬ) ಜಲವು **ವಿಸಯಕಸಾಯಹಿ**— ವಿಷಯಕಷಾಯ ಗಳಿಂದ **ಣವಿ ಡಹುಲಿಜ್ಜಇ**— ಕ್ಷೋಭೆಗೊಳ್ಳು(ಚಂಚಲವಾಗು)ವುದಿಲ್ಲವೋ **ತಾಸು ಅಪ್ಪಾ**— ಅವನ ಆತ್ಮನು **ಲಹು ಣಿಮ್ಮಲು ಹೋಇ**— ಬೇಗನೆ ನಿರ್ಮಲನಾಗು ತ್ತಾನೆ ಮತ್ತು **ಪಚ್ಚಕ್ಖು ವಿ**— ಪ್ರತ್ಯಕ್ಷನೂ ಆಗುತ್ತಾನೆ.

**ಭಾವಾರ್ಥ:**— ಜ್ಞಾನಾವರಣಾದಿಕರ್ಮಗಳೆಂಬ ಜಲಚರಪ್ರಾಣಿಗಳಿಂದ ವ್ಯಾಪ್ತ ವಾಗಿರುವ ಸಂಸಾರವೆಂಬ ಸಾಗರದಲ್ಲಿ ಯಾವ ಭವ್ಯೋತ್ತಮನ ಮನೋರೂಪವಾದ ಜಲವು(ನೀರು) ಶುದ್ಧಾತ್ಮತತ್ತ್ವದಿಂದ ವಿಪರೀತಗಳಾದ ವಿಷಯಕಷಾಯಗಳೆಂಬ ಮಹಾವಾತಗಳಿಂದ ಅಲ್ಲೋಲಕಲ್ಲೋಲವಾಗಿ(ಚಂಚಲವಾಗಿ, ಕಲುಷಿತವಾಗಿ) ಮಾಡ ಲ್ಪಡುವುದಿಲ್ಲವೋ ಆತನ ಆತ್ಮನೇ ರಾಗಾದಿಮಲರಹಿತನಾಗಿರುವುದರಿಂದ ನಿರ್ಮಲ ನಾಗಿರುತ್ತಾನೆ, ಹಾಗೂ ಪ್ರತ್ಯಕ್ಷನಾಗುತ್ತಾನೆ ಅಂದರೆ ಆ ಭವ್ಯಜೀವನಿಗೆ ಆತ್ಮದರ್ಶನ ವುಂಟಾಗುತ್ತದೆ ಶುದ್ಧಾತ್ಮನಿಗೆ "ಪರಮಃ" ಎಂದು ಹೇಳುತ್ತಾರೆ. ಶುದ್ಧಾತ್ಮವಾಚಕ ವಾದೀ 'ಪರಮ'ದ ಕಲೆಯು ಅರ್ಥಾತ್ ಅನುಭವವು ಪರಮಕಲೆಯೆನಿಸುತ್ತದೆ. ಇದೇ ನಿಶ್ಚಯ ದೃಷ್ಟಿಯು. ಇಂತಹ "ಪರಮಕಲಾದೃಷ್ಟಿ"ಗೆ ಶುದ್ಧಾತ್ಮನು ಗೋಚರ (ಪ್ರತ್ಯಕ್ಷ)ನಾಗುತ್ತಾನೆಂದು ಅಥವಾ ಸ್ವಸಂವೇದನಜ್ಞಾನದಿಂದ ತಿಳಿಯಲ್ಪಡುವವ ನಾಗುತ್ತಾನೆಂದು ಭಾವವು.

**ಅಪ್ಪಾ ಪರಹಂ ಣ ಮೇಲವಿಉ, ಮಣು ಮಾರಿವಿ ಸಹಸ ತ್ತಿ ।**
**ಸೋ ವಢ ಜೋಏಂ ಕಿಂ ಕರಇ, ಜಾಸು ಣ ಏಹೀ ಸತ್ತಿ ॥ ೧೫೭ ॥**

"ಆತ್ಮಾ ವರಸ್ಯ ನ ಮೇಲಿತಃ ಮನೋ ಮಾರಯಿತ್ವಾ ಸಹಸೇತಿ ।
ನ ವತ್ಸ ಯೋಗೇನ ಕಿಂ ಕರೋತಿ ಯಸ್ಯ ನ ಈದೃಶೀ ಶಕ್ತಿಃ ॥ ೧೫೭ ॥"

**ಅನ್ವಯಾರ್ಥ:**— ಯಾವ ಜೀವನಿಂದ **ಮಣು ಮಾರಿವಿ**— ಮನಸ್ಸನ್ನು ನಿಗ್ರಹಿಸಿ(ವಶೀಕರಿಸಿ) **ಸಹಸ ತ್ತಿ**— ಶೀಘ್ರವಾಗಿ **ಅಪ್ಪಾ**— ಈ ಆತ್ಮನು **ಪರಹಂ**— ಪರಮಾತ್ಮನೊಡನೆ (ಅಥವಾ ಪರಮಾತ್ಮನಲ್ಲಿ) **ಣ ಮೇಲವಿಉ**— ಸೇರಿಸಲ್ಪಡಲಿಲ್ಲವೋ ಮತ್ತು **ವಢ**— ವತ್ಸ (ಶಿಷ್ಯ)ನೇ! **ಜಾಸು**— ಯಾವನಿಗೆ **ಣ ಏಹೀ ಸತ್ತಿ**— ಈಪ್ರಕಾರವಾದ ಶಕ್ತಿಯಿಲ್ಲವೋ **ಸೋ**— ಅವನು **ಜೋಏಂ**— ಯೋಗದಿಂದ **ಕಿಂ ಕರಇ**— ಏನು ಮಾಡುತ್ತಾನೆ? ಅಥವಾ ಏನು ಮಾಡಬಲ್ಲನು?

**ಭಾವಾರ್ಥ:**— ಯಾವ ಯೋಗಿಯು ಮಿಥ್ಯಾತ್ವಕಷಾಯಾದಿವಿಕಲ್ಪರೂಪವಾಗಿ ಪರಿಣತವಾದ ತನ್ನ ಮನಸ್ಸನ್ನು ವೀತರಾಗನಿರ್ವಿಕಲ್ಪಸಮಾಧಿರೂಪವಾದ ಶಸ್ತ್ರ(ಆಯುಧ) ದಿಂದ ನಿಗ್ರಹಿಸಿ ತನ್ನಾತ್ಮನನ್ನು ಖ್ಯಾತಿಪೂಜಾಲಾಭಮೊದಲಾದ ಸಮಸ್ತವಿಕಲ್ಪಜಾಲರಹಿತನೂ ವಿಶುದ್ಧಜ್ಞಾನದರ್ಶನಸ್ವಭಾವವುಳ್ಳವನೂ ಆದ ಪರಮಾತ್ಮನೊಡನೆ ಸೇರಿಸುವುದಿಲ್ಲವೋ ಹಾಗೂ ಆತನಲ್ಲಿ ಅಂತಹ ಶಕ್ತಿಯಿರುವುದಿಲ್ಲವೋ ಆತನು ಯೋಗದಿಂದ ಏನನ್ನು ತಾನೇ ಸಾಧಿಸಬಲ್ಲನು? ಅರ್ಥಾತ್ ಏನನ್ನೂ ಸಾಧಿಸಲಾರನು. ಆತಏವ ಖ್ಯಾತಿಪೂಜಾಲಾಭಾದಿಮನೋರಥರೂಪವಾದ ಸಮಸ್ತವಿಕಲ್ಪಜಾಲಗಳಿಂದ ರಹಿತನೂ ನಿರ್ಮಲಜ್ಞಾನದರ್ಶನಮಯನೂ ಆದ ಪರಮಾತ್ಮನನ್ನು ನೋಡುವ, ತಿಳಿಯುವ ಹಾಗೂ ಅನುಭವಿಸುವ ಮನುಷ್ಯನೇ ನಿಜವಾದ ಯೋಗಿಯೆಂದೂ ಮನೋನಿಗ್ರಹವಿಲ್ಲದವನಿಗೆ ಪರಮಾತ್ಮಾನುಭವವು ಅಸಾಧ್ಯವಾದುದೆಂದೂ ತಾತ್ಪರ್ಯವು.

**ಅಪ್ಪಾ ಮೆಲ್ಲಿವಿ ಣಾಣಮಉ, ಅಣ್ಣು ಜೇ ಝಾಯಹಿಂ ಝಾಣು ।**
**ವಢ ಅಣ್ಣಾಣ ವಿಯಂಭಿಯಹಂ, ಕಉ ತಹಂ ಕೇವಲಣಾಣು ॥ ೧೫೮ ॥**

"ಆತ್ಮಾನಂ ಮುಕ್ತ್ವಾ ಜ್ಞಾನಮಯಂ ಅನ್ಯತ್ ಯೇ ಧ್ಯಾಯಂತಿ ಧ್ಯಾನಮ್ ।
ವತ್ಸ ಅಜ್ಞಾನವಿಜೃಂಭಿತಾನಾಂ ಕುತಃ ತೇಷಾಂ ಕೇವಲಜ್ಞಾನಮ್ ॥ ೧೫೮ ॥"

**ಅನ್ವಯಾರ್ಥ:— ವಢ**— ಎಲೈ ಶಿಷ್ಯನೇ! **ಜೇ**— ಯಾವಜೀವರು **ಣಾಣಮಉ**— ಕೇವಲಜ್ಞಾನಮಯನಾದ (ಉಪಲಕ್ಷಣದಿಂದ ಕೇವಲಜ್ಞಾನಾದ್ಯನಂತಗುಣಮಯನಾದ) **ಅಪ್ಪಾ ಮೆಲ್ಲಿವಿ**— ಆತ್ಮನನ್ನು ಬಿಟ್ಟು **ಅಣ್ಣು ಝಾಣು ಝಾಯಹಿಂ**— ಇತರ ಪರಪದಾರ್ಥಗಳ ಧ್ಯಾನವನ್ನು ಮಾಡುತ್ತಾರೋ **ಅಣ್ಣಾಣವಿಯಂಭಿಯಹಂ**— ಅಜ್ಞಾನಪರಿಣತರಾದ (ಅಜ್ಞಾನಿಗಳಾದ) **ತಹಂ**— ಅವರಿಗ(ಆ ಜೀವರಿಗೆ) **ಕೇವಲಣಾಣು ಕಉ**— ಕೇವಲಜ್ಞಾನವು ಎಲ್ಲಿಂದ? ಕೇವಲಜ್ಞಾನವುಂಟಾಗದೆಂದರ್ಥವು.

**ಭಾವಾರ್ಥ:**— ಶಿಷ್ಯನೇ! ಯಾವ ಜೀವರು ಸಕಲವಿಮಲಕೇವಲಜ್ಞಾನಾದ್ಯನಂತಗುಣಮಯನಾದ ಆತ್ಮನ ಧ್ಯಾನವನ್ನು ಬಿಟ್ಟು ಆತ್ಮಭಿನ್ನಗಳಾದ ಪರಪದಾರ್ಥಗಳ ಧ್ಯಾನವನ್ನು ಮಾಡುತ್ತಾರೋ ಅವರು ಸರ್ವಥಾ ಅಜ್ಞಾನಿಗಳು. ಅವರಿಗೆ ಎಂದೂ

ಕೇವಲಜ್ಞಾನವುಂಟಾಗದು. ಯದ್ಯಪಿ ಪ್ರಾಥಮಿಕ-ಸವಿಕಲ್ಪಾವಸ್ಥೆಯಲ್ಲಿ ಶುಭೋವ ಯೋಗಿಗಳು ಮನಸ್ಸಿನ ಸ್ಥಿರತೆಗೋಸ್ಕರ ಮತ್ತು ವಿಷಯಕಷಾಯಾದಿಜನ್ಯದುರ್ಧ್ಯಾನ ಗಳನ್ನು ತಡೆಯುವುದಕ್ಕೋಸ್ಕರ ಜಿನಪ್ರತಿಮೆ ಹಾಗೂ ಪಂಚಪರಮೇಷ್ಠಿವಾಚಕಮಂತ್ರಾ ಕ್ಷರಗಳು ಇತ್ಯಾದಿಗಳನ್ನು ಧ್ಯಾನಿಸುವುದು ಉಚಿತವಾಗಿರುವುದಾದರೂ ನಿರ್ವಿಕಲ್ಪ-ನಿಶ್ಚಯಧ್ಯಾನದ ಸಮಯ ಕೇವಲ ನಿಜಶುದ್ಧಾತ್ಮನನ್ನೇ ಧ್ಯಾನಿಸಬೇಕೆಂದಭಿಪ್ರಾಯವು.

**ಸುಣ್ಣಉಂ ಪಉಂ ಝಾಯಂತಾಹಂ, ವಲಿ ವಲಿ ಜೋಇಯಡಾಹಂ ।**
**ಸಮರಸಿಭಾಉ ಪರೇಣ ಸಹು, ಪುಣ್ಣು ವಿ ಪಾಉ ಣ ಜಾಹಂ ॥ ೧೫೯ ॥**

"ಶೂನ್ಯಂ ಪದಂ ಧ್ಯಾಯತಾಂ ಪುನಃ ಪುನಃ [?] ಯೋಗಿನಾಮ್ ।
ಸಮರಸೀಭಾವಂ ಪರೇಣ ಸಹ ಪುಣ್ಯಮಪಿ ಪಾಪಂ ನ ಯೇಷಾಮ್ ॥ ೧೫೯ ॥"

**ಅನ್ವಯಾರ್ಥ:— ಸುಣ್ಣಉಂ ಪಉಂ**— ವಿಕಲ್ಪಶೂನ್ಯ(ರಹಿತ)ವಾದ ಬ್ರಹ್ಮಪದ (ನಿಜಶುದ್ಧಾತ್ಮಸ್ವರೂಪ)ವನ್ನು **ಝಾಯಂತಾಹಂ**— ಧ್ಯಾನಿಸುತ್ತಿರುವ **ಜೋಇಯಡಾಹಂ**— ಯೋಗಿಗಳಿಗೆ **ವಲಿ ವಲಿ** —*ನಾನು ಪುನಃ ಪುನಃ ಬಲಿ(ಪೂಜೆ)ಯನ್ನು ಮಾಡುತ್ತೇನೆ. **ಜಾಹಂ**— ಯಾವ ಯೋಗಿಗಳಿಗೆ **ಪರೇಣ ಸಹು**— ಪರಮಾತ್ಮನೊಡನೆ (ಅಥವಾ ಪರಪದಾರ್ಥಗಳೊಡನೆ) **ಸಮರಸಿಭಾಉ**— ಪರಮಸಮರಸೀಭಾವವಿರುತ್ತದೆ ಹಾಗೂ **ಪುಣ್ಣು ವಿ ಪಾಉ ಣ**— ಪುಣ್ಯವೂ ಪಾಪವೂ ಇರುವುದಿಲ್ಲ. **ಅಥವಾ:— "ಸುಣ್ಣಉಂ ಪಉಂ ವಲಿ ವಲಿ ಝಾಯಂತಾಹಂ ಜಾಹಂ ಜೋಇಯಡಾಹಂ"**— ವಿಕಲ್ಪಶೂನ್ಯವಾದ ಪರಬ್ರಹ್ಮಪದವನ್ನು ಪುನಃಪುನಃ (ಬಾರಿಬಾರಿಗೆ, ನಿರಂತರ) ಧ್ಯಾನಿಸುತ್ತಿರುವ ಯಾವ ಯೋಗಿಗಳಿಗೆ **"ಪರೇಣ ಸಹು ಸಮರಸಿಭಾಉ, ಪುಣ್ಣು ವಿ ಪಾಉ ಣ"**- ಶುದ್ಧಾತ್ಮನೊಡನೆ ಸಮರಸೀಭಾವವಿರುತ್ತದೆ ಹಾಗೂ ಪುಣ್ಯವೂ ಪಾಪವೂ ಇರುವುದಿಲ್ಲವೆಂದರ್ಥವು.

**ಭಾವಾರ್ಥ:**— ಯಾವ ಪರಮಯೋಗಿಗಳು ಶುಭಾಶುಭಮನೋವಾಕ್ಕಾಯ ವ್ಯಾಪಾರಗಳಿಂದ ಶೂನ್ಯ(ರಹಿತ)ವಾದುದೂ ವೀತರಾಗಪರಮಾನಂದೈಕಸುಖಾಮೃತ ರಸದಿಂದ ಪರಿಪೂರ್ಣ(ಭರಿತ)ವೂ ಆದ ನಿಜಶುದ್ಧಾತ್ಮಸ್ವರೂಪವನ್ನು ವೀತರಾಗ ತ್ರಿಗುಪ್ತಿಸಮಾಧಿಯಬಲದಿಂದ ಧ್ಯಾನಿಸುತ್ತಾರೋ ಸ್ವಸಂವೇದ್ಯನಾದ ಪರಮಾತ್ಮ

---

* "ವಲಿ, ವಲಿ" ಎಂಬುದಕ್ಕೆ "ಪುನಃ ಪುನಃ" ಎಂದರ್ಥವು ಆದರೆ, ಶ್ರೀಬ್ರಹ್ಮದೇವಕೃತ ಸಂಸ್ಕೃತಟೀಕೆಯಲ್ಲಿ 'ವಲಿ' ಎಂಬುದಕ್ಕೆ 'ಬಲಿ' (ಪೂಜೆ) ಎಂಬ ಅರ್ಥವನ್ನು ಮಾಡಿ "ನಾನು ಯೋಗಿಗಳನ್ನು ಪೂಜಿಸುತ್ತೇನೆಂದು ಪರಮಯೋಗಿಗಳ ಪ್ರಶಂಸೆಯನ್ನು ಮಾಡುತ್ತ ಶ್ರೀಯೋಗೀಂದುದೇವರು ತಮ್ಮ ಅಭ್ಯಂತರಗುಣಾನುರಾಗವನ್ನು ಪ್ರಕಟಿಸುತ್ತಾರೆಂದೂ," ಶ್ರೀ. ಪಂ. ದೌಲತ್ ರಾಮಜೀಯವರ ಹಿಂದೀಟೀಕೆಯಲ್ಲಿ "ಬಾರಿಬಾರಿಗೆ ಮಸ್ತಕವನ್ನು ನಮಿಸಿ ಪೂಜಿಸುತ್ತೇನೆ" ಎಂದೂ ಬರೆದಿರುತ್ತಾರೆ. ಹೀಗಿರುವುದರಿಂದ ಹಿಂದೀ ಟೀಕೆಯನ್ನನುಸರಿಸಿ 'ಅನ್ವಯಾರ್ಥ'ವನ್ನು ಬರೆದು 'ವಲಿ' ಶಬ್ದಕ್ಕೆ 'ಪುನಃ' ಎಂಬ ಅರ್ಥವನ್ನು ಮಾಡುವುದರಿಂದಾಗುವ ಅನ್ವಯಾರ್ಥವನ್ನು "ಅಥವಾ" ಎಂಬುದರಿಂದ ಸೂಚಿಸಿದ್ದಾಗಿದೆ.

ನೊಡನೆ ಪರಮಸಮರಸೀಭಾವವನ್ನು ಹೊಂದಿರುವವರೂ ಪುಣ್ಯಪಾಪಗಳಿಂದ ರಹಿತರೂ ಆದ ಆ ಪರಮಯೋಗಿಗಳನ್ನು ನಾನು ಬಾರಿಬಾರಿಗೆ ಪೂಜಿಸು(ಸತ್ಕರಿಸು)ತ್ತೇನೆಂದು ಶ್ರೀಯೋಗೀಂದುದೇವರು ಪರಮಯೋಗಿಗಳನ್ನು ಪ್ರಶಂಸಿಸುತ್ತಾರೆ ಹಾಗೂ ತಮ್ಮಂತರಂಗದಲ್ಲಿರುವ ಧರ್ಮಾನುರಾಗವನ್ನು ವ್ಯಕ್ತಗೊಳಿಸುತ್ತಾರೆ. ಜೀವಿತ-ಮರಣ, ಸುಖ-ದುಃಖ ಮೊದಲಾದುವುಗಳಲ್ಲಿ ರಾಗದ್ವೇಷರಹಿತವಾದ ಸಮತಾಭಾವವು '**ಸಮರಸೀಭಾವ**'ವೆಂದು ಹೇಳಲ್ಪಡುತ್ತದೆ. ಅಥವಾ ಜ್ಞಾನಾದಿಗುಣಗಳು ಹಾಗೂ ಗುಣಿ (ಆ ಗುಣಗಳುಳ್ಳ)ಯಾದ ನಿಜಶುದ್ಧಾತ್ಮದ್ರವ್ಯ ಇವೆರಡರಲ್ಲಿ ಏಕೀಭಾವ(ಅಭೇದ) ರೂಪವಾಗಿ ಪರಿಣಮಿಸುವಿಕೆಯು "**ಸಮರಸೀಭಾವ**"ವೆನಿಸುತ್ತದೆ.

**ಉವ್ವಸ ವಸಿಯಾ ಜೋ ಕರಇ, ವಸಿಯಾ ಕರಇ ಜು ಸುಣ್ಣು ।**
**ಬಲಿ ಕಿಜ್ಜಉಂ ತಸು ಜೋಇಯಹಿಂ, ಜಾಸು ಣ ಪಾಉ ಣ ಪುಣ್ಣು ॥೧೬೦॥**

"ಉದ್ವಸಾನ್ ವಸಿತಾನ್ ಯಃ ಕರೋತಿ ವಸಿತಾನ್ ಯಃ ಶೂನ್ಯಾನ್ ।
ಬಲಿಂ ಕುರ್ವೇಽಹಂ ತಸ್ಯ ಯೋಗಿನಃ ಯಸ್ಯ ನ ಪಾಪಂ ನ ಪುಣ್ಯಮ್ ॥೧೬೦॥"

**ಅನ್ವಯಾರ್ಥ:**— **ಜೋ**— ಯಾವ ಯೋಗಿಯು **ಉವ್ವಸ**— ಮೊದಲು ಶೂನ್ಯವಾಗಿರುವ ಅರ್ಥಾತ್ ಹಿಂದೆಂದೂ ಉಂಟಾಗದಿರುವ ಶುದ್ಧಾತ್ಮಾನುಭೂತಿರೂಪಪರಿಣಾಮಗಳನ್ನು **ವಸಿಯಾ ಕರಇ**— ಸ್ವಸಂವೇದನಜ್ಞಾನದ ಬಲದಿಂದ ತನ್ನಲ್ಲಿ (ಆತ್ಮನಲ್ಲಿ) ಭರಿತಗಳನ್ನಾಗಿ ಮಾಡುತ್ತಾನೆಯೋ ಅರ್ಥಾತ್ ತನ್ನ ಹೃದಯದಲ್ಲಿ ಸ್ಥಾಪಿಸುತ್ತಾನೋ ಮತ್ತು **ಜು**— ಯಾವನು **ವಸಿಯಾ**— ತನ್ನಲ್ಲಿ ಭರಿತವಾಗಿರುವ ಅರ್ಥಾತ್ ತನ್ನಲ್ಲಿ ಮೊದಲಿದ್ದ ಮಿಥ್ಯಾತ್ವರಾಗಾದಿಪರಿಣಾಮಗಳನ್ನು **ಸುಣ್ಣು ಕರಇ**— ಶೂನ್ಯಗಳನ್ನಾಗಿ ಮಾಡುತ್ತಾನೋ ಅರ್ಥಾತ್ ಮಿಥ್ಯಾತ್ವರಾಗಾದಿಗಳನ್ನು ತನ್ನ ಹೃದಯದಿಂದ ದೂರಗೊಳಿಸುತ್ತಾನೋ **ತಸು ಜೋಇಯಹಿಂ**— ಆ ಯೋಗಿಗೆ **ಬಲಿ ಕಿಜ್ಜಉಂ**— ನಾನು ಪೂಜೆ(ಆದರ)ಯನ್ನು ಮಾಡುತ್ತೇನೆ **ಜಾಸು**— ಯಾವ(ಪೂರ್ವೋಕ್ತ) ಯೋಗಿಗೆ **ಣ ಪಾಉ ಣ ಪುಣ್ಣು**— ಪಾಪವೂ ಇರುವುದಿಲ್ಲ, ಪುಣ್ಯವೂ ಇರುವುದಿಲ್ಲ.

**ಭಾವಾರ್ಥ:**— ಯಾವ ಉತ್ತಮಯೋಗಿಯು ಸ್ವಸಂವೇದನಜ್ಞಾನದಿಂದ ತನ್ನ ಹೃದಯ(ಮನಸ್ಸು)ದಲ್ಲಿ ಹಿಂದೆಂದೂ ನೆಲಸದಿರುವ ಶುದ್ಧೋಪಯೋಗರೂಪವಾದ ಪರಿಣಾಮಗಳನ್ನು ಸ್ಥಾಪಿಸುವನೋ ಅರ್ಥಾತ್ ಯಾವನ ಹೃದಯವು ಶುದ್ಧೋಪಯೋಗ(ಶುದ್ಧಾತ್ಮಾನುಭೂತಿ)ರೂಪವಾಗಿ ಪರಿಣಮಿಸುವುದೋ ಆ ಪರಮಯೋಗಿಯು ಮಿಥ್ಯಾತ್ವರಾಗಾದಿಸಮಸ್ತವಿಕಲ್ಪಜಾಲಗಳನ್ನು ತನ್ನ ಹೃದಯದಿಂದ ದೂರಗೊಳಿಸುತ್ತಾನೆ. ಈ ಕಾರಣದಿಂದ ಆತನಲ್ಲಿ ನವೀನಪುಣ್ಯಪಾಪಕರ್ಮಗಳ ಆಸ್ರವವುಂಟಾಗುವುದಿಲ್ಲ ಅರ್ಥಾತ್ ನವೀನಕರ್ಮಗಳ ಸಂವರೆಯುಂಟಾಗುತ್ತದೆ ಹಾಗೂ ಪೂರ್ವಬದ್ಧಪುಣ್ಯಪಾಪಕರ್ಮಗಳ ನಿರ್ಜರೆಯುಂಟಾಗುತ್ತದೆ. ಅತಏವ ಆತನು ಪುಣ್ಯಪಾಪರಹಿತನಾಗುತ್ತಾನೆ. ಅಥವಾ ಶುದ್ಧೋಪಯೋಗಪರಿಣತನಾದ ಯೋಗಿಯಲ್ಲಿ ಶುಭಾ

ಶುಭಉಪಯೋಗಗಳೆರಡೂ ಇಲ್ಲದಿರುವುದರಿಂದ ಈ ಅಪೇಕ್ಷೆಯಿಂದಲೂ ಆತನು ಪುಣ್ಯಪಾಪರಹಿತನಾಗಿರುತ್ತಾನೆ. ಅಂತಹ ಪರಮಯೋಗಿಯನ್ನು ನಾನು ನತಮಸ್ತಕನಾಗಿ ಪೂಜಿಸುತ್ತೇನೆಂದು ಶ್ರೀಯೋಗೀಂದುದೇವರು ಗುಣಪ್ರಶಂಸೆಯನ್ನು ಮಾಡಿ ತಮ್ಮ ಗುಣಾನುರಾಗವನ್ನು ಪ್ರಕಟಗೊಳಿಸುತ್ತಾರೆಂದು ಭಾವವು

ಮುಂದೆ ಒಂದು ಸೂತ್ರದಿಂದ ಶಿಷ್ಯನ ಪ್ರಶ್ನೆಯನ್ನು ಸೂಚಿಸಿ ಅದಕ್ಕೆ ಉತ್ತರ ರೂಪವಾಗಿ ನಾಲ್ಕು ಸೂತ್ರಗಳಿಂದ ನಿರ್ವಿಕಲ್ಪಸಮಾಧಿಯ ವಿಶೇಷವರ್ಣನೆಯನ್ನು ಮಾಡುತ್ತಾರೆ —

**ತುಟ್ಟಇ ಮೋಹು ತಡಿತ್ತಿ ಜಹಿಂ, ಮಣು ಅತ್ಥವಣಹಂ ಜಾಇ ।**
**ಸೋ ಸಾಮಿಯ ಉವಏಸು ಕಹಿ, ಅಣ್ಣೇ ದೇವಿಂ ಕಾಇಂ ॥ ೧೬೧ ॥**

"ತ್ರುಟ್ಯತಿ ಮೋಹಃ ಝಟಿತಿ ಯತ್ರ ಮನಃ ಅಸ್ತಮನಂ ಯಾತಿ ।
ತಂ ಸ್ವಾಮಿನ್ ಉಪದೇಶಂ ಕಥಯ ಅನ್ಯೇನ ದೇವೇನ ಕಿಮ್ ॥ ೧೬೧ ॥"

**ಅನ್ವಯಾರ್ಥ:— ಸಾಮಿಯ**— ಎಲೈ ಸ್ವಾಮಿಯೇ! **ಜಹಿಂ**— ಎಲ್ಲಿ(ಯಾವ ಪರಮಾತ್ಮಪದಾರ್ಥದಲ್ಲಿ) **ಮೋಹು**— ಮೋಹವು **ತಡಿತ್ತಿ ತುಟ್ಟಇ**— ಶೀಘ್ರತಃ (ಬೇಗನೆ) ನಾಶವಾಗುತ್ತದೋ ಮತ್ತು **ಮಣು**— ಮನವು **ಅತ್ಥವಣಹಂ ಜಾಇ**— ಅಸ್ತಮನವನ್ನು ಅರ್ಥಾತ್ ಸ್ಥಿರತೆಯನ್ನು ಹೊಂದುತ್ತದೋ **ಸೋ ಉವಏಸು ಕಹಿ** ಆ ಉಪದೇಶವನ್ನು ಹೇಳು(ಹೇಳಿರಿ) **ಅಣ್ಣೇ ದೇವಿಂ ಕಾಇಂ**— ಇತರ ದೇವರಿಂದೇನು? ಅರ್ಥಾತ್ ಪರಮಾರಾಧ್ಯನಾದ ನಿರ್ದೋಷಪರಮಾತ್ಮದೇವನ ಹೊರತು ಇತರ ದೇವರಿಂದೇನು ಪ್ರಯೋಜನವು? ಏನೂ ಪ್ರಯೋಜನವಿಲ್ಲವೆಂದರ್ಥವು.

**ಭಾವಾರ್ಥ:**— ಮೋಹೋದಯದಿಂದುಂಟಾದ ಸಮಸ್ತವಿಕಲ್ಪಗಳಿಂದ ರಹಿತವಾದ ಯಾವ ಪರಮಾತ್ಮಪದಾರ್ಥದ ಅನುಭವದಿಂದ ನಿರ್ದೋಷಶುದ್ಧಾತ್ಮದ್ರವ್ಯಕ್ಕೆ ಪ್ರತಿಪಕ್ಷ(ವಿರುದ್ಧ)ವಾದ ಮೋಹವು ಶೀಘ್ರವೇ ನಾಶವಾಗುವುದೋ ಮತ್ತು ನಿರ್ವಿಕಲ್ಪಶುದ್ಧಾತ್ಮಸ್ವಭಾವಕ್ಕೆ ವಿಪರೀತವಾದ ನಾನಾವಿಕಲ್ಪಜಾಲಗಳಿಂದ ಚಂಚಲವಾದ ಮನಸ್ಸು ಸ್ಥಿರತೆ(ಏಕಾಗ್ರತೆ)ಯನ್ನು ಹೊಂದುವುದೋ ಅಂತಹ ಉಪದೇಶವನ್ನು ನನಗೆ ಕೊಡಿರಿ. ಭೋ ಸ್ವಾಮಿನ್! ನಿರ್ದೋಷಪರಮಾತ್ಮನನ್ನು ಬಿಟ್ಟು ಇತರ ಮಿಥ್ಯಾದೇವರುಗಳಿಂದೇನು ಪ್ರಯೋಜನವು? ಹೀಗೆಂದು ಶಿಷ್ಯನಾದ ಪ್ರಭಾಕರಭಟ್ಟನು ತನ್ನ ಗುರುಗಳಾದ ಶ್ರೀಯೋಗೀಂದುದೇವರನ್ನು ಕುರಿತು ಪ್ರಶ್ನೆಮಾಡಿದನೆಂದು ತಾತ್ಪರ್ಯಾರ್ಥವು.

**ಣಾಸವಿಣಿಗ್ಗಉ ಸಾಸಡಾ, ಅಂಬರಿ ಜೆತ್ಥು ವಿಲಾಇ ।**
**ತುಟ್ಟಇ ಮೋಹು ತಡತ್ತಿ ತಹಿಂ, ಮಣು ಅತ್ಥವಣಹಂ ಜಾಇ ॥ ೧೬೨ ॥**

"ನಾಸಾವಿನಿರ್ಗತಃ ಶ್ವಾಸಃ ಅಂಬರೇ ಯತ್ರ ವಿಲೀಯತೇ ।
ತ್ರುಟ್ಯತಿ ಮೋಹಃ ಝಟಿತಿ ತತ ಮನಃ ಅಸ್ತಂ ಯಾತಿ ॥ ೧೬೨ ॥"

**ಅನ್ವಯಾರ್ಥ:— ಜತ್ಥ** — ಎಲ್ಲಿ **ಣಾಸವಿಣಿಗ್ಗಉ** — ನಾಸಿಕ(ಮೂಗು)ದಿಂದ ಹೊರಟ **ಸಾಸಡಾ**- ಶ್ವಾಸವು **ಅಂಬರಿ** — ನಿರ್ವಿಕಲ್ಪಸಮಾಧಿಯಲ್ಲಿ **ವಿಲಾಇ** — ವಿಲೀನವಾಗುತ್ತದೋ ಅರ್ಥಾತ್ ಸೇರಿಕೊಳ್ಳುತ್ತದೋ **ತಹಿಂ** — ಅಲ್ಲಿ **ಮೋಹು** — ಮೋಹವು **ತಡತ್ತಿ** — ಶೀಘ್ರವಾಗಿ **ತುಟ್ಟಇ** — ನಾಶವಾಗುತ್ತದೆ ಮತ್ತು **ಮಣು** — ಚಿತ್ತವು (ಮನಸ್ಸು) **ಅತ್ಥವಣಹಂ ಜಾಇ** — ಸ್ಥಿರತೆಯನ್ನು ಹೊಂದುತ್ತದೆ.

**ಭಾವಾರ್ಥ:** — ನಾಸಿಕಾದ್ವಾರದಿಂದ ಹೊರಟ ಶ್ವಾಸವು ಆಕಾಶದಂತೆ ನಿರ್ಮಲವಾದ ಹಾಗೂ ಮಿಥ್ಯಾತ್ವಾದಿವಿಕಲ್ಪಜಾಲರಹಿತವಾದ ಶುದ್ಧಭಾವಗಳಲ್ಲಿ ವಿಲೀನವಾಗುತ್ತದೆ ಅರ್ಥಾತ್ ತತ್ತ್ವಸ್ವರೂಪವಾದ ಪರಮಾನಂದದಿಂದ ಪೂರ್ಣವಾದ ನಿರ್ವಿಕಲ್ಪ ಸಮಾಧಿಯಲ್ಲಿ ಸೇರಿಕೊಳ್ಳುತ್ತದೆ. ಯಾವಾಗ ಈ ಜೀವನು ರಾಗಾದಿಪರಭಾವಶೂನ್ಯವಾದ ನಿರ್ವಿಕಲ್ಪಸಮಾಧಿಯಲ್ಲಿ ಲೀನನಾಗುತ್ತಾನೋ ಆಗ ಉಚ್ಛ್ವಾಸಸ್ವರೂಪವಾದ ವಾಯುವು(ಗಾಳಿಯು) ನಾಸಿಕಾರಂಧ್ರಗಳನ್ನು ಬಿಟ್ಟು ತಾನಾಗಿಯೇ ಅನಿಚ್ಛಾಪೂರ್ವಕವಾಗಿ ತಾಲುಪ್ರದೇಶ (ನಾಲಗೆಯ ಮೇಲ್ಭಾಗ)ದಲ್ಲಿರುವ, ಕೇಶದ (ತಲೆಕೂದಲಿನ) ಎಂಟನೆಯ ಒಂದು ಭಾಗದಷ್ಟು ಸೂಕ್ಷ್ಮವಾದ ಛಿದ್ರದಿಂದ (ದಶಮದ್ವಾರದಿಂದ) ಹೊರಡುತ್ತದೆ. ಆಗಲೇ ಮೋಹವು ನಾಶವಾಗುತ್ತದೆ. ಮತ್ತು ಅದೇ ಸಮಯದಲ್ಲಿ ಮೋಹೋದಯದಿಂದುಂಟಾದ ರಾಗಾದಿವಿಕಲ್ಪಜಾಲಗಳು ನಾಶವಾಗುತ್ತವೆ. ಹೀಗೆಯೇ ಬಾಹ್ಯಜ್ಞಾನಶೂನ್ಯವಾದ ನಿರ್ವಿಕಲ್ಪಸಮಾಧಿಯಲ್ಲಿ ವಿಕಲ್ಪಗಳಿಗೆ ಆಧಾರಭೂತವಾದ ಮನಸ್ಸು ಅಸ್ತವಾಗುತ್ತದೆ ಅರ್ಥಾತ್ ನಿಜಸ್ವಭಾವದಲ್ಲಿ ಮನಸ್ಸಿನ ಚಂಚಲತೆಯಿರುವುದಿಲ್ಲ ಆದರೆ ಪಾತಂಜಲಿಯೋಗಸೂತ್ರಾದಿಗಳಲ್ಲಿ ಹೇಳಿರುವಂತೆ ವಾಯುಧಾರಣಾರೂಪವಾಗಿ ಶ್ವಾಸವನ್ನು ನಿರೋಧಿಸುವಿಕೆಯು ಇಲ್ಲಿ ಅನ್ವಯಿಸುವುದಿಲ್ಲ. ಏಕೆಂದರೆ ವಾಯುಧಾರಣೆಯು ಇಚ್ಛಾಪೂರ್ವಕವಾದುದು ಇಚ್ಛೆ(ವಾಂಛೆ)ಯೆಂಬುದು ಮೋಹಜನಿತವಿಕಲ್ಪರೂಪವಾದುದಾಗಿದೆ ಅತಏವ ಮೋಹವು ಇಚ್ಛೆಗೆ ಕಾರಣವಾಗಿರುತ್ತದೆ. ಸಂಯಮಿಗಳಿಗುಂಟಾಗುವ ವಾಯುನಿರೋಧವು ಇಚ್ಛಾಪೂರ್ವಕವಾಗಿರುವುದಿಲ್ಲ. ಅದು ಸ್ವಾಭಾವಿಕವಾಗಿ ಉಂಟಾಗುತ್ತದೆ ವಾಯುಧಾರಣೆ ಅಥವಾ ಪ್ರಾಣಾಯಾಮವು ಕುಂಭಕ(ವಾಯುವನ್ನು ಎಳೆದುಕೊಳ್ಳುವುದು) ಪೂರಕ(ಸ್ತಂಭಿಸುವುದು) ಮತ್ತು ರೇಚಕ(ಹೊರಬಿಡುವುದು)ವೆಂದು ಮೂರುವಿಧವಾಗಿದೆ ಈ ವಾಯುಧಾರಣೆಯು ಕ್ಷಣಮಾತ್ರವಿರುತ್ತದೆ ಆದರೆ ಅಭ್ಯಾಸಬಲದಿಂದ ಗಂಟೆ, ಜಾವ, ದಿವಸ ಇತ್ಯಾದಿಗಳವರೆಗೂ ಇದನ್ನು ಸಾಧಿಸಬಹುದಾಗಿದೆ. ದೇಹಾರೋಗ್ಯ, ದೇಹಲಘುತ್ವಾದಿಗಳು ಈ ವಾಯುಧಾರಣೆಯ ಕಾರ್ಯ(ಪ್ರಯೋಜನ)ಗಳಾಗಿರುತ್ತವೆ. ಪರಂತು ಇದು ಮುಕ್ತಿಗೆ ಕಾರಣವಾಗಿರುವುದಿಲ್ಲ. ಹಾಗೆ ಮುಕ್ತಿಗೆ ಕಾರಣವಾಗಿರುವುದಾದರೆ ವಾಯುಧಾರಣೆಯನ್ನು ಮಾಡುವ ಇಂದಿನ ಮನುಷ್ಯರಿಗೂ ಮುಕ್ತಿಯುಂಟಾಗಬೇಕಾಗುವುದು. ಆದರೆ ವಸ್ತುತಃ ಹಾಗಾಗುವುದಿಲ್ಲವೆಂದು ಭಾವವು.

**ಮೋಹು ವಿಲಿಜ್ಜಇ ಮಣು ಮರಇ, ತುಟ್ಟಇ ಸಾಸುಣಿಸಾಸು ।**
**ಕೇವಲಣಾಣು ವಿ ಪರಿಣಮಇ, ಅಂಬರಿ ಜಾಹಂ ಣಿವಾಸು ॥ ೧೬೩ ॥**

"ಮೋಹೋ ವಿಲೀಯತೇ ಮನೋ ಮ್ರಿಯತೇ ತ್ರುಟ್ಯತಿ ಶ್ವಾಸೋಚ್ಛ್ವಾಸಃ ।
ಕೇವಲಜ್ಞಾನಮಪಿ ಪರಿಣಮತಿ ಅಂಬರೇ ಯೇಷಾಂ ನಿವಾಸಃ ॥ ೧೬೩ ॥"

**ಅನ್ವಯಾರ್ಥ:—** **ಅಂಬರಿ**—ಆಕಾಶದಂತೆ ನಿರ್ಮಲವಾದ ಪರಮಸಮಾಧಿಯಲ್ಲಿ **ಜಾಹಂ ಣಿವಾಸು**—ಯಾವ ಪರಮಯೋಗಿಗಳ ನಿವಾಸ (ಇರುವಿಕೆ, ತನ್ಮಯತೆ) ವಿರುವುದೋ ಅವರ **ಮೋಹು ವಿಲಿಜ್ಜಇ**—ಮೋಹವು ವಿಲಯ (ನಾಶ)ವನ್ನು ಹೊಂದುತ್ತದೆ. **ಮಣು ಮರಇ**—ಮನಸ್ಸು ಸಾಯುತ್ತದೆ ಅರ್ಥಾತ್ ವಿಕಲ್ಪ ಶೂನ್ಯವೂ ಸ್ಥಿರವೂ ಆಗುತ್ತದೆ. **ಸಾಸುಣಿಸಾಸು ತುಟ್ಟಇ**—ಶ್ವಾಸೋಚ್ಛ್ವಾಸವು ತಡೆಯಲ್ಪಡುತ್ತದೆ ಮತ್ತು **ಕೇವಲಣಾಣು ವಿ**—ಕೇವಲಜ್ಞಾನವೂ **ಪರಿಣಮಇ**—ಪರಿಣಮಿಸು (ಉತ್ಪನ್ನವಾಗು)ತ್ತದೆ.

**ಭಾವಾರ್ಥ:—** ಯಾವ ಪರಮಯೋಗಿಗಳು ರಾಗದ್ವೇಷಮೋಹರೂಪವಿಕಲ್ಪ ಗಳಿಂದ ಶೂನ್ಯ(ರಹಿತ)ವೂ ಶುದ್ಧಾತ್ಮತತ್ತ್ವದ ಸಮ್ಯಕ್‌ಶ್ರದ್ಧಾನಜ್ಞಾನಾನುಷ್ಠಾನ ರೂಪವೂ ಆದ ನಿರ್ವಿಕಲ್ಪ-ತ್ರಿಗುಪ್ತಿಗುಪ್ತ-ಪರಮಸಮಾಧಿಯಲ್ಲಿ ತನ್ಮಯರಾಗಿರು ತ್ತಾರೋ ಅವರಿಗೆ ಸಮಸ್ತಮೋಹ (ಮಮತ್ವಾದಿವಿಕಲ್ಪ)ಜಾಲವು ನಾಶವಾಗುತ್ತದೆ. ಇಹಲೋಕ-ಪರಲೋಕ-ಸಂಬಂಧವಾದ ಪದಾರ್ಥಗಳ ವಾಂಛಾದಿವಿಕಲ್ಪರೂಪವಾದ ಮನಸ್ಸು ವಿಕಲ್ಪರಹಿತವಾಗಿ ಸ್ಥಿರತೆಯನ್ನು ಹೊಂದುತ್ತದೆ. ಶ್ವಾಸೋಚ್ಛ್ವಾಸರೂಪವಾದ ವಾಯುವು ತಡೆಯಲ್ಪಡುತ್ತದೆ. ಅರ್ಥಾತ್ ಶ್ವಾಸೋಚ್ಛ್ವಾಸರೂಪವಾದ ವಾಯುವು ಅವಾಂಛಾರೂಪದಿಂದ ನಾಸಿಕಾದ್ವಾರ (ಮೂಗಿನ ದ್ವಾರ)ವನ್ನು ಬಿಟ್ಟು "ಬ್ರಹ್ಮದ್ವಾರ" ವೆಂದು ಹೇಳಲ್ಪಡುವ ಸೂಕ್ಷ್ಮವಾದ ತಾಲುಛಿದ್ರ (ತಾಲುರಂಧ್ರ, ದಶಮದ್ವಾರ)ವನ್ನು ಪ್ರವೇಶಿಸುತ್ತದೆ ಆಮೇಲೆ ಪುನಃ ನಾಸಿಕಾದ್ವಾರದಿಂದ ಹೊರಬರುತ್ತದೆ. ಹೀಗೆ ವಾಯುವು ವಶವಾಗುತ್ತದೆ. ಹೀಗೆ ಪರಮಧ್ಯಾನಾಸಕ್ತರಾದ ಯೋಗಿಗಳಿಗೆ ಶೀಘ್ರವೇ ಕೇವಲಜ್ಞಾನವುಂಟಾಗುತ್ತದೆ ಇಲ್ಲಿ 'ಅಂಬರ' ಎಂಬ ಶಬ್ದದಿಂದ ವಿಷಯಕಷಾಯಾದಿ ವಿಕಲ್ಪಶೂನ್ಯವಾದ ಪರಮಸಮಾಧಿಯನ್ನು ಗ್ರಹಣಮಾಡಬೇಕು ಹಾಗೂ ಶುದ್ಧ ಆಕಾಶ ದ್ರವ್ಯವನ್ನು ಗ್ರಹಿಸಬಾರದು ಅರ್ಥಾತ್ ಅಂಬರಶಬ್ದಕ್ಕೆ ಆಕಾಶವೆಂಬ ಅರ್ಥವನ್ನು ಮಾಡಬಾರದು, ಹಾಗೆಯೇ ಶ್ವಾಸೋಚ್ಛ್ವಾಸರೂಪವಾದ "ವಾಯು" ಎಂಬ ಶಬ್ದದಿಂದ ಅನಿಚ್ಛಾಪೂರ್ವಕವಾಗಿ ನಿರ್ವಿಕಲ್ಪಸಮಾಧಿಯಬಲದಿಂದ ದಶಮದ್ವಾರವೆಂಬ ಬ್ರಹ್ಮ ರಂಧ್ರದಿಂದ ಅಥವಾ ಸೂಕ್ಷ್ಮವಾದ ತಾಲುರಂಧ್ರದಿಂದ ಹೋಗುವ ವಾಯುವೆಂದು ತಿಳಿಯಬೇಕಲ್ಲದೆ ,ಕುಂಭಕಪೂರಕರೇಚಕರೂಪವಾದ ವಾಯುನಿರೋಧವೆಂದು ತಿಳಿಯ ಬಾರದು. ಹೀಗೆಯೇ ಗ್ರಂಥಾಂತರದಲ್ಲಿ ಹೇಳಲ್ಪಟ್ಟಿದೆ —"**ಮಣು ಮರಇ ಪವಣು ಜಹಿಂ ಖಯಹಂ ಜಾಇ। ಸವ್ವಂಗಇ ತಿಹುವಣು ತಹಿಂ ಜಿ ರಾಇ॥ ಮೂಢಾ**

**ಅಂತರಾಲು ವರಿಯಾಣಹಿ। ತುಟ್ಟಇ ಮೋಹಜಾಲು ಜಣ ಜಾಣಹಿ॥"** ಅರ್ಥಾತ್ ಮೂಢಜನರು 'ಅಂಬರ'ಶಬ್ದದಿಂದ ಆಕಾಶವೆಂದು ತಿಳಿಯುತ್ತಾರೆ ಆದರೆ ಜ್ಞಾನಿಗಳು ಅಂಬರಶಬ್ದದ ಅರ್ಥವನ್ನು ನಿರ್ವಿಕಲ್ಪಪರಮಸಮಾಧಿಯೆನ್ನಾಗಿ ತಿಳಿಯುತ್ತಾರೆ ಪರಮ ಸಮಾಧಿಯ ಅನುಭವದಿಂದ ಮೋಹವು ನಾಶವಾಗುತ್ತದೆ ಮನಸ್ಸಿನ ವಿಕಲ್ಪಗಳು ದೂರವಾಗುವುದೇ ಅದರ (ಮನಸ್ಸಿನ) ಮರಣವು. ಸರ್ವದ್ವಾರಗಳನ್ನು ಬಿಟ್ಟು ವಾಯುವು ದಶಮದ್ವಾರ (ಹತ್ತನೆಯ ದ್ವಾರ, ಸೂಕ್ಷ್ಮತಾಲುಛಿದ್ರ)ದಿಂದ ಹೋಗುವುದೇ ಶ್ವಾಸನಿರೋಧವು ಪೂರ್ವೋಕ್ತಲಕ್ಷಣವುಳ್ಳ ತ್ರಿಭುವನಪ್ರಕಾಶಕನಾದ ಆತ್ಮನು ಹೀಗೆ ನಿರ್ವಿಕಲ್ಪಸಮಾಧಿಯಲ್ಲಿರುತ್ತಾನೆಂದು ಭಾವವು ಇಲ್ಲಿಯೂ "ಅಂತರಾಲು" ಎಂಬ ಶಬ್ದದಿಂದ ರಾಗಾದಿಪರಭಾವಗಳ ಶೂನ್ಯತೆಯೆಂದು ತಿಳಿಯಬೇಕಲ್ಲದೆ 'ಆಕಾಶ'ವೆಂದು ತಿಳಿಯಬಾರದು ಏಕೆಂದರೆ ಆತ್ಮಸ್ವರೂಪವನ್ನು ತಿಳಿಯುವುದರಿಂದಲೇ ಮೋಹಜಾಲವು ದೂರ (ನಾಶ)ವಾಗುವುದಲ್ಲದೆ ಆಕಾಶವನ್ನು ತಿಳಿಯುವುದರಿಂದ ದೂರವಾಗದು

**ಜೋ ಆಯಾಸಇ ಮಣು ಧರಇ, ಲೋಯಾಲೋಯಪಮಾಣು ।**
**ತುಟ್ಟಇ ಮೋಹು ತಡತ್ತಿ ತಸು, ಪಾವಇ ಪರಹಂ ಪವಾಣು ॥ ೧೬೪ ॥**

"ಯಃ ಆಕಾಶೇ ಮನೋ ಧರತಿ ಲೋಕಾಲೋಕಪ್ರಮಾಣಮ್ ।
ತ್ರುಟ್ಯತಿ ಮೋಹೋ ಝಟಿತಿ ತಸ್ಯ ಪ್ರಾಪ್ನೋತಿ ಪರಸ್ಯ ಪ್ರಮಾಣಮ್ ॥ ೧೬೪ ॥"

**ಅನ್ವಯಾರ್ಥ:— ಜೋ**-ಆತ್ಮಧ್ಯಾನಿಯಾದ ಯಾವ ಪುರುಷನು **ಆಯಾಸಇ**- ನಿರ್ಮಲಾಕಾಶದಂತಿರುವ ನಿರ್ವಿಕಲ್ಪಸಮಾಧಿಯಲ್ಲಿ **ಲೋಯಾಲೋಯಪಮಾಣು**- (ಜ್ಞಾನಾಪೇಕ್ಷೆಯಿಂದ) ಲೋಕಾಲೋಕಪ್ರಮಾಣವಾದ **ಮಣು ಧರಇ**— ಮನಸ್ಸನ್ನು ಸ್ಥಿರ (ಏಕಾಗ್ರತೆ)ಗೊಳಿಸುತ್ತಾನೋ **ತಸು** — ಅವನ **ಮೋಹು**— ಮೋಹವು **ತಡತ್ತಿ ತುಟ್ಟಇ**— ಬೇಗನೇ ನಾಶವಾಗುತ್ತದೆ. ಮತ್ತು ಅವನು **ಪರಹಂ ಪವಾಣು** — ಪರಮಾತ್ಮಸ್ವರೂಪದ (ಪರಮಾತ್ಮನ) ಪ್ರಮಾಣ (ವ್ಯಾಪಕತೆ)ವನ್ನು **ಪಾವಇ**— ಹೊಂದುತ್ತಾನೆ

**ಭಾವಾರ್ಥ:**— ಆಕಾಶವು ಯದ್ಯಪಿ ಸರ್ವದ್ರವ್ಯಗಳಿಂದ ಭರಿತವಾಗಿರುವುದಾದರೂ ಸ್ವಭಾವತಃ ಶೂನ್ಯಸ್ವರೂಪವುಳ್ಳದು. ಅದರಂತೆಯೇ ನಿರ್ವಿಕಲ್ಪಸಮಾಧಿಯು ಯದ್ಯಪಿ ವೀತರಾಗಚಿದಾನಂದೈಕಸ್ವಭಾವದಿಂದ ಭರಿತವಾಗಿರುವುದಾದರೂ ಮಿಥ್ಯಾತ್ವ ರಾಗಾದಿ ಪರಭಾವರಹಿತವಾಗಿರುವುದರಿಂದ ಆಕಾಶದಂತೆ ಶೂನ್ಯವಾದುದೆಂದು ಹೇಳಲ್ಪಡುತ್ತದೆ. ಮನಸ್ಸು ಜ್ಞಾನಾಪೇಕ್ಷೆಯಿಂದ ವ್ಯವಹಾರನಯದಿಂದ ಲೋಕಾಲೋಕವ್ಯಾಪಕವಾಗಿದೆ (ಪ್ರದೇಶಾಪೇಕ್ಷೆಯಿಂದ ಲೋಕಾಲೋಕವ್ಯಾಪಕವಾಗಿರುವುದಿಲ್ಲ) ನಿಶ್ಚಯನಯದಿಂದ ಜ್ಞಾನವು ಸ್ವಸ್ವರೂಪಪ್ರಕಾಶಕವಾಗಿರುತ್ತದೆ ಆತ್ಮನ ಕೇವಲ ಜ್ಞಾನವು ಲೋಕಾಲೋಕಪ್ರತಿಭಾಸಕವಾಗಿರುವುದರಿಂದ (ಲೋಕಾಲೋಕಗಳ ಸಮಸ್ತ

ಪದಾರ್ಥಗಳನ್ನು ತಿಳಿಯುವುದರಿಂದ) ಆತ್ಮನು ಜ್ಞಾನಾಪೇಕ್ಷೆಯಿಂದ ಲೋಕಾಲೋಕ ಪ್ರಮಾಣವುಳ್ಳವನೆಂದು ಹೇಳಲ್ಪಡುತ್ತಾನೆ. ಆದರೆ ಪ್ರದೇಶಾಪೇಕ್ಷೆಯಿಂದ ಲೋಕಾಲೋಕಪ್ರಮಾಣವುಳ್ಳವನಾಗಿರುವುದಿಲ್ಲ. ಪ್ರದೇಶಾಪೇಕ್ಷೆಯಿಂದ ಆತನು ನಿಶ್ಚಯನಯದಿಂದ ಲೋಕಪ್ರಮಾಣ (ಅಸಂಖ್ಯಾತಪ್ರದೇಶ)ವುಳ್ಳವನು ಹಾಗೂ ವ್ಯವಹಾರನಯದಿಂದ ಸ್ವದೇಹಪ್ರಮಾಣವುಳ್ಳವನು. ಯದ್ಯಪಿ ಆತ್ಮನು ಕೇವಲಜ್ಞಾನಾಪೇಕ್ಷೆಯಿಂದ ಸರ್ವಗತ (ಸರ್ವಪದಾರ್ಥಗಳನ್ನು ತಿಳಿಯುವವ)ನಾಗಿದ್ದರೂ ನೇತ್ರೇಂದ್ರಿಯವು (ಕಣ್ಣು) ಪದಾರ್ಥಗಳನ್ನು ತನ್ಮಯವಾಗದೆ ನೋಡುವಂತೆ ಪದಾರ್ಥಗಳನ್ನು ತನ್ಮಯನಾಗದೆ ತಿಳಿಯುತ್ತಾನೆ. ಹಾಗೆ ತನ್ಮಯತೆಯಿಂದ ತಿಳಿದುದಾದರೆ ಅಗ್ನಿಯ ಸಂಪರ್ಕ (ತನ್ಮಯತೆ)ದಿಂದ ಕಣ್ಣು ಸುಡುವಂತೆ ಪರಕೀಯ ಸುಖದುಃಖಾದಿಗಳ ಅನುಭವವನ್ನು ಆತ್ಮನೂಪಡೆಯಬೇಕಾಗುವುದು. ಅತಏವ ಆತ್ಮನು ವ್ಯವಹಾರದಿಂದ ಸರ್ವಗತನೂ ನಿಶ್ಚಯದಿಂದ ಅಸರ್ವಗತನೂ ಆಗಿರುತ್ತಾನೆಂದು ತಿಳಿಯಬೇಕು. ಈ ಪ್ರಕಾರವಾಗಿ ನಿರ್ವಿಕಲ್ಪಸಮಾಧಿಯಲ್ಲಿ ಚಿತ್ತವನ್ನು ಸ್ಥಿರವಾಗಿರಿಸುವ ಧ್ಯಾನಿಗೆ ಮೋಹವು ಗಲಿತ (ನಾಶ)ವಾಗುತ್ತದೆ ಹಾಗೂ ಪರಮಾತ್ಮಸ್ವರೂಪವು ಪ್ರಾಪ್ತವಾಗುತ್ತದೆಂದು ಭಾವಾರ್ಥವು.

**ದೇಹಿ ವಸಂತು ವಿ ಣವಿ ಮುಣಿಉ, ಅಪ್ಪಾ ದೇಉ ಅಣಂತು ।**
**ಅಂಬರಿ ಸಮರಸಿ ಮಣು ಧರಿವಿ, ಸಾಮಿಯ ಣಟ್ಟು ಣಿಭಂತು ॥ ೧೬೫ ॥**

"ದೇಹೇ ವಸನ್ನಪಿ ನೈವ ಮತಃ ಆತ್ಮಾ ದೇವಃ ಅನಂತಃ ।
ಅಂಬರೇ ಸಮರಸೇ ಮನಃ ಧೃತ್ವಾ ಸ್ವಾಮಿನ್ ನಷ್ಟಃ ನಿರ್ಭ್ರಾಂತಃ ॥ ೧೬೫ ॥"

**ಅನ್ವಯಾರ್ಥಃ— ಸಾಮಿಯ**— ಎಲೈ ಸ್ವಾಮಿಯೆ! **ಅಣಂತು**—ಅನಂತ (ಅಂತವಿಲ್ಲದವ, ಅವಿನಶ್ವರ)ನೂ **ಅಪ್ಪಾ ದೇಉ**— ಪರಮಾರಾಧ್ಯನೂ ಆದ ಆತ್ಮನು **ದೇಹಿ ವಸಂತು ವಿ**— ದೇಹದಲ್ಲಿ (ವ್ಯವಹಾರನಯದಿಂದ) ವಾಸಮಾಡಿಕೊಂಡಿರುತ್ತಿದ್ದರೂ ನನ್ನಿಂದ **ಸಮರಸಿ ಅಂಬರಿ—** ಸಮರಸ(ಸಮಾನಭಾವ)ರೂಪವಾದ ನಿರ್ವಿಕಲ್ಪಸಮಾಧಿಯಲ್ಲಿ **ಮಣು ಧರಿವಿ**— ಮನಸ್ಸನ್ನು ಧರಿಸಿ(ಸ್ಥಿರಗೊಳಿಸಿ) **ಣವಿ ಮುಣಿಉ**— ತಿಳಿಯಲ್ಪಡಲೇ ಇಲ್ಲ. ಅತಏವ ನಾನು **ಣಟ್ಟು ಣಿಭಂತು**— ನಿಸ್ಸಂದೇಹವಾಗಿ ನಷ್ಟನಾದೆನು ಅರ್ಥಾತ್ ಇಷ್ಟುಕಾಲದವರೆಗೆ ಪರಮಾತ್ಮೋಪದೇಶವನ್ನು ಪಡೆಯದವನಾಗಿ ಆತ್ಮಕಲ್ಯಾಣದ ಪಥದಿಂದ ವಂಚಿತನಾದೆನು.

**ಭಾವಾರ್ಥಃ—** ಶಿಷ್ಯನಾದ ಪ್ರಭಾಕರಭಟ್ಟನು ಶ್ರೀಗುರುಗಳೊಡನೆ ಹೇಳುತ್ತಾನೆ – ಸ್ವಾಮಿಯೇ! ನಾನು ಇಂದಿನವರೆಗೆ ರಾಗಾದಿವಿಭಾವಗಳಿಂದ ರಹಿತವಾದ ನಿರ್ವಿಕಲ್ಪ ಸಮಾಧಿಯಲ್ಲಿ ಮಗ್ನನಾಗಿ ಆತ್ಮದೇವನನ್ನು ತಿಳಿಯಲಿಲ್ಲ. ಆದಕಾರಣ ಈವರೆಗೂ ಸಂಸಾರದಲ್ಲಿ ಭ್ರಮಿಸುತ್ತಿರುವೆನು. ನನಗೆ ನಿಜಸ್ವರೂಪದ ಪ್ರಾಪ್ತಿಯುಂಟಾಗದಿರುವುದರಿಂದ ನಾನು ನಷ್ಟಹೊಂದಿದೆನು. ನನ್ನ ಭ್ರಮೆಯು ದೂರವಾಗಿ ನಾನು ಆತ್ಮ

ಕಲ್ಯಾಣದ ಪಥದಲ್ಲಿ ಪ್ರವರ್ತಿಸುವಂತೆ ನನಗೆ ಸದುಪದೇಶವನ್ನೀಯಿರಿ. ಹೀಗೆ ಗುರು ಗಳನ್ನು ಪ್ರಾರ್ಥಿಸುತ್ತಾನೆಂದು ಭಾವವು.

ಹೀಗೆ ನಿರ್ವಿಕಲ್ಪಸಮಾಧಿಯ ಉಪದೇಶದ ಮುಖ್ಯತೆಯಿಂದ ಐದು ಸೂತ್ರಗಳು ಹೇಳಲ್ಪಟ್ಟವು. ಅಂತು ಪರಮೋಪದೇಶಕಥನದ ಮುಖ್ಯತೆಯುಳ್ಳ ಹತ್ತು ಸೂತ್ರಗಳು ಮುಗಿದುವು.

ಮುಂದೆ ಸಂಸಾರವಿಚ್ಛಿತ್ತಿಯ ಕಾರಣಾದಿಗಳನ್ನು ಉಪದೇಶಿಸುತ್ತಾರೆ:—

**ಸಯಲ ವಿ ಸಂಗ ಣ ಮಿಲ್ಲಿಯಾ, ಣವಿ ಕಿಉ ಉವಸಮಭಾಉ ।**
**ಸಿವಪಯಮಗ್ಗು ವಿ ಮುಣಿಉ ಣವಿ, ಜಹಿಂ ಜೋಇಹಿಂ**
**ಅಣುರಾಉ ॥ ೧೬೬ ॥**
**ಘೋರ ಣ ಚಿಣ್ಣಉ ತವಚರಣು, ಜಂ ಣಿಯಬೋಹಹಂ ಸಾರು ।**
**ಪುಣ್ಣು ವಿ ಪಾಉ ವಿ ದಡ್ಢು ಣವಿ, ಕಿಮು ಛಿಜ್ಜಇ ಸಂಸಾರು ॥ ೧೬೭ ॥**

"ಸಕಲಾ ಅಪಿ ಸಂಗಾ ನ ಮುಕ್ತಾಃ ನೈವ ಕೃತ ಉಪಶಮಭಾವಃ ।
ಶಿವಪದಮಾರ್ಗೋಽಪಿ ಮತೋ ನೈವ ಯತ್ರ ಯೋಗಿನಾಂ ಅನುರಾಗಃ ॥೧೬೬॥
ಘೋರಂ ನ ಚೀರ್ಣಂ ತಪಶ್ಚರಣಂ ಯತ್ ನಿಜಬೋಧಸ್ಯ ಸಾರಮ್ ।
ಪುಣ್ಯಮಪಿ ಪಾಪಂ ದಗ್ಧಂ ನೈವ ಕಿಂ ಛಿದ್ಯತೇ ಸಂಸಾರಃ ॥ ೧೬೭ ॥"

**ಅನ್ವಯಾರ್ಥ:**-**ಸಯಲ ವಿ ಸಂಗ**=ಸಮಸ್ತ ಪರಿಗ್ರಹಗಳೂ **ಣ ಮಿಲ್ಲಿಯಾ**-ತ್ಯಾಗಮಾಡಲ್ಪಡಲಿಲ್ಲ **ಉವಸಮಭಾಉ**—ಉಪಶಮಭಾವ(ಸಮಭಾವ)ವು **ಣವಿ ಕಿಉ**—ಮಾಡಲ್ಪಡಲೇ ಇಲ್ಲ. **ಜಹಿಂ**—ಯಾವುದರಲ್ಲಿ **ಜೋಇಹಿಂ ಅಣುರಾಉ**—ಯೋಗಿಗಳಿಗೆ ಅನುರಾಗ(ಪ್ರೇಮ)ವಿರುವುದೋ ಅಂತಹ **ಸಿವಪಯಮಗ್ಗು ವಿ**—ಮೋಕ್ಷ ಪದದ ಮಾರ್ಗವೂ **ಣವಿ ಮುಣಿಉ**—ತಿಳಿಯಲ್ಪಡಲೇ ಇಲ್ಲ. **ಜಂ**—ಯಾವುದು **ಣಿಯಬೋಹಹಂ ಸಾರು**—ಆತ್ಮಬೋಧ(ಆತ್ಮಜ್ಞಾನ)ದ ಸಾರವೋ ಅಂತಹ **ಘೋರು ತವಚರಣು**—ಘೋರ(ದುರ್ಧರ)ವಾದ ತಪಶ್ಚರಣೆಯು **ಣ ಚಿಣ್ಣಉ**—ಮಾಡಲ್ಪಡ ಲಿಲ್ಲ. **ಪುಣ್ಣು ವಿ ಪಾಉ ವಿ**—ಪುಣ್ಯವೂ ಪಾಪವೂ **ದಡ್ಢ ಣವಿ**—ಸುಡಲ್ಪಡಲಿಲ್ಲ. ಹೀಗಿರಲು **ಸಂಸಾರು**—ಸಂಸಾರವು **ಕಿಮು ಛಿಜ್ಜಇ**—ಛೇದಿಸಲ್ಪಡುತ್ತದೋ ಏನು? ಅಥವಾ ಹೇಗೆ ಛೇದಿಸಲ್ಪಡುವುದು.

**ಭಾವಾರ್ಥ:**—ಯಾವ ಜೀವನಿಂದ ಮಿಥ್ಯಾತ್ವಮೊದಲಾದ ಹದಿನಾಲ್ಕು ಭೇದ ಗಳುಳ್ಳ ಆಭ್ಯಂತರಪರಿಗ್ರಹಗಳು ಹಾಗೂ ಕ್ಷೇತ್ರವಾಸ್ತುಮೊದಲಾದ ಹತ್ತುಭೇದಗಳುಳ್ಳ ಬಾಹ್ಯಪರಿಗ್ರಹಗಳು ಬಿಡಲ್ಪಡಲಿಲ್ಲವೋ, ಜೀವಿತಮರಣಲಾಭಾಲಾಭಸುಖದುಃಖಾದಿ ಗಳಲ್ಲಿ ಸಮತಾಭಾವವು ಹೊಂದಲ್ಪಡಲಿಲ್ಲವೋ, ಶಿವಪದ ಅರ್ಥಾತ್ **"ಶಿವಂ ಪರಮ ಕಲ್ಯಾಣಂ ನಿರ್ವಾಣಂ ಶಾಂತಮಕ್ಷಯಂ । ಪ್ರಾಪ್ತಂ ಮುಕ್ತಿಪದಂ ಯೇನ**

**ಸ ಶಿವಃ ಪರಿಕೀರ್ತಿತಃ ॥"** ಎಂದು ಹೇಳಿರುವಂತೆ ಮುಕ್ತಾತ್ಮನ ಸ್ಥಾನ(ಮೋಕ್ಷ)ದ ವ್ಯವಹಾರನಿಶ್ಚಯರತ್ನತ್ರಯರೂಪವಾದ ಮಾರ್ಗವು ತಿಳಿಯಲ್ಪಟ್ಟು ಅನುಸರಿಸಲ್ಪಡಲಿಲ್ಲವೋ, ಆತ್ಮಜ್ಞಾನದ ಸಾರವಾದ ಹಾಗೂ ಆತ್ಮಜ್ಞಾನದಿಂದ ಶೋಭಿಸುತ್ತಿರುವ ಬಾಹ್ಯಾಭ್ಯಂತರ ತಪವು ಅನುಷ್ಠಿಸಲ್ಪಡಲಿಲ್ಲವೋ, ಮತ್ತು ಪುಣ್ಯಪಾಪರೂಪವಾದ ಕಲ್ಮಶವು ಧ್ಯಾನಾಗ್ನಿಯಿಂದ ಸುಡಲ್ಪಡಲಿಲ್ಲವೋ ಅಂತಹ ಜೀವನಿಗೆ ಸಂಸಾರವಿಚ್ಛಿತ್ತಿಯು ಹೇಗುಂಟಾದೀತು? ಉಂಟಾಗಲಿಕ್ಕಿಲ್ಲನೆಂದರ್ಥವು ಅತಏವ ಸಂಸಾರದ ವಿಚ್ಛಿತ್ತಿ(ಬಿಡುಗಡೆ, ನಾಶ)ಗಾಗಿ ಸರ್ವದಾ ಶುದ್ಧಾತ್ಮಸ್ವರೂಪವನ್ನು ಭಾವಿಸಬೇಕೆಂದು ಮುಖ್ಯಾಭಿಪ್ರಾಯವು

**ದಾಣು ಣ ದಿಣ್ಣಉ ಮುಣಿವರಹಂ, ಣವಿ ಪುಜ್ಜಿಉ ಜಿಣಣಾಹು ।**
**ಪಂಚ ಣ ವಂದಿಯ ಪರಮಗುರೂ, ಕಿಮು ಹೋಸಇ ಸಿವಲಾಹು ॥೧೬೮॥**

"ದಾನಂ ನ ದತ್ತಂ ಮುನಿವರೇಭ್ಯಃ ನಾಪಿ ಪೂಜಿತಃ ಜಿನನಾಥಃ ।
ಪಂಚ ನ ವಂದಿತಾಃ ಪರಮಗುರವಃ ಕಿಂ ಭವಿಷ್ಯತಿ ಶಿವಲಾಭಃ ॥ ೧೬೮ ॥"

**ಅನ್ವಯಾರ್ಥ:—ಮುಣಿವರಹಂ**—ಉತ್ತಮರಾದ ಮುನಿಗಳಿಗೆ **ದಾಣು ಣ ದಿಣ್ಣಉ**—ದಾನವು ಕೊಡಲ್ಪಡಲಿಲ್ಲ. **ಜಿಣಣಾಹು**—ಭಗವಾನ್ ಜಿನೇಂದ್ರನು(ರು) **ಣ ವಿ ಪುಜ್ಜಿಉ**—ಪೂಜಿಸಲ್ಪಡಲಿಲ್ಲ ಮತ್ತು **ಪಂಚಪರಮಗುರೂ**—ಅರಹಂತರು ಮೊದಲಾದ ಪಂಚಪರಮೇಷ್ಠಿಗಳು **ಣ ವಂದಿಯ**—ವಂದಿಸಲ್ಪಡಲಿಲ್ಲ ಹೀಗಿರಲು **ಸಿವಲಾಹು ಕಿಮು ಹೋಸಹಿ**—ಮೋಕ್ಷದ ಲಾಭ(ಪ್ರಾಪ್ತಿ)ವು ಹೇಗುಂಟಾದೀತು?

**ಭಾವಾರ್ಥ:**—ಜೀವನೇ! ನೀನು ನಿಶ್ಚಯವ್ಯವಹಾರರತ್ನತ್ರಯಾರಾಧಕರಾದ ಮುನೀಂದ್ರರು ಮೊದಲಾದ ಚತುಸ್ಸಂಘಕ್ಕೆ(ಸತ್ಪಾತ್ರಕ್ಕೆ) ಆಹಾರ, ಅಭಯ, ಭೈಷಜ್ಯ (ಔಷಧ) ಶಾಸ್ತ್ರಗಳೆಂಬ ನಾಲ್ಕು ವಿಧವಾದ ದಾನವನ್ನು ಮಾಡಲಿಲ್ಲ ದೇವೇಂದ್ರ ನಾಗೇಂದ್ರನರೇಂದ್ರಾದಿಗಳಿಂದ ಪೂಜಿಸಲ್ಪಡುವವನೂ, ಕೇವಲಜ್ಞಾನಾದ್ಯನಂತಗುಣ ಪರಿಪೂರ್ಣನೂ ಆದ ಭಗವಾನ್ ಜಿನೇಂದ್ರನನ್ನು ಜಲಗಂಧಾದ್ಯಷ್ಟವಿಧ-ದ್ರವ್ಯಗಳಿಂದ ಪೂಜಿಸಲಿಲ್ಲ. ತ್ರಿಭುವನಾಧೀಶವಂದ್ಯವಾದ ಉತ್ತಮ ಪದದಲ್ಲಿರುವ ಅರ್ಹತ್ಪರಮೇಷ್ಠಿಗಳು, ಸಿದ್ಧಪರಮೇಷ್ಠಿಗಳು ಹಾಗೂ ಜಗದ್ವಂದ್ಯರೂ ಮೋಕ್ಷಪದಾರಾಧಕರೂ ಆದ ಆಚಾರ್ಯಪರಮೇಷ್ಠಿಗಳು, ಉಪಾಧ್ಯಾಯಪರಮೇಷ್ಠಿಗಳು ಮತ್ತು ಸಾಧುಪರಮೇಷ್ಠಿಗಳು ಈ ಪಂಚಗುರು(ಪರಮೇಷ್ಠಿ)ಗಳನ್ನು ಭಕ್ತಿಪೂರ್ವಕ ಆರಾಧಿಸಲಿಲ್ಲ ಹೀಗಿರಲು ನಿನಗೆ ಮೋಕ್ಷಪದವು ಹೇಗೆ ಲಭಿಸಬಲ್ಲುದು? ಅರ್ಥಾತ್ ಲಭಿಸಲಾರದು ಏಕೆಂದರೆ ಕಾರಣವಿಲ್ಲದೆ ಕಾರ್ಯವುಂಟಾಗುವುದಿಲ್ಲ ಪೂರ್ವೋಕ್ತ ದಾನಪೂಜಾದಿಗಳು ಮೋಕ್ಷಪ್ರಾಪ್ತಿಯ (ಪರಂಪರೆಯಿಂದ) ಕಾರಣಗಳಾಗಿರುತ್ತವೆ. ಅತಏವ ಮೋಕ್ಷಪ್ರಾಪ್ತಿಗಾಗಿ "ಉಪಾಸಕಾಧ್ಯಯನ"ವೆಂಬ ಏಳನೆಯ ಅಂಗದಲ್ಲಿ ಹೇಳಲ್ಪಟ್ಟಿರುವ ದಾನಪೂಜಾವಂದನಾದಿ ವಿಧಿಗಳನ್ನು ಆಚರಿಸುವುದು ಉಚಿತವಾಗಿರುತ್ತದೆ. ಇದು ವ್ಯವಹಾರಮೋಕ್ಷಮಾರ್ಗವೆಂದಭಿಪ್ರಾಯವು.

**ಅದ್ಧುವಿಮ್ಮಿಲಿಯಲೋಯಣಹಿಂ, ಜೋಉ ಕಿ ಝುಂಪಿಯಏಹಿಂ ।**
**ಏಮುಇ ಲಬ್ಭಇ ಪರಮಗಇ, ಣಿಚ್ಚಿಂತಿಂ ಠಿಯಏಹಿಂ ॥ ೧೬೯ ॥**

"ಅರ್ಧೋನ್ಮೀಲಿತಲೋಚನಾಭ್ಯಾಂ ಯೋಗಃ ಕಿಂ ಆಚ್ಛಾದಿತಾಭ್ಯಾಂ ।
ಏವಮೇವ ಲಭ್ಯತೇ ಪರಮಗತಿಃ ನಿಶ್ಚಿಂತಂ ಸ್ಥಿತೈಃ ॥ ೧೬೯ ॥"

**ಅನ್ವಯಾರ್ಥ:—ಅದ್ಧುವಿಮ್ಮಿಲಿಯಲೋಯಣಹಿಂ**—ಅರ್ಧವಾಗಿ ತೆರೆದ ಕಣ್ಣುಗಳಿಂದ ಅಥವಾ **ಝುಂಪಿಯಏಹಿಂ**—ಮುಚ್ಚಲ್ಪಟ್ಟ ಕಣ್ಣುಗಳಿಂದ **ಜೋಉ ಕಿ**—ಯೋಗ(ಧ್ಯಾನ)ದ ಸಿದ್ಧಿಯಾಗುವುದೇ? ಅರ್ಥಾತ್ ಆಗಲಾರದು **ಣಿಚ್ಚಿಂತಿಂ ಠಿಯಏಹಿಂ**—ಸಮಸ್ತಚಿಂತಾರಹಿತರಾಗಿ ಸ್ವಶುದ್ಧಾತ್ಮಸ್ವರೂಪದಲ್ಲಿ ಏಕಾಗ್ರತೆಯಲ್ಲಿರುವ ಪುರುಷರಿಂದ **ಪರಮಗಇ**—ಪರಮಗತಿ(ಮೋಕ್ಷ)ಯು **ಏಮುಇ ಲಬ್ಭಇ**—ಹೀಗೆಯೇ ಅರ್ಥಾತ್ ಸಹಜವಾಗಿ ಪಡೆಯಲ್ಪಡುತ್ತದೆ.

**ಭಾವಾರ್ಥ:**—ಕೆಲವರು ಖ್ಯಾತಿಪೂಜಾಲಾಭಾದಿಗಳ ಆಶೆಯಿಂದ ಜನರಿಗೆ ತಾವು ಮಹಾಯೋಗಿಗಳಂತೆ ಕಾಣಬೇಕೆಂದು ಕಣ್ಣುಗಳನ್ನು ಅರೆತೆರೆದು ಅಥವಾ ಮುಚ್ಚಿಕೊಂಡು(ಧ್ಯಾನಸ್ಥಪರಮಯೋಗಿಯಂತೆ) ಕುಳಿತುಕೊಳ್ಳುತ್ತಾರೆ. ಆದರೆ ಕೇವಲ ಕಣ್ಣುಗಳನ್ನು ಅರ್ಧತೆರೆದಮಾತ್ರಕ್ಕೆ ಅಥವಾ ಮುಚ್ಚಿದ ಮಾತ್ರಕ್ಕೆ ಅವರಿಗೆಂದೂ ಧ್ಯಾನಸಿದ್ಧಿಯಾಗದು ಖ್ಯಾತಿಪೂಜಾಲಾಭಾದಿಸಮಸ್ತಚಿಂತೆಗಳನ್ನು ತೊರೆದು ನಿಶ್ಚಿಂತರಾದ ಪುರುಷರು ಮಾತ್ರ ಶುದ್ಧಾತ್ಮಸ್ವರೂಪದಲ್ಲಿ ಸ್ಥಿರತೆಯನ್ನು ಪಡೆಯಬಲ್ಲರು. ಅವರಿಗೇನೇ ಧ್ಯಾನವು ಸಿದ್ಧಿಸುವುದು ಹಾಗೂ ಅವರೇ ಪರಮಗತಿಗೆ ಪಾತ್ರರಾಗುವರು.

**ಜೋಇಯ ಮಿಲ್ಲಹಿ ಚಿಂತ ಜಇ, ತೋ ತುಟ್ಟಇ ಸಂಸಾರು ।**
**ಚಿಂತಾಸತ್ತಉ ಜಿಣವರು ವಿ, ಲಹಇ ಣ ಹಂಸಾಚಾರು ॥ ೧೭೦ ॥**

"ಯೋಗಿನ್ ಮುಂಚಸಿ ಚಿಂತಾಂ ಯದಿ ತತಃ ತ್ರುಟ್ಯತಿ ಸಂಸಾರಃ ।
ಚಿಂತಾಸಕ್ತೋ ಜಿನವರೋಽಪಿ ಲಭತೇ ನ ಹಂಸಾಚಾರಮ್ ॥ ೧೭೦ ॥"

**ಅನ್ವಯಾರ್ಥ:—ಜೋಇಯ**—ಎಲೈ ಯೋಗಿಯೇ! **ಚಿಂತ**—ಚಿಂತೆಯನ್ನು **ಮಿಲ್ಲಹಿ ಜಇ**—ಬಿಡುತ್ತೀಯಾದರೆ(ಬಿಟ್ಟುದುದಾದರೆ) **ತೋ**—ಆ ಕಾರಣದಿಂದ(ಆಗ) **ಸಂಸಾರು ತುಟ್ಟಇ**—ಸಂಸಾರವು ನಾಶವಾಗುತ್ತದೆ. **ಚಿಂತಾಸತ್ತಉ**—ಚಿಂತೆಯಲ್ಲಾಸಕ್ತರಾದ **ಜಿಣವರು ವಿ**—ಛದ್ಮಸ್ಥಾವಸ್ಥೆಯಲ್ಲಿರುವ ಜಿನರು ಸಹ **ಹಂಸಾಚಾರು ಣ ಲಹಇ**—ಪರಮಾತ್ಮಾಚರಣರೂಪವಾದ ಶುದ್ಧಭಾವಗಳನ್ನು ಹೊಂದುವುದಿಲ್ಲ.

**ಭಾವಾರ್ಥ:**—ಯೋಗಿಯೇ! ನಿರ್ಮಲಜ್ಞಾನದರ್ಶನಸ್ವಭಾವವುಳ್ಳ ಪರಮಾತ್ಮಪದಾರ್ಥದಿಂದ ವಿಲಕ್ಷಣವಾದ ಸರ್ವಚಿಂತೆಗಳನ್ನು ನೀನು ತೊರೆದುದಾದರೆ ಆ ಚಿಂತೆಗಳ ಅಭಾವದಿಂದ ದ್ರವ್ಯ, ಕ್ಷೇತ್ರ, ಕಾಲ, ಭವ ಮತ್ತು ಭಾವರೂಪವಾದ(ಪಂಚಪರಿವರ್ತನಾರೂಪವಾದ) ಸಂಸಾರದಿಂದ ಮುಕ್ತನಾಗುವೆ. ಎಂದಿನವರೆಗೆ ನೀನು ಚಿಂತೆ

ಗಳಿಂದ ಕೂಡಿದವನಾಗಿರುವೆಯೋ ಅಂದಿನತನಕ ನಿನಗೆ ನಿರ್ವಿಕಲ್ಪಧ್ಯಾನದ ಸಿದ್ಧಿಯುಂಟಾಗದು. ಇತರ ಜೀವರುಗಳ ಮಾತಂತಿರಲಿ, ಸಾಕ್ಷಾತ್ ತೀರ್ಥಂಕರಪರಮ ದೇವರೂ ಛದ್ಮಸ್ಥಾವಸ್ಥೆಯಲ್ಲಿ ಎಂದಿನತನಕ ಶುಭಾಶುಭಚಿಂತಾಸಕ್ತರಾಗಿರುವರೋ ಅಂದಿನತನಕ ರಾಗಾದಿರಹಿತವಾದ ಶುದ್ಧೋಪಯೋಗಪರಿಣಾಮಗಳನ್ನು ಪಡೆಯಲಾರರು. ಸಂಶಯವಿಮೋಹವಿಭ್ರಮರಹಿತವಾದ ಅನಂತಜ್ಞಾನಾದಿ-ನಿರ್ಮಲಗುಣಗಳಿಂದ ಯುಕ್ತನಾಗಿರುವುದರಿಂದ ಹಂಸಕ್ಕೆ ಸಮಾನನಾದ ಉಜ್ಜ್ವಲ-ಪರಮಾತ್ಮನ ಶುದ್ಧಭಾವಗಳು ಚಿಂತಾಜಾಲವನ್ನು ಬಿಟ್ಟಹೊರತು ಉಂಟಾಗಲಾರವು. ಅತಏವ ತೀರ್ಥಂಕರರೂ ಮುನಿಗಳಾಗಿ ನಿಶ್ಚಿಂತತೆಯಿಂದ ವ್ರತಾದಿಗಳನ್ನು ಧರಿಸುವುದರಿಂದಲೇ ಪರಮಹಂಸಾವಸ್ಥೆಯನ್ನು ಪಡೆಯುತ್ತಾರೆ. ಅತಏವ ಯೋಗಿಯೇ! ನೀನು ಈ ವಿಷಯವನ್ನು ಚೆನ್ನಾಗಿ ತಿಳಿದು ದೃಷ್ಟಶ್ರುತಾನುಭೂತಭೋಗಾಕಾಂಕ್ಷಾದಿರೂಪವಾದ ಸಮಸ್ತ-ಚಿಂತಾಜಾಲ(ವಿಕಲ್ಪಜಾಲ)ಗಳನ್ನು ತೊರೆದು ಪರಮನಿಶ್ಚಿಂತನಾಗಿ ಶುದ್ಧಾತ್ಮಭಾವನಾಪರನಾಗೆಂಬ ಭಾವವು.

**ಜೋಇಯ ದುಮ್ಮಇ ಕವುಣ ತುಹಂ, ಭವಕಾರಣಿ ವವಹಾರಿ ।**
**ಬಂಭು ಪವಂಚಹಿಂ ಜೋ ರಹಿಉ, ಸೋ ಜಾಣಿವಿ ಮಣು ಮಾರಿ॥೧೭೦॥**

"ಯೋಗಿನ್ ದುರ್ಮತಿಃ ಕಾ ತವ ಭವಕಾರಣೇ ವ್ಯವಹಾರೇ ।
ಬ್ರಹ್ಮ ಪ್ರಪಂಚೈರ್ಯತ್ ರಹಿತಂ ತತ್ ಜ್ಞಾತ್ವಾ ಮನೋ ಮಾರಯ ॥ ೧೭೦ ॥"

**ಅನ್ವಯಾರ್ಥ:**— **ಜೋಇಯ**—ಎಲೈ ಯೋಗಿಯೇ! **ಭವಕಾರಣಿ ವವಹಾರಿ**—ಸಂಸಾರಕ್ಕೆ ಕಾರಣವಾದ ವ್ಯವಹಾರ(ಉದ್ಯಮ)ದಲ್ಲಿ **ಕವುಣ ತುಹಂ ದುಮ್ಮಇ**—ನಿನ್ನ ಯಾವ ದುರ್ಬುದ್ಧಿಯಿದು? **ಪವಂಚಹಿಂ ರಹಿಉ**—ಮಾಯಾಪ್ರಪಂಚದಿಂದ ರಹಿತನಾದ **ಜೋ ಬಂಭು**—ಯಾವ ಪರಬ್ರಹ್ಮ(ಶುದ್ಧಾತ್ಮ)ನಿರುವನೋ **ಸೋ ಜಾಣಿವಿ**—ಅವನನ್ನು ತಿಳಿದು **ಮಣು ಮಾರಿ**—ಶುಭಾಶುಭವಿಕಲ್ಪರೂಪವಾದ ಮನಸ್ಸನ್ನು ವಧಿಸು ಅರ್ಥಾತ್ ವಿಕಲ್ಪಜಾಲಗಳನ್ನು ಮನಸ್ಸಿನಿಂದ ದೂರಗೊಳಿಸಿ ಅದನ್ನು(ಮನಸ್ಸನ್ನು) ಸ್ಥಿರಗೊಳಿಸು.

**ಭಾವಾರ್ಥ:**— ಯೋಗಿಯೇ! ನೀನು ಸಂಸಾರಬಂಧನಕ್ಕೆ ಕಾರಣಗಳಾದ ವ್ಯವಹಾರಗಳನ್ನು (ಉದ್ಯಮ, ಆಚರಣೆಗಳನ್ನು) ಮಾಡುತ್ತಿರುವೆ. ಇದು ನಿನ್ನ ಎಂತಹ ದುರ್ಬುದ್ಧಿಯು? ಇನ್ನಾದರೂ ವೀತರಾಗಸ್ವಸಂವೇದನ-ಜ್ಞಾನದಿಂದ ಶುದ್ಧಾತ್ಮನನ್ನರಿತು ಅನೇಕ ಶುಭಾಶುಭವಿಕಲ್ಪಗಳಿಂದ ಕೂಡಿರುವ ಚಿತ್ತವನ್ನು ಆ ವಿಕಲ್ಪಗಳಿಂದ ದೂರಗೊಳಿಸಿ ನಿರ್ವಿಕಲ್ಪಶುದ್ಧಾತ್ಮನಲ್ಲಿ ಸ್ಥಿರಗೊಳಿಸು. ಮನಸ್ಸು ವಶವಾಗದೆ ನಿರ್ವಿಕಲ್ಪಧ್ಯಾನವು ಸಿದ್ಧಿಯಾಗದು. ಮನಸ್ಸನ್ನು ಜಯಿಸು(ನಿಗ್ರಹಿಸು)ವುದರಿಂದ ನಿರ್ವಿಕಲ್ಪಾವಸ್ಥೆಯನ್ನು ಹೊಂದಿದ ಮನಸ್ಸುಳ್ಳ ಜೀವನೇ ನಿಜಶುದ್ಧಾತ್ಮನಲ್ಲಿ ನಿಶ್ಚಲತೆಯನ್ನು ಹೊಂದಬಲ್ಲನು. ಅತಏವ ಸಮಸ್ತ ಶುಭಾಶುಭವಿಕಲ್ಪಗಳನ್ನೂ ಶುಭಾಶುಭ

ವ್ಯವಹಾರಗಳನ್ನೂ ತೊರೆದು ನಿಜಶುದ್ಧಾತ್ಮಸ್ವರೂಪವನ್ನರಿತವನಾಗಿ ಅದರಲ್ಲಿಯೇ ಮನಸ್ಸನ್ನು ಸ್ಥಿರಗೊಳಿಸೆಂದಭಿಪ್ರಾಯವು.

**ಸವ್ವಹಿಂ ರಾಯಹಿಂ ಛಹಿಂ ರಸಹಿಂ, ಪಂಚಹಿಂ ರೂವಹಿಂ ಜಂತು ।**
**ಚಿತ್ತು ಣಿವಾರಿವಿ ಝಾಹಿ ತುಹುಂ, ಅಪ್ಪಾ ದೇಉ ಅಣಂತು ॥ ೧೭೨ ॥**

"ಸರ್ವೈಃ ರಾಗೈಃ ಷಡ್ಭಿಃ ರಸೈಃ ಪಂಚಭಿಃ ರೂಪೈಃ ಗಚ್ಛತ್ ।
ಚಿತ್ತಂ ನಿವಾರ್ಯ ಧ್ಯಾಯ ತ್ವಂ ಆತ್ಮಾನಂ ದೇವಮನಂತಮ್ ॥ ೧೭೨ ॥"

**ಅನ್ವಯಾರ್ಥ:**— **ತುಹುಂ**— ನೀನು **ಸವ್ವಹಿಂ ರಾಯಹಿಂ**— ಸಮಸ್ತಶುಭಾಶುಭರಾಗಗಳಿಂದ **ಛಹಿಂ ರಸಹಿಂ**— ಆರು ರಸಗಳಿಂದ **ಪಂಚಹಿಂ ರೂವಹಿಂ**— ಐದು ರೂಪಗಳಿಂದ **ಜಂತು ಚಿತ್ತು**— ಪರಿಣಮಿಸುವ (ಚಲಾಯಮಾನವಾದ) ಚಿತ್ತವನ್ನು **ಣಿವಾರಿವಿ**— ತಡೆದು (ಹಿಂತಿರುಗಿಸಿ) **ದೇಉ ಅಣಂತು**— ಅವಿನಶ್ವರನೂ ವೀತರಾಗಪರಮಾನಂದಸುಖದಲ್ಲಿ ರಮಿಸುವವನೂ ಆದ **ಅಪ್ಪಾ ಝಾಹಿ**— ಸ್ವಶುದ್ಧಾತ್ಮನನ್ನು ಧ್ಯಾನಿಸು

**ಭಾವಾರ್ಥ** — ಎಲೈ ಶಿಷ್ಯನೇ! ನೀನು ರಾಗಾದಿಗಳಿಂದಲೂ ರೂಪರಸಗಳಿಂದಲೂ ರಹಿತವಾದ ವೀತರಾಗಶುದ್ಧಾತ್ಮದ್ರವ್ಯಕ್ಕೆ ವಿಪರೀತಗಳಾದ ಸರ್ವಶುಭಾಶುಭರಾಗಗಳು, ಬಿಳಿಪು, ಹಳದಿ, ಹಸುರು(ಅಥವಾನೀಲ) ಕೆಂಪು, ಕಪ್ಪುಗಳೆಂಬೈದು ರೂಪಗಳು, ಕಹಿ, ಖಾರ, ಒಗರು, ಹುಳಿ, ಸಿಹಿಗಳೆಂಬೈದು ರಸಗಳು ಅಥವಾ ಬೆಲ್ಲ, ಉಪ್ಪು, ಮೊಸರು, ಹಾಲು, ಎಣ್ಣೆ, ತುಪ್ಪಗಳೆಂಬ ಆರು ರಸಗಳು ಇವುಗಳಲ್ಲಿ ಪ್ರವರ್ತಿಸುವ ಅಥವಾ ಇವುಗಳಿಂದ ಚಂಚಲವಾದ ತನ್ನ ಮನಸ್ಸನ್ನು ರಸಾದಿಪ್ರವೃತ್ತಿಯಿಂದ ಹಿಂತಿರುಗಿಸಿ (ತಡೆದು) ಜಿತಮನಸ್ಕನಾಗಿ "**ದೀವ್ಯತಿ ಕ್ರೀಡತಿ ವೀತರಾಗಪರಮಾನಂದಸುಖೇನೇತಿ ದೇವಃ**" ಎಂಬಂತೆ ವೀತರಾಗಪರಮಾನಂದಸುಖದಿಂದ ಕ್ರೀಡಿಸು(ರಮಿಸು)ವವನಾದುದರಿಂದ 'ದೇವ'ನೂ, ಕೇವಲಜ್ಞಾನಾದ್ಯನಂತಗುಣಗಳಿಗೆ ಆಧಾರನೂ ಅನಂತಸುಖಾಸ್ಪದನೂ ಅವಿನಶ್ವರನೂ ಆಗಿರುವುದರಿಂದ 'ಅನಂತ'ನೂ ಆದ ನಿಜಶುದ್ಧಾತ್ಮನಲ್ಲಿ ಚಿತ್ತವನ್ನು ಸ್ಥಿರಗೊಳಿಸಿ ಆತನನ್ನೇ (ನಿಜಶುದ್ಧಾತ್ಮನನ್ನೇ) ತದೇಕಚಿತ್ತದಿಂದ ಧ್ಯಾನಿಸುವವನಾಗು.

**ಜೇಣ ಸರೂವಿಂ ಝಾಇಯಇ, ಅಪ್ಪಾ ಏಹು ಅಣಂತು ।**
**ತೇಣ ಸರೂವಿಂ ಪರಿಣವಇ, ಜಹ ಫಲಿಹಉಮಣಿ ಮಂತು ॥ ೧೭೩ ॥**

"ಯೇನ ಸ್ವರೂಪೇಣ ಧ್ಯಾಯತೇ ಆತ್ಮಾ ಏಷಃ ಅನಂತಃ ।
ತೇನ ಸ್ವರೂಪೇಣ ಪರಿಣಮತಿ ಯಥಾ ಸ್ಫಟಿಕಮಣಿಃ ಮಂತ್ರಃ ॥ ೧೭೩ ॥"

**ಅನ್ವಯಾರ್ಥ:**— **ಏಹು ಅಣಂತು ಅಪ್ಪಾ**— ಈ (ಪ್ರತ್ಯಕ್ಷವಾಗಿರುವ) ಅವಿನಶ್ವರನಾದ ಆತ್ಮನು **ಜೇಣ ಸರೂವಿಂ**— ಯಾವ ಸ್ವರೂಪದಿಂದ **ಝಾಇಯಇ**— ಧ್ಯಾನಿಸಲ್ಪಡುತ್ತಾನೋ **ಫಲಿಹಉಮಣಿ ಮಂತು ಜಹ**— ಸ್ಫಟಿಕಮಣಿಯು ಹಾಗೂ

ಗಾರುಡಾದಿಮಂತ್ರಪ್ರ ಹೇಗೋ ಹಾಗೆ (ಸ್ಫಟಿಕಮಣಿಮಂತ್ರಗಳಂತೆ) **ತೇಣ ಸರೂವಿಂ ಪರಿಣವಇ** — ಆ ಸ್ವರೂಪದಿಂದ ಪರಿಣಮಿಸುತ್ತಾನೆ

**ಭಾವಾರ್ಥ:** — ಈ ಆತ್ಮನು ಶುಭ, ಅಶುಭ ಹಾಗೂ ಶುದ್ಧ ಈ ಮೂರು ಉಪಯೋಗಗಳ ರೂಪದಿಂದ ಪರಿಣಮಿಸುತ್ತಾನೆ ಅರ್ಥಾತ್ ಅಶುಭೋಪಯೋಗದ ಧ್ಯಾನದಿಂದ ಪಾಪರೂಪನಾಗಿಯೂ ಶುಭೋಪಯೋಗದ ಧ್ಯಾನದಿಂದ ಪುಣ್ಯರೂಪನಾಗಿಯೂ ಶುದ್ಧೋಪಯೋಗದ ಧ್ಯಾನದಿಂದ ಪರಮಶುದ್ಧರೂಪನಾಗಿಯೂ ಪರಿಣಮಿಸುತ್ತಾನೆ. ಶುದ್ಧವಾದ ಸ್ಫಟಿಕಮಣಿಯ ಹಿಂದೆ (ಅಥವಾ ಕೆಳಗೆ) ಕೆಂಪು, ಕಪ್ಪು, ಹಳದಿ, ಹಸುರು ಮೊದಲಾದ ಯಾವವರ್ಣದ ವಸ್ತುವು (ದಾಸವಾಳದ ಹೂ ಕಾಗದ ಇತ್ಯಾದಿ) ಇಡಲ್ಪಡುವುದೋ ಸ್ಫಟಿಕಮಣಿಯು ಅದೇ ವರ್ಣವಾಗಿ ಪರಿಣಮಿಸುತ್ತದೆ ಅರ್ಥಾತ್ ಕೆಂಪು ಮೊದಲಾದ ವರ್ಣವುಳ್ಳ ವಸ್ತುಗಳ ಸಂಯೋಗದಿಂದ ಕೆಂಪುಮೊದಲಾದ (ಆಯಾಯ) ವರ್ಣವುಳ್ಳದಾಗಿ ಕಾಣಲ್ಪಡುತ್ತದೆ ಹಾಗೆಯೇ ಗಾರುಡಮಂತ್ರವನ್ನು ಧ್ಯಾನಿಸುವುದರಿಂದ ಅಥವಾ ಜಪಿಸುವುದರಿಂದ ಆ ಮಂತ್ರವು ಗರುಡರೂಪದಿಂದ ಪರಿಣಮಿಸಿ ಸರ್ಪಕ್ಕೆ ಭಯವನ್ನುಂಟುಮಾಡುತ್ತದೆ ಅಥವಾ ಮಂತ್ರಶಾಸ್ತ್ರದಲ್ಲಿಹೇಳಲ್ಪಟ್ಟಿರುವ ಶಾಂತಿಕ, ಪೌಷ್ಟಿಕ, ವಶ್ಯ, ಆಕರ್ಷಣ, ಸ್ತಂಭನ, ಮಾರಣ, ವಿದ್ವೇಷಣ ಮತ್ತು ಉಚ್ಚಾಟನಗಳೆಂಬ ಎಂಟುಕರ್ಮ(ಕ್ರಿಯೆ)ಗಳಲ್ಲಿ ಪ್ರಯೋಗಿಸಲ್ಪಡುವ ಮಂತ್ರಗಳು ಶಾಂತಿಕಾದಿರೂಪದಿಂದ ಪರಿಣಮಿಸಿ ಆಯಾಯ ಕ್ರಿಯೆಗಳನ್ನು ಸಾಧಿಸುತ್ತವೆ ಅದರಂತೆಯೇ ಆತ್ಮನು ಯಾವ ಯಾವ ರೂಪದಿಂದ ಪರಿಣಮನವನ್ನು ಹೊಂದುತ್ತಾನೋ ಆಯಾಯ ರೂಪದಿಂದ ತನ್ಮಯನಾಗುತ್ತಾನೆ. ಅಥವಾ ಆತ್ಮನು ಯಾವ ಸ್ವರೂಪದಿಂದ ಧ್ಯಾನಿಸುತ್ತಾನೋ ಆ ಸ್ವರೂಪದಿಂದ ಪರಿಣಮಿಸು (ತನ್ಮಯನಾಗು) ತ್ತಾನೆಂದಭಿಪ್ರಾಯವು. ಇದನ್ನೇ ಗ್ರಂಥಾಂತರದಲ್ಲಿ ಹೀಗೆ ಹೇಳಿದ್ದಾರೆ — **ಯೇನ ಯೇನ ಸ್ವರೂಪೇಣ ಯುಜ್ಯತೇ ಯಂತ್ರವಾಹಕಃ । ತೇನ ತನ್ಮಯತಾಂ ಯಾತಿ ವಿಶ್ವರೂಪೋ ಮಣಿರ್ಯಥಾ ॥"** ಅರ್ಥಾತ್ ಆತ್ಮನು ಯಾವ ಯಾವ ಸ್ವರೂಪದಿಂದ ಸೇರಿರುತ್ತಾನೋ (ಪರಿಣಮಿಸುತ್ತಾನೋ) ಆಯಾಯಸ್ವರೂಪದಿಂದ (ಸ್ಫಟಿಕಮಣಿಯು ಆಯಾಯರೂಪದಿಂದ ಪರಿಣಮಿಸುವಂತೆ) ತನ್ಮಯತೆಯನ್ನು ಹೊಂದುತ್ತಾನೆಂದು ಭಾವವು. ಇಲ್ಲಿ ಸಮಸ್ತರಾಗಾದಿವಿಕಲ್ಪಗಳನ್ನು ಬಿಟ್ಟು ಆತ್ಮನ ಶುದ್ಧಸ್ವರೂಪವನ್ನೇ ಧ್ಯಾನಿಸಬೇಕೆಂಬುದು ತಾತ್ಪರ್ಯಾರ್ಥವಾಗಿದೆ.

**ಏಹು ಜು ಅಪ್ಪಾ ಸೋ ಪರಮಪ್ಪಾ, ಕಮ್ಮವಿಸೇಸೇಂ ಜಾಯಉ ಜಪ್ಪಾ ।**
**ಜಾಮಇಂ ಜಾಣಇ ಅಪ್ಪೇಂ ಅಪ್ಪಾ, ತಾಮಇಂ ಸೋ ಜಿ ದೇಉ**
**ಪರಮಪ್ಪಾ ॥ ೧೭೪ ॥**

"ಏಷ ಯಃ ಆತ್ಮಾ ಸ ಪರಮಾತ್ಮಾ ಕರ್ಮವಿಶೇಷೇಣ ಜಾತಃ ಜಾಪ್ಯಃ ।
ಯದಾ ಜಾನಾತಿ ಆತ್ಮನಾ ಆತ್ಮಾನಂ ತದಾ ಸ ಏವ ದೇವಃ ಪರಮಾತ್ಮಾ ॥ ೧೭೪ ॥"

**ಅನ್ವಯಾರ್ಥ:**— **ಏಹು ಜು ಅಪ್ಪಾ**— ಯಾವ ಈ ಆತ್ಮನಿರುತ್ತಾನೋ **ಸೋ ಪರಮಪ್ಪಾ**— ಆತನು(ಆತನೇ) ಪರಮಾತ್ಮನಾಗಿರುತ್ತಾನೆ ಆದರೆ, **ಕಮ್ಮವಿಸೇಸೇಂ**– ಕರ್ಮವಿಶೇಷದಿಂದ ಅರ್ಥಾತ್ ಅನಾದಿಕರ್ಮಬಂಧದ ಬೆಸೆಯಿಂದ **ಜಪ್ಪಾ ಜಾಯಉ**– ಪರಾಧೀನನಾಗಿರುತ್ತಾನೆ. **ಜಾಮಇಂ**— ಯಾವಾಗ **ಅಪ್ಪೆಂ ಅಪ್ಪಾ ಜಾಣಇ**— ತನ್ನಿಂದ ತನ್ನನ್ನು ತಿಳಿಯುತ್ತಾನೋ **ತಾಮಇಂ**–ಆಗ **ಸೋ ಜಿ ಪರಮಪ್ಪಾ ದೇಉ**– ಆತನೇ ( ಈ ಆತ್ಮನೇ) ಪರಮಾರಾಧ್ಯನಾದ ಪರಮಾತ್ಮದೇವನಾಗುತ್ತಾನೆ.

**ಭಾವಾರ್ಥ:**— ಸ್ವಸಂವೇದನಜ್ಞಾನಕ್ಕೆ ಗೋಚರ(ಪ್ರತ್ಯಕ್ಷ)ನಾದ ಈ(ಶರೀರಸ್ಥ) ಆತ್ಮನೇ ಶುದ್ಧನಿಶ್ಚಯನಯದಿಂದ ಅನಂತಚತುಷ್ಟಯಸ್ವರೂಪನೂ ಕ್ಷುಧಾದ್ಯಷ್ಟಾದಶ ದೋಷರಹಿತನೂ ಆದ ನಿರ್ದೋಷಪರಮಾತ್ಮನಾಗಿರುತ್ತಾನೆ. ಆದರೆ ವ್ಯವಹಾರನಯ ದಿಂದ ಆತನು ಅನಾದಿಕರ್ಮಬಂಧನವಿಶೇಷದಿಂದ ಹಾಗೂ ತನ್ನ ಬುದ್ಧಿಯ ದೋಷ ದಿಂದ ಪರಾಧೀನನಾಗಿ ಪರಪದಾರ್ಥಗಳನ್ನು ಚಿಂತಿಸುವವನಾಗಿರುತ್ತಾನೆ. ಯಾವ ಸಮಯದಲ್ಲಿ ಆತನು ವೀತರಾಗನಿರ್ವಿಕಲ್ಪಸ್ವಸಂವೇದನಜ್ಞಾನದಿಂದ ತನ್ನನ್ನು ಅರ್ಥಾತ್ ನಿಜಶುದ್ಧಾತ್ಮನನ್ನು ತಿಳಿಯುತ್ತಾನೋ ಆಗ (ಸ್ವಶುದ್ಧಾತ್ಮಾನುಭೂತಿಯ ಕಾಲದಲ್ಲಿ) ಆತನೇ ನಿಜಶುದ್ಧಾತ್ಮಭಾವನೆಯಿಂದುಂಟಾದ ವೀತರಾಗಸುಖಾನುಭವದಿಂದ ಕ್ರೀಡಿಸುವವನೂ ಪರಮಾರಾಧ್ಯನೂ ಆದ ಪರಮಾತ್ಮನಾಗುತ್ತಾನೆ ಅರ್ಥಾತ್ ಶುದ್ಧ ನಿಶ್ಚಯನಯದಿಂದ ಮುಕ್ತಿಗತಪರಮಾತ್ಮನಿಗೆ ಸಮಾನನಾಗುತ್ತಾನೆ. ಹೀಗೆ ಪರ ಮಾತ್ಮನು ದೇಹದಲ್ಲಿ ಶಕ್ತಿರೂಪದಿಂದಿರುತ್ತಾನೆ ಆದುದರಿಂದಲೇ ಕೇವಲಜ್ಞಾನೋ ತ್ಪತ್ತಿಯ ಸಮಯದಲ್ಲಿ ಆತನು ಪ್ರಕಟನಾಗುತ್ತಾನೆ ಅರ್ಥಾತ್ ಆತನ ಪರಮಾತ್ಮ ಸ್ವರೂಪವು (ನಿಜಸ್ವರೂಪವು) ವ್ಯಕ್ತವಾಗುತ್ತದೆಂದು ಭಾವವು

**ಜೋ ಪರಮಪ್ಪಾ ಣಾಣಮಉ, ಸೋ ಹಉಂ ದೇಉ ಅಣಂತು ।**
**ಜೋ ಹಉಂ ಸೋ ಪರಮಪ್ಪು ಪರು, ಏಹಉ ಭಾವಿ ಣಿಭಂತು**
**॥ ೧೭೫ ॥**

"ಯಃ ಪರಮಾತ್ಮಾ ಜ್ಞಾನಮಯಃ ಸ ಅಹಂ ದೇವಃ ಅನಂತಃ ।
ಯಃ ಅಹಂ ಸ ಪರಮಾತ್ಮಾ ಪರಃ ಇತ್ಥಂ ಭಾವಯ ನಿರ್ಭ್ರಾಂತಃ ॥ ೧೭೫ ॥"

**ಅನ್ವಯಾರ್ಥ:**— **ಜೋ ಪರಮಪ್ಪಾ**— ಯಾವ ಪರಮಾತ್ಮನು **ಣಾಣಮಉ**– ಜ್ಞಾನಮಯನೂ **ದೇಉ ಅಣಂತು**— ದೇವ (ಪರಮಾರಾಧ್ಯ) ಸ್ವರೂಪನೂ ಅನಂತ (ಅವಿನಶ್ವರ)ನೂ ಆಗಿರುವನೋ **ಸೋ ಹಉಂ**— ಅವನು (ಆ ಪರಮಾತ್ಮನು) ನಾನಾ ಗಿದ್ದೇನೆ. **ಜೋ ಹಉಂ**— ಯಾವ ನಾನಾದರೋ **ಸೋ ಪರಮಪ್ಪು ಪರು**— ಆ ಉತ್ಕೃಷ್ಟನಾದ ಪರಮಾತ್ಮನು. **ಏಹಉ**— ಈ ಪ್ರಕಾರವಾಗಿ **ಭಾವಿ ಣಿಭಂತು**— ಸಂದೇಹರಹಿತನಾಗಿ (ಸಂದೇಹವಿಲ್ಲದೆ) ಭಾವಿಸು.

**ಭಾವಾರ್ಥ:**— ಇಲ್ಲಿ ಪರಮಾತ್ಮಶಬ್ದಕ್ಕೆ "ಪರಮ+ಆತ್ಮಾ" ಉತ್ಕೃಷ್ಟನಾದ ಆತ್ಮನೆಂದು, ಅಥವಾ "ಪರ+ಮಾ+ಆತ್ಮಾ" ಉತ್ಕೃಷ್ಟನು ಹಾಗೂ ಸರ್ವೋತ್ಕೃಷ್ಟವಾದ

ಅನಂತಜ್ಞಾನಾದಿರೂಪ"ಮಾ" ಅರ್ಥಾತ್ ಲಕ್ಷ್ಮಿಯು(ಸಂಪತ್ತು)ಯಾರಿಗಿರುವಳೋ ಆತನೆಂದರ್ಥವು। ಅಂತಹ ಜ್ಞಾನಮಯನೂ ಪರಮಾರಾಧ್ಯನೂ ಅನಂತಸುಖಾದಿಗುಣಗಳಿಗೆ ಆಸ್ಪದನಾಗಿರುವುದರಿಂದ ಅನಂತನೂ ಅವಿನಾಶಿಯೂ ಆದ ಪರಮಾತ್ಮನೇ ನಾನಾಗಿರುವೆನು. ಅರ್ಥಾತ್ ವ್ಯವಹಾರನಯದಿಂದ ಕರ್ಮಾವೃತನಾಗಿರುವೆನಾದರೂ ನಿಶ್ಚಯನಯದಿಂದ ಆ (ಪೂರ್ವೋಕ್ತ) ಪರಮಾತ್ಮನೇ ನಾನಾಗಿರುವೆನು (ಏಕೆಂದರೆ ಕರ್ಮಬಂಧಮೋಕ್ಷಾದಿಗಳು ವ್ಯವಹಾರನಯದಿಂದಿರುತ್ತವಲ್ಲದೆ ನಿಶ್ಚಯನಯದಿಂದಿರುವುದಿಲ್ಲ) ಹಾಗೆಯೇ ನಾನೇ ಆ ಪರಮಾತ್ಮನು ಈ ಪ್ರಕಾರವಾಗಿ ಪರಮಾತ್ಮನೇ ತಾನೆಂದೂ, ತಾನೇ ಪರಮಾತ್ಮನೆಂದೂ (ಅಭೇದರೂಪದಿಂದ) ನಿಸ್ಸಂದೇಹವಾಗಿ ಭಾವಿಸಬೇಕೆಂದಭಿಪ್ರಾಯವು. ಇಲ್ಲಿ "ನಾನು" ಎಂಬುದುರಿಂದ ದೇಹಸ್ಥ ಆತ್ಮನೆಂದೂ 'ಅವನು' ಅಥವಾ 'ಪರಮಾತ್ಮನು' ಎಂಬುದರಿಂದ ಮುಕ್ತಿಪ್ರಾಪ್ತಪರಮಾತ್ಮನೆಂದೂ ತಿಳಿಯಬೇಕು. ಹೀಗೆ ಸ್ವದೇಹದಲ್ಲಿಯೂ ಶುದ್ಧಾತ್ಮನಿರುತ್ತಾನೆಂಬು ನಿಶ್ಚಯವಾಗಿ ತಿಳಿದು ಮಿಥ್ಯಾತ್ವಾದಿಗಳ ಉಪಶಮುವಶದಿಂದ ಕೇವಲಜ್ಞಾನಾದಿಗಳ ಉತ್ಪತ್ತಿಗೆ ಬೀಜಭೂತವಾದ ಕಾರಣಸಮಯಸಾರ(ನಿಜಾತ್ಮ)ವನ್ನೆ ನಿರಂತರ ಭಾವಿಸಬೇಕೆಂದು ಭಾವಾರ್ಥವು.

**ಣಿಮ್ಮಲಫಲಿಹಹಂ ಜೇಮ ಜಿಯ, ಭಿಣ್ಣಉ ಪರಕಿಯಭಾಉ ।**
**ಅಪ್ಪಸಹಾವಹಂ ತೇಮ ಮುಣಿ, ಸಯಲು ವಿ ಕಮ್ಮಸಹಾಉ ॥ ೧೭೬ ॥**

"ನಿರ್ಮಲಸ್ಫಟಿಕಾತ್ ಯಥಾ ಜೀವ ಭಿನ್ನಃ ಪರಕೃತಭಾವಃ ।
ಆತ್ಮಸ್ವಭಾವಾತ್ ತಥಾ ಮನ್ಯಸ್ವ ಸಕಲಮಪಿ ಕರ್ಮಸ್ವಭಾವಮ್ ॥ ೧೭೬ ॥"

**ಅನ್ವಯಾರ್ಥ:**— **ಜಿಯ**— ಎಲೈ ಜೀವನೇ! **ಜೇಮ**—ಹೇಗೆ **ಪರಕಿಯಭಾಉ**— ಪರಕೃತಭಾವವು ಅರ್ಥಾತ್ ದಾಸವಾಳದ ಹೂಮೊದಲಾದ ವಸ್ತುಗಳು **ಣಿಮ್ಮಲಫಲಿಹಹಂ**— ನಿರ್ಮಲವಾದ ಸ್ಫಟಿಕಮಣಿಯ ಪೆನೆಯಿಂದ **ಭಿಣ್ಣಉ**— ಭಿನ್ನವಾಗಿರುವುದೋ **ತೇಮ**— ಹಾಗೆಯೇ **ಸಯಲು ವಿ ಕಮ್ಮಸಹಾಉ**— ಸಮಸ್ತ (ಶುಭಾಶುಭ) ಕರ್ಮಗಳ ಸ್ವಭಾವವನ್ನೂ **ಅಪ್ಪಸಹಾವಹಂ**—ಆತ್ಮಸ್ವಭಾವದ ದೆಸೆಯಿಂದ ಭಿನ್ನವಾದುದನ್ನಾಗಿ **ಮುಣಿ**— ತಿಳಿ.

**ಭಾವಾರ್ಥ:**—ಕೆಂಪು, ನೀಲಮೊದಲಾದ ವರ್ಣಗಳುಳ್ಳ ದಾಸವಾಳದ ಹೂಮೊದಲಾದ ವಿವಿಧ ವಸ್ತುಗಳ ಸಂಯೋಗದಿಂದ ನಿರ್ಮಲವಾದ ಸ್ಫಟಿಕಮಣಿಯು ಕೆಂಪು ನೀಲ ಮೊದಲಾದ ವಿವಿಧವರ್ಣಗಳುಳ್ಳುವಾಗಿ ಕಾಣಲ್ಪಡುವುದಾದರೂ ವರ್ಣಯುಕ್ತವಾದ ಆ ವಸ್ತುಗಳು ಸ್ಫಟಿಕಮಣಿಯಿಂದ ಭಿನ್ನವಾದುವುಗಳಾಗಿವೆ ಆ ವಸ್ತುಗಳನ್ನು ಸ್ಫಟಿಕಮಣಿಯಿಂದ ಬೇರೆಮಾಡಿದೊಡನ ಆ ಮಣಿಯ ನಿಜರೂಪವು ಪ್ರಕಟ(ವ್ಯಕ್ತ)ವಾಗುತ್ತದೆ. ಅದರಂತೆಯೇ ಜ್ಞಾನಾವರಣಾದಿಕರ್ಮಗಳ ಸಂಯೋಗದಿಂದ ಶುದ್ಧಾತ್ಮಸ್ವಭಾವವು ವಿವಿಧವಿಕಲ್ಪಗಳುಳ್ಳುದಾಗಿ ಕಾಣಲ್ಪಡುತ್ತದಾದರೂ ವಿಕಲ್ಪಗಳ

ನ್ನುಂಟುಮಾಡುವ ಆ ಸಮಸ್ತ ಜ್ಞಾನಾವರಣಾದಿದ್ರವ್ಯಕರ್ಮ, ಭಾವಕರ್ಮ, ನೋಕರ್ಮಗಳ ಸ್ವಭಾವವು ಆತ್ಮನ ಅನಂತಜ್ಞಾನಾದಿಸ್ವಭಾವದಿಂದ ಭಿನ್ನವಾಗಿರುತ್ತದೆ. ಆತ್ಮನಿಂದ ಆ ಕರ್ಮಗಳು ದೂರವಾದೊಡನೆ ಆತ್ಮನ ನಿಜಶುದ್ಧಸ್ವರೂಪವು ವ್ಯಕ್ತವಾಗುತ್ತದೆ. ಹೀಗೆ ಆತ್ಮ ಮತ್ತು ಕರ್ಮಗಳ ಸ್ವಭಾವದ ಭಿನ್ನತೆಯನ್ನು ತಿಳಿಯಬೇಕೆಂದು ಭಾವವು.

**ಜೇಮ ಸಹಾವಿಂ ಣಿಮ್ಮಲಉ, ಫಲಿಹಉ ತೇಮ ಸಹಾಉ ।**
**ಭಂತಿಏ ಮಇಲು ಮ ಮಣ್ಣಿ ಜಿಯ, ಮಇಲಉ ದೇಕ್ಖವಿ ಕಾಉ ॥ ೧೭೭ ॥**

"ಯಥಾ ಸ್ವಭಾವೇನ ನಿರ್ಮಲಃ ಸ್ಫಟಿಕಃ ತಥಾ ಸ್ವಭಾವಃ ।
ಭ್ರಾಂತ್ಯಾ ಮಲಿನಂ ಮಾ ಮನ್ಯಸ್ವ ಜೀವ ಮಲಿನಂ ದೃಷ್ಟ್ವಾ ಕಾಯಮ್
॥ ೧೭೭ ॥"

**ಅನ್ವಯಾರ್ಥ:**— **ಜಿಯ**— ಎಲೈ ಜೀವನೇ! (ಪೂರ್ವೋಕ್ತ ದೃಷ್ಟಾಂತವಲ್ಲಿ) **ಜೇಮ**— ಹೇಗೆ (ಯಾವ ಪ್ರಕಾರವಾಗಿ) **ಫಲಿಹಉ**— ಸ್ಫಟಿಕವು **ಸಹಾವಿಂ**— ಸ್ವಭಾವದಿಂದ **ಣಿಮ್ಮಲಉ**— ನಿರ್ಮಲವಾಗಿರುವುದೋ **ತೇಮ**— ಹಾಗೆಯೇ (ಅದೇಪ್ರಕಾರವಾಗಿ) **ಸಹಾಉ**— ಆತ್ಮಸ್ವಭಾವವು ನಿರ್ಮಲವಾಗಿರುತ್ತದೆ. **ಮಇಲಉ ಕಾಉ ದೇಕ್ಖವಿ**— ಮಲಿನವಾದ ಶರೀರವನ್ನು ನೋಡಿ **ಭಂತಿಏ**— ಭ್ರಾಂತಿ (ಭ್ರಮೆ, ಅಜ್ಞಾನ) ಯಿಂದ **ಮಇಲು ಮ ಮಣ್ಣಿ**— ಆತ್ಮನ ಸ್ವಭಾವವನ್ನು ಮಲಿನವನ್ನಾಗಿ ತಿಳಿಯಬೇಡ.

**ಭಾವಾರ್ಥ:**— ಸ್ಫಟಿಕಮಣಿಯು ಸ್ವಭಾವತಃ ನಿರ್ಮಲವಾಗಿರುವಂತೆ ವಿಶುದ್ಧ ಜ್ಞಾನರೂಪನಾದ ಆತ್ಮನ ಸ್ವಭಾವವೂ ನಿರ್ಮಲವಾಗಿರುತ್ತದೆ ಇಂತಹ ಪರಮಾತ್ಮ ಸ್ವರೂಪಕ್ಕೆ ವ್ಯತಿರಿಕ್ತವಾದ ಸ್ವರೂಪವುಳ್ಳ ಶರೀರವು ಮಲಿನವಾಗಿರುತ್ತದೆ ಶರೀರದ ಈ ಮಲಿನತೆಯನ್ನು ಕಂಡು ಆತ್ಮಸ್ವಭಾವವೂ ಮಲಿನವಾದುದೆಂದು ತಿಳಿಯಬಾರದು. ಏಕೆಂದರೆ ಚೇತನಾಮಯವಾದ ಆತ್ಮಸ್ವರೂಪಕ್ಕಿಂತ ಜಡವಾದ ಶರೀರಸ್ವರೂಪವು ಸರ್ವಥಾ ಭಿನ್ನವಾದುದೆಂದು ಭಾವವು.

ಮುಂದೆ ಪೂರ್ವೋಕ್ತಭೇದಭಾವನೆಯನ್ನು ರಕ್ತವಸ್ತ್ರಾದಿಗಳ ದೃಷ್ಟಾಂತದಮೂಲಕ ನಾಲ್ಕು ಸೂತ್ರಗಳಿಂದ ವ್ಯಕ್ತಗೊಳಿಸುತ್ತಾರೆ:—

**ರತ್ತೇ ವತ್ಥೇಂ ಜೇಮ ಬುಹು, ದೇಹು ಣ ಮಣ್ಣಇ ರತ್ತು ।**
**ದೇಹಿಂ ರತ್ತಿಂ ಣಾಣಿ ತಹಂ, ಅಪ್ಪು ಣ ಮಣ್ಣಇ ರತ್ತು ॥ ೧೭೮ ॥**

**ಜಿಣ್ಣಿಂ ವತ್ಥಿಂ ಜೇಮ ಬುಹು, ದೇಹು ಣ ಮಣ್ಣಇ ಜಿಣ್ಣು ।**
**ದೇಹಿಂ ಜಿಣ್ಣಿಂ ಣಾಣಿ ತಹಂ, ಅಪ್ಪು ಣ ಮಣ್ಣಇ ಜಿಣ್ಣು ॥ ೧೭೯ ॥**

**ವತ್ಥು ಪಣಟ್ಠಇ ಜೇಮ ಬುಹು, ದೇಹು ಣ ಮಣ್ಣಇ ಣಟ್ಟು ।**
**ಣಟ್ಠೇ ದೇಹೇ ಣಾಣಿ ತಹಂ, ಅಪ್ಪು ಣ ಮಣ್ಣಇ ಣಟ್ಟು ॥ ೧೮೦ ॥**

**ಭಿಣ್ಣಉ ವತ್ಥ ಜಿ ಜೇಮ ಜಿಯ, ದೇಹಹಂ ಮಣ್ಣ ಇ ಣಾಣಿ ।**
**ದೇಹು ವಿ ಭಿಣ್ಣಉಂ ಣಾಣಿ ತಹಂ, ಅಪ್ಪಹಂ ಮಣ್ಣಇ ಜಾಣಿ ॥ ೧೮೧ ॥**

"ರಕ್ತೇನ ವಸ್ತ್ರೇಣ ಯಥಾ ಬುಧಃ ದೇಹಂ ನ ಮನ್ಯತೇ ರಕ್ತಮ್ ।
ದೇಹೇನ ರಕ್ತೇನ ಜ್ಞಾನೀ ತಥಾ ಆತ್ಮಾನಂ ನ ಮನ್ಯತೇ ರಕ್ತಮ್ ॥ ೧೭೮ ॥
ಜೀರ್ಣೇನ ವಸ್ತ್ರೇಣ ಯಥಾ ಬುಧಃ ದೇಹಂ ನ ಮನ್ಯತೇ ಜೀರ್ಣಮ್ ।
ದೇಹೇನ ಜೀರ್ಣೇನ ಜ್ಞಾನೀ ತಥಾ ಆತ್ಮಾನಂ ನ ಮನ್ಯತೇ ಜೀರ್ಣಮ್ ॥ ೧೭೯ ॥
ವಸ್ತ್ರೇ ಪ್ರಣಷ್ಟೇ ಯಥಾ ಬುಧಃ ದೇಹಂ ನ ಮನ್ಯತೇ ನಷ್ಟಮ್ ।
ನಷ್ಟೇ ದೇಹೇ ಜ್ಞಾನೀ ತಥಾ ಆತ್ಮಾನಂ ನ ಮನ್ಯತೇ ನಷ್ಟಮ್ ॥ ೧೮೦ ॥
ಭಿನ್ನಂ ವಸ್ತ್ರಮೇವ ಯಥಾ ಜೀವ ದೇಹಾತ್ ಮನ್ಯತೇ ಜ್ಞಾನೀ ।
ದೇಹಮಪಿ ಭಿನ್ನಂ ಜ್ಞಾನೀ ತಥಾ ಆತ್ಮನಃ ಮನ್ಯತೇ ಜಾನೀಹಿ ॥ ೧೮೧ ॥"

**ಅನ್ವಯಾರ್ಥ:— ಜೇಮ**— ಹೇಗೆ **ಬುಹು**— ವಿದ್ವಾಂಸನು (ಬುದ್ಧಿವಂತನು, ತಿಳುವಳಿಕೆಯುಳ್ಳವನು) **ರತ್ತೇಂ ವತ್ಥೇಂ**— ಕೆಂಪಾದ (ಕೆಂಪುವರ್ಣವುಳ್ಳ) ವಸ್ತ್ರದಿಂದ **ದೇಹು**— ಶರೀರವನ್ನು **ರತ್ತು ಣ ಮಣ್ಣಇ**— ಕೆಂಪಾದುದನ್ನಾಗಿ ತಿಳಿಯುವುದಿಲ್ಲವೋ ಅಂದರೆ, ಕೆಂಪುವಸ್ತ್ರವನ್ನುಟ್ಟುಕೊಂಡಿರುವ ಮನುಷ್ಯನನ್ನು ನೋಡಿ ಆತನ ಶರೀರವೂ ಕೆಂಪಾಗಿರುತ್ತದೆಂದು ತಿಳಿಯುವುದಿಲ್ಲವೆಂದರ್ಥವು **ತಹಂ**— ಹಾಗೆಯೇ **ಣಾಣಿ**— ವೀತರಾಗನಿರ್ವಿಕಲ್ಪಸ್ವಸಂವೇದನಜ್ಞಾನಿಯು **ದೇಹಿಂ ರತ್ತಿಂ**— ಕೆಂಪಾದ ಶರೀರದಿಂದ **ಅಪ್ಪ ರತ್ತು ಣ ಮಣ್ಣಇ**— ಆತ್ಮನನ್ನು ಕೆಂಪಾದವನನ್ನಾಗಿ ತಿಳಿಯುವುದಿಲ್ಲ

**ಜೇಮ**— ಹೇಗೆ **ಬುಹು**— ವಿದ್ವಾಂಸನು **ಜಿಣ್ಣಿಂ ವತ್ಥಿಂ**— ಜೀರ್ಣವಾದ(ಹಳೆಯದಾದ) ವಸ್ತ್ರದಿಂದ **ದೇಹು ಜಿಣ್ಣು ಣ ಮಣ್ಣಇ**— ದೇಹವನ್ನು ಜೀರ್ಣವಾದುದನ್ನಾಗಿ ತಿಳಿಯುವುದಿಲ್ಲವೋ **ತಹಂ ಣಾಣಿ**— ಹಾಗೆಯೇ ಜ್ಞಾನಿಯು **ದೇಹಿಂ ಜಿಣ್ಣಿಂ**— ಜೀರ್ಣವಾದ ದೇಹದಿಂದ **ಅಪ್ಪ ಜಿಣ್ಣು ಣ ಮಣ್ಣಇ**— ಆತ್ಮನನ್ನು ಜೀರ್ಣನಾದವನನ್ನಾಗಿ ತಿಳಿಯುವುದಿಲ್ಲ.

**ಜೇಮ ಬುಹು**— ಹೇಗೆ ಬುದ್ಧಿವಂತನು **ವತ್ಥ ಪಣಟ್ಠಇ**- ವಸ್ತ್ರವು ನಾಶವಾಗುತ್ತಿರಲು (ವಸ್ತ್ರವು ನಾಶವಾಗುವುದರಿಂದ) **ದೇಹು ಣಟ್ಠು ಣ ಮಣ್ಣಇ**— ಶರೀರವನ್ನು ನಷ್ಟ(ನಾಶ)ವಾದುದನ್ನಾಗಿ ತಿಳಿಯುವುದಿಲ್ಲವೋ **ತಹಂ ಣಾಣಿ**- ಹಾಗೆಯೇ ಜ್ಞಾನಿಯು **ಣಟ್ಠೇ ದೇಹೇ**— ಶರೀರವು ನಷ್ಟ(ನಾಶ)ವಾಗುತ್ತಿರಲು **ಅಪ್ಪ ಣಟ್ಠು ಣ ಮಣ್ಣಇ**- ಆತ್ಮನನ್ನು ನಷ್ಟ(ನಾಶ)ವಾದವನನ್ನಾಗಿ ತಿಳಿಯುವುದಿಲ್ಲ

**ಜಿಯ**— ಎಲೈ ಜೀವನೇ! **ಜೇಮ** — ಹೇಗೆ **ಣಾಣಿ** — ಜ್ಞಾನಿಯು **ವತ್ಥು** — ವಸ್ತ್ರವನ್ನು **ದೇಹಹಂ ಭಿಣ್ಣಉ ಜಿ**— ದೇಹದವೆನೆಯಿಂದ(ದೇಹಕ್ಕಿಂತ) ಭಿನ್ನವಾದುದನ್ನಾಗಿಯೇ **ಮಣ್ಣಇ**— ತಿಳಿಯುತ್ತಾನೋ **ತಹಂ**— ಹಾಗೆಯೇ **ಣಾಣಿ**— ವೀತರಾಗನಿರ್ವಿಕಲ್ಪಸ್ವಸಂವೇದನಜ್ಞಾನಿಯು **ದೇಹು ವಿ**— ದೇಹವನ್ನೂ **ಅಪ್ಪಹಂ ಭಿಣ್ಣಉ ಮಣ್ಣಇ**

ಆತ್ಮನದೆನೆಯಿಂದ(ಆತ್ಮನಿಗಿಂತ) ಭಿನ್ನವಾದುವನ್ನಾಗಿ ತಿಳಿಯುತ್ತಾನೆ. ಹೀಗೆಂದು **ಜಾಣಿ**— ನೀನು ತಿಳಿ.

**ಭಾವಾರ್ಥ** —ಶರೀರಕ್ಕೆ ಸುತ್ತಿಕೊಂಡಿರುವ ವಸ್ತ್ರವು ಶರೀರದೊಡನೆ ಸೇರಿದು ವಂತೆ ಕಾಣುವುದಾದರೂ ವಸ್ತುತಃ ಅದು ಶರೀರದಿಂದ ಭಿನ್ನ(ಬೇರೆ)ವಾದುದು. ಆದುದರಿಂದ ವಸ್ತ್ರದ ಕೆಂಪುಬಣ್ಣ, ಜೀರ್ಣತೆ(ಹಳೆಯದಾಗುವಿಕೆ) ಮತ್ತು ನಾಶವಾಗು ವಿಕೆ ಮೊದಲಾದುವುಗಳಿಂದ ಶರೀರದಲ್ಲಿ ಕೆಂಪುಬಣ್ಣ, ಜೀರ್ಣತೆ ಮೊದಲಾದುವು ಗಳುಂಟಾಗುವುದಿಲ್ಲ ಅದರಂತೆಯೇ ಶರೀರವು (ಸಂಸಾರಿ)ಜೀವನೊಡನೆ ಸೇರಿಕೊಂಡಿ ರುವಂತೆ ಕಾಣುವುದಾದರೂ ಆ ಶರೀರವು ಜೀವ(ಆತ್ಮ)ನಿಂದ ಸರ್ವಥಾ ಭಿನ್ನವಾ ದುದು ಅತಏವ ಶರೀರದ ವರ್ಣವಿಶೇಷ, ಜೀರ್ಣತೆ, ನಾಶಾದಿಗಳಿಂದ ಆತ್ಮನಲ್ಲಿ ವರ್ಣವಿಶೇಷ, ಜೀರ್ಣತೆ, ನಾಶಾದಿಗಳುಂಟಾಗಲಾರವು ವ್ಯವಹಾರನಯದಿಂದ ಈ ಆತ್ಮನು ದೇಹದಲ್ಲಿರುವವನಾಗಿದ್ದರೂ ಸಹಜ-ಶುದ್ಧಪರಮಾನಂದರೂಪವಾದ ನಿಜ ಸ್ವಭಾವದಿಂದ ಸರ್ವಥಾ ದೇಹಭಿನ್ನನಾಗಿಯೇ ಇರುವನು. ಅತಏವ ದೇಹಸಂಬಂಧ ವಾದ ಸುಖದುಃಖಾದಿಗಳು ಆತ್ಮನಿಗಿರುವುದಿಲ್ಲ. ಈ ಪ್ರಕಾರವಾಗಿ ವೀತರಾಗ ನಿರ್ವಿಕಲ್ಪಸ್ವಸಂವೇದನಜ್ಞಾನಿಯು ದೇಹಾತ್ಮಭೇದವನ್ನು ತಿಳಿಯುತ್ತಾನೆಂದು ಭಾವವು.

**ಇಹು ತಣು ಜೀವಡ ತುಜ್ಝು ರಿಉ, ದುಕ್ಖಇಂ ಜೇಣ ಜಣೇಇ ।**
**ಸೋ ಪರು ಜಾಣಹಿ ಮಿತ್ತು ತುಹುಂ, ಜೋ ತಣು ಏಹು**
**ಹಣೇಇ ॥ ೧೮೨ ॥**

"ಇಯಂ ತನುಃ ಜೀವ ತವ ರಿಪುಃ ದುಃಖಾನಿ ಯೇನ ಜನಯತಿ ।
ತಂ ಪರಂ ಜಾನೀಹಿ ಮಿತ್ರಂ ತ್ವಂ ಯಃ ತನುಮೇತಾಂ ಹಂತಿ ॥ ೧೮೭ ॥"

**ಅನ್ವಯಾರ್ಥಃ**—**ಜೀವಡ**—ಎಲೈ ಜೀವನೇ! **ಜೇಣ**—ಯಾವಕಾರಣದಿಂದ **ಇಹು ತಣು**—ಈ ಶರೀರವು **ದುಕ್ಖಹಂ ಜಣೇಇ**-ದುಃಖಗಳನ್ನುಂಟುಮಾಡುತ್ತದೋ (ಆಕಾರಣದಿಂದ) **ತುಜ್ಝು ರಿಉ**—ನಿನ್ನ(ನಿನಗೆ) ಶತ್ರುವು. **ಜೋ**—ಯಾವನು **ಏಹು ತಣು**—ಈ ಶರೀರವನ್ನು **ಹಣೇಇ**—ಘಾತಿಸು(ನಾಶಗೊಳಿಸು)ತ್ತಾನೋ **ಸೋ ಪರು**- ಆ ಪರಮುಮನುಷ್ಯ(ಶತ್ರು)ನನ್ನು **ತುಹುಂ ಮಿತ್ತು ಜಾಣಹಿ**—ನೀನು ಮಿತ್ರನನ್ನಾಗಿ ತಿಳಿ ಅರ್ಥಾತ್ ಆತನ ಮೇಲೆ ದ್ವೇಷಭಾವವನ್ನು ತಾಳಬೇಡ

**ಭಾವಾರ್ಥಃ**—ಜೀವನೇ! ನಿನ್ನೀ ಶರೀರವು ನಿನಗೆ ಅನೇಕದುಃಖಗಳನ್ನುಂಟು ಮಾಡುವುದರಿಂದ ಶತ್ರುಸಮಾನವಾಗಿದೆ ಆದುದರಿಂದ ನೀನು ನಿನ್ನ ಶರೀರದಲ್ಲಿ ಹಾಗೂ ಆ ಶರೀರದ ಸೇವೆಯನ್ನು ಮಾಡುವವರಲ್ಲಿ ಅನುರಾಗ (ಪ್ರೀತಿ)ಪಡಬೇಡ ಮತ್ತು ನಿನ್ನ ಶರೀರವನ್ನು ಘಾತಿಸುವ (ಹಿಂಸಿಸುವ, ನಾಶಪಡಿಸುವ) ಮನುಷ್ಯನನ್ನು ಶತ್ರುವನ್ನಾಗಿ ತಿಳಿದು ಆತನನ್ನು ದ್ವೇಷಿಸಬೇಡ. ಏಕೆಂದರೆ ಲೋಕದಲ್ಲಿ ತನ್ನ ಶತ್ರು ವನ್ನು ಘಾತಿಸುವವನ ಮೇಲೆ ಯಾರೂ ದ್ವೇಷವನ್ನು ಮಾಡುವುದಿಲ್ಲ. ಆತನನ್ನು

ಮಿತ್ರನನ್ನಾಗಿ ತಿಳಿಯುತ್ತಾರೆ. ಹಾಗೆಯೇ ನಿನ್ನ ಶತ್ರುಸಮಾನವಾದೀಶರೀರವನ್ನು ಘಾತಿಸುವ ವ್ಯಕ್ತಿಯನ್ನು ಮಿತ್ರನನ್ನಾಗಿ ತಿಳಿ. ಯಾವನಾದರೊಬ್ಬ ಶತ್ರುವು ನಿನ್ನ ಶರೀರವನ್ನು ನಾಶಗೊಳಿಸುವ ಸಮಯದಲ್ಲಿ ನೀನು ಯುಧಿಷ್ಠಿರ (ಧರ್ಮರಾಯ) ಮೊದಲಾದ ಪಾಂಡವರಂತೆ ವೀತರಾಗಚಿದಾನಂದೈಕಸ್ವಭಾವವುಳ್ಳ ಪರಮಾತ್ಮತತ್ತ್ವದ ಭಾವನೆಯಿಂದುಂಟಾದ ಪರಮಸಮರಸೀಭಾವನೆಯಲ್ಲಿ ಮಗ್ನನಾದವನಾಗಿ ಆ ಶರೀರ ಘಾತಕನ ಮೇಲೆ ದ್ವೇಷವನ್ನು ಮಾಡಬೇಡ. ಇದೇ ಆಶಯವನ್ನು ಶ್ರೀ ಪಂಡಿತ ಆಶಾಧರರು **"ಸಾಗಾರಧರ್ಮಾಮೃತ"**ದಲ್ಲಿ ಹೀಗೆ ಹೇಳಿದ್ದಾರೆ —*"**ನ್ಯಸ್ಯ ಭೂಷಾಧಿಯಾಂಗೇಷು, ಸಂತಪ್ತಾ ಲೋಹಶೃಂಖಲಾಃ । ದ್ವಿಟ್ಸೈಕ್ಯೈಃ ಕೀಲಿತಪದಾಃ, ಸಿದ್ಧಾ ಧ್ಯಾನೇನ ಪಾಂಡವಾಃ ॥**" ಅರ್ಥಾತ್ (ಧ್ಯಾನಸ್ಥರಾದ) ಯುಧಿಷ್ಠಿರ ಮೊದಲಾದ ಪಾಂಡವರಿಗೆ ಶತ್ರುಗಳಾದ ಕೌರವರ ಪಕ್ಷದವರು ಬೆಂಕಿಯಲ್ಲಿ ಕಾಯಿಸಲ್ಪಟ್ಟ ಕಬ್ಬಿಣದ ಸಂಕೋಲೆಗಳನ್ನು "ಇವು ನಿಮಗೆ ಸುವರ್ಣಾಭರಣಗಳು" ಎಂದು ಕಂಠಮೊದಲಾದ ಅಂಗಗಳಿಗೆ ತೊಡಿಸಿ ಅವರ ಕಾಲುಗಳನ್ನು ಕಬ್ಬಿಣದ ಕೀಲುಗಳಿಂದ ಭೂಮಿಯಲ್ಲಿ ಬಂಧಿಸಿದರು. ಆದರೂ ಪಾಂಡವರು ಶತ್ರುಗಳಮೇಲೆ ದ್ವೇಷವನ್ನು ಹೊಂದದೆ ಹಾಗೂ ವೀತರಾಗನಿರ್ವಿಕಲ್ಪಪರಮಸಮಾಧಿಯಿಂದ ವಿಚಲಿತರಾಗದೆ ಆ ಪರಮಧ್ಯಾನದಿಂದ ಸಿದ್ಧ(ಮುಕ್ತ)ರಾದರು. ಅದರಂತೆಯೇ ನೀನು ನಿನ್ನ ಶರೀರಘಾತಕನ ಮೇಲೆ ದ್ವೇಷವನ್ನು ಮಾಡಬಾರದೆಂದು ಮುಖ್ಯಾಭಿಪ್ರಾಯವು.

**ಉದಯಹಂ ಆಣಿವಿ ಕಮ್ಮು ಮಇಂ, ಜಂ ಭುಂಜೇವಉ ಹೋಇ ।**
**ತಂ ಸಹ ಆವಿಉ ಖವಿಉ ಮಇಂ, ಸೋ ಪರ ಲಾಹು ಜಿ ಕೋಇ ॥ ೧೮೩ ॥**

"ಉದಯಮಾನೀಯ ಕರ್ಮ ಮಯಾ ಯತ್ ಭೋಕ್ತವ್ಯಂ ಭವತಿ ।
ತತ್ ಸ್ವಯಮಾಗತಂ ಕ್ಷಪಿತಂ ಮಯಾ ಸ ಪರಂ ಲಾಭ ಏವ ಕಶ್ಚಿತ್ ॥ ೧೮೩ ॥"

**ಅನ್ವಯಾರ್ಥ:— ಮಇಂ**— ನನ್ನಿಂದ **ಜಂ ಕಮ್ಮು**— ಯಾವ ಕರ್ಮವು **ಉದಯಹಂ ಆಣಿವಿ**— ಉದಯಕ್ಕೆ ತಂದು **ಭುಂಜೇವಉ ಹೋಇ**— ಅನುಭವಿಸಲ್ಪಡಬೇಕಾಗಿರುತ್ತದೋ **ಸಹ ಆವಿಉ**— ತಾನಾಗಿಯೇ ಉದಯಕ್ಕೆ ಬಂದ **ತಂ**— ಆ ಕರ್ಮವು **ಮಇಂ ಖವಿಉ**— ನನ್ನಿಂದ ಕ್ಷಯಗೊಳಿಸಲ್ಪಟ್ಟಿತು ಅರ್ಥಾತ್ ಶಾಂತ ಚಿತ್ತದಿಂದ ಸಹಿಸಲ್ಪಟ್ಟು ನಾಶಗೊಳಿಸಲ್ಪಟ್ಟಿತು. **ಸೋ ಕೋಇ**— ಅದೊಂದು **ಪರ ಲಾಹು ಜಿ**— ದೊಡ್ಡ ಲಾಭವೇ ಆಗಿದೆ.

**ಭಾವಾರ್ಥ:**— ಮೋಕ್ಷಾಧಿಕಾರಿಗಳಾದ ಮಹಾಮುನಿಗಳು ಉದಯಕ್ಕೆ ಬಾರದಿರುವ ಚಿರಸಂಚಿತ ಕರ್ಮಗಳನ್ನು ವಿಶಿಷ್ಟಆತ್ಮಭಾವನೆಯ ಬಲದಿಂದ ಉದಯಕ್ಕೆ ತಂದು ಆ ಕರ್ಮಗಳ ಫಲವನ್ನನುಭವಿಸಿ ಶೀಘ್ರತಃ ಅವುಗಳನ್ನು ನಾಶ(ನಿರ್ಜರೆ)ಗೊಳಿಸುತ್ತಾರೆ. ಒಂದುವೇಳೆ ಪೂರ್ವೋಪಾರ್ಜಿತಕರ್ಮಗಳು ತಾವಾಗಿಯೇ ಉದ

* ಸಾಗಾರಧರ್ಮಾಮೃತ, ಅಧ್ಯಾಯ—೮, ಪದ್ಯ—೧೦೨.

ಯಕ್ಕೆ ಬಂದುದಾದರೆ ಅರ್ಥಾತ್ ಸುಖದುಃಖರೂಪವಾದ ಫಲವನ್ನು ಕೊಡುವಂತಾದರೆ ಆಗ ಆ ಕರ್ಮಗಳನ್ನು ಉದಯಕ್ಕೆ ತರುವ ಪ್ರಯಾಸವಿಲ್ಲವಾದುದರಿಂದ ಅದೊಂದು ರೀತಿಯ ಲಾಭವೇ ಆಗಿದೆ. ಒಬ್ಬ ವ್ಯಾಪಾರಿಯು ಜನರನ್ನು ಕರೆದು ಕರೆದು ವ್ಯಾಪಾರವನ್ನು ಮಾಡುವುದರ ಬದಲು ಆ ಜನರು ತಾವಾಗಿಯೇ(ಸ್ವತಃ) ಬಂದು ವ್ಯಾಪಾರವನ್ನು ಮಾಡಿದುದಾದರೆ ಆ ವ್ಯಾಪಾರಿಗೆ ಅದೊಂದು ದೊಡ್ಡ ಲಾಭವೇ ಆಗುತ್ತದೆ. ಅದರಂತೆಯೇ ಮಹಾಮುನಿಯು ದುರ್ಧರತಪಶ್ಚರಣೆಯಿಂದ ಕರ್ಮಗಳನ್ನು ಉದಯಕ್ಕೆ ತಂದು ಕ್ಷಯಗೊಳಿಸುವ ಬದಲು ಆ ಕರ್ಮಗಳೇ(ಸ್ವತಃ) ಉದಯಕ್ಕೆ ಬಂದುವುವಾದರೆ ಆ ಮುನಿಗೆ ಅದೊಂದುಲಾಭವೇ ಆಗಿದೆ. ಆದುದರಿಂದ ಎಲೈ ಜೀವನೇ! ನಿನ್ನ ಪೂರ್ವಾರ್ಜಿತ ಶುಭಾಶುಭ ಕರ್ಮಗಳು ಉದಯಕ್ಕೆ ಬಂದು ನಿನಗೆ ಸುಖದುಃಖರೂಪವಾದ ಫಲವನ್ನು ಕೊಟ್ಟುದಾದರೆ ಅದರಿಂದ ನೀನು ವಿಕಾರಗೊಳ್ಳವೆ ಹಾಗೆ ಆ ಕರ್ಮಗಳು ಫಲಕೊಟ್ಟು ನಾಶ(ನಿರ್ಜರೆ)ವಾಗುವುದರಿಂದ ತನಗೆ ಲಾಭವೇ ಹೊರತು ನಷ್ಟವಿಲ್ಲವೆಂದು ಭಾವಿಸುವವನಾಗಿ ಸುಖದುಃಖಗಳನ್ನು ಸಮತಾಭಾವದಿಂದ ಸಹಿಸಿಕೊಂಡು ಅದರಿಂದಲೇ ಸಂತೋಷಪಡುವವನಾಗು ಹಾಗೂ ರಾಗದ್ವೇಷಾದಿವಿಭಾವ(ವಿಕಾರ)ವನ್ನು ಹೊಂದಬೇಡವೆಂದು ಭಾವವು.

**ಣಿಟ್ಠುರವಯಣು ಸುಣೇವಿ ಜಿಯ, ಜಇ ಮಣಿ ಸಹಣ ಣ ಜಾಇ ।**
**ತೋ ಲಹು ಭಾವಹಿ ಬಂಭು ಪರು, ಜಿಂ ಮಣು ಝತ್ತಿ ವಿಲಾಇ ॥೧೮೪॥**

ನಿಷ್ಠುರವಚನಂ ಶ್ರುತ್ವಾ ಜೀವ ಯದಿ ಮನಸಿ ಸೋಢುಂ ನ ಯಾತಿ ।
ತತೋ ಲಘು ಭಾವಯ ಬ್ರಹ್ಮ ಪರಂ ಯೇನ ಮನೋ ಝಟಿತಿ
ವಿಲೀಯತೇ ॥ ೧೮೪ ॥

**ಅನ್ವಯಾರ್ಥ:**— **ಜಿಯ** – ಎಲೈ ಜೀವನೇ! **ಜಇ** – ಒಂದುವೇಳೆ **ಣಿಟ್ಠುರವಯಣು ಸುಣೇವಿ**— ಇತರರ ನಿಷ್ಠುರ(ಕಠೋರ)ವಾದ ಮಾತನ್ನು ಕೇಳಿ **ಮಣಿ**— ಮನಸ್ಸಿನಲ್ಲಿ **ಸಹಣ ಣ ಜಾಇ**— ಸಹಿಸುವುದಕ್ಕೆ ಬರುವುದಿಲ್ಲವಾದರೆ ಅರ್ಥಾತ್ ಸಹಿಸಲಸಾಧ್ಯವಾದರೆ **ತೋ**— ಆಗ(ಅದಕ್ಕಾಗಿ) **ಲಹು**— ಕೂಡಲೇ **ಬಂಭು ಪರು ಭಾವಹಿ**— ಸ್ವದೇಹಸ್ಥನಾದ ಪರಬ್ರಹ್ಮ (ಪರಮಾತ್ಮ)ನನ್ನು ಭಾವಿಸು ಅರ್ಥಾತ್ ಧ್ಯಾನಿಸು. **ಜಿಂ**— ಯಾವಕಾರಣದಿಂದ(ಪರಮಾತ್ಮಧ್ಯಾನದಿಂದ) **ಮಣು**— ಮನಸ್ಸು **ಝತ್ತಿ ವಿಲಾಇ**— ಶೀಘ್ರವಾಗಿ ವಿಲೀನ(ದ್ರವೀಭೂತ)ವಾಗುತ್ತದೆ. ಅರ್ಥಾತ್ ಮನಸ್ಸು ಶಾಂತವಾಗಿ ಅದರಲ್ಲಿ ಸಹನಶಕ್ತಿಯುಂಟಾಗುತ್ತದೆ.

**ಭಾವಾರ್ಥ:**— ಜೀವನೇ! ಯಾರಾದರೂ ಅವಿವೇಕಿಗಳು ನಿನ್ನನ್ನು ಕುರಿತು ಹೃದಯಕರ್ಣಗಳಿಗೆ ಶೂಲದಂತಿರುವ ಕಠೋರಮಾತುಗಳನ್ನಾಡಿದುದಾದರೆ ನೀನದನ್ನು ಶಾಂತ(ಸಮತಾ)ಭಾವದಿಂದ ಸಹಿಸಿಕೊಳ್ಳು. ಒಂದುವೇಳೆ ಹಾಗೆ ಸಹಿಸಿಕೊಳ್ಳಲು ನಿನ್ನಿಂದ ಅಸಾಧ್ಯವಾದರೆ ತತ್‌ಕ್ಷಣವೇ ವೀತರಾಗನಿರ್ವಿಕಲ್ಪಸಮಾಧಿಯಿಂದ ನಿಜದೇಹ

ದಲ್ಲಿರುವ ಪರಮಾತ್ಮ(ಪರಬ್ರಹ್ಮ)ನನ್ನು ಧ್ಯಾನಿಸು ಹಾಗೆ ಪರಮಾತ್ಮನನ್ನು ಧ್ಯಾನಿಸುವುದರಿಂದ ವೀತರಾಗನಿರ್ವಿಕಲ್ಪಸಮಾಧಿಯಿಂದುಂಟಾದ ಪರಮಾನಂದೈಕರೂಪವಾದ ಸುಖರಸಾನುಭವದಿಂದ ನಿನ್ನ ಮನಸ್ಸು ಶೀಘ್ರವಾಗಿ ದ್ರವೀಭೂತವಾಗುವುದು ಅರ್ಥಾತ್ ಪರಮಶಾಂತವಾಗುವುದು.

**ಲೋಉ ವಿಲಕ್ಖಣು ಕಮ್ಮವಸು, ಇತ್ಥು ಭವಂತರಿ ಏಇ ।**
**ಚುಜ್ಜು ಕಿ ಜಇ ಇಹು ಅಪ್ಪಿ ಠಿಉ, ಇತ್ಥು ಜಿ ಭವಿ ಣ ಪಡೇಇ ॥ ೧೮೫ ॥**

"ಲೋಕಃ ವಿಲಕ್ಷಣಃ ಕರ್ಮವಶಃ ಅತ್ರ ಭವಾಂತರೇ ಆಯಾತಿ ।
ಆಶ್ಚರ್ಯಂ ಕಿಂ ಯದಿ ಅಯಂ ಆತ್ಮನಿ ಸ್ಥಿತಃ ಅತ್ರೈವ ಭವೇ ನ ಪತತಿ ॥ ೧೮೫ ॥"

**ಅನ್ವಯಾರ್ಥ:**— ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಮೊದಲಾದ ಜಾತಿಭೇದದಿಂದ **ವಿಲಕ್ಖಣು**— ಕೇವಲಜ್ಞಾನಾದಿಗುಣರೂಪಪರಮಾತ್ಮ-ತತ್ತ್ವದಿಂದ ವಿಲಕ್ಷಣನಾದ (ವಿಪರೀತಲಕ್ಷಣವುಳ್ಳ) **ಲೋಉ**— ಈ ಸಂಸಾರಿಜೀವನು **ಕಮ್ಮವಸು**— ಕರ್ಮವಶನಾಗಿ **ಇತ್ಥು ಭವಂತರಿ ಏಇ**— ಈ ಸಂಸಾರದಲ್ಲಿ ಬರುತ್ತಾನ ಅರ್ಥಾತ್ ಜನ್ಮತಾಳುತ್ತಾನೆ ಅಥವಾ ಭ್ರಮಿಸುತ್ತಾನೆ. **ಜಇ**— ಒಂದುವೇಳೆ **ಇಹು** – ಈ ಜೀವನು **ಅಪ್ಪಿ ಠಿಉ**–ಆತ್ಮನಲ್ಲಿ (ಆತ್ಮಸ್ವರೂಪದಲ್ಲಿ) ಸ್ಥಿರನಾದುದಾದರೆ **ಇತ್ಥು ಜಿ ಭವಿ**– ಇದೇ ಭವ(ಸಂಸಾರ)ದಲ್ಲಿ **ಣ ಪಡೇಇ**— ಬೀಳುವುದಿಲ್ಲ (ಬೀಳಲಾರನು). ಇದರಲ್ಲಿ **ಚುಜ್ಜು ಕಿ**— ಆಶ್ಚರ್ಯವೇನು?

**ಭಾವಾರ್ಥ:**— ಬ್ರಾಹ್ಮಣಾದಿವರ್ಣ(ಜಾತಿ)ಭೇದದ ಕಾರಣದಿಂದ ನಿರ್ದೋಷಪರಮಾತ್ಮಸ್ವಭಾವದಿಂದ ವಿಲಕ್ಷಣನಾದ ಈ ಸಂಸಾರಿಜೀವನು ಪೂರ್ವೋಪಾರ್ಜಿತ ಕರ್ಮಗಳಿಗೆ ಅಧೀನನಾಗಿ ಈ ಸಂಸಾರದಲ್ಲಿ ಅನೇಕಜಾತಿಗಳನ್ನು ಪಡೆಯುತ್ತ ಭ್ರಮಿಸುತ್ತಿರುತ್ತಾನೆ. ಇಂತಹ ಜೀವನು ಒಂದುವೇಳೆ ಸ್ವಶುದ್ಧಾತ್ಮತತ್ತ್ವದಲ್ಲಿ ಲೀನ(ಸಕ್ತ)ನಾದುದಾದರೆ ಆಮೇಲೆ ಈ ಸಂಸಾರದಲ್ಲಿ ಭ್ರಮಿಸಲಾರನು ಅರ್ಥಾತ್ ಸಂಸಾರರಹಿತ(ಮುಕ್ತ)ನಾಗುವನು ಈ ವಿಷಯದಲ್ಲಿ ಆಶ್ಚರ್ಯವೇನು? ಅಂದರೆ ಇದು ವಸ್ತುಸ್ಥಿತಿಯಾದುದರಿಂದ ಇದರಲ್ಲೇನೂ ಆಶ್ಚರ್ಯವಿಲ್ಲವೆಂದರ್ಥವು. ಅತಏವ ಸಂಸಾರಭಯಭೀತನಾದ ಭವ್ಯನು ಸಂಸಾರಕ್ಕೆ ಕಾರಣಗಳಾದ ಮಿಥ್ಯಾತ್ವರಾಗಾದಿಗಳನ್ನು ತೊರೆದು ಕೇವಲ ನಿಜಶುದ್ಧಾತ್ಮಭಾವನೆಯನ್ನೇ ಮಾಡಬೇಕೆಂದು ಭಾವಾರ್ಥವು.

**ಅವಗುಣಗಹಣಇಂ ಮಹುತಣಇಂ, ಜಇ ಜೀವಹಂ ಸಂತೋಸು ।**
**ತೋ ತಹಂ ಸೊಕ್ಖಹಂ ಹೇಉ ಹಉಂ, ಇಉ ಮಣ್ಣಿವಿ ಚಇ**
**ರೋಸು ॥ ೧೮೬ ॥**

"ಅವಗುಣಗ್ರಹಣೇನ ಮದೀಯೇನ ಯದಿ ಜೀವಾನಾಂ ಸಂತೋಷಃ ।
ತತಃ ತೇಷಾಂ ಸುಖಸ್ಯ ಹೇತುರಹಂ ಇತಿ ಮತ್ವಾ ತ್ಯಜ ರೋಷಮ್ ॥ ೧೮೬ ॥"

**ಅನ್ವಯಾರ್ಥ:— ಮುಹುತಣಇಂ—** ನನ್ನಸಂಬಂಧವಾದ **ಅವಗುಣಗಹಣ ಇಂ —** ಅವಗುಣ(ದೋಷ)ವನ್ನು ಗ್ರಹಣಮಾಡುವುದರಿಂದ **ಜಇ—** ಒಂದುವೇಳೆ **ಜೀವ ಹಂ—** ಜೀವರುಗಳಿಗೆ **ಸಂತೋಸು—** ಸಂತೋಷವುಂಟಾಗುವುದಾದರೆ **ತೋ—** ಅದ ರಿಂದ (ಆಕಾರಣದಿಂದ) **ಹಲುಂ—** ನಾನು **ತಹಂ—** ಆ ಜೀವರುಗಳ **ಸೊಕ್ಖಹಂ ಹೇಉ—** ಸುಖಕ್ಕೆ ಕಾರಣನಾಗುವೆನು **ಇಹು ಮಣ್ಣಿವಿ—** ಹೀಗೆಂದು ತಿಳಿದು **ರೋಸು ಚಇ —** ರೋಷ(ಕೋಪ)ವನ್ನು ಬಿಡು.

**ಭಾವಾರ್ಥ:—** ಜೀವನೇ! ಯಾರಾದರೂ ನಿನ್ನಲ್ಲಿರುವ ದೋಷಗಳನ್ನು ಪ್ರಕಟ ಗೊಳಿಸಿದರೆ ಅಥವಾ ನಿನ್ನಲ್ಲಿ ದೋಷಾರೋಪಣೆಯನ್ನು ಮಾಡಿದುದಾದರೆ ನೀನು ಅವರಮೇಲೆ ಮುನಿಸುಗೊಳ್ಳಬೇಡ. ಜ್ಞಾನಿಗಳು ಯಾರಲ್ಲಿಯೂ ಕ್ರೋಧ(ಕೋಪ) ವನ್ನು ಮಾಡುವುದಿಲ್ಲ. ಎಂತಹ ಸಂದರ್ಭದಲ್ಲಿಯೂ ಕ್ಷಮಾಭಾವವನ್ನು ಬಿಡುವುದಿಲ್ಲ ಅವರು ಹೀಗೆ ಭಾವಿಸುತ್ತಾರೆ:— ನನ್ನಲ್ಲಿರುವ ದೋಷಗಳನ್ನು ಗ್ರಹಣಮಾಡಿ ಅವು ಗಳನ್ನು ಪ್ರಕಟಿಸುವುದರಿಂದ ಆ ಮನುಷ್ಯರಿಗೆ ಸಂತೋಷವುಂಟಾಗುವುದಾದರೆ ನಾನು ಅವರ ಆ ಸಂತೋಷ(ಸುಖ)ಕ್ಕೆ ಕಾರಣನಾದೆನು. ಆದುದರಿಂದ ನಾನೇಕೆ ಅವರ ಮೇಲೆ ಕೋಪಗೊಳ್ಳಬೇಕು? ಲೋಕದಲ್ಲಿ ದ್ರವ್ಯಾದಿಗಳನ್ನು ಕೊಟ್ಟು ಇತರರನ್ನು ಸಂತೋಷ ಪಡಿಸಬೇಕಾಗುತ್ತದೆ ಅಥವಾ ಪರೋಪಕಾರಾಪೇಕ್ಷೆಯಿಂದ ಇತರರಿಗೆ ದ್ರವ್ಯಾದಿ ಗಳನ್ನು ದಾನಮಾಡಿ ಅವರನ್ನು ಸುಖಿಗಳನ್ನಾಗಿ ಮಾಡಬೇಕಾಗುತ್ತದೆ. ಹೀಗಿರುವಲ್ಲಿ ಆ ಜನರು ನನ್ನಿಂದ ಯಾವ ವಸ್ತು(ದ್ರವ್ಯಾದಿ)ವನ್ನೂ ಪಡೆಯದೆ ಕೇವಲ ನನ್ನ ದೋಷಗಳನ್ನು ತೆಗೆದುಕೊಂಡು ಅದರಿಂದಲೇ ಸಂತೋಷಗೊಳ್ಳುವರಾದರೆ ನಾನು ಏನೊಂದೂ ಪ್ರಯಾಸ ವಿಲ್ಲದೆ (ಸುಲಭವಾಗಿ) ಅವರನ್ನು ಸಂತೋಷಗೊಳಿಸಿದಂತಾಯಿತು. ಅಥವಾ ಪ್ರಾಯಃ ಮನುಷ್ಯನಿಗೆ ತನ್ನಲ್ಲಿರುವ ದೋಷಗಳು ತನಗೆ ತಿಳಿಯುವುದಿಲ್ಲ. ಹಾಗೆ ನಿಜವಾಗಿ ತನ್ನಲ್ಲಿರುವ ದೋಷಗಳನ್ನು ಇತರರು ಎತ್ತಿ ತೋರಿಸಿದರೆ ಅದರಿಂದ ತನ್ನಲ್ಲಿರುವ ದೋಷಗಳನ್ನು (ತಪ್ಪುಗಳನ್ನು) ತಿದ್ದಿಕೊಳ್ಳಲು ಹಾಗೂ ಮುಂದೆ ಆ ದೋಷಗಳು ತನ್ನಲ್ಲುಂಟಾಗದಂತೆ ಜಾಗ್ರತೆಯಿಂದಿರಲು ಅನುಕೂಲ(ಸಹಾಯ)ವಾಗುತ್ತದೆ. ಅಥವಾ ಇತರರು ತನ್ನಲ್ಲಿಲ್ಲದ ದೋಷಗಳನ್ನು ತನ್ನಲ್ಲಾರೋಪಿಸಿದುದಾದರೆ ಆ ದೋಷಗಳು ಪ್ರಕೃತ ತನ್ನಲ್ಲಿಲ್ಲವಾದರೂ ಮುಂದಕ್ಕೆ ಎಂದಾದರೂ (ಪ್ರಮಾದವಶದಿಂದ) ಸಂಭವಿಸ ದಂತೆ ಜಾಗ್ರತೆವಹಿಸಲು ಕಾರಣವಾಗುತ್ತದೆ. ಅಥವಾ ದೋಷಗ್ರಾಹಿಗಳಾದ ಜನರು ನನ್ನಲ್ಲಿರುವ ದೋಷಗಳನ್ನೇ ಗ್ರಹಣಮಾಡು (ತೆಗೆದುಕೊಳ್ಳು)ತ್ತಾರಲ್ಲದೆ ನನ್ನಲ್ಲಿರುವ ಗುಣಗಳನ್ನು ಗ್ರಹಣಮಾಡುವುದಿಲ್ಲ. ಇದರಿಂದ ನನಗೆ ಲಾಭವೇ ಅಲ್ಲದೆ ನಷ್ಟವಿರುವು ದಿಲ್ಲ. ಏಕಂದರೆ ದೋಷಗಳು ಸ್ವಯಂ ತ್ಯಾಜ್ಯಗಳಾಗಿವೆ. ಆದುದರಿಂದ ನಾನು ಪ್ರಯತ್ನಪೂರ್ವಕವಾಗಿ ಬಿಡಬೇಕಾದ ದೋಷಗಳನ್ನು ಇತರರು ಅವರಾಗಿಯೇ ತೆಗೆದು ಕೊಂಡುದಾದರೆ ನನಗೆ ಅದೊಂದು ಲಾಭವೇ ಆಗಿದೆ. ಕದಿಯುವುದಕ್ಕಾಗಿ ಮನೆಯನ್ನು ಹೊಕ್ಕ ಕಳ್ಳರು ಅಲ್ಲಿರುವ ರತ್ನಸುವರ್ಣಾದಿ ಉತ್ತಮವಸ್ತುಗಳನ್ನು ಬಿಟ್ಟು ಕೇವಲ

ಕಲ್ಲು ಮಣ್ಣುಗಳನ್ನು ತೆಗೆದುಕೊಂಡು ಹೋದರೆ ಅದರಿಂದ ಆ ಭೂಮಿಯ ಒಡೆಯನಿಗಾಗುವ ನಷ್ಟವೇನು? ಅದರಂತೆಯೇ ನನ್ನಲ್ಲಿರುವ ದೋಷಗಳನ್ನು ಇತರರು ತೆಗೆದುಕೊಂಡರೆ ಅದರಿಂದ ನನಗಾಗುವ ನಷ್ಟವೇನು? ಅಥವಾ ನನ್ನಲ್ಲಿಲ್ಲದ ದೋಷಗಳನ್ನು ಯಾವನಾದರೊಬ್ಬನು ಪ್ರತ್ಯಕ್ಷದಲ್ಲಾಗಲಿ ಪರೋಕ್ಷದಲ್ಲಾಗಲಿ ಹೇಳಿದರೇನು? ಅವನು ಹೇಳಿದಮಾತ್ರಕ್ಕೆ ನನ್ನಲ್ಲಿ ಆ ದೋಷಗಳುಂಟಾಗುವುವೆ? ಆದುದರಿಂದ ನನ್ನಲ್ಲಿರುವ ದೋಷಗಳನ್ನು ಹೇಳುವ(ಪ್ರಕಟಿಸುವ) ಹಾಗೂ ಇಲ್ಲದ ದೋಷಗಳನ್ನು ಆರೋಪಿಸಿ ಹೇಳುವ ಜನರ ಮೇಲೆ ನಾನು ಕೋಪಗೊಳ್ಳುವುದು ಸರ್ವಥಾ ಯುಕ್ತವಲ್ಲ. ಅಂಥವರನ್ನು ಕ್ಷಮಿಸುವುದೇ ನನ್ನ ಕರ್ತವ್ಯ(ಧರ್ಮ)ವು ಹೀಗೆಂದು ಭಾವಿಸುವವನಾಗಿ ನೀನು ಯಾರಲ್ಲಿಯೂ ಕ್ರೋಧವನ್ನು ಮಾಡದೆ ಕ್ಷಮಾಭಾವದಿಂದಿರಬೇಕೆಂದು ಮುಖ್ಯಾಭಿಪ್ರಾಯವು

**ಜೋಇಯ ಚಿಂತಿ ಮ ಕಿಂಪಿ ತುಹುಂ, ಜಇ ಬೀಹಉ ದುಕ್ಖಸ್ಸ ।**
**ತಿಲತುಸಮಿತ್ತು ವಿ ಸಲ್ಲಡಾ, ವೇಯಣ ಕರಇ ಅವಸ್ಸ ॥ ೧೮೭ ॥**

'ಯೋಗಿನ್ ಚಿಂತಯ ಮಾ ಕಿಮಪಿ ತ್ವಂ ಯದಿ ಭೀತಃ ದುಃಖಸ್ಯ ।
ತಿಲತುಷಮಾತ್ರಮಪಿ ಶಲ್ಯಂ ವೇದನಾಂ ಕರೋತ್ಯವಶ್ಯಮ್ ॥ ೧೮೭ ॥"

**ಅನ್ವಯಾರ್ಥ:—ಜೋಇಯ**—ಎಲೈ ಯೋಗಿಯೇ! **ತುಹುಂ**—ನೀನು **ದುಕ್ಖಸ್ಸ**—ನರನಾರಕಾದಿಚತುರ್ಗತಿಗಳ ಸಂಬಂಧವಾದ ದುಃಖದಿಂದ **ಬೀಹಉ ಜಇ**—ಭಯಗೊಂಡವನಾಗಿರುವುದಾದರೆ **ಕಿಂ ಪಿ ಮ ಚಿಂತಿ**—(ವಿಷಯಕಷಾಯಾದಿಗಳಲ್ಲಿ) ಯಾವುದನ್ನೂ ಚಿಂತಿಸಬೇಡ. ಏಕೆಂದರೆ **ತಿಲತುಸಮಿತ್ತು ವಿ**—ಎಳ್ಳಿನ ಸಿಪ್ಪೆಯಷ್ಟೇ ಇರುವ **ಸಲ್ಲಡಾ**—ಶಲ್ಯ (ಮುಳ್ಳು)ವೂ **ಅವಸ್ಸ ವೇಯಣ ಕರಇ**—ಅವಶ್ಯವಾಗಿಯೂ ವೇದನೆಯನ್ನು (ನೋವನ್ನು) ಉಂಟುಮಾಡುತ್ತದೆ. ಅದರಂತೆಯೇ ಅಲ್ಪವಾದ ಚಿಂತೆಯೂ ಅವಶ್ಯವಾಗಿ ವೇದನ(ದುಃಖ)ಯನ್ನುಂಟುಮಾಡುತ್ತದೆಂದರ್ಥವು.

**ಭಾವಾರ್ಥ:**—ಯೋಗಿಯೇ! ನೀನು ವಿಷಯಕಷಾಯಾದಿಗಳ ಸಂಬಂಧವಾದ ಯಾವುದೊಂದು(ಅತ್ಯಲ್ಪ)ಚಿಂತೆಯನ್ನೂ ಮಾಡಬೇಡ ಈ ಚಿಂತೆಯೇ ದುಃಖಕ್ಕೆ ಕಾರಣವಾಗಿರುತ್ತದೆ ಶರೀರದೊಳಗೆ ಪ್ರವೇಶಿಸಿದ ಸೂಕ್ಷ್ಮವಾದ ಶಲ್ಯ(ಮುಳ್ಳು, ಬಾಣ ಮೊದಲಾದುವುಗಳ ಅಲಗು)ವೂ ವೇದನೆಯನ್ನುಂಟುಮಾಡುತ್ತದೆ. ಅದರಂತೆಯೇ ಅತ್ಯಲ್ಪವಾದ ಚಿಂತೆಯೂ ದುಃಖವನ್ನುಂಟುಮಾಡುತ್ತದೆ (ದುಃಖಕ್ಕೆ ಕಾರಣವಾಗಿರುತ್ತದೆ).

**ಮೊಕ್ಖು ಮ ಚಿಂತಹಿ ಜೋಇಯಾ, ಮೊಕ್ಖು ಣ ಚಿಂತಿಉ ಹೋಇ ।**
**ಜೇಣ ಣಿಬದ್ಧಉ ಜೀವಡಉ, ಮೊಕ್ಖು ಕರೇಸಹಿ ಸೋಇ ॥ ೧೮೮ ॥**

"ಮೋಕ್ಷಂ ಮಾ ಚಿಂತಯ ಯೋಗಿನ್ ಮೋಕ್ಷೋ ನ ಚಿಂತಿತೋ ಭವತಿ ।
ಯೇನ ನಿಬದ್ಧೋ ಜೀವಃ ಮೋಕ್ಷಂ ಕರಿಷ್ಯತಿ ತದೇವ ॥ ೧೮೮ ॥"

**ಅನ್ವಯಾರ್ಥ:—ಜೋಇಯಾ**—ಎಲೈ ಯೋಗಿಯೇ! **ಮೊಕ್ಖು ಮ ಚಿಂತಹಿ** ಮೋಕ್ಷವನ್ನು ಚಿಂತಿಸಬೇಡ. ಏಕೆಂದರೆ **ಮೊಕ್ಖು ಮ ಚಿಂತಉ ಹೋಇ**—

ಮೋಕ್ಷವು ಚಿಂತಿಸಲ್ಪಟ್ಟುದಾಗಿ ಆಗುವುದಿಲ್ಲ ಅರ್ಥಾತ್ ಚಿಂತಿಸುವುದರಿಂದ ಮೋಕ್ಷವು ಉಂಟಾಗುವುದಿಲ್ಲ **ಜೇಣ**— ಯಾವುದರಿಂದ(ಯಾವಕರ್ಮದಿಂದ) **ಜೀವಡಉ**— ಜೀವನು **ಣಿಬದ್ಧಉ**— ಬದ್ಧನಾಗಿರುವನೋ **ಸೋಇ**— ಅದೇ (ಆ ಕರ್ಮವೇ) **ಮೊಕ್ಖು ಕರೇಸಹಿ**— ಮೋಕ್ಷವನ್ನುಂಟುಮಾಡುವುದು.

ಭಾವಾರ್ಥ:— ಯೋಗಿಯೇ! ಅನ್ಯಚಿಂತನೆಗಳ ಮಾತಂತಿರಲಿ; ನೀನು ಮೋಕ್ಷವನ್ನೂ ಚಿಂತಿಸಬೇಡ ಮೋಕ್ಷವು ಚಿಂತಿಸುವುದರಿಂದುಂಟಾಗಲಾರದು. **"*ಕೃತ್ಸ್ನಕರ್ಮವಿಪ್ರಮೋಕ್ಷೋ ಮೋಕ್ಷಃ"** ಎನ್ನುವಂತೆ ಸಮಸ್ತಕರ್ಮಗಳ ಬಿಡುಗಡೆ (ಕರ್ಮಗಳ ಕ್ಷಯ ಅಥವಾ ಆತ್ಮನು ಸರ್ವಕರ್ಮಗಳಿಂದ ಬಿಡಲ್ಪಡುವಿಕೆ)ಯೇ ಮೋಕ್ಷವು ಅದು ರಾಗಾದಿಸಮಸ್ತಚಿಂತಾಜಾಲಗಳಿಂದ ರಹಿತವಾದ ಕೇವಲಜ್ಞಾನಾದಿ ಅನಂತಗುಣಸ್ವರೂಪವುಳ್ಳುದು. ಅಂತಹ ಮೋಕ್ಷವು ಚಿಂತೆ(ವಾಂಛೆ)ಗಳ ಸರ್ವಥಾ ತ್ಯಾಗದಿಂದಲೇ ಲಭಿಸಬಲ್ಲುದು. ಈ ಜೀವನು ಮಿಥ್ಯಾತ್ವರಾಗಾದಿ ಚಿಂತಾಜಾಲಗಳಿಂದ ಉಪಾರ್ಜಿಸಲ್ಪಟ್ಟ ಯಾವ ಕರ್ಮಗಳಿಂದ ಬದ್ಧನಾಗಿರುವನೋ ಅತಏವ ಅವನ ಸಂಸಾರಪರಿಭ್ರಮಣೆಗೆ ಯಾವ ಕರ್ಮಗಳು ಕಾರಣವಾಗಿರುತ್ತವೋ ಆ ಕರ್ಮಗಳೇ (ಅರ್ಥಾತ್ ಆ ಕರ್ಮಗಳ ಕ್ಷಯವೇ) ಆ ಜೀವನ ಮೋಕ್ಷಕ್ಕೆ ಕಾರಣವಾಗಿರುತ್ತವೆ. ಕರ್ಮಗಳ ಬಿಡುಗಡೆಗೆ **"ಬಂಧಹೇತ್ವಭಾವನಿರ್ಜರಾಭ್ಯಾಂ"** ಎಂದು ಹೇಳಿರುವುದರಿಂದ ಕರ್ಮಬಂಧಕ್ಕೆ ಕಾರಣಗಳಾದ †ಮಿಥ್ಯಾತ್ವ, ಅವಿರತಿ, ಪ್ರಮಾದ, ಕಷಾಯ ಮತ್ತು ಯೋಗಗಳ ಅಭಾವವು ಮತ್ತು ಪೂರ್ವಬದ್ಧಕರ್ಮಗಳ (ಫಲದಾನದಿಂದ ಅಥವಾ ತಪಶ್ಚರಣಾದಿಗಳಿಂದ) ನಿರ್ಜರೆಯು ಕಾರಣವಾಗಿರುತ್ತದೆ ಇಂತಿರಲು ಚಿಂತಾರೂಪವಾದ ವಿಕಲ್ಪದಿಂದ ಮೋಕ್ಷವು ಹೇಗೆ ಲಭಿಸಬಲ್ಲುದು? ಅತಏವ ಸಮಸ್ತ ಚಿಂತೆಗಳ ತ್ಯಾಗವೇ ನಿನಗೆ ಮೋಕ್ಷವನ್ನುಂಟುಮಾಡಬಲ್ಲುದು. ಯದ್ಯಪಿ ಪ್ರಥಮಾವಸ್ಥೆಯಲ್ಲಿ (ವಿಕಲ್ಪಸಹಿತ ಅವಸ್ಥೆಯಲ್ಲಿ) ವಿಷಯಕಷಾಯಾದಿದುರ್ಧ್ಯಾನದಲ್ಲಿ ಪ್ರವರ್ತಿಸುವ ಚಿತ್ತವನ್ನು ತಡೆಯುವುದಕ್ಕಾಗಿ ಹಾಗೂ ಮೋಕ್ಷಮಾರ್ಗದಲ್ಲಿ ಪರಿಣಾಮವನ್ನು ದೃಢಗೊಳಿಸುವುದಕ್ಕಾಗಿ ಜ್ಞಾನಿಗಳು **"ದುಕ್ಖಕ್ಖಓ ಕಮ್ಮಕ್ಖಓ ಬೋಹಿಲಾಹೋ ಸುಗಇಗಮಣಂ ಸಮಾಹಿಮರಣಂ ಜಿಣಗುಣಸಂಪತ್ತಿ ಹೋಉ ಮಜ್ಝಂ"** ಅರ್ಥಾತ್ "ನನಗೆ ಚತುರ್ಗತಿದುಃಖಗಳಕ್ಷಯವೂ ಕರ್ಮಗಳ ಕ್ಷಯವೂ ಬೋಧಿ (ರತ್ನತ್ರಯ)ಯ ಲಾಭ(ಪ್ರಾಪ್ತಿ)ವೂ ಸುಗತಿ (ಪಂಚಮಗತಿ, ಮೋಕ್ಷ) ಗಮನವೂ ಸಮಾಧಿಮರಣವೂ ಜಿನೇಶ್ವರರ ಗುಣಗಳ ಸಂಪತ್ತಿಯೂ ಉಂಟಾಗಲಿ" ಎಂಬ ಭಾವನೆಯನ್ನು ಮಾಡುತ್ತಾರಾದರೂ ವೀತರಾಗನಿರ್ವಿಕಲ್ಪಸಮಾಧಿಯ ಕಾಲದಲ್ಲಿ ಇಂತಹ ಭಾವನೆಯನ್ನೂ ಮಾಡಬಾರದೆಂದಭಿಪ್ರಾಯವು.

---

* "ಬಂಧಹೇತ್ವಭಾವನಿರ್ಜರಾಭ್ಯಾಂ ಕೃತ್ಸ್ನಕರ್ಮವಿಪ್ರಮೋಕ್ಷೋ ಮೋಕ್ಷಃ ॥ ೧ ॥"
ತತ್ತ್ವಾರ್ಥಸೂತ್ರ ೧೦—೨.

† "ಮಿಥ್ಯಾದರ್ಶನಾವಿರತಿಪ್ರಮಾದಕಷಾಯಯೋಗಾ ಬಂಧಹೇತವಃ ॥ ೧ ॥"
ತತ್ತ್ವಾರ್ಥಸೂತ್ರ ೮—೧.

ಇನ್ನು ಪರಮಸಮಾಧಿಯ ವ್ಯಾಖ್ಯಾನದ ಮುಖ್ಯತೆಯಿಂದ ಆರು ಸೂತ್ರಗಳನ್ನು ಹೇಳುತ್ತಾರೆ—

**ಪರಮಸಮಾಹಿಮಹಾಸರಹಿಂ, ಜೇ ಬುಡ್ಡಹಿಂ ಪಣಸೇವಿ ।**
**ಅಪ್ಪಾ ಥಕ್ಕಇ ವಿಮಲು ತಹಂ, ಭವಮಲ ಜಂತಿ ವಹೇವಿ ॥ ೧೮೯ ॥**

"ಪರಮಸಮಾಧಿಮಹಾಸರಸಿ ಯೇ ಮಜ್ಜಂತಿ ಪ್ರವಿಶ್ಯ ।
ಆತ್ಮಾ ತಿಷ್ಠತಿ ವಿಮಲಃ ತೇಷಾಂ ಭವಮಲಾನಿ ಯಾಂತಿ ಊಢ್ವಾ ॥ ೧೮೯ ॥"

**ಅನ್ವಯಾರ್ಥಃ—ಜೇ**—ಯಾವ ಮಹಾಪುರುಷರು **ಪರಮಸಮಾಹಿಮಹಾಸರಹಿಂ**—ಪರಮಸಮಾಧಿಯೆಂಬ ದೊಡ್ಡ ಸರೋವರದಲ್ಲಿ **ಪಣಸೇವಿ**—ಪ್ರವೇಶಮಾಡಿ **ಬುಡ್ಡಹಿಂ**—ಮುಳುಗುತ್ತಾರೋ **ತಹಂ ಅಪ್ಪಾ**—ಅವರ ಆತ್ಮನು **ವಿಮಲು ಥಕ್ಕಇ**—ದ್ರವ್ಯಕರ್ಮ, ಭಾವಕರ್ಮ, ನೋಕರ್ಮರೂಪವಾದ ಮಲದಿಂದ ರಹಿತ(ನಿರ್ಮಲ)ನಾಗಿರುತ್ತಾನೆ. **ಭವಮಲ**—ಭವ(ಸಂಸಾರ)ರೂಪವಾದ ಮಲಕ್ಕೆ ಕಾರಣಭೂತಗಳಾದ **ಕರ್ಮ**ಗಳು **ವಹೇವಿ ಜಂತಿ**—ಹರಿದುಹೋಗುತ್ತವೆ ಅರ್ಥಾತ್ ಶುದ್ಧಾತ್ಮಪರಿಣಾಮ**ರೂಪ**ವಾದ ನೀರಿನ ಪ್ರವಾಹದಲ್ಲಿ ತೇಲಿಹೋಗುತ್ತವೆ.

**ಭಾವಾರ್ಥಃ**—ಪರಮಸಮಾಧಿಯೆಂಬ ದೊಡ್ಡ ಸರೋವರದಲ್ಲಿ ಮಗ್ನರಾದ (ಮುಳುಗಿರುವ) ಮಹಾಯೋಗಿಗಳ ಸಂಸಾರಕ್ಕೆ ಕಾರಣವಾದ ಕರ್ಮಮಲವು ಶುದ್ಧಾತ್ಮ**ಪರಿಣಾಮ**ರೂಪವಾದ ಜಲಪ್ರವಾಹದಲ್ಲಿ ತೇಲಿಹೋಗುತ್ತದೆ. ಅರ್ಥಾತ್ ಶುದ್ಧಾತ್ಮ**ಪರಿಣಾಮ**ದಿಂದ ಕರ್ಮಗಳು ನಾಶವಾಗುತ್ತವೆ. ಆದುದರಿಂದ ಅವರ ಆತ್ಮನು ಸಮಸ್ತ **ದ್ರ**ವ್ಯಕರ್ಮ, ಭಾವಕರ್ಮ, ನೋಕರ್ಮಗಳಿಂದ ರಹಿತನಾಗಿ ಪರಮನಿರ್ಮಲತೆಯನ್ನು **ಪಡೆಯು**ತ್ತಾನೆ.

**ಸಯುಲವಿಯಪ್ಪಹಂ ಜೋ ವಿಲಉ, ಪರಮಸಮಾಹಿ ಭಣಂತಿ ।**
**ತೇಣ ಸುಹಾಸುಹಭಾವಡಾ, ಮುಣಿ ಸಯುಲ ವಿ ಮೆಲ್ಲಂತಿ ॥ ೧೯೦ ॥**

"ಸಕಲವಿಕಲ್ಪಾನಾಂ ಯಃ ವಿಲಯಃ (ತಂ) ಪರಮಸಮಾಧಿಂ ಭಣಂತಿ ।
ತೇನ ಶುಭಾಶುಭಭಾವಾನ್ ಮುನಯಃ ಸಕಲಾನಪಿ ಮುಂಚಂತಿ ॥ ೧೯೦ ॥"

**ಅನ್ವಯಾರ್ಥಃ—ಸಯುಲವಿಯಪ್ಪಹಂ**—ಸಮಸ್ತ ವಿಕಲ್ಪಗಳ **ಜೋ ವಿಲಉ**—ಯಾವ ವಿಲಯ(ನಾಶ)ವಿರುವುದೋ ಅದನ್ನು **ಪರಮಸಮಾಹಿ ಭಣಂತಿ**—ಪರಮಸಮಾಧಿಯನ್ನಾಗಿ ಹೇಳುತ್ತಾರೆ. **ತೇಣ**—ಆ ಕಾರಣದಿಂದ **ಮುಣಿ**—ಮುನಿಗಳು **ಸಯುಲ ವಿ ಸುಹಾಸುಹಭಾವಡಾ**—ಸಮಸ್ತ ಶುಭಾಶುಭಭಾವಗಳನ್ನೂ **ಮೆಲ್ಲಂತಿ**—ಬಿಡುತ್ತಾರೆ.

**ಭಾವಾರ್ಥಃ**—ವೀತರಾಗಸರ್ವಜ್ಞದೇವರು ನಿರ್ವಿಕಲ್ಪಪರಮಾತ್ಮಸ್ವರೂಪಕ್ಕೆ ವ್ಯತಿರಿಕ್ತಗಳಾದ ಸಮಸ್ತ ಶುಭಾಶುಭಪರಿಣಾಮಗಳ ತ್ಯಾಗವೇ ವೀತರಾಗಪರಮಸಾಮಾಯಿಕರೂಪವಾದ ಪರಮಸಮಾಧಿಯೆಂದು ಹೇಳುತ್ತಾರೆ. ಅತಏವ ಪರಮಧ್ಯಾನ

ರತರಾದ ತಪೋಧನರು ಶುಭಾಶುಭಮನೋವಾಕ್ಕಾಯವ್ಯಾಪಾರರಹಿತವಾದ ಶುದ್ಧಾತ್ಮ ದ್ರವ್ಯಕ್ಕೆ ವಿಪರೀತಗಳಾದ ಸಮಸ್ತಶುಭಾಶುಭಪರಿಣಾಮ(ಭಾವ)ಗಳನ್ನು ಬಿಡುತ್ತಾರೆ. ಆದಕಾರಣ ಎಲೈ ಯೋಗಿಯೇ! ಎಂದಿನವರೆಗೆ ಜೀವನಲ್ಲಿ ಇಹಲೋಕಪರಲೋಕ ಸಂಬಂಧವಾದ ಆಶೆಯು ಕಿಂಚಿತ್ತಾದರೂ ಇರುವುದೋ ಅಂದಿನವರೆಗೆ ಆತನು ದುಃಖಿ ಯಾಗಿರುವನೆಂದು ತಿಳಿದು, ನೀನು ಸರ್ವಪರದ್ರವ್ಯಾಶಾರಹಿತನಾಗಿ ಕೇವಲ ಶುದ್ಧಾತ್ಮ ದ್ರವ್ಯಭಾವನೆಯನ್ನೇ ಮಾಡಬೇಕೆಂದಭಿಪ್ರಾಯವು. ಇದನ್ನೇ ಗ್ರಂಥಾಂತರದಲ್ಲಿ ಹೀಗೆ ಹೇಳಿದ್ದಾರೆ —"**ಆಸಾಪಿಸಾಯುಗಹಿಓ ಜೀವೋ ಪಾವೇಇ ದಾರುಣಂ ದುಕ್ಖಂ ಆಸಾ ಜಾಹಂ ಣಿಯತ್ತಾ ತಾಹಂ ಣಿಯತ್ತಾಇಂ ಸಯಲದುಕ್ಖಾಇಂ ॥**" ಅರ್ಥಾತ್ ಆಶೆಯೆಂಬ ಪಿಶಾಚದಿಂದ ಗ್ರಸ್ತನಾದ (ಹಿಡಿಯಲ್ಪಟ್ಟ) ಜೀವನು ಬಹಳ ಭಯಂಕರವಾದ ದುಃಖವನ್ನು ಹೊಂದುತ್ತಾನೆ. ಯಾವ ಮುನಿಗಳಿಂದ (ಅಥವಾ ಜೀವರಿಂದ) ಆಶೆಯು ಬಿಡಲ್ಪಟ್ಟಿದೆಯೋ ಅವರು ಸರ್ವದುಃಖಗಳಿಂದ ಬಿಡಲ್ಪಟ್ಟವ ರಾಗಿರುತ್ತಾರೆ. ಏಕೆಂದರೆ ಆಶೆಯೇ ದುಃಖದ ಮೂಲವೆಂದು ಭಾವವು.

**ಘೋರು ಕರಂತು ವಿ ತವಚರಣು, ಸಯಲ ವಿ ಸತ್ಥ ಮುಣಂತು ।**
**ಪರಮ ಸಮಾಹಿವಿವಜ್ಜಿಯಉ, ಣವಿ ದೆಕ್ಖಇ ಸಿವ ಸಂತು ॥ ೧೯೧ ॥**

"ಘೋರಂ ಕುರ್ವನ್ ಅಪಿ ತಪಶ್ಚರಣಂ ಸಕಲಾನ್ಯಪಿ ಶಾಸ್ತ್ರಾಣಿ ಜಾನನ್ ।
ಪರಮಸಮಾಧಿವಿವರ್ಜಿತಃ ನೈವ ಪಶ್ಯತಿ ಶಿವಂ ಶಾಂತಮ್ ॥ ೧೯೧ ॥"

**ಅನ್ವಯಾರ್ಥ:**— **ಪರಮಸಮಾಹಿವಿವಜ್ಜಿಯಉ**— ಪರಮಸಮಾಧಿಯಿಂದ ರಹಿತನಾದ ಜೀವನು **ಘೋರು ತವಚರಣು**— ಘೋರ(ದುರ್ಧರ)ವಾದ ತಪಶ್ಚರಣೆ ಯನ್ನು **ಕರಂತು ವಿ**— ಮಾಡುವವನಾಗಿದ್ದರೂ **ಸಯಲ ಸತ್ಥ**— ಸಮಸ್ತ ಶಾಸ್ತ್ರ ಗಳನ್ನು **ಮುಣಂತು ವಿ**— ತಿಳಿಯುವವನಾಗಿದ್ದರೂ **ಸಂತು ಸಿಉ**— ಪರಮಶಾಂತನಾದ ಶುದ್ಧಾತ್ಮನನ್ನು **ಣವಿ ದೆಕ್ಖಇ**— ನಿಶ್ಚಯವಾಗಿಯೂ ನೋಡುವುದಿಲ್ಲ.

**ಭಾವಾರ್ಥ:**— ಶೀತಕಾಲ (ಚಳಿಗಾಲ)ದಲ್ಲಿ ನದಿಯ ದಡದಲ್ಲಿಯೂ ಗ್ರೀಷ್ಮ ಕಾಲ (ಬೇಸಿಗೆ)ಯಲ್ಲಿ ಪರ್ವತದ ಶಿಖರದಲ್ಲಿಯೂ ವರ್ಷಾಕಾಲ (ಮಳೆಗಾಲ)ದಲ್ಲಿ ವೃಕ್ಷದ ಬುಡದಲ್ಲಿಯೂ ಘೋರತಪಶ್ಚರಣೆಯನ್ನು ಮಾಡುವ ಹಾಗೂ ಸಮಸ್ತಶಾಸ್ತ್ರಗಳ ರಹಸ್ಯವನ್ನರಿತಿರುವ ತಪಸ್ವಿಯು ಸಹ ಪರಮಸಮಾಧಿರಹಿತನಾಗಿದ್ದುದಾದರೆ ಆತನು ರಾಗದ್ವೇಷಮೋಹರಹಿತನಾಗಿರುವುದರಿಂದ ಪರಮಶಾಂತ (ಪರಮೋಪಶಮರೂಪ)ನೂ ವಿಶುದ್ಧಜ್ಞಾನದರ್ಶನಸ್ವಭಾವವುಳ್ಳವನೂ ಆದ ಶಿವನೆಂದು ಹೇಳಲ್ಪಡುವ ಪರಮಾತ್ಮ ನನ್ನು (ಆತನು ತನ್ನ ಶರೀರದಲ್ಲಿರುತ್ತಿದ್ದರೂ) ನೋಡಲಾರನು. ಹೀಗೆಯೇ "**ಪರ ಮಾನಂದ ಸ್ತೋತ್ರ**"ದಲ್ಲಿಯೂ ಹೇಳಿದ್ದಾರೆ:—"**ಆನಂದಂ ಬ್ರಹ್ಮಣೋ ರೂಪಂ, ನಿಜದೇಹೇ ವ್ಯವಸ್ಥಿತಮ್ । ಧ್ಯಾನಹೀನಾ ನ ಪಶ್ಯಂತಿ, ಜಾತ್ಯಂಧಾ ಇವ ಭಾಸ್ಕರಮ್ ॥**" ಅರ್ಥಾತ್ ಜಾತ್ಯಂಧ (ಜನ್ಮಾಂಧ=ಹುಟ್ಟುಕುರುಡ)ರು ಸೂರ್ಯನನ್ನು ಕಾಣಲಸಮರ್ಥರಾಗಿರುವಂತೆ ಧ್ಯಾನದಿಂದ ಅರ್ಥಾತ್ ನಿರ್ವಿಕಲ್ಪಸಮಾಧಿಯಿಂದ

ರಹಿತರಾದ ಜೀವರು ತಮ್ಮ ದೇಹದಲ್ಲಿರುವ ಪರಮಾನಂದಮಯನಾದ ಪರಬ್ರಹ್ಮ (ನಿಜಶುದ್ಧಾತ್ಮ)ನ ಸ್ವರೂಪವನ್ನು ಕಾಣಲಾರರು (ಕಾಣಲಸಮರ್ಥರಾಗಿರುವರು). ಅತಏವ ಸಮಾಧಿಯಿಂದಲೇ ಸ್ವಶುದ್ಧಾತ್ಮದರ್ಶನವುಂಟಾಗುತ್ತದೆಂದು ಭಾವವು.

**ವಿಸಯಕಸಾಯ ವಿ ಣಿದ್ದಲಿವಿ, ಜೇ ಣ ಸಮಾಹಿ ಕರಂತಿ ।**
**ತೇ ಪರಮಪ್ಪಹಂ ಜೋಇಯಾ, ಣವಿ ಆರಾಹಯ ಹೊಂತಿ ॥ ೧೯೨ ॥**

"ವಿಷಯಕಷಾಯಾನಪಿ ನಿರ್ದಲ್ಯ ಯೇ ನ ಸಮಾಧಿಂ ಕುರ್ವಂತಿ ।
ತೇ ಪರಮಾತ್ಮನಃ ಯೋಗಿನ್ ನೈವ ಆರಾಧಕಾ ಭವಂತಿ ॥ ೧೯೨ ॥"

**ಅನ್ವಯಾರ್ಥ:—ಜೋಇಯಾ**—ಎಲೈ ಯೋಗಿಯೇ! **ಜೇ**—ಯಾರು **ವಿಸಯಕಸಾಯ ವಿ**—ವಿಷಯಕಷಾಯಗಳನ್ನೂ **ಣಿದ್ದಲಿವಿ**—ನಿರ್ಮೂಲಿಸಿ (ನಾಶಗೊಳಿಸಿ) **ಸಮಾಹಿ ಣ ಕರಂತಿ**—ಸಮಾಧಿಯನ್ನು ಮಾಡುವುದಿಲ್ಲವೋ ಅರ್ಥಾತ್ ಸಮಾಧಿಯಲ್ಲಾಸಕ್ತ(ಮಗ್ನ)ರಾಗುವುದಿಲ್ಲವೋ **ತೇ**—ಅವರು **ಪರಮಪ್ಪಹಂ ಆರಾಹಯ**—ಪರಮಾತ್ಮನ ಆರಾಧಕರಾಗಿ **ಣವಿ ಹೊಂತಿ**—ಆಗುವುದಿಲ್ಲ.

**ಭಾವಾರ್ಥ:**—ಯಾವ ಜೀವರು ಶುದ್ಧಾತ್ಮತತ್ತ್ವಕ್ಕೆ ವಿಪರೀತವಾದ ಸಮಸ್ತ ವಿಷಯಕಷಾಯಗಳನ್ನು ತ್ಯಾಗಮಾಡಿ ತ್ರಿಗುಪ್ತಿರೂಪಪರಮಸಮಾಧಿಯಲ್ಲಿ ತಲ್ಲೀನರಾಗುವುದಿಲ್ಲವೋ ಆ ಜೀವರು ನಿಶ್ಚಯವಾಗಿಯೂ ನಿರ್ದೋಷಪರಮಾತ್ಮನನ್ನು ಆರಾಧಿಸುವವರಾಗಿರುವುದಿಲ್ಲ. ಅತಏವ **"ವೈರಾಗ್ಯಂ ತತ್ತ್ವವಿಜ್ಞಾನಂ, ನೈರ್ಗ್ರಂಥ್ಯಂ ವಶಚಿತ್ತತಾ । ಪರೀಷಹಜಯತ್ವಂ ಚ, ಪಂಚೈತೇ ಧ್ಯಾನಹೇತವಃ ॥"** ಎಂಬ ಗ್ರಂಥಾಂತರದಲ್ಲಿ ಹೇಳಿರುವಂತೆ ವಿಷಯಕಷಾಯಗಳ ನಿವೃತ್ತಿಯಿಂದ ಶುದ್ಧಾತ್ಮಾನುಭೂತಿರೂಪವಾದ **"ವೈರಾಗ್ಯ"**ವು, ಶುದ್ಧಾತ್ಮೋಪಲಬ್ಧಿರೂಪವಾದ **"ತತ್ತ್ವವಿಜ್ಞಾನ"**ವು, ಬಾಹ್ಯಾಭ್ಯಂತರಪರಿಗ್ರಹತ್ಯಾಗರೂಪ **"ನೈರ್ಗ್ರಂಥ್ಯ"**ವು, ನಿಶ್ಚಿಂತ(ಚಿಂತಾರಹಿತ) ಆತ್ಮಾನುಭೂತಿರೂಪವಾದ **"ಜಿತಚಿತ್ತತೆ"**ಯು ಅರ್ಥಾತ್ ಮನಸ್ಸಿನ ಜಯವು ಮತ್ತು ವೀತರಾಗ ನಿರ್ವಿಕಲ್ಪಸಮಾಧಿಗೆ ಬಾಹ್ಯಸಹಕಾರಿಯಾದ **"ಪರೀಷಹಜಯ"**ವು ಅರ್ಥಾತ್ ಕ್ಷುತ್ಪಿಪಾಸಾದಿ ಪರೀಷಹಗಳನ್ನು ಜಯಿಸುವಿಕೆಯು ಈ ಐದುವಿಧವಾದ ಧ್ಯಾನದ ಕಾರಣಗಳನ್ನು ತಿಳಿದು ಪರಿಭಾವಿಸಿ ಧ್ಯಾನ(ಸಮಾಧಿ)ದಲ್ಲಿ ಮಗ್ನನಾಗಬೇಕೆಂದೂ ಹಾಗೆ ಧ್ಯಾನಮಗ್ನನಾದ ಜೀವನೇ ಪರಮಾತ್ಮಾರಾಧಕನಾಗುತ್ತಾನೆಂದೂ ಭಾವಾರ್ಥವು.

**ಪರಮಸಮಾಹಿ ಧರೇವಿ ಮುಣಿ, ಜೇ ಪರಬಂಭು ಣ ಜಂತಿ ।**
**ತೇ ಭವದುಕ್ಖಇಂ ಬಹುವಿಹಇಂ, ಕಾಲು ಅಣಂತು ಸಹಂತಿ ॥ ೧೯೩ ॥**

"ಪರಮಸಮಾಧಿಂ ಧೃತ್ವಾಪಿ ಮುನಯಃ ಯೇ ಪರಬ್ರಹ್ಮ ನ ಯಾಂತಿ ।
ತೇ ಭವದುಃಖಾನಿ ಬಹುವಿಧಾನಿ ಕಾಲಂ ಅನಂತಂ ಸಹಂತೇ ॥ ೧೯೩ ॥"

**ಅನ್ವಯಾರ್ಥ:—ಜೇ ಮುಣಿ**—ಯಾವ ಮುನಿಗಳು **ಪರಮಸಮಾಹಿ ಧರೇವಿ**—ಪರಮಸಮಾಧಿಯನ್ನು ಧರಿಸಿಯೂ **ಪರಬಂಭು ಣ ಜಂತಿ**—ಪರಬ್ರಹ್ಮ (ನಿಜ

ದೇಹಸ್ಥ ಪರಮಾತ್ಮಸ್ವರೂಪ) ವನ್ನು ಹೊಂದುವುದಿಲ್ಲವೋ ಅರ್ಥಾತ್ ತಿಳಿಯುವುದಿಲ್ಲವೋ **ತೇ**— ಅವರು(ಆ ಮುನಿಗಳು) **ಅಣಂತು ಕಾಲು**— ಅನಂತಕಾಲದ ವರೆಗೆ **ಬಹುವಿಹಇಂ ಭವದುಕ್ಖಇಂ** – ಅನೇಕವಿಧವಾದ ಸಂಸಾರದುಃಖಗಳನ್ನು **ಸಹಂತಿ** ಸಹಿಸು(ಅನುಭವಿಸು)ತ್ತಾರೆ

**ಭಾವಾರ್ಥ:**— ಯಾವ ಪುರುಷರು ಮುನಿಗಳಾಗಿದ್ದರೂ ವೀತರಾಗಚಿದಾನಂದೈಕರೂಪವಾದ ಪರಮಸಮಾಧಿಯಲ್ಲಿ ಮಗ್ನರಾಗಿ ತಮ್ಮ ದೇಹದಲ್ಲಿರುವ ಕೇವಲಜ್ಞಾನಾದ್ಯನಂತಗುಣಸ್ವಭಾವವುಳ್ಳ ಪರಮಾತ್ಮಸ್ವರೂಪವನ್ನು ಹೊಂದುವುದಿಲ್ಲವೋ, ಪೂರ್ವೋಕ್ತಶುದ್ಧಾತ್ಮಭಾವನಾರಹಿತರಾದ ಆ ಪುರುಷರು ಶಾರೀರಮಾನಸಾದಿಭೇದದಿಂದ ಬಹುವಿಧವಾದ ನರನಾರಕಾದಿಭವದುಃಖಗಳನ್ನು ಅನಂತಕಾಲದವರೆಗೆ ಅನುಭವಿಸುತ್ತಾರೆ ಅತಏವ ರಾಗದ್ವೇಷಾದಿಸಮಸ್ತವಿಭಾವಗಳನ್ನು ತೊರೆದು ನಿಜಶುದ್ಧಾತ್ಮಭಾವನೆಯಲ್ಲಾಸಕ್ತನಾಗಬೇಕೆಂದು ತಾತ್ಪರ್ಯವು

**ಜಾವಉ ಸುಹಾಸುಹಭಾವಡಾ, ಣವಿ ಸಯಲ ವಿ ತುಟ್ಟಂತಿ ।**
**ಪರಮಸಮಾಹಿ ಣ ತಾವಉ ಮಣಿ, ಕೇವುಲಿ ಏಮಉ ಭಣಂತಿ ॥ ೧೯೪ ॥**

"ಯಾವತ್ ಶುಭಾಶುಭಭಾವಾಃ ನೈವ ಸಕಲಾ ಅಪಿ ತ್ರುಟ್ಯಂತಿ ।
ಪರಮಸಮಾಧಿರ್ನ ತಾವತ್ ಮನಸಿ ಕೇವಲಿನ ಏವಂ ಭಣಂತಿ ॥ ೧೯೪ ॥"

**ಅನ್ವಯಾರ್ಥ:**— **ಜಾವಉ**— ಎಂದಿನವರೆಗೆ **ಸಯಲ ವಿ**— ಸಮಸ್ತವಾದ **ಸುಹಾಸುಹಭಾವಡಾ**— ಶುಭಾಶುಭಭಾವ(ಪರಿಣಾಮ)ಗಳು **ಣವಿ ತುಟ್ಟಂತಿ**– ನಿಶ್ಶೇಷವಾಗಿ ಪೂರ್ಣ(ನಾಶ)ವಾಗುವುದಿಲ್ಲವೋ **ತಾವಉ**— ಅಂದಿನವರೆಗೆ(ಅಷ್ಟುಕಾಲದವರೆಗೆ) **ಮಣಿ**— ಮನಸ್ಸಿನಲ್ಲಿ **ಪರಮಸಮಾಹಿ ಣ**— ಪರಮಸಮಾಧಿಯುಂಟಾಗಲಾರದು **ಏಮಉ ಕೇವುಲಿ ಭಣಂತಿ**— ಹೀಗೆಂದು ಕೇವಲಿಗಳು(ವೀತರಾಗಸರ್ವಜ್ಞರು) ಹೇಳುತ್ತಾರೆ

**ಭಾವಾರ್ಥ:**— ಎಷ್ಟುಕಾಲದವರೆಗೆ ಪರಮಾತ್ಮದ್ರವ್ಯದಿಂದ ವಿಪರೀತಗಳಾದ ಸಮಸ್ತಶುಭಾಶುಭಪರಿಣಾಮಗಳು ಈ ಜೀವನ ಹೃದಯದಿಂದ ದೂರವಾಗುವುದಿಲ್ಲವೋ ಅಷ್ಟುಕಾಲದವರೆಗೆ ಆತನ ಮನಸ್ಸಿನಲ್ಲಿ ಶುದ್ಧೋಪಯೋಗಲಕ್ಷಣವುಳ್ಳ ಪರಮಸಮಾಧಿಯು ಉಂಟಾಗಲಾರದೆಂದು ವೀತರಾಗಸರ್ವಜ್ಞದೇವರು ಹೇಳುತ್ತಾರೆಂದು ಭಾವವು

ಹೀಗೆ ಪರಮಸಮಾಧಿಯನ್ನು ನಿರೂಪಿಸುವ ಆರುಸೂತ್ರಗಳು ಮುಗಿದುವು

ಮುಂದೆ ಅರ್ಹದವಸ್ಥೆಯನ್ನು ಪ್ರತಿಪಾದಿಸುವ ಮುಖ್ಯತೆಯಿಂದ ಮೂರು ಸೂತ್ರಗಳು ಹೇಳಲ್ಪಡುತ್ತವೆ:—

**ಸಯಲವಿಯಪ್ಪಹಂ ತುಟ್ಟಾಹಂ, ಸಿವಪಯಮಗ್ಗಿ ವಸಂತು ।**
**ಕಮ್ಮಚಉಕ್ಕಇ ವಿಲಉ ಗಇ, ಅಪ್ಪಾ ಹುಇ ಅರಹಂತು ॥ ೧೯೫ ॥**

"ನಕಲವಿಕಲ್ಪಾನಾಂ ತ್ರುಟ್ಯತಾಂ ಶಿವಪದಮಾರ್ಗೇ ವಸನ್ ।
ಕರ್ಮಚತುಷ್ಟೇ ವಿಲಯಂ ಗತೇ ಆತ್ಮಾ ಭವತಿ ಅರ್ಹನ್ ॥ ೧೯೫ ॥"

**ಅನ್ವಯಾರ್ಥ:— ಸಯಲವಿಯಪ್ಪಹಂ**— ಸಮಸ್ತ ವಿಕಲ್ಪಗಳು **ತುಟ್ಟಾಹಂ**— ನಾಶವಾಗುತ್ತಿರಲು **ಸಿವಪಯಮಗ್ಗಿ**— ಶಿವಪದವಿ(ಮೋಕ್ಷಪದವಿ)ಯ ಮಾರ್ಗ(ರತ್ನ ತ್ರಯ)ದಲ್ಲಿ **ವಸಂತು**— ನಿಶ್ಚಲನಾಗಿರುವ **ಅಪ್ಪಾ**— ಆತ್ಮನು **ಕಮ್ಮಚಉಕ್ಕಇ**— ನಾಲ್ಕು ಘಾತಿಕರ್ಮಗಳು **ವಿಲಉ ಗಇ**— ನಾಶವಾಗುತ್ತಿರಲು **ಹುಇ ಅರಹಂತು**— ಅರಹಂತ(ಜಿನ)ನಾಗುತ್ತಾನೆ.

**ಭಾವಾರ್ಥ:**— ಸಮಸ್ತರಾಗಾದಿವಿಕಲ್ಪಗಳು ನಾಶವಾಗುತ್ತಿರಲು ನಿಶ್ಚಯಸಮ್ಯಗ್ದರ್ಶನ-ಜ್ಞಾನ-ಚಾರಿತ್ರರೂಪವಾದ ಮೋಕ್ಷಮಾರ್ಗದಲ್ಲಿ ಸ್ಥಿರತೆಯನ್ನು ಹೊಂದಿರುವ ಆತ್ಮನಿಗೆ ಆತನಲ್ಲಿರುವ ಜ್ಞಾನಾವರಣ, ದರ್ಶನಾವರಣ, ಮೋಹನೀಯ ಮತ್ತು ಅಂತರಾಯಗಳೆಂಬ ನಾಲ್ಕು "ಘಾತಿಕರ್ಮ"ಗಳು ನಾಶವಾಗುತ್ತಿರಲು ಅರ್ಹತ್ಪದವಿಯು ಪ್ರಾಪ್ತವಾಗುತ್ತದೆ. ಇಲ್ಲಿ "ಅರ(ರಿ)ಹಂತ" ಎಂಬ ಶಬ್ದಕ್ಕೆ **"ಅರಿರ್ಮೋಹನೀಯಂ ಕರ್ಮ ತಸ್ಯ ಹನನಾತ್, ರಜಸೀ ಜ್ಞಾನದರ್ಶನಾವರಣೇ ತಯೋರಪಿ ಹನನಾತ್, ರಹಸ್ಯಶಬ್ದೇನಾಂತರಾಯಃ ತದಭಾವಾಚ್ಚ, ದೇವೇಂದ್ರಾದಿವಿನಿರ್ಮಿತಾಮತಿಶಯವತೀಂ ಪೂಜಾಮರ್ಹತೀತಿ ಅರ್ಹನ್"** ಅರ್ಥಾತ್ ಮೋಹನೀಯ ಕರ್ಮವನ್ನು ಘಾತಿಸಿದವ(ನಾಶಮಾಡಿದವ)ನೆಂದೂ, ಜ್ಞಾನದರ್ಶನಾವರಣಕರ್ಮಗಳನ್ನು ನಾಶಮಾಡಿದವನೆಂದೂ, ಅಂತರಾಯಕರ್ಮವನ್ನು ನಾಶಮಾಡಿದವನೆಂದೂ, ದೇವೇಂದ್ರಾದಿಗಳಿಂದ ರಚಿಸಲ್ಪಟ್ಟ ಅತಿಶಯವಾದ ಪೂಜೆಗೆ ಪಾತ್ರ(ಯೋಗ್ಯ)ನಾದವನೆಂದೂ ಅರ್ಥವು. ಆತ್ಮನ ಜ್ಞಾನಾದಿಗುಣಗಳನ್ನು ಘಾತಿಸುವ (ಕೆಡಿಸುವ)ಕರ್ಮಗಳಿಗೆ ಘಾತಿಕರ್ಮಗಳೆಂದು ಹೆಸರು ಪೂರ್ವೋಕ್ತಜ್ಞಾನಾವರಣಾದಿ ನಾಲ್ಕು ಕರ್ಮಗಳು ಆತ್ಮನ ಜ್ಞಾನಾದಿಗುಣಗಳನ್ನು ಘಾತಿಸುವುದರಿಂದ ಅವು "ಘಾತಿಕರ್ಮ"ಗಳಾಗಿವೆ. ಶ್ರೀ ನೇಮಿಚಂದ್ರಸಿದ್ಧಾಂತಚಕ್ರವರ್ತಿಗಳು **"ದ್ರವ್ಯಸಂಗ್ರಹ"**ದಲ್ಲಿ ಅರ್ಹತ್ಪರಮೇಷ್ಠಿಗಳ ಸ್ವರೂಪವನ್ನು ಹೀಗೆ ಹೇಳಿರುವರು:—*"**ಣಟ್ಠಚದುಘಾಇಕಮ್ಮೋ, ದಂಸಣಸುಹಣಾಣವೀರಿಯಮಈಓ । ಸುಹದೇಹತ್ಥೋ ಅಪ್ಪಾ, ಸುದ್ಧೋ ಅರಿಹೋ ವಿಚಿಂತಿಜ್ಜೋ ॥**" ಅರ್ಥಾತ್ "ಜ್ಞಾನಾವರಣಾದಿ ನಾಲ್ಕು ಘಾತಿಕರ್ಮಗಳನ್ನು ನಾಶಮಾಡಿದವನೂ ಅನಂತದರ್ಶನ ಅನಂತಸುಖ ಅನಂತಜ್ಞಾನ ಅನಂತವೀರ್ಯಗಳೆಂಬ ಅನಂತಚತುಷ್ಟಯಮಯನೂ ಸಪ್ತಧಾತು— ಮಲರಹಿತವಾದ ಪರಮೌದಾರಿಕ ಶುಭದೇಹದಲ್ಲಿರುವವನೂ ಕ್ಷುಧಾ, ತೃಷಾ, ಭಯ, ದ್ವೇಷ, ರಾಗ, ಮೋಹ, ಚಿಂತಾ, ಜರಾ, ರೋಗ, ಮರಣ, ಸ್ವೇದ, ಖೇದ, ಮದ, ಅರತಿ, ವಿಸ್ಮಯ, ಜನನ, ನಿದ್ರಾ ಮತ್ತು ವಿಷಾದಗಳೆಂಬೀ ಹದಿನೆಂಟು ದೋಷಗಳಿಂದ ನಿರ್ಮುಕ್ತನೂ ಆದ ಶುದ್ಧಾತ್ಮ

---

***ದ್ರವ್ಯಸಂಗ್ರಹ, ಗಾಥೆ—೫೦.**

ನಿಗೆ ಅರಹಂತ ಅಥವಾ ಅರ್ಹತ್ಪರಮೇಷ್ಠಿಯೆಂದು ಹೆಸರು. ಇಂತಹ ಪರಿಶುದ್ಧಾತ್ಮನು ಯೋಗಿಗಳಿಂದ ಧ್ಯಾನಿಸಲ್ಪಡಲು ಯೋಗ್ಯನಾಗಿರುವನು."

**ಕೇವಲಣಾಣೆಂ ಅಣವರಉ, ಲೋಯಾಲೋಉ ಮುಣಂತು ।**
**ಣಿಯಮೇಂ ಪರಮಾಣಂದಮಉ, ಅಪ್ಪಾ ಹುಇ ಅರಹಂತು ॥ ೧೯೬ ॥**

"ಕೇವಲಜ್ಞಾನೇನ ಅನವರತಂ ಲೋಕಾಲೋಕಂ ಜಾನನ್ ।
ನಿಯಮೇನ ಪರಮಾನಂದಮಯಃ ಆತ್ಮಾ ಭವತಿ ಅರ್ಹನ್ ॥ ೧೯೬ ॥"

**ಅನ್ವಯಾರ್ಥ:**— **ಕೇವಲಣಾಣೆಂ**–ಕೇವಲಜ್ಞಾನದಿಂದ **ಲೋಯಾಲೋಉ**–ಲೋಕಾಲೋಕಗಳನ್ನು **ಅಣವರಉ ಮುಣಂತು**— ನಿರಂತರ ತಿಳಿಯುತ್ತಿರುವ **ಪರಮಾಣಂದಮಉ ಅಪ್ಪಾ**— ಪರಮಾನಂದಮಯನಾದ ಆತ್ಮನು **ಣಿಯಮೇಂ**— ನಿಶ್ಚಯದಿಂದ **ಅರಹಂತು ಹುಇ**— ಅರಹಂತನಾಗಿರುತ್ತಾನೆ.

**ಭಾವಾರ್ಥ:**— ಲೋಕಾಲೋಕಗಳಲ್ಲಿರುವ ಸಮಸ್ತ ದ್ರವ್ಯಗಳನ್ನೂ ಅವುಗಳ ತ್ರಿಕಾಲಗೋಚರವಾದ ಅನಂತಪರ್ಯಾಯಗಳನ್ನೂ ಕ್ರಮಕರಣವ್ಯವಧಾನರಹಿತವಾಗಿ (ಏಕಕಾಲದಲ್ಲಿ) ನಿರಂತರ ತಿಳಿಯುತ್ತಿರುವ ಕೇವಲಜ್ಞಾನವುಳ್ಳ ಆತ್ಮನಿಗೆ ಸರ್ವಜ್ಞನೆಂದು ಹೆಸರು. ಅಂತಹ ಸರ್ವಜ್ಞನೂ ವೀತರಾಗಪರಮಸಮರಸೀಭಾವರೂಪವಾದ ಪರಮಾನಂದಮಯನೂ ಆದ ಆತ್ಮನು ಪೂರ್ವೋಕ್ತಲಕ್ಷಣವುಳ್ಳ ಅರಹಂತನಾಗಿರುತ್ತಾನೆ. ಇದರಲ್ಲಿ ಸಂದೇಹವಿಲ್ಲವೆಂದು ಭಾವವು. ಸರ್ವಜ್ಞನ ಲಕ್ಷಣವನ್ನು ಗ್ರಂಥಾಂತರದಲ್ಲಿ ಹೀಗೆ ಹೇಳಿದ್ದಾರೆ— "**ಯಃ ಸರ್ವಾಣಿ ಚರಾಚರಾಣಿ ವಿವಿಧದ್ರವ್ಯಾಣಿ ತೇಷಾಂ ಗುಣಾನ್ । ಪರ್ಯಾಯಾನಪಿ ಭೂತಭಾವಿಭವತಃ ಸರ್ವಾನ್ ಸದಾ ಸರ್ವದಾ ॥ ಜಾನೀತೇ ಯುಗಪತ್ಪ್ರತಿಕ್ಷಣಮತಃ ಸರ್ವಜ್ಞ ಇತ್ಯುಚ್ಯತೇ**" ಅರ್ಥಾತ್ ಯಾವನು ಚರಾಚರರೂಪವಾದ ಸರ್ವದ್ರವ್ಯಗಳನ್ನೂ ಅವುಗಳ ಗುಣಗಳನ್ನೂ ಮತ್ತು ಅವುಗಳ ಭೂತಭವಿಷ್ಯದ್ವರ್ತಮಾನಕಾಲಸಂಬಂಧವಾದ ಸಮಸ್ತ ಪರ್ಯಾಯಗಳನ್ನೂ ಸರ್ವಕಾಲದಲ್ಲಿಯೂ ಪ್ರತಿಕ್ಷಣದಲ್ಲಿಯೂ ಏಕಕಾಲದಲ್ಲಿ (ಕ್ರಮವ್ಯವಧಾನಗಳಿಲ್ಲದೆ) ತಿಳಿಯುತ್ತಾನೋ ಅವನು "ಸರ್ವಜ್ಞ"ನೆಂದು ಹೇಳಲ್ಪಡುತ್ತಾನೆ. ಅಂತಹ ಸರ್ವಜ್ಞನೇ ಅರ್ಹತ್ಪರಮೇಷ್ಠಿಯೆಂದಭಿಪ್ರಾಯವು.

**ಜೋ ಜಿಣು ಕೇವಲಣಾಣಮಉ, ಪರಮಾಣಂದಸಹಾಉ ।**
**ಸೋ ಪರಮಪ್ಪಉ ಪರಮಪರು, ಸೋ ಜಿಯ ಅಪ್ಪಸಹಾಉ ॥ ೧೯೭ ॥**

"ಯಃ ಜಿನಃ ಕೇವಲಜ್ಞಾನಮಯಃ ಪರಮಾನಂದಸ್ವಭಾವಃ ।
ಸಃ ಪರಮಾತ್ಮಾ ಪರಮಪರಃ ಸ ಜೀವ ಆತ್ಮಸ್ವಭಾವಃ ॥ ೧೯೭ ॥"

**ಅನ್ವಯಾರ್ಥ:**— **ಜೋ ಜಿಣು**— ಯಾವ ಜಿನನು **ಕೇವಲಣಾಣಮಉ**— ಕೇವಲಜ್ಞಾನಮಯನೂ (ಉಪಲಕ್ಷಣದಿಂದ ಕೇವಲಜ್ಞಾನಾದ್ಯನಂತಗುಣಮಯನೂ) **ಪರಮಾನಂದಸಹಾಉ**— ಇಂದ್ರಿಯವಿಷಯಾತೀತವಾದ ಆತ್ಮೀಯಪರಮಾನಂದಸ್ವ

ಭಾವವುಳ್ಳನಸೂ ಆಗಿರುವನೋ **ಸೋ ಪರಮಪ್ಪಉ**— ಆ ಪರಮಾತ್ಮ (ಜಿನ)ನು **ಪರಮಪರು**— ಅನಂತಚತುಷ್ಟಯಾದಿ-ವಿಭೂತಿಸಹಿತನೂ ಸರ್ವಸಂಸಾರಿಜೀವರುಗಳಿಂದ ಉತ್ಕೃಷ್ಟನೂ ಆಗಿರುತ್ತಾನೆ **ಜಿಯ**— ಜೀವನೇ! **ಸೋ**— ಅದು **ಅಪ್ಪಸಹಾಉ**— ಆತ್ಮನ ಸ್ವಭಾವವು.

**ಭಾವಾರ್ಥ:**- ಸಂಸಾರಪರಿಭ್ರಮಣೆಗೆ ಕಾರಣಗಳಾದ ಜ್ಞಾನಾವರಣಾದಿ ಕರ್ಮಗಳೆಂಬ ಶತ್ರುಗಳನ್ನು ಜಯಿಸಿದವನಿಗೆ "ಜಿನ"ನೆಂದು ಹೆಸರು ಜಿನನಿಗೆ ಅರಹಂತ, ಕೇವಲಿ, ಜೀವನ್ಮುಕ್ತ, ಭಾವಮುಕ್ತ, ವೀತರಾಗ ಹಾಗೂ ಸರ್ವಜ್ಞಮೊದಲಾದ ಅನೇಕ ಹೆಸರುಗಳಿರುತ್ತವೆ ಹಾಗೆಯೇ ಅರಹಂತಾವಸ್ಥೆಗೂ ಅರ್ಹತ್ಪದ, ಭಾವಮೋಕ್ಷ, ಜೀವನ್ಮೋಕ್ಷ, ಕೇವಲೋತ್ಪತ್ತಿಮೊದಲಾದ ಹೆಸರುಗಳಿರುತ್ತವೆ. ಹೀಗೆ ಘಾತಿಕರ್ಮರಹಿತನೂ ಕೇವಲಜ್ಞಾನಾದ್ಯನಂತಗುಣಸ್ವರೂಪನೂ ಪರಮಾನಂದಮಯನೂ ಆದ ಜಿನನು (ಪರಮಾತ್ಮನು) ಸರ್ವಸಂಸಾರಿಜೀವರುಗಳಿಂದ ಪರಮೋತ್ಕೃಷ್ಟನಾಗಿರುತ್ತಾನೆಂದಭಿಪ್ರಾಯವು ಜೀವರು ಸಂಸಾರಾವಸ್ಥೆಯಲ್ಲಿ ಶಕ್ತಿರೂಪದಿಂದಲೂ ಕೇವಲಜ್ಞಾನಾವಸ್ಥೆಯಲ್ಲಿ ವ್ಯಕ್ತಿರೂಪದಿಂದಲೂ ಜಿನರಾಗಿರುತ್ತಾರೆಂದು ತಿಳಿಯಬೇಕು. ಪರಂತು ನಿಶ್ಚಯನಯದಿಂದ ಎಲ್ಲ ಜೀವರೂ ಜಿನಸ್ವರೂಪರಾಗಿರುತ್ತಾರೆ ಹಾಗೂ ಜಿನನ ಸರ್ವಜೀವಸ್ವರೂಪನಾಗಿರುತ್ತಾನೆ ಇದನ್ನೇ ಗ್ರಂಥಾಂತರದಲ್ಲಿ ಹೀಗೆ ಹೇಳಿದ್ದಾರೆ —"**ಜೀವಾ ಜಿಣವರ ಜೋ ಮುಣಇ, ಜಿಣವರ ಜೀವ ಮುಣೇಇ । ಸೋ ಸಮಭಾವಿ ಪರಿಟ್ಠಿಯಉ, ಲಹು ಣಿವ್ವಾಣು ಲಹೇಇ ॥**" ಅರ್ಥಾತ್ ಜಿನೋತ್ತಮರು ಯಾವ ಜೀವರುಗಳನ್ನು ತಿಳಿಯುತ್ತಾರೋ ಆ ಜೀವರುಗಳೂ ಜಿನರನ್ನು (ನಿಶ್ಚಯನಯದಿಂದ) ತಿಳಿಯುತ್ತಾರೆ. ಅರ್ಥಾತ್ ಜೀವರು ಹಾಗೂ ಜಿನ(ಪರಮಾತ್ಮ)ರೊಳಗೆ ಜಾತಿಭೇದವಿರುವುದಿಲ್ಲ. ಹೀಗೆ ದ್ರವ್ಯಾರ್ಥಿಕನಯದಿಂದ ಜೀವ ಜಿನರಲ್ಲಿ ಅಥವಾ ಆತ್ಮ-ಪರಮಾತ್ಮರಲ್ಲಿ ಅಭೇದವನ್ನು ತಿಳಿಯುವ ಮಹಾಮುನಿಗಳು ಶೀಘ್ರತಃ ನಿರ್ವಾಣ(ಮೋಕ್ಷ)ವನ್ನು ಪಡೆಯುತ್ತಾರೆ ಹೀಗೆ ಸರ್ವಜೀವರು ಶಕ್ತ್ಯಪೇಕ್ಷೆಯಿಂದ ಜಿನ(ಪರಮಾತ್ಮ)ರಾಗಿರುವುದು ವಸ್ತುಸ್ವಭಾವವೆಂದು ಭಾವವು.

ಇನ್ನು ಮುಂದೆ "ಪರಮಾತ್ಮಪ್ರಕಾಶ"ಶಬ್ದದ ಅರ್ಥವನ್ನು ನಿರೂಪಿಸುವುದರ ಮುಖ್ಯತೆಯಿಂದ ಮೂರು ಸೂತ್ರಗಳು ಹೇಳಲ್ಪಡುತ್ತವೆ —

**ಸಯಲಹಂ ಕಮ್ಮಹಂ ದೋಸಹಂ ವಿ, ಜೋ ಜಿಣು ದೇಉ ವಿಭಿಣ್ಣು ।**
**ಸೋ ಪರಮಪ್ಪಪಯಾಸು ತುಹುಂ, ಜೋಇಯ ಣಿಯಮೇಂ**
**ಮುಣ್ಣು ॥ ೧೯೮ ॥**

"ಸಕಲೇಭ್ಯಃ ಕರ್ಮಭ್ಯಃ ದೋಷೇಭ್ಯಃ ಅಪಿ ಯೋ ಜಿನಃ ದೇವಃ ವಿಭಿನ್ನಃ ।
ತಂ ಪರಮಾತ್ಮಪ್ರಕಾಶಂ ತ್ವಂ ಯೋಗಿನ್ ನಿಯಮೇನ ಮನ್ಯಸ್ವ ॥ ೧೯೮ ॥"

**ಅನ್ವಯಾರ್ಥ:**— **ಜೋಇಯ**— ಎಲೈ ಯೋಗಿಯೇ! **ಸಯಲಹಂ**— ಸಮಸ್ತವಾದ **ಕಮ್ಮಹಂ**— ಕರ್ಮಗಳ ಪಸೆಯಿಂದಲೂ **ದೋಸಹಂ ವಿ**— ದೋಷಗಳ ಪೆಸೆ

**ಯಿಂದಲೂ ವಿಭಿಣ್ಣಉ**—ವಿಶೇಷತಃ ಭಿನ್ನನಾದ **ಜೋ ಜಿಣು ದೇಉ**—ಪರಮಾರಾಧ್ಯನಾದ ಯಾವ ಜಿನದೇವನಿರುತ್ತಾನೋ **ಸೋ**—ಅವನನ್ನು **ಪರಮಪ್ಪಪಯಾಸು** ಪರಮಾತ್ಮಪ್ರಕಾಶವನ್ನಾಗಿ **ತುಹುಂ**-ನೀನು **ಣಿಯಮೇಂ ಮುಣ್ಣಿ**—ನಿಯಮ.(ನಿಶ್ಚಯ)ದಿಂದ ತಿಳಿ.

**ಭಾವಾರ್ಥ:**—ಯಾವ ಜಿನೇಂದ್ರದೇವನು ಜ್ಞಾನಾವರಣಾದಿ-ಸಮಸ್ತಕರ್ಮಗಳಿಂದಲೂ ಕ್ಷುಧಾದಿದೋಷಗಳಿಂದಲೂ ಸರ್ವಥಾ ಭಿನ್ನ(ಬೇರೆ)ನಾಗಿರುತ್ತಾನೋ ಆತನೇ **"ಪರಮಾತ್ಮಪ್ರಕಾಶ"**ವೆಂದು ತಿಳಿಯಬೇಕೆಂದಭಿಪ್ರಾಯವು

**ಕೇವಲದಂಸಣು ಣಾಣು ಸುಹು, ವೀರಿಉ ಜೋ ಜಿ ಅಣಂತು ।**
**ಸೋ ಜಿಣದೇಉ ವಿ ಪರಮಮುಣಿ, ಪರಮಪಯಾಸು**
**ಮುಣಂತು ॥ ೧೯೯ ॥**

"ಕೇವಲದರ್ಶನಂ ಜ್ಞಾನಂ ಸುಖಂ ವೀರ್ಯಃ ಯ ಏವ ಅನಂತಃ ।
ಸ ಜಿನದೇವೋಽಪಿ ಪರಮಮುನಿಃ ಪರಮಪ್ರಕಾಶಂ ಜಾನನ್ ॥ ೧೯೯ ॥"

**ಅನ್ವಯಾರ್ಥ:**—**ಜೋ ಜಿ**—ಯಾವನು **ಅಣಂತು**—ಅನಂತವಾದ **ಕೇವಲದಂಸಣು ಣಾಣು ಸುಹು**—ಕೇವಲದರ್ಶನ, ಕೇವಲಜ್ಞಾನ, (ಅನಂತ)ಸುಖ ಮತ್ತು **ವೀರಿಉ**—(ಅನಂತ)ವೀರ್ಯ, ಈ ಅನಂತಚತುಷ್ಟಯಸ್ವರೂಪವುಳ್ಳವನಾಗಿರುವನೋ **ಸೋ ಜಿಣದೇಉ ವಿ**—ಆ ಜಿನದೇವನಾದರೋ **ಪರಮಪಯಾಸು**-ಉತ್ಕೃಷ್ಟವೂ ಲೋಕಾಲೋಕಪ್ರಕಾಶಕವೂ ಆದ ಕೇವಲಜ್ಞಾನವುಳ್ಳ ನಿಜಸ್ವರೂಪವನ್ನು **ಮುಣಂತು** ತಿಳಿಯುವವನಾಗಿ **ಪರಮಮುಣಿ**—ಪರಮಮುನಿ ಅರ್ಥಾತ್ ಪ್ರತ್ಯಕ್ಷಜ್ಞಾನಿಯಾಗಿರುತ್ತಾನೆ.

**ಭಾವಾರ್ಥ**—ಯುಗಪತ್(ಏಕಕಾಲದಲ್ಲಿ) ಅನಂತದ್ರವ್ಯಕ್ಷೇತ್ರಕಾಲಭಾವಗಳನ್ನು ತಿಳಿಯುವುದರಿಂದಲೂ ಅವಿನಶ್ವರವಾಗಿರುವುದರಿಂದಲೂ ಅನಂತವೆಂದು ಹೇಳಲ್ಪಡುವ ಕೇವಲಜ್ಞಾನಾದ್ಯನಂತಚತುಷ್ಟಯಸ್ವರೂಪನಾದ ಜಿನೇಂದ್ರದೇವನು ಲೋಕಾಲೋಕಪ್ರಕಾಶಕಕೇವಲಜ್ಞಾನಾದ್ಯನಂತಗುಣಮಯವಾದ ನಿಜಶುದ್ಧಸ್ವರೂಪವನ್ನು ತಿಳಿಯುವವನಾಗಿ ಪ್ರತ್ಯಕ್ಷಜ್ಞಾನಿಯಾಗಿರುತ್ತಾನೆಂದು ಭಾವವು.

**ಜೋ ಪರಮಪ್ಪಉ ಪರಮಪಉ, ಹರಿ ಹರು ಬಂಭು ವಿ ಬುದ್ಧು ।**
**ಪರಮಪಯಾಸು ಭಣಂತಿ ಮುಣಿ, ಸೋ ಜಿಣದೇಉ ವಿಸುದ್ಧು ॥೨೦೦॥**

"ಯಃ ಪರಮಾತ್ಮಾ ಪರಮಪದಃ ಹರಿಃ ಹರಃ ಬ್ರಹ್ಮಾಪಿ ಬುದ್ಧಃ ।
ಪರಮಪ್ರಕಾಶಃ ಭಣಂತಿ ಮುನಯಃ ಸ ಜಿನದೇವೋ ವಿಶುದ್ಧಃ ॥ ೨೦೦ ॥"

**ಅನ್ವಯಾರ್ಥ:**—**ಮುಣಿ**—ಮುನಿಗಳು (ಪ್ರತ್ಯಕ್ಷಜ್ಞಾನಿಗಳು) **ಜೋ ಪರಮಪ್ಪಉ**—ಯಾವ ಪರಮಾತ್ಮನು **ಪರಮಪಉ**—ಪರಮಪದವೂ **ಹರಿ ಹರು ಬಂಭು ವಿ ಬುದ್ಧು**—ಹರಿಯೂ ಹರನೂ ಬ್ರಹ್ಮನೂ ಬುದ್ಧ(ಸುಗತ)ನೂ **ಪರಮ**

**ಪಯಾಸು**— ಪರಮಪ್ರಕಾಶವೂ ಆಗಿರುತ್ತಾನೆಂದು **ಭಣಂತಿ**— ಹೇಳುತ್ತಾರೋ **ಸೋ**- ಅ ಪರಮಾತ್ಮನು **ವಿಸುದ್ಧು ಜಿಣದೇಉ**— ರಾಗಾದಿರಹಿತನಾಗಿರುವುದರಿಂದ ವಿಶುದ್ಧ ನಾದ ಜಿನದೇವನಾಗಿರುತ್ತಾನೆ ಅರ್ಥಾತ್ ಪರಮಪದಾದಿಗಳು ಜಿನೇಂದ್ರದೇವನ ನಾಮಾಂತರಗಳಾಗಿರುತ್ತವೆ.

**ಭಾವಾರ್ಥ:**— ಪರಮಪದ, ಹರಿ, ಹರ, ಬ್ರಹ್ಮ, ಬುದ್ಧ, ಪರಮಪ್ರಕಾಶ ಇತ್ಯಾದಿಗಳೆಲ್ಲವೂ ಸಮಸ್ತರಾಗಾದಿದೋಷರಹಿತನೂ ಪರಮಾತ್ಮನೂ ಆದ ಪೂರ್ವೋಕ್ತ ಜಿನದೇವನ ಹೆಸರು(ನಾಮಾಂತರ)ಗಳೇ ಆಗಿರುತ್ತವೆ. ಹೀಗೆ ಸಾವಿರದೆಂಟು ಹೆಸರು (ಶುಭನಾಮ)ಗಳಿಂದ ಶೋಭಿಸುತ್ತಿರುವ ಜಿನೇಂದ್ರದೇವನನ್ನು ನಾನಾರುಚಿಯುಳ್ಳ (ಭಿನ್ನ ರುಚಿಗಳಾದ) ಭವ್ಯಜನರು ತಮಗಿಷ್ಟವಾದ ಹೆಸರಿನಿಂದ ಆರಾಧಿಸಬೇಕೆಂದಭಿಪ್ರಾಯವು. ಹೀಗೆಯೇ ಮಹಾಕವಿ ರತ್ನಾಕರವರ್ಣಿಯು "**ರತ್ನಾಕರಾಧೀಶ್ವರಶತಕ**"ದಲ್ಲಿ —

**"ತ್ರಿಜಗತ್ಸ್ವಾ-ಜಿನೇಂದ್ರ-ಸಿದ್ಧ-ಶಿವ-ಲೋಕಾರಾಧ್ಯ-ಸರ್ವಜ್ಞ-ಶಂ- ।**
**ಭು-ಜಗನ್ನಾಥ-ಜಗತ್ಪಿತಾಮಹ-ಹರ-ಶ್ರೀಕಾಂತ-ವಾಣೀಶ-ವಿ- ॥**
**ಷ್ಣು-ಜಿತಾನಂಗ-ಜಿನೇಂದ್ರ-ಪಕ್ಷಿಮಸಮುದ್ರಾಧೀಶ್ವರಾ ಬೇಗದಿಂ ।**
**ನಿಜಮಂ ತೋರು ದಯಾಳುವೇ ತಳುವಿದೇಂ ರತ್ನಾಕರಾಧೀಶ್ವರಾ! ॥"**

ಎಂದು ಹಲವು ಹೆಸರುಗಳಿಂದ ಜಿನೇಂದ್ರನನ್ನು ಸ್ತುತಿಸಿದ್ದಾನೆ. ಶ್ರೀಭಗವಜ್ಜಿನಸೇನಾ ಚಾರ್ಯರಿಂದ ರಚಿಸಲ್ಪಟ್ಟಿರುವ "**ಶ್ರೀಜಿನಸಹಸ್ರನಾಮಸ್ತೋತ್ರ**"ವು ಲೋಕಪ್ರಸಿದ್ಧ ವಾಗಿದೆ.

ಮುಂದೆ ಮೂರು ಸೂತ್ರಗಳಿಂದ ಸಿದ್ಧಸ್ವರೂಪವನ್ನು ನಿರೂಪಿಸುತ್ತಾರೆ:—

**ಝಾಣೇಂ ಕಮ್ಮಕ್ಖಉ ಕರಿವಿ, ಮುಕ್ಕಉ ಹೋಇ ಅಣಂತು ।**
**ಜಿಣವರದೇವಇಂ ಸೋ ಜಿ ಜಿಯ, ಪಭಣಿಉ ಸಿದ್ಧ ಮಹಂತು ॥ ೨೦೧ ॥**

"ಧ್ಯಾನೇನ ಕರ್ಮಕ್ಷಯಂ ಕೃತ್ವಾ ಮುಕ್ತೋ ಭವತಿ ಅನಂತಃ ।
ಜಿನವರದೇವೇನ ಸ ಏವ ಜೀವ ಪ್ರಭಣಿತಃ ಸಿದ್ಧೋ ಮಹಾನ್ ॥ ೨೦೧ ॥"

**ಅನ್ವಯಾರ್ಥ:**— ಯಾವ ಜೀವನು **ಝಾಣೇಂ**— ಶುಕ್ಲಧ್ಯಾನದಿಂದ **ಕಮ್ಮಕ್ಖ ಉ ಕರಿವಿ**— ಕರ್ಮಕ್ಷಯವನ್ನು ಮಾಡಿ **ಮುಕ್ಕಉ**— ಮುಕ್ತನೂ **ಅಣಂತು**— ಶಾಶ್ವತ (ಅವಿನಶ್ವರ)ನೂ **ಹೋಇ**— ಆಗುತ್ತಾನೋ **ಜಿಯ**— ಎಲೈ ಜೀವನೇ! **ಸೋ ಜಿ**— ಆ ಮುಕ್ತಜೀವನೇ **ಜಿಣವರದೇವಇಂ**— ಜಿನವರದೇವನಿಂದ **ಮಹಂತು ಸಿದ್ಧ**— ಮಹಾತ್ಮನಾದ ಸಿದ್ಧ(ಸಿದ್ಧಪರಮೇಷ್ಠಿ)ನೆಂದು **ಪಭಣಿಉ**— ಹೇಳಲ್ಪಟ್ಟಿದ್ದಾನೆ.

**ಭಾವಾರ್ಥ:**- ರಾಗಾದಿಸಮಸ್ತವಿಕಲ್ಪಜಾಲರಹಿತವಾದ ಪರಮಶುಕ್ಲಧ್ಯಾನದಿಂದ ಜ್ಞಾನಾವರಣಾದ್ಯಷ್ಟಕರ್ಮಗಳನ್ನು ನಿರ್ಮೂಲಗೊಳಿಸಿ ಸಮ್ಯಕ್ತ್ವಾದ್ಯಷ್ಟಗುಣಗಳನ್ನು ಪಡೆದವನೂ ಊರ್ಧ್ವಗಮನಸ್ವಭಾವದಿಂದ ಲೋಕಾಗ್ರವನ್ನೈದಿ ಅಲ್ಲಿಯೇ ಅನಂತ ಕಾಲದವರೆಗೆ ರಾರಾಜಿಸುತ್ತಿರುವವನೂ ಕೇವಲಜ್ಞಾನಾದಿಮಹಾಗುಣಗಳಿಗೆ ಆಧಾರ

ನಾಗಿರುವುದರಿಂದಲೂ ಮಹಾಪುರುಷರಿಂದ ಆರಾಧಿಸಲ್ಪಡುವವನಾದುದರಿಂದಲೂ ವಿಶಿಷ್ಟ ಮಹತ್ತ್ವವುಳ್ಳವನೂ ಆದ ಶುದ್ಧಜೀವನು ಸಿದ್ಧಪರಮೇಷ್ಠಿಯಾಗಿರುತ್ತಾನೆ. ಹೀಗೆಂದು ಸಕಲಸಿದ್ಧಾಂತಪ್ರಕಾಶಕರಾದ ಭಗವದರ್ಹತ್ಪರಮೇಷ್ಠಿಗಳು ಹೇಳುತ್ತಾರೆ.

**ಅಣ್ಣು ವಿ ಬಂಧು ವಿ ತಿಹುಯಣಹಂ, ಸಾಸಯಸುಕ್ಖಸಹಾಉ ।**
**ತಿತ್ಥು ಜಿ ಸಯಲು ವಿ ಕಾಲು ಜಿಯ, ಣಿವಸಇ ಲದ್ಧಸಹಾಉ ॥ ೨೦೨ ॥**

"ಅನ್ಯದಪಿ ಬಂಧುರಪಿ ತ್ರಿಭುವನಸ್ಯ ಶಾಶ್ವತಸೌಖ್ಯಸ್ವಭಾವಃ ।
ತತ್ರೈವ ಸಕಲಮಪಿ ಕಾಲಂ ಜೀವ ನಿವಸತಿ ಲಬ್ಧಸ್ವಭಾವಃ ॥ ೨೦೨ ॥"

**ಅನ್ವಯಾರ್ಥ:**— **ಅಣ್ಣು ವಿ**— ಮತ್ತೂ ಕೂಡ **ಜಿಯ**— ಎಲೈ ಜೀವನೇ! **ತಿಹುಯಣಹಂ ವಿ**— ಮೂರುಲೋಕಕ್ಕೂ **ಬಂಧು**— ಬಂಧು (ಹಿತವನ್ನುಂಟುಮಾಡುವವನು)ವೂ **ಸಾಸಯಸುಕ್ಖಸಹಾಉ**— ಶಾಶ್ವತಸುಖಸ್ವಭಾವವುಳ್ಳವನೂ ಆದ ಪೂರ್ವೋಕ್ತ ಸಿದ್ಧಪರಮೇಷ್ಠಿಯು **ಲದ್ಧಸಹಾಉ**— ನಿಜಸ್ವಭಾವವನ್ನು ಪಡೆದವನಾಗಿ **ತಿತ್ಥು ವಿ**— ಆ ಮೋಕ್ಷಸ್ಥಾನದಲ್ಲಿಯೇ **ಸಯಲು ವಿ ಕಾಲು**— ಸದಾಕಾಲವೂ **ಣಿವಸಇ**— ವಾಸಮಾಡುತ್ತಾನೆ.

**ಭಾವಾರ್ಥ:**— ಪೂರ್ವೋಕ್ತಸಿದ್ಧಪರಮೇಷ್ಠಿಯು ತ್ರಿಲೋಕನಾಥನಾಗಿರುವನು. ಮೂಲೋಕದ ಭವ್ಯಜೀವರುಗಳು ಸಿದ್ಧಪರಮೇಷ್ಠಿಯ ಧ್ಯಾನದಿಂದ ಭವಸಾಗರದ ಪಾರವನ್ನು ಪಡೆಯುವವರಾದುದರಿಂದ ಆ ಶುದ್ಧಾತ್ಮನು ತ್ರಿಲೋಕಸ್ಥಭವ್ಯಜೀವರುಗಳಿಗೆ ಬಂಧುವಾಗಿರುವನು. ಮತ್ತು ರಾಗಾದಿರಹಿತವೂ ಅವ್ಯಾಬಾಧವೂ ಅವಿನಶ್ವರೂ ಆದ ಸುಖವೇ ಸ್ವಭಾವವುಳ್ಳವನಾಗಿರುವನು. ಹೀಗೆ ಶುದ್ಧ-ಆತ್ಮಸ್ವಭಾವವನ್ನು ಪಡೆದಿರುವ ಸಿದ್ಧಪರಮೇಷ್ಠಿಯು ಅನಂತಕಾಲದವರೆಗೆ ಮೋಕ್ಷಸ್ಥಾನದಲ್ಲಿ ವಿರಾಜಿಸುತ್ತಿರುವನು. ಇಲ್ಲಿ, 'ಅನಂತಕಾಲದವರೆಗೆ' ಎಂಬುದರಿಂದ 'ಮುಕ್ತಜೀವರು ಪುನಃ ಸಂಸಾರದಲ್ಲಿ ಬೀಳುತ್ತಾರೆ' ಎನ್ನುವ ಪರವಾದಿಗಳ ಮತವು ನಿರಾಕರಿಸಲ್ಪಟ್ಟಿದೆಯೆಂದು ತಿಳಿಯಬೇಕು ಅರ್ಥಾತ್ ಮುಕ್ತಜೀವರಿಗೆ ಪುನಃ (ಮರಳಿ) ಸಂಸಾರಪತನವಿರುವುದಿಲ್ಲವೆಂದು ಭಾವವು.

**ಜಮ್ಮಣಮರಣವಿವಜ್ಜಿಯಉ, ಚಉಗಇದುಕ್ಖವಿಮುಕ್ಕು ।**
**ಕೇವಲದಂಸಣಣಾಣಮಉ, ಣಂದಇ ತಿತ್ಥು ಜಿ ಮುಕ್ಕು ॥ ೨೦೩ ॥**

"ಜನ್ಮಮರಣವಿವರ್ಜಿತಃ ಚತುರ್ಗತಿದುಃಖವಿಮುಕ್ತಃ ।
ಕೇವಲದರ್ಶನಜ್ಞಾನಮಯಃ ನಂದತಿ ತತ್ರೈವ ಮುಕ್ತಃ ॥ ೨೦೩ ॥"

**ಅನ್ವಯಾರ್ಥ:**— **ಜಮ್ಮಣಮರಣವಿವಜ್ಜಿಯಉ**— ಜನ್ಮಮರಣರಹಿತನೂ **ಚಉಗಇದುಕ್ಖವಿಮುಕ್ಕು**— ಚತುರ್ಗತಿಗಳ(ಸಂಸಾರದ) ದುಃಖದಿಂದ ಬಿಡಲ್ಪಟ್ಟವನೂ **ಕೇವಲದಂಸಣಣಾಣಮಉ**— ಕೇವಲದರ್ಶನ ಹಾಗೂ ಕೇವಲಜ್ಞಾನಮಯನೂ **ಮುಕ್ಕು**— ಸರ್ವಕರ್ಮವಿಮುಕ್ತನೂ ಆದ ಸಿದ್ಧಪರಮೇಷ್ಠಿಯು **ತಿತ್ಥು ಜಿ**— ಆ

ಮುಕ್ತಿಸ್ಥಾನ(ಮೋಕ್ಷ)ವಲ್ಲಿಯೇ (ಅನಂತಕಾಲದವರೆಗೆ) **ಣಂದಇ**—ತನ್ನ ಜ್ಞಾನಾದಿ ಗುಣಗಳಿಂದ ಸಂತೋಷಪಡುವವನಾಗಿ ಅಥವಾ ಪ್ರವರ್ಧಮಾನನಾಗಿ ಇರುತ್ತಾನೆ.

**ಭಾವಾರ್ಥ:**—ಜನ್ಮಮರಣರಹಿತನೂ ಸಹಜಶುದ್ಧಪರಮಾನಂದೈಕಸ್ವಭಾವವುಳ್ಳ ಆತ್ಮಸುಖಕ್ಕೆ ವಿಪರೀತವಾದ ಚತುರ್ಗತಿಭ್ರಮಣರೂಪಸಂಸಾರದುಃಖದಿಂದ ಬಿಡಲ್ಪಟ್ಟವನೂ ಕ್ರಮಕರಣವ್ಯವಧಾನರಹಿತವಾಗಿ ಜಗತ್ತ್ರಯಕಾಲತ್ರಯವರ್ತಿಸರ್ವಪದಾರ್ಥಪ್ರಕಾಶಕವಾದ ಕೇವಲದರ್ಶನ-ಜ್ಞಾನಗಳಿಂದ ಕೂಡಿರುವವನೂ ಜ್ಞಾನಾವರಣಾದ್ಯಷ್ಟಕರ್ಮಗಳಿಂದ ರಹಿತನೂ ಹಾಗೂ ಅವ್ಯಾಬಾಧಾದ್ಯನಂತಗುಣವಿಶಿಷ್ಟನೂ ಆದ ಮುಕ್ತ(ಸಿದ್ಧ)ಜೀವನು ಮೋಕ್ಷಪದದಲ್ಲಿ ತನ್ನ ಸ್ವಾಭಾವಿಕವಾದ ಅನಂತಜ್ಞಾನಾದಿಗುಣಗಳಿಂದ ಅನಂತಕಾಲದವರೆಗೆ ವಿರಾಜಿಸುತ್ತಿರುವನು ಶ್ರೀಮನ್ನೇಮಿಚಂದ್ರಸಿದ್ಧಾಂತಚಕ್ರವರ್ತಿಗಳು **"ದ್ರವ್ಯಸಂಗ್ರಹ"**ದಲ್ಲಿ ಸಿದ್ಧಪರಮೇಷ್ಠಿಸ್ವರೂಪವನ್ನು ಹೀಗೆ ವರ್ಣಿಸಿರುವರು—***"ಣಟ್ಠಟ್ಠಕಮ್ಮದೇಹೋ, ಲೋಯಾಲೋಯಸ್ಸ ಜಾಣಓ ದಟ್ಠಾ। ಪುರಿಸಾಯಾರೋ ಅಪ್ಪಾ, ಸಿದ್ಧೋ ಝಾಏಹ ಲೋಯಸಿಹರತ್ಥೋ॥"** ಅರ್ಥಾತ್ (ಉಪಾಧಿರಹಿತವಾದ ಸ್ಫಟಿಕಮಣಿಯಂತೆ)ಜ್ಞಾನಾವರಣಮೊದಲಾದೆಂಟು ಕರ್ಮಗಳನ್ನೂ ಔದಾರಿಕ, ವೈಕ್ರಿಯಕ, ಆಹಾರಕ, ತೈಜಸ ಮತ್ತು ಕಾರ್ಮಣಗಳೆಂಬ ಐದುಶರೀರಗಳನ್ನೂ ನಾಶಮಾಡಿ ಪರಿಶುದ್ಧನಾಗಿರುವವನೂ ಲೋಕಾಲೋಕಗಳನ್ನು ತಿಳಿಯುವವನೂ ನೋಡುವವನೂ ಪುರುಷಾಕಾರನೂ ಲೋಕದ ತುಟ್ಟತುದಿ(ಮೋಕ್ಷಪದ)ಯಲ್ಲಿರುವವನೂ ಆದ ಆತ್ಮನಿಗೆ ಸಿದ್ಧಪರಮೇಷ್ಠಿಯೆಂದು ಹೆಸರು ಅಂತಹ ಸಿದ್ಧಪರಮೇಷ್ಠಿಯನ್ನು ಧ್ಯಾನಿಸಿರಿ ಹೀಗೆಯೇ **"ಸಿದ್ಧಭಕ್ತಿ"**ಯಲ್ಲಿ ಶ್ರೀಕುಂದಕುಂದಾಚಾರ್ಯರೂ—**"ಅಟ್ಠವಿಹಕಮ್ಮಮುಕ್ಕೇ, ಅಟ್ಠಗುಣಡ್ಢೇ ಅಣೋವಮೇ ಸಿದ್ಧೇ। ಅಟ್ಠಮಪುಢವಿಣಿವಿಟ್ಠೇ, ಣಿಟ್ಠಿಯಕಜ್ಜೇಯ ವಂದಿಮೋ ಣಿಚ್ಚಂ॥"** ಅರ್ಥಾತ್ †ಜ್ಞಾನಾವರಣಾದ್ಯಷ್ಟವಿಧಕರ್ಮಗಳಿಂದ ಬಿಡಲ್ಪಟ್ಟವರೂ †ಸಮ್ಯಕ್ತ್ವಮೊದಲಾದೆಂಟು ಗುಣಗಳಿಂದ ಕೂಡಿರುವವರೂ ಉಪಮೆ(ಹೋಲಿಕೆ)ಯಿಲ್ಲದವರೂ ಎಂಟನೆಯ ಭೂಮಿಯಾದ ಮೋಕ್ಷಶಿಲೆಯಲ್ಲಿರುವವರೂ ಮಾಡಬೇಕಾದ ಕೆಲಸಗಳನ್ನೆಲ್ಲ ಪೂರ್ತಿಮಾಡಿದವರೂ ಆದ ಸಿದ್ಧರನ್ನು ಸರ್ವಕಾಲದಲ್ಲಿ ವಂದಿಸುತ್ತೇವೆ ಎಂದು ಸಿದ್ಧಪರಮೇಷ್ಠಿಗಳ ಸ್ವರೂಪವನ್ನು ವರ್ಣಿಸಿರುವರು.

ಅನಂತರ ಮೂರು ಸೂತ್ರಗಳಿಂದ ಪರಮಾತ್ಮಪ್ರಕಾಶಭಾವನಾರತರಾದ ಪುರುಷರಿಗುಂಟಾಗುವ ಫಲವನ್ನು ವರ್ಣಿಸುತ್ತಾರೆ—

**ಜೇ ಪರಮಪ್ಪಪಯಾಸು ಮುಣಿ, ಭಾವಿಂ ಭಾವಹಿಂ ಸತ್ಥು।**
**ಮೋಹು ಜಿಣೇವಿಣು ಸಯಲು ಜಿಯ, ತೇ ಬುಜ್ಝಹಿಂ**
**ಪರಮತ್ಥು ॥ ೨೦೪ ॥**

---

* ದ್ರವ್ಯಸಂಗ್ರಹ, ಗಾಥೆ—೫೧

† † ಇವುಗಳ ವರ್ಣನೆಯು ಹಿಂದೆ ಮಾಡಲ್ಪಟ್ಟಿರುತ್ತದೆ

"ಯೋ ಪರಮಾತ್ಮಪ್ರಕಾಶಂ ಮುನಯಃ ಭಾವೇನ ಭಾವಯಂತಿ ಶಾಸ್ತ್ರಮ್ ।
ಮೋಹಂ ಜಿತ್ವಾ ಸಕಲಂ ಜೀವ ತೇ ಬುಧ್ಯಂತಿ ಪರಮಾರ್ಥಮ್ ॥ ೨೦೪ ॥"

**ಅನ್ವಯಾರ್ಥಃ**— **ಜಿಯ**— ಎಲೈ ಜೀವನೇ! **ಜೇ ಮುಣಿ**— ಯಾವ ಮುನಿಗಳು **ಪರಮಪ್ಪಪಯಾಸು ಸತ್ಥು**— ಪರಮಾತ್ಮಪ್ರಕಾಶವೆಂಬೀ ಶಾಸ್ತ್ರವನ್ನು **ಭಾವಿಂ ಭಾವಹಿಂ**— ವಿಶುದ್ಧಭಾವದಿಂದ ಭಾವಿಸು(ಚಿಂತಿಸು)ತ್ತಾರೋ **ತೇ**— ಅವರು **ಸಯಲು ಮೋಹು**— ಸಮಸ್ತಮೋಹವನ್ನು **ಜಿಣೇವಿಣು**— ಜಯಿಸಿ **ಬುಜ್ಝಹಿಂ ಪರಮತ್ಥು**— ಪರಮಾರ್ಥ(ಪರಮಾತ್ಮತತ್ತ್ವ)ವನ್ನು ತಿಳಿಯುತ್ತಾರೆ

**ಭಾವಾರ್ಥಃ**— ಸಮಸ್ತಪರಿಗ್ರಹರಹಿತರಾದ ಯಾವ ಸಾಧುಗಳು ಪರಮಾತ್ಮ ಸ್ವರೂಪವನ್ನು ಪ್ರಕಾಶನಡಿಸುವ ಈ ಪರಮಾತ್ಮಪ್ರಕಾಶವೆಂಬ ಶಾಸ್ತ್ರ(ಗ್ರಂಥ)ವನ್ನು ರಾಗಾದಿರಹಿತವಾದ ವಿಶುದ್ಧಭಾವದಿಂದ ನಿರಂತರ ಭಾವಿಸುತ್ತಾರೋ ಅರ್ಥಾತ್ ಪಠನ-ಚಿಂತನ-ಮನನಾದಿಗಳನ್ನು ಮಾಡುತ್ತಾರೋ ಅವರು ನಿರ್ಮೋಹಪರಮಾತ್ಮ ತತ್ತ್ವಕ್ಕೆ ವಿಪರೀತವಾದ ಸಮಸ್ತಮೋಹವನ್ನು ಜಯಿಸಿ(ನಿರ್ಮೂಲನಗೈದು) ಪರಮಾರ್ಥ ವೆಂದು ಹೇಳಲ್ಪಡುವವನೂ ಚಿದಾನಂದೈಕಸ್ವಭಾವವುಳ್ಳವನೂ ಆದ ಪರಮಾತ್ಮನನ್ನು ತಿಳಿಯುತ್ತಾರೆ

**ಅಣ್ಣು ವಿ ಭತ್ತಿಏ ಜೇ ಮುಣಹಿಂ, ಇಹು ಪರಮಪ್ಪಪಯಾಸು ।**
**ಲೋಯಾಲೋಯಪಯಾಸಯರು, ಪಾವಹಿಂ ತೇ ವಿ**
**ಪಯಾಸು ॥ ೨೦೫ ॥**

"ಅನ್ಯದಪಿ ಭಕ್ತ್ಯಾ ಯೇ ಜಾನಂತಿ ಇಮಂ ಪರಮಾತ್ಮಪ್ರಕಾಶಮ್ ।
ಲೋಕಾಲೋಕಪ್ರಕಾಶಕರಂ ಪ್ರಾಪ್ನುವಂತಿ ತೇಽಪಿ ಪ್ರಕಾಶಮ್ ॥ ೨೦೫ ॥"

**ಅನ್ವಯಾರ್ಥಃ**— **ಅಣ್ಣು ವಿ**— ಮತ್ತು **ಜೇ**— ಯಾರು **ಭತ್ತಿಏ**— ಭಕ್ತಿ(ಶ್ರದ್ಧೆ) ಯಿಂದ **ಇಹು ಪರಮಪ್ಪಪಯಾಸು**— ಈ ಪರಮಾತ್ಮಪ್ರಕಾಶವನ್ನು **ಮುಣಹಿಂ**— ಪಠನಮನನಾದಿಗಳಿಂದ ತಿಳಿಯುತ್ತಾರೋ **ತೇ ವಿ**— ಅವರೂ **ಲೋಯಾಲೋಯ ಪಯಾಸಯರು**— ಲೋಕಾಲೋಕವನ್ನು ಪ್ರಕಾಶಪಡಿಸುವ (ತಿಳಿಯುವ) **ಪಯಾಸು ಪಾವಹಿಂ**— ಕೇವಲಜ್ಞಾನರೂಪವಾದ ಪ್ರಕಾಶವನ್ನೂ ತದಾಧಾರವಾದ ಪರಮಾತ್ಮ ದ್ರವ್ಯವನ್ನೂ ಪಡೆಯುತ್ತಾರೆ

**ಭಾವಾರ್ಥಃ**— ಪರಮಾತ್ಮಪ್ರಕಾಶವೆಂಬೀಗ್ರಂಥದಲ್ಲಿ ಹೇಳಲ್ಪಟ್ಟಿರುವ ವಿಷಯ ಗಳನ್ನು ಶ್ರದ್ಧಾಪೂರ್ವಕವಾಗಿ ತಿಳಿಯುವ ಜೀವರು ತ್ರಿಕಾಲಗೋಚರಾನಂತಗುಣ ಪರ್ಯಾಯಸಹಿತಸಮಸ್ತದ್ರವ್ಯಗಳಿಂದ ಯುಕ್ತವಾದ ಲೋಕಾಲೋಕವನ್ನು ಪ್ರಕಾಶಪಡಿ ಸುವ ಕೇವಲಜ್ಞಾನರೂಪವಾದ ಪ್ರಕಾಶವನ್ನು ಮತ್ತು ಅಂತಹ ಕೇವಲಜ್ಞಾನಾದಿ ಅನಂತಗುಣಗಳಿಗೆ ಆಧಾರವಾದ ಪರಮಾತ್ಮದ್ರವ್ಯವನ್ನು ಪಡೆಯುತ್ತಾರೆಂದು ಭಾವವು.

**ಜೇ ಪರಮಪ್ಪಪಯಾಸಯಹಂ, ಅಣುದಿಣು ಣಾಉ ಲಯಂತಿ ।**
**ತುಟ್ಟ್ಯಇ ಮೋಹು ತಡತ್ತಿ ತಹಂ, ತಿಹುಯಣಣಾಹ ಹವಂತಿ ॥ ೨೦೬ ॥**

"ಯೇ ಪರಮಾತ್ಮಪ್ರಕಾಶಕಸ್ಯ ಅನುದಿನಂ ನಾಮ ಗೃಹ್ಣಂತಿ ।
ತ್ರುಟ್ಯತಿ ಮೋಹಃ ಝುಟಿತಿ ತೇಷಾಂ ತ್ರಿಭುವನನಾಥಾ ಭವಂತಿ ॥ ೨೦೬ ॥"

**ಅನ್ವಯಾರ್ಥ:—ಜೇ**—ಯಾವ ಭವ್ಯಜೀವರು **ಅಣುದಿಣು**—ಅನುದಿನ (ಪ್ರತಿ ದಿನ, ಸರ್ವದಾ)ವೂ **ಪರಮಪ್ಪಪಯಾಸಯಹಂ**-ಪರಮಾತ್ಮಸ್ವರೂಪಪ್ರಕಾಶಕವಾದ ಈ ಶಾಸ್ತ್ರ(ಗ್ರಂಥ)ದ ಹಾಗೂ ನಿಶ್ಚಯನಯದಿಂದ ಕೇವಲಜ್ಞಾನಾದಿ ಅನಂತಗುಣಸಹಿತ ವಾದಪರಮಾತ್ಮಪದಾರ್ಥದ **ಣಾಉ ಲಯಂತಿ**-ಹೆಸರನ್ನು ಗ್ರಹಿಸುತ್ತಾರೋ ಅರ್ಥಾತ್ ನಿರಂತರ ಅದರ ಸ್ಮರಣೆಯನ್ನು ಮಾಡುತ್ತಾರೋ **ತಹಂ**—ಆ ಭವ್ಯಜೀವರ **ಮೋಹು**-ಮೋಹವು **ತಡತ್ತಿ ತುಟ್ಟ್ಯಇ**—ಬೇಗನೆ ನಾಶವಾಗುತ್ತದೆ ಮತ್ತವರು **ತಿಹುಯಣಣಾಹ ಹವಂತಿ**—ಮೂರುಲೋಕಕ್ಕೊಡೆಯರಾಗುತ್ತಾರೆ.

**ಭಾವಾರ್ಥ:**—ಈ ಪರಮಾತ್ಮಪ್ರಕಾಶವೆಂಬ ಗ್ರಂಥದ ಅಧ್ಯಯನದಿಂದ ಪರ ಮಾತ್ಮಸ್ವರೂಪವನ್ನು ಚೆನ್ನಾಗಿ ತಿಳಿದು ಆ ಪರಮಾತ್ಮ ಪದಾರ್ಥವನ್ನು ನಿರಂತರ ಸ್ಮರಿಸು (ಭಾವಿಸು)ತ್ತಿರುವ ಭವ್ಯಜೀವರು ಶುದ್ಧಾತ್ಮತತ್ತ್ವಭಾವನೆಯ ಫಲದಿಂದ ಮೊದಲು ದೇವೇಂದ್ರಚಕ್ರವರ್ತ್ಯಾದಿಮಹಾವಿಭೂತಿಗಳನ್ನು ಪಡೆದು ಆಮೇಲೆ ಜಿನದೀಕ್ಷೆಯನ್ನು ಕೈಗೊಂಡು ಸರ್ವಸಂಗಪರಿತ್ಯಾಗಿ(ದಿಗಂಬರರು)ಗಳಾಗಿ ಧ್ಯಾನತಪಶ್ಚರಣೆಗಳ ಬಲದಿಂದ ಕೇವಲಜ್ಞಾನವನ್ನು ಹೊಂದಿದವರಾಗಿ ಅಧೋಮಧ್ಯೋರ್ಧ್ವಗಳೆಂಬ ಮೂರು ಲೋಕ ಗಳಿಗೆ ಒಡೆಯರಾಗುತ್ತಾರೆಂದು ಭಾವಾರ್ಥವು

ಇನ್ನು ಪರಮಾತ್ಮಪ್ರಕಾಶವೆಂದು ಹೇಳಲ್ಪಡುವ ಪರಮಾತ್ಮನ ಆರಾಧಕರ ಲಕ್ಷಣ ವನ್ನು ಮೂರು ಸೂತ್ರಗಳಿಂದ ವ್ಯಾಖ್ಯಾನಿಸುತ್ತಾರೆ —

**ಜೇ ಭವದುಕ್ಖಹಂ ಬೀಹಿಯಾ, ಪಉ ಇಚ್ಛಹಿಂ ಣಿವ್ವಾಣು ।**
**ಇಹ ಪರಮಪ್ಪಪಯಾಸಯಹಂ, ತೇ ಪರ ಜೊಗ್ಗ ವಿಯಾಣು ॥ ೨೦೭ ॥**

"ಯೇ ಭವದುಃಖೇಭ್ಯಃ ಭೀತಾಃ ಪದಂ ಇಚ್ಛಂತಿ ನಿರ್ವಾಣಮ್ ।
ಇಹ ಪರಮಾತ್ಮಪ್ರಕಾಶಕಸ್ಯ ತೇ ಪರಂ ಯೋಗ್ಯಾ ವಿಜಾನೀಹಿ ॥ ೨೦೭ ॥"

**ಅನ್ವಯಾರ್ಥ:—ಜೇ**—ಯಾವ ಜೀವರು **ಭವದುಕ್ಖಹಂ ಬೀಹಿಯಾ**—ಚತು ರ್ಗತಿರೂಪವಾದ ಸಂಸಾರದ ದುಃಖಗಳಿಂದ ಭಯಗೊಂಡವರಾಗಿರುವರೋ ಮತ್ತು **ಣಿವ್ವಾಣು ಪಉ**—ಮೋಕ್ಷಪದವನ್ನು **ಇಚ್ಛಹಿಂ**-ಇಚ್ಛಿಸುತ್ತಾರೋ **ತೇ ಪರ**-ಆ ಭವ್ಯ ಜೀವರುಗಳೇ **ಇಹ ಪರಮಪ್ಪಪಯಾಸಯಹಂ**—ಈ ಪರಮಾತ್ಮಪ್ರಕಾಶಕಗ್ರಂಥದ ಅಧ್ಯಯನ ಹಾಗೂ ಅಭ್ಯಾಸಕ್ಕೆ **ಜೊಗ್ಗ ವಿಯಾಣು**—ಯೋಗ್ಯರಾದವರೆಂದು ತಿಳಿ.

**ಭಾವಾರ್ಥ:**—ರಾಗಾದಿವಿಕಲ್ಪರಹಿತವೂ ಪರಮಾನಂದರೂಪವೂ ಶುದ್ಧಾತ್ಮಭಾ ವನೆಯಿಂದುಂಟಾದುದೂ ಆದ ಪಾರಮಾರ್ಥಿಕ-ಸುಖಕ್ಕೆ ವಿಪರೀತಗಳಾದ ನರನಾರ

ಕಾದಿಚತುರ್ಗತಿದುಃಖಗಳಿಂದ ಭೀತರೂ ಅತಏವ ಪರಮಸುಖಾಸ್ಪದವಾದ ಮೋಕ್ಷ ಪದವನ್ನು ಬಯಸುವವರೂ ಆದ ಭವ್ಯಜೀವರು ವ್ಯವಹಾರನಯದಿಂದ ಪರಮಾತ್ಮ ಪ್ರಕಾಶವೆಂಬೀ ಗ್ರಂಥದ ಅಭ್ಯಾಸಕ್ಕೆ ಹಾಗೂ ನಿಶ್ಚಯನಯದಿಂದ ಪರಮಾತ್ಮಪ್ರಕಾಶ ವೆಂದು ಹೇಳಲ್ಪಡುವ ನಿರ್ದೋಷಪರಮಾತ್ಮತತ್ತ್ವದ ಭಾವನೆಗೆ ಯೋಗ್ಯರಾಗಿರುವರು

**ಜೇ ಪರಮಪ್ಪಹಂ ಭತ್ತಿಯರ, ವಿಸಯ ಣ ಜೇ ವಿ ರಮಂತಿ ।**
**ತೇ ಪರಮಪ್ಪಪಯಾಸಯಹಂ, ಮುಣಿವರ ಜೊಗ್ಗ ಹವಂತಿ ॥ ೨೦೮ ॥**

"ಯೇ ಪರಮಾತ್ಮನೋ ಭಕ್ತಿಪರಾಃ ವಿಷಯಾನ್ ನ ಯೇऽಪಿ ರಮಂತೇ ।
ತೇ ಪರಮಾತ್ಮಪ್ರಕಾಶಕಸ್ಯ ಮುನಿವರಾ ಯೋಗ್ಯಾ ಭವಂತಿ ॥ ೨೦೮ ॥"

**ಅನ್ವಯಾರ್ಥ:**—**ಜೇ**—ಯಾರು **ಪರಮಪ್ಪಹಂ ಭತ್ತಿಯರ**—ಪರಮಾತ್ಮನ ಭಕ್ತಿಯಿಂದ ಕೂಡಿದವರಾಗಿರುವರೋ ಅರ್ಥಾತ್ ಪರಮಾತ್ಮನಲ್ಲಿ ಭಕ್ತಿಯುಳ್ಳವರಾಗಿರು ವರೋ **ಜೇ ವಿ**—ಮತ್ತು ಯಾವ ಮುನಿಗಳು **ವಿಸಯ ಣ ರಮಂತಿ**—ಇಂದ್ರಿಯ ವಿಷಯಗಳನ್ನು ರಮಿಸು (ಪ್ರೀತಿಸು)ವುದಿಲ್ಲವೋ **ತೇ ಮುಣಿವರ**—ಆ ಮುನೀಶ್ವರರು **ಪರಮಪ್ಪಪಯಾಸಯಹಂ**—ಪರಮಾತ್ಮಪ್ರಕಾಶಕದ ಅಭ್ಯಾಸಕ್ಕೆ **ಜೊಗ್ಗ ಹವಂತಿ**-ಯೋಗ್ಯರಾಗುತ್ತಾರೆ

**ಭಾವಾರ್ಥ:**—ಪರಮಾತ್ಮನಲ್ಲಿ ಅಚಲಭಕ್ತಿಯುಳ್ಳವರೂ ಮನೋಹರವಾದ ಇಂದ್ರಿಯ ವಿಷಯಗಳು ಸ್ವತಃ ಪ್ರಾಪ್ತವಾಗಿದ್ದರೂ ಅವುಗಳಲ್ಲಿ ಆಸಕ್ತರಾಗದೆ ಅವು ಗಳನ್ನು ತ್ಯಾಗಮಾಡಿರುವವರೂ ಆದ ಮುನಿಪುಂಗವರು ವ್ಯವಹಾರದಿಂದ ಪರಮಾತ್ಮ ಸ್ವರೂಪವನ್ನು ಪ್ರತಿಪಾದಿಸುವ ಈ ಗ್ರಂಥದ ಅಭ್ಯಾಸಕ್ಕೆ ಹಾಗೂ ಪರಮಾರ್ಥ (ನಿಶ್ಚಯ)ದಿಂದ ಪರಮಾತ್ಮಪ್ರಕಾಶವೆಂದು ಹೇಳಲ್ಪಡುವ ಶುದ್ಧಾತ್ಮಾನುಭೂತಿಗೆ ಯೋಗ್ಯ (ಪಾತ್ರ)ರಾಗಿರುತ್ತಾರೆಂದು ಭಾವವು.

**ಣಾಣವಿಯಕ್ಖಣು ಸುದ್ಧಮಣು, ಜೋ ಜಣು ಏಹಉ ಕೋಇ ।**
**ಸೋ ಪರಮಪ್ಪಪಯಾಸಯಹಂ, ಜೊಗ್ಗು ಭಣಂತಿ ಜಿ ಜೋಇ ॥ ೨೦೯ ॥**

"ಜ್ಞಾನವಿಚಕ್ಷಣಃ ಶುದ್ಧಮನಾ ಯೋ ಜನ ಈದೃಶಃ ಕಶ್ಚಿದಪಿ ।
ತಂ ಪರಮಾತ್ಮಪ್ರಕಾಶಕಸ್ಯ ಯೋಗ್ಯಂ ಭಣಂತಿ ಯೇ ಯೋಗಿನಃ ॥ ೨೦೯ ॥"

**ಅನ್ವಯಾರ್ಥ:**—**ಣಾಣವಿಯಕ್ಖಣು**-ಸ್ವಸಂವೇದನ(ತನ್ನನ್ನು ಅಥವಾ ತನ್ನಾತ್ಮ ನನ್ನು ತಿಳಿಯುವ) ಜ್ಞಾನದಿಂದ ಪ್ರವೀಣ(ಬುದ್ಧಿವಂತ)ನಾಗಿರುವವನೂ **ಸುದ್ಧಮಣು**—ರಾಗದ್ವೇಷಮೋಹಾದಿರಹಿತವಾದ ನಿರ್ಮಲಮನಸ್ಸುಳ್ಳವನೂ ಆದ **ಏಹಉ ಜೋ ಕೋಇ ಜಣು**—ಇಂತಹ ಯಾವನೋರ್ವ ಮನುಷ್ಯನಿರುವನೋ ಅರ್ಥಾತ್ ಯಾವ ನೋರ್ವ ಮನುಷ್ಯನು ಪೂರ್ವೋಕ್ತಲಕ್ಷಣವುಳ್ಳವನಾಗಿರುವನೋ **ಸೋ**—ಆತನನ್ನು **ಜಿ ಜೋಇ**—ಯಾವ (ಶುದ್ಧಾತ್ಮಧ್ಯಾನನಿರತರಾದ) ಪರಮಯೋಗಿಗಳು **ಪರಮಪ್ಪ**

**ಪಯಾಸಯಹಂ—** ಪರಮಾತ್ಮಪ್ರಕಾಶಕಶಾಸ್ತ್ರದ ಅಭ್ಯಾಸಕ್ಕೆ **ಜೊಗ್ಗು ಭಣಂತಿ—** ಯೋಗ್ಯನನ್ನಾಗಿ (ಯೋಗ್ಯನೆಂದು) ಹೇಳುತ್ತಾರೆ

**ಭಾವಾರ್ಥ:—** ಸ್ವಸಂವೇದನಜ್ಞಾನಿಯೂ ಪರಮಾತ್ಮಾನುಭೂತಿವಿಲಕ್ಷಣವಾದ ರಾಗದ್ವೇಷಮೋಹಾದಿಸಮಸ್ತವಿಕಲ್ಪಜಾಲದಿಂದ ರಹಿತವಾದ ಶುದ್ಧಮನಸ್ಸುಳ್ಳವನೂ ಆದ ಸತ್ಪುರುಷನು ವ್ಯವಹಾರದಿಂದ ಪರಮಾತ್ಮಪ್ರಕಾಶವೆಂಬಹೆಸರುಳ್ಳ ಈ ದ್ರವ್ಯ ಸೂತ್ರ(ಶಾಸ್ತ್ರಗ್ರಂಥ)ದ ಮತ್ತು ನಿಶ್ಚಯದಿಂದ ಪರಮಾತ್ಮಪ್ರಕಾಶವೆಂದು ಹೇಳಲ್ಪಡುವ ಶುದ್ಧಾತ್ಮಸ್ವಭಾವರೂಪವಾದ ಭಾವಸೂತ್ರದ ಆರಾಧನೆಗೆ ಯೋಗ್ಯನಾಗಿರುತ್ತಾನೆ. ಹಾಗೂ ಪೂರ್ವೋಕ್ತಗುಣಗಳಿಲ್ಲದ ಮನುಷ್ಯರು ಪರಮಾತ್ಮಪ್ರಕಾಶವನ್ನಾರಾಧಿಸಲು ಯೋಗ್ಯರಾಗಿರುವುದಿಲ್ಲವೆಂದು ಪರಮಜ್ಞಾನಸಂಪನ್ನರಾದ ಮಹಾಯೋಗಿಗಳು ಹೇಳುತ್ತಾರೆಂದು ಭಾವಾರ್ಥವು

ಮುಂದೆ ಒಂದು ಸೂತ್ರದಿಂದ ಶಾಸ್ತ್ರಫಲಕಥನವನ್ನೂ ಆ ಮೇಲೆ ಸೂತ್ರಗಳೆರಡರಿಂದ ಔದ್ಧತ್ಯಪರಿಹಾರವನ್ನೂ ಮಾಡುತ್ತಾರೆ —

**ಲಕ್ಖಣಛಂದವಿವಜ್ಜಿಯಉ, ಏಹು ಪರಮಪ್ಪಪಯಾಸು ।**
**ಕುಣಇ ಸುಹಾವಇಂ ಭಾವಿಯಉ, ಚಉಗಇದುಕ್ಖವಿಣಾಸು ॥ ೨೧೦ ॥**

"ಲಕ್ಷಣಛಂದೋವಿವರ್ಜಿತಃ ಏಷ ಪರಮಾತ್ಮಪ್ರಕಾಶಃ ।
ಕರೋತಿ ಸುಭಾವೇನ ಭಾವಿತಃ ಚತುರ್ಗತಿದುಃಖವಿನಾಶಮ್ ॥ ೨೧೦ ॥"

**ಅನ್ವಯಾರ್ಥ:— ಲಕ್ಖಣಛಂದವಿವಜ್ಜಿಯಉ**—(ನಿಶ್ಚಯದಿಂದ) ಲಕ್ಷಣದಿಂದಲೂ ಛಂದಸ್ಸಿನಿಂದಲೂ ರಹಿತವಾದ **ಏಹು ಪರಮಪ್ಪಪಯಾಸು**— ಈ ಪರಮಾತ್ಮಪ್ರಕಾಶವು **ಸುಹಾವಇಂ ಭಾವಿಯಉ**—ಶುದ್ಧಭಾವದಿಂದ ಭಾವಿಸಲ್ಪಟ್ಟಿದಾಗಿ **ಚಉಗಇದುಕ್ಖವಿಣಾಸು**— ಚತುರ್ಗತಿಸಂಬಂಧವಾದ ದುಃಖಗಳ ವಿನಾಶವನ್ನು **ಕುಣಇ**— ಮಾಡುತ್ತದೆ.

**ಭಾವಾರ್ಥ:—** ವ್ಯವಹಾರದಿಂದ ಈ ಪರಮಾತ್ಮಪ್ರಕಾಶಗ್ರಂಥವು ದೋಹಕವೆಂಬ ಛಂದಸ್ಸಿ(ಕವಿತಾಬಂಧದ ನಿಯಮ)ನಿಂದಲೂ ಪ್ರಾಕೃತಲಕ್ಷಣದಿಂದಲೂ ಕೂಡಿರುತ್ತದೆ. ಆದರೆ ನಿಶ್ಚಯದಿಂದ ಪರಮಾತ್ಮಪ್ರಕಾಶವೆಂಬ ಶುದ್ಧಾತ್ಮಸ್ವರೂಪವು ಲಕ್ಷಣಛಂದಸ್ಸುಗಳಿಂದ ರಹಿತವಾಗಿರುತ್ತದೆ ಅರ್ಥಾತ್ ಶುದ್ಧಾತ್ಮರೂಪದಲ್ಲಿ 'ಯಾವುದೊಂದು ಶುಭಾಶುಭಲಕ್ಷಣ(ಚಿಹ್ನೆ)ವಾಗಲೀ ಪ್ರಬಂಧವಾಗಲೀ ಇರುವುದಿಲ್ಲ ಇಂತಹ "ಪರಮಾತ್ಮಪ್ರಕಾಶ" (ವ್ಯವಹಾರದಿಂದ ಈ ಗ್ರಂಥ, ನಿಶ್ಚಯದಿಂದ ಶುದ್ಧಾತ್ಮಸ್ವರೂಪ)ವನ್ನು ರಾಗಾದಿರಹಿತಶುದ್ಧಭಾವ(ಪರಿಣಾಮ)ದಿಂದ ಭಾವಿಸಿದುದಾದರೆ ಅದರಿಂದ ಶುದ್ಧಾತ್ಮಾನುಭೂತಿಯಿಂದುಂಟಾಗುವ ಪರಮಸುಖಕ್ಕೆ ವಿಪರೀತಗಳಾದ ನರನಾರಕಾದಿ ಚತುರ್ಗತಿದುಃಖಗಳು ನಾಶವಾಗುತ್ತವೆಂದು ಭಾವವು

**ಇತ್ಥು ಣ ಲೇವಲು ಪಂಡಿಯಹಿಂ, ಗುಣದೋಸು ವಿ ಪುಣರುತ್ತು ।**
**ಭಟ್ಟಪಭಾಯರಕಾರಣಇಂ, ಮಇಂ ಪುಣು ಪುಣು ವಿ ಪಉತ್ತು ॥ ೨೧೧ ॥**

"ಅತ್ರ ನ ಗ್ರಾಹ್ಯಃ ಪಂಡಿತೈಃ ಗುಣೋ ದೋಷೋಽಪಿ ಪುನರುಕ್ತಃ ।
ಭಟ್ಟಪ್ರಭಾಕರಕಾರಣೇನ ಮಯಾ ಪುನಃ ಪುನರಪಿ ಪ್ರೋಕ್ತಮ್ ॥ ೨೧೧ ॥"

**ಅನ್ವಯಾರ್ಥಃ—ಇತ್ಥು**— ಈ ಗ್ರಂಥದಲ್ಲಿ **ಪಂಡಿಯಹಿಂ**— ಪಂಡಿತ (ವಿವೇಕಿ, ವಿದ್ವಾಂಸ)ರಿಂದ **ಗುಣದೋಸು ವಿ ಪುಣರುತ್ತು**— ಕವಿತಾಗುಣವೂ ಪುನರುಕ್ತ (ಒಮ್ಮೆ ಹೇಳಿದುದನ್ನೇ ಪುನಃ ಹೇಳುವ) ದೋಷವೂ **ಣ ಲೇವಲು**— ಗ್ರಹಿಸಲ್ಪಡಬಾರದು. ಏಕೆಂದರೆ, **ಮಇಂ**— ನನ್ನಿಂದ **ಭಟ್ಟಪಭಾಯರಕಾರಣಹಿಂ**— ಪ್ರಭಾಕರಭಟ್ಟನ ಕಾರಣ(ನಿಮಿತ್ತ)ದಿಂದ **ಪುಣು ಪುಣು ವಿ ಪಉತ್ತು**—(ಪರಮಾತ್ಮತತ್ತ್ವವು) ಪುನಃ ಪುನಃ (ಬಾರಿಬಾರಿಗೆ) ಹೇಳಲ್ಪಟ್ಟಿದೆ.

**ಭಾವಾರ್ಥ** — ಕಾವ್ಯಶಾಸ್ತ್ರಾನುಸಾರವಾಗಿ ಕವಿತಾ(ಗ್ರಂಥ)ರಚನೆಯಲ್ಲಿ ಪುನರುಕ್ತ(ಒಮ್ಮೆ ಹೇಳಿದ ವಿಷಯವನ್ನೇ ಪುನಃಪುನಃ ಹೇಳುವಿಕೆ)ವು ದೋಷವೆಂದು ಪರಿಗಣಿಸಲ್ಪಟ್ಟಿದೆ ಆದರೆ ಆತ್ಮಸ್ವರೂಪದ ನಿರೂಪಣೆಯೇ ಮುಖ್ಯವಾಗಿರುವ ಈ ಅಧ್ಯಾತ್ಮ ಗ್ರಂಥದಲ್ಲಿ ವಿಷಯವನ್ನು ಸ್ಪಷ್ಟಗೊಳಿಸುವುದೇ ಮುಖ್ಯವಾಗಿರುತ್ತದಲ್ಲದೆ ಕಾವ್ಯ ಧರ್ಮವು ಮುಖ್ಯವಾದುದಲ್ಲ ಅತಏವ ನಾನು ಪ್ರಭಾಕರಭಟ್ಟನ ನಿಮಿತ್ತದಿಂದ ಅಥವಾ ವ್ಯಾಜದಿಂದ) ಸಮಸ್ತಜನರಿಗೆ ಸುಲಭವಾಗಿ ತಿಳಿಯುವಂತೆ ಆತ್ಮತತ್ತ್ವವನ್ನು ಬಾರಿಬಾರಿಗೆ ವರ್ಣಿಸಿರುವೆನು. ಆದಕಾರಣ ವಿದ್ವಾಂಸರು **"ಸಮಾಧಿಶತಕ(ತಂತ್ರ)"** ಮೊದಲಾದ ಅಧ್ಯಾತ್ಮಗ್ರಂಥಗಳಲ್ಲಿರುವಂತೆ ನನ್ನೀ ಗ್ರಂಥದಲ್ಲಿರುವ ಪುನರುಕ್ತಾದಿ ದೋಷಗಳನ್ನು ಗ್ರಹಣೆಮಾಡಬಾರದು ಮತ್ತು ಕವಿಕಲಾಸಂಬಂಧವಾದ ಗುಣಗಳನ್ನೂ ಗ್ರಹಿಸಬಾರದು. ಸಾರಾಂಶತಃ ವಿದ್ವಜ್ಜನರು ಕೇವಲ ಆಧ್ಯಾತ್ಮವಿಷಯಪ್ರತಿಪಾದನೆಯ ದೃಷ್ಟಿಯಿಂದ ಈ ಗ್ರಂಥವನ್ನು ನೋಡಬೇಕಲ್ಲದೆ ಕಾವ್ಯಧರ್ಮದ ದೃಷ್ಟಿಯಿಂದ ಇದನ್ನು ನೋಡಬಾರದೆಂದು ಭಾವವು.

**ಜಂ ಮಇ ಕಿಂ ಪಿ ವಿಜಂಪಿಯಉ, ಜುತ್ತಾಜುತ್ತು ವಿ ಇತ್ಥು ।**
**ತಂ ವರಣಾಣಿ ಖಮಂತು ಮಹು, ಜೇ ಬುಜ್ಝಹಿಂ ಪರಮತ್ಥು ॥ ೨೧೨ ॥**

"ಯನ್ಮಯಾ ಕಿಮಪಿ ವಿಜಲ್ಪಿತಂ ಯುಕ್ತಾಯುಕ್ತಮಪಿ ಅತ್ರ ।
ತತ್ ವರಜ್ಞಾನಿನಃ ಕ್ಷಾಮ್ಯಂತು ಮಮ ಯೇ ಬುಧ್ಯಂತೇ
ಪರಮಾರ್ಥಮ್ ॥ ೨೧೨ ॥"

**ಅನ್ವಯಾರ್ಥಃ—ಮಇ**— ನನ್ನಿಂದ **ಇತ್ಥು**- ಈ ಪರಮಾತ್ಮಪ್ರಕಾಶವೆಂಬ ಗ್ರಂಥದಲ್ಲಿ **ಜುತ್ತಾಜುತ್ತು ವಿ**— ಯುಕ್ತವೋ ಅಯುಕ್ತವೋ ಆದ **ಜಂ ಕಿಂ ಪಿ**— ಯಾವುದಾದರೂ (ಏನಾದರೂ) ವಿಷಯವು **ವಿಜಂಪಿಯಉ**— ಹೇಳಲ್ಪಟ್ಟಿದೆಯೋ **ತಂ**— ಅದನ್ನು (ಅಯುಕ್ತ ವಚನವು ಹೇಳಲ್ಪಟ್ಟುದುದಾದರೆ ಅದನ್ನು) **ಜೇ ಪರಮತ್ಥು**

**ಬುಜ್ಝಹಿಂ**— ಯಾರು ಪರಮಾರ್ಥ (ಯಥಾರ್ಥ ವಸ್ತುವಿಷಯ ಅಥವಾ ಪರಮಾತ್ಮ ತತ್ತ್ವ)ವನ್ನು ತಿಳಿಯುತ್ತಾರೆಯೋ **ಪರಣಾಣಿ**— ಆ ಉತ್ತಮಜ್ಞಾನಿ (ಆತ್ಮಜ್ಞಾನಿ)ಗಳು **ಮಹು ಖಮಂತು**— ನನಗೆ (ನನ್ನನ್ನು) ಕ್ಷಮಿಸಲಿ

**ಭಾವಾರ್ಥ:**- ಶ್ರೀಯೋಗೀಂದುದೇವರು ತಮ್ಮ ಅಲ್ಪಜ್ಞತೆಯನ್ನು ವ್ಯಕ್ತಗೊಳಿಸುತ್ತ ಪರಮಾರ್ಥವಿಷಯವನ್ನು ತಿಳಿಯುವ ಆತ್ಮಜ್ಞಾನಿಗಳನ್ನು ಪ್ರಾರ್ಥಿಸುತ್ತಾರೆ — ವಿದ್ವಜ್ಜನರೇ! ನನ್ನ ಛದ್ಮಸ್ಥಬುದ್ಧಿಗನುಸಾರವಾಗಿ ನಾನೀ ಗ್ರಂಥವನ್ನು ಶಿಷ್ಯಪ್ರತಿಬೋಧನೆಗಾಗಿ ರಚಿಸಿದೆನು. ಈ ಗ್ರಂಥದಲ್ಲಿ ಹೇಳಿರುವ ಮಾತುಗಳು ವಸ್ತುತಃ ಯುಕ್ತವಾದುವುಗಳೋ ಅಯುಕ್ತವಾದುವುಗಳೋ ಎಂಬುದನ್ನು ನಾನು ತಿಳಿಯಲಾರೆ. ಶಬ್ದವಿಷಯದಲ್ಲಾಗಲಿ, ಅರ್ಥವಿಷಯದಲ್ಲಾಗಲಿ ಅಯುಕ್ತವಾದ ವಚನಗಳಿರಬಹುದು ಆದುದರಿಂದ ಈ ಗ್ರಂಥದಲ್ಲಿ ಏನಾದರೂ ಅಯುಕ್ತವಚನವು ಹೇಳಲ್ಪಟ್ಟಿದ್ದಾಗಿದ್ದರೆ ಆ ದೋಷಕ್ಕಾಗಿ ಪರಮಾರ್ಥಜ್ಞಾನಿಗಳಾದ ತಾವುಗಳು ನನ್ನನ್ನು ಕ್ಷಮಿಸಿರಿ

ಶ್ರೀಯೋಗೀಂದುದೇವರ ವಿದ್ವತ್ವ, ಅಧ್ಯಾತ್ಮವಿದ್ಯಾಪ್ರವೀಣತೆ, ಗ್ರಂಥರಚನಾಚಾತುರ್ಯ ಮೊದಲಾದ ಗುಣಗಳು ಯದ್ಯಪಿ ಗ್ರಂಥಾವಲೋಕನದಿಂದಲೇ ಸ್ವಯಂ ವ್ಯಕ್ತವಾಗುವುವಾದರೂ ಮಹಾಕವಿ ಕಾಲಿದಾಸನು "**ಅಭಿಜ್ಞಾನಶಾಕುಂತಲ**"ದಲ್ಲಿ— "**ಬಲವದಪಿ ಶಿಕ್ಷಿತಾನಾಮಾತ್ಮನ್ಯಪ್ರತ್ಯಯಂ ಚೇತಃ**" ಅರ್ಥಾತ್ ಬಹಳವಾಗಿ (ಚೆನ್ನಾಗಿ) ಅಭ್ಯಾಸಮಾಡಿರುವ ಸಮರ್ಥವಿದ್ವಾಂಸರಿಗೂ ತಮ್ಮ ವಿದ್ವತ್ವದಲ್ಲಿ ತಮಗೆ ವಿಶ್ವಾಸ(ನಂಬಿಕೆ)ವಿರುವುದಿಲ್ಲ." ಎಂದು ಹೇಳಿರುವಂತೆ ಆಚಾರ್ಯರು ಅಧ್ಯಾತ್ಮವಿದ್ಯೆಯಲ್ಲಿ ಅತ್ಯಂತ ಪ್ರವೀಣರಾಗಿದ್ದರೂ ತಮ್ಮ ಸಾಮರ್ಥ್ಯದಲ್ಲಿ ತಮಗಿರುವ ಅವಿಶ್ವಾಸವನ್ನು ಸೂಚಿಸಿ ತಮ್ಮ ನಿರಹಂಕಾರತ್ವವನ್ನೂ ಶಾಸ್ತ್ರವಿನಯವನ್ನೂ ವ್ಯಕ್ತಗೊಳಿಸಿರುವರು.

ಪುನಃ ಭವ್ಯಜೀವರನ್ನು ಪ್ರೋತ್ಸಾಹಿಸುವುದಕ್ಕಾಗಿ ಒಂದು ಪದ್ಯ(ವೃತ್ತ)ದಿಂದ ನಿಜಾತ್ಮತತ್ತ್ವಭಾವನೆಯ ಫಲವನ್ನು ನಿರೂಪಿಸುತ್ತಾರೆ —

**ಜಂ ತತ್ತಂ ಣಾಣರೂವಂ ಪರಮಮುಣಿಗಣಾ ಣಿಚ್ಚ ಝಾಯಂತಿ ಚಿತ್ತೇ।**
**ಜಂ ತತ್ತಂ ದೇಹಚತ್ತಂ ಣಿವಸಇ ಭುವಣೇ ಸವ್ವದೇಹೀಣದೇಹೇ ॥**
**ಜಂ ತತ್ತಂ ದಿವ್ವದೇಹಂ ತಿಹುವಣಗುರುಗಂ ಸಿಜ್ಝಏ ಸಂತಜೀವೇ।**
**ತಂ ತತ್ತಂ ಜಸ್ಸ ಸುದ್ಧಂ ಫುರಇ ಣಿಯಮಣೇ ಪಾವಏ ಸೋ ಹಿ**
**ಸಿದ್ಧಿಂ ॥ ೨೧೪ ॥***

"ಯತ್ ತತ್ತ್ವಂ ಜ್ಞಾನರೂಪಂ ಪರಮಮುನಿಗಣಾ ನಿತ್ಯಂ ಧ್ಯಾಯಂತಿ ಚಿತ್ತೇ ।
ಯತ್ ತತ್ತ್ವಂ ದೇಹತ್ಯಕ್ತಂ ನಿವಸತಿ ಭುವನೇ ಸರ್ವದೇಹಿನಾಂ ದೇಹೇ ॥
ಯತ್ ತತ್ತ್ವಂ ದಿವ್ಯದೇಹಂ ತ್ರಿಭುವನಗುರುಕಂ ಸಿದ್ಧ್ಯತಿ ಶಾಂತಜೀವೇ ।
ತತ್ ತತ್ತ್ವಂ ಯಸ್ಯ ಶುದ್ಧಂ ಸ್ಫುರತಿ ನಿಜಮನಸಿ ಪ್ರಾಪ್ನೋತಿ ಸ ಹಿ
ಸಿದ್ಧಿಮ್ ॥ ೨೧೪ ॥"

* "ಸ್ರಗ್ಧರಾ" ವೃತ್ತ.

**ಅನ್ವಯಾರ್ಥ:**— **ಪರಮಮುಣಿಗಣಾ**— ಉತ್ತಮರಾದ ಮುನಿಗಳ ಸಮೂಹಗಳು **ಣಾಣರೂವಂ**— ಜ್ಞಾನರೂಪವಾದ **ಜಂ ತತ್ತಂ**— ಯಾವ ಆತ್ಮತತ್ತ್ವವನ್ನು **ಚಿತ್ತೇ**— ಮನಸ್ಸಿನಲ್ಲಿ **ಣಿಚ್ಚ ಝಾಯಂತಿ**— ನಿತ್ಯವೂ (ಯಾವಾಗಲೂ) ಧ್ಯಾನಿಸುತ್ತಾರೋ, **ದೇಹಚತ್ತಂ**— ಶರೀರದಿಂದ ಬಿಡಲ್ಪಟ್ಟ ಅರ್ಥಾತ್ ಶರೀರದಿಂದ ಭಿನ್ನವಾದ **ಜಂ ತತ್ತಂ**— ಯಾವ ಪರಮಾತ್ಮತತ್ತ್ವವು **ಭುವಣೇ**— ಲೋಕದಲ್ಲಿ **ಸವ್ವದೇಹೀಣ ದೇಹೇ**— ಸರ್ವ ದೇಹಧಾರಿ (ಸಂಸಾರಿ) ಜೀವರುಗಳ ದೇಹದಲ್ಲಿ **ಣಿವಸಇ**— ವಾಸ ಮಾಡಿಕೊಂಡಿರುವುದೋ **ದಿವ್ವದೇಹಂ**— ದಿವ್ಯವಾದ ಕೇವಲಜ್ಞಾನಾದಿರೂಪಶರೀರವುಳ್ಳುದೂ **ತಿಹುವಣಗುರುಗಂ**— ಅವ್ಯಾಬಾಧಾನಂತಸುಖಾದಿಗುಣಗಳಿಂದ ಮೂರು ಲೋಕಗಳಲ್ಲಿ ಶ್ರೇಷ್ಠವಾದುದೂ (ಅಥವಾ ತ್ರಿಲೋಕಪೂಜ್ಯವೂ) ಆದ **ಜಂ ತತ್ತಂ**— ಯಾವ ತತ್ತ್ವವು **ಸಂತಜೀವೇ ಸಿಜ್ಝಏ**— ಪರಮೋಪಶಾಂತಸ್ವಭಾವವುಳ್ಳ ಜೀವನಲ್ಲಿ ಸಿದ್ಧಿಸುತ್ತದೋ **ಸುದ್ಧಂ**— ರಾಗಾದಿರಹಿತವಾಗಿರುವುದರಿಂದ ಶುದ್ಧವಾದ **ತಂ ತತ್ತಂ**— ಆ ತತ್ತ್ವವು **ಜಸ್ಸ ಣಿಯಮಣೇ**— ಯಾವನ ತನ್ನ ಮನಸ್ಸಿನಲ್ಲಿ **ಫುರಇ**— ಪ್ರಕಾಶಿಸುತ್ತಿರುವುದೋ **ಸೋ ಹಿ ಸಿದ್ಧಿಂ ಪಾವಏ**— ಆತನು ನಿಶ್ಚಯವಾಗಿ ಸಿದ್ಧಿ(ಸ್ವಾತ್ಮೋಪಲಬ್ಧಿ=ಮುಕ್ತಿ)ಯನ್ನು ಪಡೆಯುತ್ತಾನೆ.

**ಭಾವಾರ್ಥ:**— ಜ್ಞಾನಸ್ವರೂಪವುಳ್ಳುದೂ, ಮುನಿಗಳ ಸಮೂಹದಿಂದ ನಿರಂತರ ಧ್ಯಾನಿಸಲ್ಪಡುತ್ತಿರುವುದೂ, ದೇಹಭಿನ್ನವಾದುದೂ, ಲೋಕದ ಸರ್ವಜೀವರ ಶರೀರದಲ್ಲಿರುವುದೂ, ಕೇವಲಜ್ಞಾನಾದಿಶರೀರವುಳ್ಳುದೂ, (ಇಲ್ಲಿ ಶರೀರವೆಂದರೆ ಸ್ವರೂಪವೆಂದರ್ಥವು) ಅವ್ಯಾಬಾಧಅನಂತಸುಖಾದಿಗುಣಗಳಿಂದ ಲೋಕದಲ್ಲಿ ಉತ್ತಮ(ಪೂಜ್ಯ)ವಾದುದೂ, ಪರಮೋಪಶಾಂತಪರಿಣಾಮಿಯಾದ ಜೀವನಲ್ಲಿ ಸಿದ್ಧಿಸುವುದೂ(ವ್ಯಕ್ತ=ಪ್ರಕಟವಾಗುವುದೂ)ರಾಗಾದಿಮಲರಹಿತವಾದುದೂ ಆದ ಪರಮಾತ್ಮತತ್ತ್ವವನ್ನು ಯಾವಾತನು ತನ್ನ ನಿರ್ಮಲಮನಸ್ಸಿನಲ್ಲಿ ಧ್ಯಾನಿಸುತ್ತಾನೋ ಆ ಭವ್ಯಜೀವನು ಸ್ವಾತ್ಮೋಪಲಬ್ಧಿರೂಪವಾದ ಮೋಕ್ಷಸಿದ್ಧಿಯನ್ನು ನಿಶ್ಚಯವಾಗಿ ಪಡೆಯುತ್ತಾನೆಂದು ಭಾವಾರ್ಥವು.

ಇನ್ನು ಗ್ರಂಥಾವಸಾನದಲ್ಲಿ ಮಂಗಲಾರ್ಥವಾಗಿ ಆಶೀರ್ವಾದರೂಪದಿಂದ ನಮಸ್ಕಾರವನ್ನು ಮಾಡುತ್ತಾರೆ—

**ಪರಮಪಯಗಯಾಣಂ ಭಾಸಓ ದಿವ್ವಕಾಓ ।**
**ಮಣಸಿ ಮುಣಿವರಾಣಾಂ ಮುಕ್ಖದೋ ದಿವ್ವಜೋಓ ॥**
**ವಿಸಯಸುಹರಯಾಣಂ ದುಲ್ಲಹೋ ಜೋ ಹು ಲೋಏ ।**
**ಜಯಉ ಸಿವಸರೂವೋ ಕೇವಲೋ ಕೋ ವಿ ಬೋಹೋ ॥ ೨೧೪ ॥***

* "ಮಾಲಿನೀ" ವೃತ್ತ.

"ಪರಮಪದಗತಾನಾಂ ಭಾಸಕೋ ದಿವ್ಯಕಾಯಃ ।
ಮನಸಿ ಮುನಿವರಾಣಾಂ ಮೋಕ್ಷದೋ ದಿವ್ಯಯೋಗಃ ॥
ವಿಷಯಸುಖರತಾನಾಂ ದುರ್ಲಭೋ ಯೋ ಹಿ ಲೋಕೇ ।
ಜಯತು ಶಿವಸ್ವರೂಪಃ ಕೇವಲಃ ಕೋಽಪಿ ಬೋಧಃ ॥ ೨೧೪ ॥"

**ಅನ್ವಯಾರ್ಥ:— ಪರಮಪಯಗಯಾಣಂ**– ಉತ್ಕೃಷ್ಟವಾದ ಅರ್ಹತ್ಪದವನ್ನು ಹೊಂದಿದವರ (ಅರ್ಹತ್ಪರಮೇಷ್ಠಿಗಳ) **ಭಾಸಓ**— ಸಹಸ್ರಸೂರ್ಯರ ತೇಜಸ್ಸಿಗಿಂತಲೂ ಅಧಿಕವಾದ ತೇಜಸ್ಸಿನಿಂದ ಪ್ರಕಾಶಿಸುವ **ದಿವ್ವಕಾಓ**— ಪರಮೌದಾರಿಕದಿವ್ಯಶರೀರವು ಹಾಗೂ ಆ ಶರೀರಕ್ಕೆ ಆಧಾರಭೂತರಾದ ಭಗವಂತರು **ಜಯಉ**— ಸರ್ವೋತ್ಕರ್ಷತೆಯಿಂದ ವೃದ್ಧಿಹೊಂದಲಿ (ಇಲ್ಲಿ 'ಕಾಯ' ಎಂಬ ಶಬ್ದಕ್ಕೆ 'ಸ್ವರೂಪ' ಎಂಬ ಅರ್ಥವನ್ನು ಮಾಡುವುದರಿಂದ "ಉತ್ತಮವಾದ ಮುಕ್ತಿಪದವನ್ನು ಪಡೆದಿರುವ ಸಿದ್ಧಪರಮೇಷ್ಠಿಗಳ ಪ್ರಕಾಶಮಾನವಾದ ಕೇವಲಜ್ಞಾನಾದಿಸ್ವರೂಪವು ವೃದ್ಧಿಹೊಂದಲಿ" ಎಂಬ ಅರ್ಥವು ಧ್ವನಿತವಾಗುತ್ತದೆ) **ಮುಣಿವರಾಣಾಂ ಮಣಸಿ**— ಉತ್ತಮರಾದ ಮುನಿಗಳ ಮನಸ್ಸಿನಲ್ಲಿ **ಮುಕ್ಖದೋ**— ಮೋಕ್ಷವನ್ನುಂಟುಮಾಡುವ **ದಿವ್ವಜೋಓ**– ದ್ವಿತೀಯಶುಕ್ಲಧ್ಯಾನವೆಂಬ ವೀತರಾಗನಿರ್ವಿಕಲ್ಪಸಮಾಧಿರೂಪವಾದ ದಿವ್ಯಯೋಗವು **ಜಯಉ**— ಸರ್ವೋತ್ಕರ್ಷವಾಗಿ ವರ್ತಿಸಲಿ **ಜೋ**— ಆವುದು **ಲೋಏ**— ಲೋಕದಲ್ಲಿ **ವಿಸಯಸುಹರಯಾಣಂ**– ಇಂದ್ರಿಯವಿಷಯಾಸಕ್ತರಾದ ಜೀವರುಗಳಿಗೆ **ದುಲ್ಲಹೋ ಹು**— ನಿಶ್ಚಯವಾಗಿಯೂ ದುರ್ಲಭ (ದುಷ್ಪ್ರಾಪ್ಯ)ವಾಗಿರುವುದೋ ಅಂತಹ **ಸಿವಸರೂವೋ**– ಶಿವವೆಂದು ಹೇಳಲ್ಪಡುವ ಅನಂತಸುಖಸ್ವರೂಪವುಳ್ಳ **ಕೇವಲೋ ಕೋ ವಿ ಬೋಹೋ**— ಕೇವಲವೆಂಬ ಹೆಸರುಳ್ಳ ಅಪೂರ್ವವಾದ ಅದೊಂದು ಜ್ಞಾನ (ಕೇವಲಜ್ಞಾನ)ವು (ಮತ್ತು ತದಾಧಾರವಾದ ಪರಮಾತ್ಮತತ್ತ್ವವು) **ಜಯಉ**— ಸರ್ವೋತ್ಕರ್ಷದಿಂದ ವೃದ್ಧಿಹೊಂದುತ್ತಿರಲಿ.

**ಭಾವಾರ್ಥ:**— ಅರ್ಹತ್ಪರಮೇಷ್ಠಿಗಳ ಪರಮೌದಾರಿಕದಿವ್ಯಶರೀರವೂ, ಸಿದ್ಧಪರಮೇಷ್ಠಿಗಳ ಕೇವಲಜ್ಞಾನಾದ್ಯನಂತಗುಣಸ್ವರೂಪವೂ, ವೀತರಾಗನಿರ್ವಿಕಲ್ಪಸಮಾಧಿ ಅರ್ಥಾತ್ ರಾಗದ್ವೇಷರಹಿತವೂ ಸಮಸ್ತಶುಭಾಶುಭವಿಕಲ್ಪರಹಿತವೂ ಆತ್ಮ-ಪರಮಾತ್ಮರಲ್ಲಿ ಅಭೇಧಪ್ರತಿಪತ್ತಿಯುಳ್ಳುದೂ ಆದ ಶುಕ್ಲಧ್ಯಾನರೂಪಪರಮಸಮಾಧಿಯೂ, ಲೋಕಾಲೋಕಪ್ರಕಾಶಕವೂ ಶಿವಸ್ವರೂಪವುಳ್ಳುದೂ ಆದ ಕೇವಲಜ್ಞಾನವೂ ಸರ್ವೋತ್ಕರ್ಷವಾಗಿ ವೃದ್ಧಿಹೊಂದಲೆಂದಭಿಪ್ರಾಯವು. ಇಲ್ಲಿ ಆಚಾರ್ಯರು ಆಶೀರ್ವಾದರೂಪದಿಂದ ಅರಹಂತರು, ಸಿದ್ಧರು, ಮುನಿಗಳು ಇವರುಗಳನ್ನೂ ಪರಮಸಮಾಧಿ ಹಾಗೂ ಕೇವಲಜ್ಞಾನವನ್ನೂ ಮಂಗಲಾರ್ಥವಾಗಿ ಸ್ಮರಿಸುತ್ತಾರೆ ಹಾಗೂ ನಮಸ್ಕರಿಸುತ್ತಾರೆಂದು ಭಾವಾರ್ಥವು.

ಈ ಪ್ರಕಾರವಾಗಿ **"ಜೇ ಜಾಯಾ ಝಾಣಗ್ಗಿಯಏ"** ಇತ್ಯಾದಿ ಒಂದುನೂರ ಇಪ್ಪತ್ತಮೂರು ದೋಹಕಗಳು ಮತ್ತು ಮೂರು ಪ್ರಕ್ಷೇಪಕಗಳು ಕೂಡಿ ಬಂದು ನೂರ

ಇಪ್ಪತ್ತಾರು ದೋಹಕಸೂತ್ರಗಳಿರುವ **"ಪ್ರಥಮಮಹಾಧಿಕಾರ"**ವುಳ್ಳುದೂ **"ಸಿರಿಗುರು ಅಕ್ಖಹಿ"** ಮೊದಲಾದ ಇನ್ನೂರಹದಿನಾಲ್ಕು ದೋಹಕಗಳು ಮತ್ತು ಐದು ಪ್ರಕ್ಷೇಪಕ ಗಳು ಕೂಡಿ ಇನ್ನೂರ ಹತ್ತೊಂಬತ್ತು ದೋಹಕಸೂತ್ರಗಳಿರುವ **"ದ್ವಿತೀಯಮಹಾಧಿ ಕಾರ"**ವುಳ್ಳುದೂ ಆದ (ಅಂತು ೩೪೫ ದೋಹಕಗಳುಳ್ಳ) **"ಶ್ರೀಮದ್ಯೋಗೀಂದುದೇವ"** ವಿರಚಿತ **"ಪರಮಾತ್ಮಪ್ರಕಾಶ"**ವೆಂಬೀ ಗ್ರಂಥವು **ಸಮಾಪ್ತವಾದುದು.**

**ಅಂತಿಮಕಥನ:**—ಭವ್ಯಜನರು ಈ "ಪರಮಾತ್ಮಪ್ರಕಾಶ"ದ ವ್ಯಾಖ್ಯೆಯನ್ನು ಚೆನ್ನಾಗಿ ಅಧ್ಯಯನಮಾಡಿ ವಸ್ತುಸ್ವರೂಪವನ್ನು ಅರ್ಥಾತ್ ನಿಜಶುದ್ಧಾತ್ಮಸ್ವರೂಪ ವನ್ನರಿತು "ನಾನು ನನ್ನ ಸಹಜ(ಸ್ವಾಭಾವಿಕ)ವಾದ ಶುದ್ಧಜ್ಞಾನ ಹಾಗೂ ಆನಂದವೇ ಸ್ವರೂಪವಾಗುಳ್ಳವನು. ಶುಭಾಶುಭಸಮಸ್ತವಿಕಲ್ಪರಹಿತನು. ಸಂಸಾರಶರೀರಭೋಗ ಗಳಲ್ಲಿ ಉದಾಸೀನನಾಗಿರುವವನು ಕರ್ಮಮಲರಹಿತನಾದ ತನ್ನಾತ್ಮನ ಸಮ್ಯಕ್ ಶ್ರದ್ಧಾನ(ನಂಬಿಕೆ)ಜ್ಞಾನ(ತಿಳುವಳಿಕೆ) ಅನುಷ್ಠಾನ(ಆಚರಣೆ)ರೂಪವಾದ ನಿಶ್ಚಯರತ್ನ ತ್ರಯಸ್ವರೂಪವುಳ್ಳ ನಿರ್ವಿಕಲ್ಪಸಮಾಧಿ(ಶುಭಾಶುಭಸಂಕಲ್ಪವಿಕಲ್ಪರಹಿತವಾದ ಧ್ಯಾನ) ಯಿಂದುಂಟಾದ ಸಹಜಾನಂದರೂಪವಾದ ಸುಖಾನುಭೂತಿಲಕ್ಷಣವುಳ್ಳ ಸ್ವಸಂವೇದನ ಜ್ಞಾನ (ತನ್ನ ಸ್ವರೂಪವನ್ನು ತಿಳಿಯುವ ಜ್ಞಾನ)ಕ್ಕೆ ಗೋಚರನಾದವನು ಅರ್ಥಾತ್ ಸ್ವಸವೇಂದನಜ್ಞಾನದಿಂದ ತಿಳಿಯಲ್ಪಡತಕ್ಕವನು. ಅಂತಹ ಜ್ಞಾನದಿಂದ ಭರಿತನಾದ ವನು. ರಾಗ, ದ್ವೇಷ, ಮೋಹ, ಕ್ರೋಧ, ಮಾನ, ಮಾಯಾ, ಲೋಭ, ಪಂಚೇಂ ದ್ರಿಯವಿಷಯವ್ಯಾಪಾರ, ದ್ರವ್ಯಕರ್ಮ, ಭಾವಕರ್ಮ, ನೋಕರ್ಮ, ಇವುಗಳಿಂದಲೂ ಖ್ಯಾತಿ ಪೂಜಾ ಲಾಭ ಹಾಗೂ ತಾನು ನೋಡಿದ ಕೇಳಿದ ಮತ್ತು ಅನುಭವಿಸಿದ ಭೋಗ ಗಳು ಇವುಗಳ ವಾಂಛಾರೂಪವಾದ ನಿದಾನಶಲ್ಯ, ಮಾಯಾಶಲ್ಯ ಮಿಥ್ಯಾಶಲ್ಯ ಇತ್ಯಾದಿ ಸಮಸ್ತ ವಿಭಾವಪರಿಣಾಮಗಳಿಂದಲೂ ರಹಿತನಾಗಿರುವವನು ಮೂರು ಲೋಕಗಳ ಲ್ಲಿಯೂ ಮೂರು ಕಾಲಗಳಲ್ಲಿಯೂ ಶುದ್ಧನಿಶ್ಚಯನಯದಿಂದ ನಾನು ಮನವಚನ ಕಾಯಕೃತಕಾರಿತಾನುಮೋದನಗಳಿಂದ ಪೂರ್ವೋಕ್ತಸ್ವರೂಪವುಳ್ಳವನಾಗಿರುವೆನು. ನನ್ನಂತೆಯೇ ಎಲ್ಲಾ ಜೀವರೂ ಪೂರ್ವೋಕ್ತ-ಲಕ್ಷಣವುಳ್ಳವರು" ಈ ಪ್ರಕಾರವಾದ ಭಾವನೆಯನ್ನು ನಿರಂತರ ಮಾಡುತ್ತಿರಬೇಕೆಂದಭಿಪ್ರಾಯವು. ಇತಿ ಶಮ್.

**ಶ್ರೀಮದ್ಯೋಗೀಂದುದೇವ**ವಿರಚಿತ-**ಪರಮಾತ್ಮಪ್ರಕಾಶ**ದ
ಶ್ರೀಮದ್ವೀರಜಿನೇಂದ್ರಪದಸರೋರುಹಸಮಾರಾಧಕ-ಬ್ರಹ್ಮಾತ್ಮಜ-
ಚಂದ್ರರಾಜಬುಧೇಂದ್ರವಿರಚಿತ-
**ಅನ್ವಯಾರ್ಥಭಾವಾರ್ಥದೀಪಿಕಾ-ಕರ್ಣಾಟಕ-ವ್ಯಾಖ್ಯೆಯು ಸಮಾಪ್ತವಾದುದು**

---

**ಮಂಗಲಂ ಭಗವಾನ್ ವೀರೋ, ಮಂಗಲಂ ಗೌತಮೋ ಗಣೀ**
**ಮಂಗಲಂ ಕುಂದಕುಂದಾರ್ಯೋ । ಜೈನಧರ್ಮೋऽಸ್ತು ಮಂಗಲಮ್ ॥**
**ಓಂ ಶಾಂತಿಃ**



*ಅಪ್ಪಾ ಸೋ ಪರಮಪ್ಪಾ

# ಪರಮಾತ್ಮಸ್ವರೂಪಂ

ಅರಿವಿಂದೀಕ್ಷಿಸಲಕ್ಕುಮಾತ್ಮನಿರವಂ ದೇಹಂಬೊಲೀ ಕಣ್ಗೆ ತಾಂ ।
ಗುರಿಯಾಗಂ ಶಿಲೆಯೊಳ್ಸುವರ್ಣಮರಳೋಳ್ಸೌರಭ್ಯಮಾ ಕ್ಷೀರದೋಳ್ ॥
ನರು ನೆಯ್ಯಾಕ್ಪ್ಷದೊಳಗ್ನಿಯಿರ್ಪತೆರದಿಂದೀ ಮೆಯ್ಯೊಳೊಂದಿರ್ಪನೆಂ-
ದರಿದಭ್ಯಾಸಿಸೆ ಕಾಣ್ಬುದೆಂದರುಪಿದೈ! ರತ್ನಾಕರಾಧೀಶ್ವರಾ ॥

× × × ×

ಅಂಗುಷ್ಟಂ ಮೊದಲಾಗಿ ನೆತ್ತಿವರೆಗಂ ಸರ್ವಾಂಗಸಂಪೂರ್ಣನು-
ತ್ತುಂಗಜ್ಞಾನಮಯಂ ಸುದರ್ಶನಮಯಂ ಚಾರಿತ್ರತೇಜೋಮಯಂ ॥
ಮಾಂಗಲ್ಯಂ ಮಹಿಮಂ ಸ್ವಯಂಭು ಸುಖಿ ನಿರ್ಬಾಧಂ ನಿರಾಪೇಕ್ಷಿ ನಿ-
ಮ್ಮಂಗಂಬೊಲ್ಪರಮಾತ್ಮನೆಂದರುಪಿದೈ! ರತ್ನಾಕರಾಧೀಶ್ವರಾ ॥

× × × ×

ಬಿಸಿಲಿಂ ಕಂದದ ಬೆಂಕಿಯಿಂ ಸುಡದ ನೀರಿಂ ನಾಂದದುಗ್ರಾಸಿ ಭೇ-
ದಿಸಲುಂ ಬಾರದ ಚಿನ್ಮಯಂ ಮರೆದು ತನ್ನೊಳ್ಪಂ ಪರಧ್ಯಾನದಿಂ ॥
ಪಸಿದಿಂದೀ ಬಹುಬಾಧೆಯಿಂ ರುಜೆಗಳಿಂ ಕೇಡಾಗುವೀ ಮೆಯ್ಗೆ ಸಂ-
ದಿಸಿದಂ ತನ್ನನೆ ಚಿಂತಿಸಲ್ಸುಖಿಯಲಾ! ರತ್ನಾಕರಾಧೀಶ್ವರಾ ॥

× × × ×

—ರತ್ನಾಕರಸಿದ್ಧ.

*ನಿಜಾತ್ಮನೇ ಪರಮಾತ್ಮನು.